॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿ[illegible]ಹಸ್ಯ

ಸಂಪುಟ ೨೩


ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು





ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1950

|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೨೩




ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು





ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1950

# ಮುನ್ನುಡಿ

ಶ್ರೀ ಶಿವರಹಸ್ಯ ಮಹಾಗ್ರಂಥದ ಸದಾಶಿವನಾಮಕವಾದ ಒಂಬತ್ತನೆಯ ಅಂಶದಲ್ಲಿ ಮೊದಲನೆಯ ಮೂವತ್ತೈದು ಅಧ್ಯಾಯಗಳು ಮಾತ್ರ ಈ ಪ್ರತಿಯಲ್ಲಿ ಅಚ್ಚುಹಾಕಿಸಲ್ಪಟ್ಟವೆ. ಅನೇಕ ದಕ್ಷಿಣ ಭಾರತದ ಕ್ಷೇತ್ರಮಹಿಮೆಗಳು, ಶಿವಭಕ್ತಿಯ ಸ್ವರೂಪ, ಆ ಭಕ್ತಿಮಾರ್ಗವನ್ನವಲಂಬಿಸಿ ಮುಕ್ತರಾದ ಮಹಾತ್ಮರ ಇತಿಹಾಸಗಳು ಇವು ಈ ಭಾಗದಲ್ಲಿ ಕಂಡುಬರುವ ವಿಷಯಗಳು. ಎರಡನೆಯ ಅಧ್ಯಾಯದಲ್ಲಿ ಆದಿಶೇಷಪ್ರೋಕ್ತವೆಂದು ಹೇಳಲ್ಪಟ್ಟಿರುವ ಶಿವಸಹಸ್ರನಾಮಸ್ತೋತ್ರವೊಂದು ಕಂಡುಬರುತ್ತಿದೆ. ಹಿಂದಿನ ಏಳನೆಯ ಅಂಶದ ಮೊದಲನೆಯ ಅಧ್ಯಾಯದಲ್ಲಿಯೂ ಸಾಕ್ಷಾತ್ ಪರಮೇಶ್ವರಪ್ರೋಕ್ತವೆಂದೇ ನಿರೂಪಿತವಾಗಿರುವ ಶಿವಸಹಸ್ರನಾಮ ಸ್ತೋತ್ರವಿರುವುದು. ಅದಕ್ಕೂ ಇದಕ್ಕೂ ಅನೇಕ ಕಡೆಗಳಲ್ಲಿ ಸಾಮ್ಯ ಕಂಡುಬಂದರೂ ಆದ್ಯಂತಭಾಗಗಳು ಬೇರೆ ಬೇರೆ ರೀತಿಯಿಂದ ಉಪಪಾದಿತಗಳಾಗಿವೆ. ಪ್ರಾಸಂಗಿಕ ವಾಗಿ ಚತುರ್ಯುಗ ಧರ್ಮಸ್ವರೂಪ, ಕಲಿಯುಗದಲ್ಲಿ ಕಂಡುಬರುವ ವರ್ಣ ಸಾಂಕರ್ಯಾದಿ ಕಲಿಧರ್ಮಗಳು, ಧರ್ಮವಿಪ್ಲವ ಕಾಲದಲ್ಲಿ ಶಿವಲಿಂಗಾರ್ಚನೆಯಿಂದ ಧರ್ಮಸಂಸ್ಥಾಪನೆಯಾಗುವಿಕೆ, ಇವೇ ಮುಂತಾದ ಅನೇಕ ವಿಷಯಗಳು ಅಲ್ಲಲ್ಲಿ ಬಂದಿವೆ. ಅದ್ವೈತಮತಸ್ಥಾಪಕರಾದ ಶ್ರೀ ಶಂಕರಭಗವತ್ಪಾದರ ಸಂಕ್ಷಿಪ್ತ ಜೀವನ ಚರಿತೆಯು ಈ ಅಂಶದ ಹದಿನಾರನೆಯ ಅಧ್ಯಾಯದಲ್ಲಿ ವ್ಯಕ್ತವಾಗಿರುವುದು. ಇದು ಕಲಿಯುಗದ ಭವಿಷ್ಯ ವಿಷಯಗಳಲ್ಲಿ ಅಂತರ್ಗತವಾಗಿರುವುದರಿಂದ, ಶಿವರಹಸ್ಯವು ಇದರಿಂದ ಆಧುನಿಕ ಗ್ರಂಥವೆಂದು ಹೇಳುವಂತಿಲ್ಲ. ಇದೇ ರೀತಿ ಪಂಡಿತಶ್ರೇಷ್ಠ ರೆನಿಸಿಕೊಂಡಿದ್ದ ಹರದತ್ತರೆಂಬ ಮಹಾತ್ಮರು ಶಿವೋತ್ಕರ್ಷವನ್ನು ಸ್ಥಾಪಿಸಿದ ವಿಷಯವು ಹದಿನೇಳನೆಯ ಅಧ್ಯಾಯದಲ್ಲಿ ನಿರೂಪಿತವಾಗಿದೆ. ಸುಂದರ, ನೀಲಕಂಠ, ಸ್ವಭಾವರಿಪು, ಇಲಾನಂದ ಮುಂತಾದ ಅನೇಕ ಶೈವಭಕ್ತವರ್ಯರ ಇತಿಹಾಸಗಳು ಕ್ರಮವಾಗಿ ಬಂದಿವೆ. ಇವರೆಲ್ಲಾ ಜಾತಿಯಿಂದ, ಧರ್ಮದಿಂದ, ವೃತ್ತಿಯಿಂದ ಶಿವನ ಮೆಚ್ಚಿಗೆಗೆ ಪಾತ್ರರಾಗದಿದ್ದರೂ, ಕೇವಲ ಭಕ್ತಿಯಿಂದಲೇ ಶಿವಸ್ವರೂಪವನ್ನು ಸಂಪಾದಿಸಿದವರು. ಹಾಗೆಯೇ ಕಾವೇರೀ ನದಿಯ ತೀರಪ್ರದೇಶದಲ್ಲಿರುವ ಶಿವ ಕ್ಷೇತ್ರಗಳು, ಅಲ್ಲಿರುವ ಶಿವಲಿಂಗಗಳ ಮಹಿಮೆ ಇವು ಬಹಳವಾಗಿ ವರ್ಣಿತಗಳಾಗಿವೆ. ಸುಂದರಭಕ್ತನಿಂದ ರಚಿತವಾಗಿರುವ ಶಿವಸ್ತುತಿಯು ಕೇವಲ ಗದ್ಯರೂಪದಲ್ಲಿದ್ದು ಶಿವಭಜನೆ ಮಾಡುವವರಿಗೆ ಅತ್ಯಂತ ಉಪಯುಕ್ತವಾಗಿದೆ. ಇತರ ಭಾಗಗಳಲ್ಲಿರು

ವಂತೆ ಇದರಲ್ಲಿಯೂ ಅನೇಕ ವೃತ್ತಜಾತಿಯ ಪದ್ಯಗಳು ಸುಲಭಶೈಲಿಯಲ್ಲಿದ್ದು ಪಂಡಿತ ಪಾಮರರೆಲ್ಲರಿಗೂ ಹೃದಯಂಗಮಗಳೆನಿಸಿವೆ. ಶಿವಭಕ್ತಿಪ್ರಚೋದಕಗಳಾದ ಅನೇಕ ಗ್ರಂಥಗಳು ಸಂಸ್ಕೃತ ಸಾಹಿತ್ಯದಲ್ಲಿ ಬಹಳವಾಗಿರಬಹುದು. ಆದರೆ ಈ ಶಿವರಹಸ್ಯವು ಶಿವಭಕ್ತಿನಿರೂಪಣದಲ್ಲಿ ಒಂದು ವೈಶಿಷ್ಟ್ಯವನ್ನು ಪಡೆದಿದೆ. ವೇದವೇದಾಂತಗಳೆಲ್ಲಾ ಜನತೆಗೆ ಭಕ್ತಿವೈರಾಗ್ಯಗಳನ್ನೇ ಸಾರಿ ಹೇಳುತ್ತಿರುವುವೆಂದೂ, ತನ್ಮೂಲಕ ಜ್ಞಾನವು ಲಬ್ಧವಾಗಿ ಶಿವಸಾಯುಜ್ಯವು ದೊರೆಯುವುದೆಂದೂ ಈ ಶಿವರಹಸ್ಯಕಾರರ ಅಭಿಪ್ರಾಯ. ಅದಕ್ಕನುಸಾರವಾಗಿ ಯಾವುದಾದರೊಂದು ಇತಿಹಾಸವನ್ನು ಆರಂಭಿಸಿಕೊಂಡು, ಆ ವ್ಯಾಜದಲ್ಲಿ ಸಕಲ ಶಾಸ್ತ್ರಸಾರವನ್ನೇ ತುಂಬಿಬಿಡುವರು. ಒಟ್ಟಿನಲ್ಲಿ ಶಾಸ್ತ್ರಗ್ರಂಥಗಳ ವಿಶೇಷ ಪರಿಚಯುವನ್ನು ಹೊಂದದವರಿಗೆ ಈ ಗ್ರಂಥವು ವಿಶೇಷವಾದ ಜ್ಞಾನಸಾಧಕವಾಗುವುದೆಂಬದರಲ್ಲಿ ಯಾವ ಅನುಮಾನವೂ ಇಲ್ಲ.

ನಮ್ಮನ್ನಾಳುವ ಶ್ರೀಮನ್ಮಹಾರಾಜರವರೂ, ಕರ್ಣಾಟಕರತ್ನಸಿಂಹಾಸನಾಧೀಶ್ವರರೂ ಆಗಿರುವ ಶ್ರೀ ಜಯಚಾಮರಾಜೇಂದ್ರಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರ ಉದಾರಭಾವನೆಯಿಂದಲೂ, ಆಸ್ತಿಕಾಭಿಮಾನದಿಂದಲೂ ಇಂತಹ ಪ್ರಾಚೀನ ಪವಿತ್ರಗ್ರಂಥಗಳು ಜನಸಾಮಾನ್ಯದ ಕೈಗನ್ನಡಿಯಾಗಿ ಪ್ರಕಾಶಕ್ಕೆ ಬಂದಿವೆ. ಕನ್ನಡ ಜನಾಂಗಕ್ಕೆ ಇಂತಹ ಮಹೋಪಕಾರವೆಸಗಿದ ನಮ್ಮ ಮಹಾಪ್ರಭುಗಳಿಗೂ, ಅವರ ಕುಟುಂಬವರ್ಗಕ್ಕೂ ಜಗದೀಶ್ವರನು ಸಕಲಸತ್ಸಂತಾನಾದಿಸೌಭಾಗ್ಯಪರಂಪರೆಗಳನ್ನು ಕರುಣಿಸುತ್ತಾ ಚಿರಕಾಲ ಸಲಹುತ್ತಿರಲಿ ಎಂದು ನಾನು ಅನನ್ಯಭಕ್ತಿಯಿಂದ ಸರ್ವೇಶ್ವರನನ್ನು ಪ್ರಾರ್ಥಿಸುವೆನು.

ವಿಕೃತಿನಾಮ ಸಂವತ್ಸರದ
ಆಶ್ವಯುಜ ಶುದ್ಧ ಪಂಚಮೀ
ಸೋಮವಾರ
16—10—1950

ಸಜ್ಜನವಿಧೇಯ,
ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ
ಆಸ್ಥಾನವಿದ್ವಾನ್, ಮೈಸೂರು.

# ಶ್ರೀಶಿವರಹಸ್ಯದ ಸದಾಶಿವನಾಮಕ ಒಂಬತ್ತನೆಯ ಅಂಶದ ವಿಷಯಾನುಕ್ರಮಣಿಕಾ

(೧ ನೇ ಅಧ್ಯಾಯದಿಂದ ೩೫ ನೇ ಅಧ್ಯಾಯದ ವರೆಗೆ)


### ಒಂದನೆಯ ಅಧ್ಯಾಯ

ಜೈಗೀಷವ್ಯಮಹರ್ಷಿಯು ಕುಮಾರಸ್ವಾಮಿಯಲ್ಲಿ ಶಿವಪೂಜಾಮಹಿಮೆಯನ್ನು ಪ್ರಶ್ನಿಸುವುದು. .... ಪುಟ ೧-೯

### ಎರಡನೆಯ ಅಧ್ಯಾಯ

ಆದಿಶೇಷಕೃತ ಶಿವಸಹಸ್ರನಾಮಸ್ತೋತ್ರಗಳು .... ಪುಟ ೧೦-೪೪

### ಮೂರನೆಯ ಅಧ್ಯಾಯ

ಜೈಗೀಷವ್ಯಮಹರ್ಷಿಯು ಭಕ್ತಿಯೋಗವನ್ನೂ, ಕಲಿಸ್ವರೂಪವನ್ನೂ ವಿವರಿಸುವುದು .... ಪುಟ ೪೫-೫೪

### ನಾಲ್ಕನೆಯ ಅಧ್ಯಾಯ

ಕೈಲಾಸವರ್ಣನೆ, ಪಾರ್ವತೀಪರಶಿವರ ಕ್ರೀಡಾವರ್ಣನೆ ಪುಟ ೫೫-೬೮

### ಐದನೆಯ ಅಧ್ಯಾಯ

ಶಿವನು ಪಾರ್ವತಿಯನ್ನು ಶಕ್ತಿಯೆಂದು ವರ್ಣಿಸುವುದು ಕಾಲರೂಪವನ್ನು ತಿಳಿಸುವುದು .... ಪುಟ ೬೯-೭೬

### ಆರನೆಯ ಅಧ್ಯಾಯ

ತ್ರೇತಾಯುಗಧರ್ಮವಿವರಣೆ .... ಪುಟ ೭೭-೮೩

### ಏಳನೆಯ ಅಧ್ಯಾಯ

ದ್ವಾಪರಯುಗಧರ್ಮವಿವರಣೆ .... ಪುಟ ೮೪-೯೨

### ಎಂಟನೆಯ ಅಧ್ಯಾಯ

ಕಲಿಯುಗಧರ್ಮ, ಶಂಕರಾಚಾರ್ಯೋತ್ಪತ್ತಿ, ಹರದತ್ತೋತ್ಪತ್ತಿ, ದೀಕ್ಷಿತೋತ್ಪತ್ತಿ, ಅರುವತ್ತುಮೂರುಜನ ಭಕ್ತರ ವರ್ಣನೆ ಪುಟ ೯೩-೧೦೧

ಒಂಬತ್ತನೆಯ ಅಧ್ಯಾಯ

ಕಲಿಮಾನವರ ಧರ್ಮವರ್ಣನೆ .... ಪುಟ ೧೦೨–೧೧೫

ಹತ್ತನೆಯ ಅಧ್ಯಾಯ

ಕಲಿಯುಗದ ಮನುಷ್ಯರ ಧರ್ಮವಿಚಾರ .... ಪುಟ ೧೧೬–೧೨೭

ಹನ್ನೊಂದನೆಯ ಅಧ್ಯಾಯ

ಕಲಿಯುಗದಲ್ಲಿ ಸದ್ಗುಣಗಳ ವರ್ಣನೆ .... ಪುಟ ೧೨೮–೧೩೮

ಹನ್ನೆರಡನೆಯ ಅಧ್ಯಾಯ

ಕಲಿಯ ಅಂತ್ಯದಲ್ಲಿ ಜನರ ನಡೆನುಡಿ, ಪ್ರಲಯಲಕ್ಷಣ, ಕಲ್ಕ್ಯವತಾರ ವಿಚಾರ. ಪುಟ ೧೩೯–೧೫೪

ಹದಿಮೂರನೆಯ ಅಧ್ಯಾಯ

ಮಹಾಪ್ರಲಯ ಲಕ್ಷಣ .... ಪುಟ ೧೫೫–೧೬೫

ಹದಿನಾಲ್ಕನೆಯ ಅಧ್ಯಾಯ

ಪುನಃ ಪ್ರಪಂಚಸೃಷ್ಟಿ ವರ್ಣನೆ .... ಪುಟ ೧೬೬–೧೭೪

ಹದಿನೈದನೆಯ ಅಧ್ಯಾಯ

ವಿಷ್ಣುವಿನ ಉತ್ಪತ್ತಿ, ವಿಷ್ಣು-ಬ್ರಹ್ಮ ಸ್ತುತಿ .... ಪುಟ ೧೭೫–೧೮೮

ಹದಿನಾರನೆಯ ಅಧ್ಯಾಯ

ಭಕ್ತಚರಿತ್ರೆ, ಶಂಕರಾಚಾರ್ಯಚರಿತ್ರೆ, ವಿಶ್ವೇಶ್ವರಸ್ತುತಿ, ವಿಶ್ವೇಶ್ವರನು ವರಪ್ರದಾನ ಮಾಡುವುದು .... ಪುಟ ೧೮೯–೨೦೦

ಹದಿನೇಳನೆಯ ಅಧ್ಯಾಯ

ಚೋಲದೇಶ ವರ್ಣನೆ, ಹರದತ್ತಾಖ್ಯಾನ .... ಪುಟ ೨೦೧–೨೧೮

ಹದಿನೆಂಟನೆಯ ಅಧ್ಯಾಯ

ಸುಂದರಭಕ್ತ ಚರಿತ್ರೆ .... ಪುಟ ೨೧೯–೨೪೦

### ಹತ್ತೊಂಬತ್ತನೆಯ ಅಧ್ಯಾಯ

ಸುಂದರನನ್ನು ಕುರಿತು ಶಿವಸಾನ್ನಿಧ್ಯಸ್ಥಾನವನ್ನು ವರ್ಣಿಸುವುದು.
ಪುಟ ೨೪೧–೨೫೩

### ಇಪ್ಪತ್ತನೆಯ ಅಧ್ಯಾಯ

ಸುಂದರನಿಗೆ ಭಕ್ತಚರಿತ್ರೆಯನ್ನು ವರ್ಣಿಸುವುದು. ಪುಟ ೨೫೪–೨೬೭

### ಇಪ್ಪತ್ತೊಂದನೆಯ ಅಧ್ಯಾಯ

ಸುಂದರಭಕ್ತರು ಶಿವಕ್ಷೇತ್ರಕ್ಕೆ ಹೋಗುವ ವಿಚಾರ ಪುಟ ೨೬೮–೨೮೫

### ಇಪ್ಪತ್ತೆರಡನೆಯ ಅಧ್ಯಾಯ

ಕಮಲಾಲಯಮಹಿಮಾವರ್ಣನೆ. .... ಪುಟ ೨೮೬–೨೯೮

### ಇಪ್ಪತ್ತುಮೂರನೆಯ ಅಧ್ಯಾಯ

ಕಮಲಾಲಯಕ್ಷೇತ್ರದಲ್ಲಿ ಸುಂದರಕೃತವಾದ ಪಂಚಲಿಂಗಸ್ತುತಿ, ತ್ಯಾಗರಾಜಸ್ತುತಿ.
ಪುಟ ೨೯೯–೩೦೯

### ಇಪ್ಪತ್ತುನಾಲ್ಕನೆಯ ಅಧ್ಯಾಯ

ಕಮಲಿಸಿಯ ಉತ್ಪತ್ತಿಕಥೆ. ಸುಂದರ ಮತ್ತು ಸಾಗರಿಕಾ ವಿವಾಹವರ್ಣನೆ ಶಿವ
ಪ್ರಸಾದಾದಿವರ್ಣನೆ .... ಪುಟ ೩೧೦–೩೨೮

### ಇಪ್ಪತ್ತೈದನೆಯ ಅಧ್ಯಾಯ

ನೀಲಕಂಠಭಕ್ತಚರಿತ್ರೆ .... ಪುಟ ೩೨೯–೩೪೦

### ಇಪ್ಪತ್ತಾರನೆಯ ಅಧ್ಯಾಯ

ನೀಲಕಂಠಭಕ್ತಪರೀಕ್ಷೆ ಮತ್ತು ವರಪ್ರದಾನ. .... ಪುಟ ೩೪೧–೩೫೨

### ಇಪ್ಪತ್ತೇಳನೆಯ ಅಧ್ಯಾಯ

ಸ್ವಭಾವರಿಪುವೆಂಬ ಭಕ್ತಚರಿತ್ರೆ .... ಪುಟ ೩೫೩–೩೬೬

### ಇಪ್ಪತ್ತೆಂಟನೆಯ ಅಧ್ಯಾಯ

ಇಳಾನಂದಭಕ್ತಚರಿತ್ರೆ, ಅನ್ನದಾನಪರೀಕ್ಷೆ .... ಪುಟ ೩೬೭–೩೭೬

ಇಪ್ಪತ್ತೊಂಬತ್ತನೆಯ ಅಧ್ಯಾಯ

ಸತ್ಯಾರ್ಥನಾಥಭಕ್ತಚರಿತ್ರೆ, ವೀರೋದ್ಭಟ ಭಕ್ತಚರಿತ್ರೆ ಪುಟ ೩೭೭–೩೯೦

ಮೂವತ್ತನೆಯ ಅಧ್ಯಾಯ

ಅಮರನೀತಿಭಕ್ತಚರಿತ್ರೆ .... ಪುಟ ೩೯೧–೪೦೫

ಮೂವತ್ತೊಂದನೆಯ ಅಧ್ಯಾಯ

ವೀರಭಕ್ತನಾಥವರ್ಣನೆ, ಶಿವಕಾಮಭಕ್ತಚರಿತೆ ಪುಟ ೪೦೬–೪೧೯

ಮೂವತ್ತೆರಡನೆಯ ಅಧ್ಯಾಯ

ಏನಾದಿನಾಥಭಕ್ತಚರಿತ್ರೆ .... ಪುಟ ೪೨೦–೪೨೮

ಮೂವತ್ತುಮೂರನೆಯ ಅಧ್ಯಾಯ

ಭಿಲ್ಲಚರಿತ್ರೆ .... .... ಪುಟ ೪೨೯–೪೪೪

ಮೂವತ್ತುನಾಲ್ಕನೆಯ ಅಧ್ಯಾಯ

ಭಿಲ್ಲಚರಿತ್ರೆ .... .... ಪುಟ ೪೪೫–೪೬೪

ಮೂವತ್ತೈದನೆಯ ಅಧ್ಯಾಯ

ಭಿಲ್ಲಭಕ್ತಿಪರೀಕ್ಷೆ ಮತ್ತು ಶಿವಾನುಗ್ರಹ .... ಪುಟ ೪೬೫–೪೮೦



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಪ್ರಥಮೋಽಧ್ಯಾಯಃ

॥ ಶ್ರೀಸೂತ ಉವಾಚ ॥

॥ ಓಂ ॥ ಸೋಮಾತ್ಮಜಂ ಸಾಮಜವಕ್ತ್ರಮಾದ್ಯಂ
ಗಣೇಶಸಾಮಸ್ತುತವಿಘ್ನವೈದ್ಯಂ ।
ಆದ್ಯಂ ಸುರಾಣಾಂ ನಿಖಿಲೈಶ್ಚ ವಂದ್ಯಂ
ವಂದೇ ಗಜಾಸ್ಯಂ ಸುರಸಂಘಸೇವ್ಯಂ ॥೧॥

---

## ಶ್ರೀಶಿವರಹಸ್ಯದ ಒಂಬತ್ತನೆಯ ಅಂಶದಲ್ಲಿ
## ಮೊದಲನೆಯ ಅಧ್ಯಾಯ

ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶವನ್ನು ಪ್ರಾರಂಭಿಸುವಾಗ ಸೂತಮಹಾಮುನಿಗಳು ವಿಘ್ನೇಶ್ವರನ ನಮಸ್ಕಾರರೂಪವಾದ ಮಂಗಳವನ್ನಾಚರಿಸುತ್ತಾ ಮಹಾಗಣಪತಿಯನ್ನು ಈ ರೀತಿ ಪ್ರಾರ್ಥಿಸಿದರು.—ಓಂಕಾರಸ್ವರೂಪನೂ, ಶಂಕರಪುತ್ರನೂ, ಆನೆಯ ಮುಖದಂತೆ ಮುಖವುಳ್ಳವನೂ, ಆದಿಪುರುಷನೂ, ಗಣಾಧಿಪತಿಗಳಿಂದಲೂ ಸಾಮವೇದಗಳಿಂದಲೂ ಸ್ತೋತ್ರಮಾಡಲ್ಪಟ್ಟವನೂ, ವಿಘ್ನಗಳಿಗೆಲ್ಲಾ ವೈದ್ಯನಂತೆ ನಿವಾರಕನಾದವನೂ, ದೇವತೆಗಳಿಗೆಲ್ಲಾ ಆದಿಭೂತನೂ, ಸರ್ವರಿಂದಲೂ ನಮಸ್ಕರಿಸಲ್ಪಡುವವನೂ, ಸದಾ ದೇವಸಮೂಹಗಳಿಂದ ಸೇವೆಗೊಳ್ಳುತ್ತಿರುವವನೂ ಆದ ಗಜಮುಖನೆನಿಸಿದ ಮಹಾಗಣಪತಿದೇವನಿಗೆ ನಮಸ್ಕಾರಮಾಡುತ್ತೇನೆ ಎಂದು ಸೂತರು ಗಣಪತಿಯನ್ನು ಧ್ಯಾನಿಸಿ ಕುಮಾರ ಜೈಗೀಷವ್ಯ ಸಂವಾದಾತ್ಮಕವಾದ ಶ್ರೀ ಶಿವರಹಸ್ಯದ ನವಮಾಂಶದ ಇತಿಹಾಸವನ್ನು ಈ ರೀತಿ ಉಪಕ್ರಮಿಸಿದರು. ॥೧॥

ಪ್ರಣಮ್ಯ ತಾರಕಾರಾತಿಂ ಪುರಾರಾತಿತನೂಭವಂ ।
ವಿನಯಾವನತೋ ಭೂತ್ವಾ ಜೈಗೀಷವ್ಯಃ ಸ ಶಾಂಭವಃ ॥೨॥

ಶೃಣ್ವತ್ಸು ದೇವಸಂಘೇಷು ಗಣೇಷ್ವಪಿ ಮುನಿಷ್ವಪಿ ।
ಹರಪಾದಾಂಬುಜಧ್ಯಾನಾನಂದನಿರ್ವೃತಮಾನಸಃ ॥೩॥

ಉವಾಚ ಸೋಽಚಾಮಧುರವಾಚಾ ಶೀತಲಯಾ ಮುನಿಃ ॥೪॥

॥ ಜೈಗೀಷವ್ಯ ಉವಾಚ ॥

ತಾರಕಾರೇ ಸಂಹೃತಾರೇ ಪುರಾರಿಪ್ರೇಮಮಂದಿರ ।
ಕಿಂಚಿದ್ವಿಜ್ಞಪ್ತುಮಿಚ್ಛಾಮಿ ಚಿತ್ತೇ ತದುಪಧಾರ್ಯತಾಂ ॥೫॥

ಅಷ್ಟಮಾಂಶಾವಸಾನೇಽತ್ರ ತ್ವಯೈವಾಕಥಿ ಶಾಂಕರೇ ।
ಶೇಷಾಶೇಷಮುಖಪ್ರೋಕ್ತಂ ಶಂಭೋರ್ನಾಮಸಹಸ್ರಕಂ ॥೬॥

ತದೇಭಿಃ ಶ್ರೋತುಮಿಚ್ಛಾಮಿ ಯದ್ಯಸ್ತಿ ಮಯಿ ತೇ ದಯಾ ।
ತದ್ವದಾದ್ಯ ವಿಶೇಷೇಣ ಶೇಷಪ್ರೋಕ್ತಂ ಸನಾತನಂ ॥೭॥

---

ಪರಮಶಾಂಭವನಾದ ಆ ಜೈಗೀಷವ್ಯಮುನಿಯು ಈಶಪುತ್ರನಾದ ಕುಮಾರಸ್ವಾಮಿಗೆ ನಮಸ್ಕರಿಸಿ, ದೇವತೆಗಳೂ, ಗಣಗಳೂ, ಮುನಿಗಳೂ ಕೇಳುತ್ತಿರುವಂತೆಯೇ ಶಿವನ ಪಾದಕಮಲಧ್ಯಾನದಿಂದ ಸಂತುಷ್ಟಾಂತರಂಗನಾಗಿ, ವಿನಯದಿಂದ ಬಾಳೆಯ ಹಣ್ಣಿನಂತೆ ಮಧುರವೂ ಮೃದುವೂ ಆದ ಮಾತುಗಳನ್ನಾಡಿದನು. ॥೨-೩-೪॥

ಶತ್ರುಗಳನ್ನು ಸಂಹರಿಸಿದವನೂ, ತಾರಕಾಸುರಶತ್ರುವೂ ಆದ ಷಣ್ಮುಖನೇ, ಶಂಕರನ ಪ್ರೇಮಕ್ಕೆ ಪಾತ್ರನಾದ ನಿನ್ನಲ್ಲಿ ನಾನು ವಿಜ್ಞಾಪನೆ ಮಾಡಿಕೊಳ್ಳುತ್ತೇನೆ. ದಯವಿಟ್ಟು ಸಾವಧಾನವಾಗಿ ಮನಸ್ಸಿನಲ್ಲಿ ಧಾರಣೆಮಾಡಬೇಕು; ಓ ಕುಮಾರಸ್ವಾಮಿಯೇ, ಎಂಟನೆಯ ಅಂಶದ ಕೊನೆಯಲ್ಲಿ ನೀನೇ ಆದಿಶೇಷನ ಮುಖದಿಂದ ಹೊರಟ ಶಂಭುವಿನ ಸಹಸ್ರನಾಮವಿರುವುದೆಂದು ಹೇಳಿರುವೆ; ಆ ದಿವ್ಯ ಸಹಸ್ರನಾಮಸ್ತೋತ್ರವನ್ನು ಈ ಗಣಗಳೊಡನೆ ಕೇಳಲಿಚ್ಛಿಸುತ್ತೇನೆ. ದೇವ! ನನ್ನಲ್ಲಿ ನಿನಗೆ ದಯೆಯಿರುವುದಾದರೆ, ಆ ಆದಿಶೇಷನಿಂದ ಹೇಳಲ್ಪಟ್ಟಿರುವ ಪುರಾತನವಾದ ಸಹಸ್ರನಾಮವನ್ನು ಹೇಳೆಂದು ಜೈಗೀಷವ್ಯನು ಕುಮಾರನನ್ನು ಪ್ರಾರ್ಥಿಸಿದನು. ॥೫-೬-೭॥

ರಸಾಲಸಾರಂ ಪೀತ್ವೈವ ನಾನ್ಯದಿಚ್ಛತಿ ಕೋಕಿಲಃ ।
ತದ್ವಚ್ಛಿವಕಥಾಸಾರಂ ಪೀತ್ವಾ ನಾನ್ಯದಿಹೇಚ್ಛತಿ ॥೮॥

ಮನ್ಮನಃಸದ್ಮಸಂಲಗ್ನಪಾದಪದ್ಮಂ ಮಹೇಶಿತುಃ ।
ನಾನ್ಯದ್ವರ್ಣಾಶ್ರಮಾಚಾರಕಥಾಭೀರಮತೇ ಮನಃ ॥೯॥

ಯಥಾ ಶಿವಕಥಾಸಿಂಧುಪಥಾಸಂತರಣಂ ಭವೇ ।
ನ ತಥಾ ಸರ್ವಧರ್ಮಾರ್ಥಶ್ರವಣೇ ಮೇ ಧೃತಾ ಮತಿಃ ॥೧೦॥

ತುಚ್ಛಾನ್ನ ಪೃಚ್ಛೇದ್ಧರ್ಮಾದೀನ್ ಸ್ವಚ್ಛೋಽಸ್ಮಿ ತ್ವತ್ಕೃಪಾವಶಾತ್ ॥೧೧॥
ಇತಿ ತದ್ವಚನಂ ಶ್ರುತ್ವಾ ಸಾನಂದಜಲಲೋಚನಃ ।

॥ ಸೂತ ಉವಾಚ ॥

ಸ್ವನೇತ್ರಾಲೋಕನೇನಾಶು ಸ್ವೀಚಕಾರ ಸ ಶಾಂಭವಂ ॥೧೨॥

---

ಸಿಹಿ ಮಾವಿನರಸವನ್ನು ಕುಡಿದ ಕೋಕಿಲೆಯು ಇತರ ಹಣ್ಣುಗಳ ರಸವನ್ನು ಬಯಸದಂತೆ, ಶಿವಕಥಾಸಾರವನ್ನು ಪಾನಮಾಡಿದ ನನಗೆ ಇನ್ನಾವುದೂ ರುಚಿಸುವುದಿಲ್ಲ. ನನ್ನ ಮನಸ್ಸೆಂಬ ಮನೆಯಲ್ಲಿ ಆ ಮಹೇಶ್ವರನ ಅಡಿದಾವರೆಗಳು ನೆಲಸಿರುವುದರಿಂದ ಈ ನನ್ನ ಮನಸ್ಸು ವರ್ಣಾಶ್ರಮಧರ್ಮಾಚಾರಗಳನ್ನು ಶ್ರವಣಮಾಡಬೇಕೆಂದು ಇಚ್ಛಿಸುವುದಿಲ್ಲ. ॥೮-೯॥

ಈ ಸಂಸಾರಸಾಗರದಲ್ಲಿ ಶಿವಕಥಾರೂಪವಾದ ಭವಸಮುದ್ರಸಂತರಣಮಾರ್ಗವನ್ನು ಬಿಟ್ಟು ಇತರ ಸಕಲ ಧರ್ಮ, ಅರ್ಥ ಮುಂತಾದವುಗಳ ಶ್ರವಣದಿಂದ ನನಗೆ ದಾರಿಯಿಲ್ಲವೆಂದು ದೃಢವಾದ ನಂಬಿಕೆಯಿರುವುದು. ದೇವ, ನಿನ್ನ ದಯೆಯಿಂದ ನಾನು ಪರಿಶುದ್ಧನಾಗಿರುವುದರಿಂದ ತುಚ್ಛವಾದ ಧರ್ಮವೇ ಮೊದಲಾದುವುಗಳನ್ನು ಪ್ರಶ್ನೆಮಾಡುವನಲ್ಲ, ಎಂದು ಜೈಗೀಷವ್ಯನು ಕುಮಾರಸ್ವಾಮಿಯನ್ನು ಪ್ರಾರ್ಥಿಸಿದನು. ॥೧೦-೧೧॥

ಆ ಕುಮಾರಸ್ವಾಮಿಯು ಜೈಗೀಷವ್ಯನ ಮಾತುಗಳನ್ನು ಕೇಳಿ, ಆನಂದ ಸೂಚಕವಾದ ಕಣ್ಣೀರುಗಳಿಂದ ಶೋಭಿಸುವ ಕಣ್ಣುಳ್ಳವನಾಗಿ, ತನ್ನ ಅಮೃತದೃಷ್ಟಿಯನ್ನು ಅವನ ಮೇಲೆ ಬೀರಿ, ಜೈಗೀಷವ್ಯನು ನಿಜವಾಗಿಯೂ ಶಂಭುವಿನ ಭಕ್ತನಾಗಿರುವನೆಂದು ಅಂಗೀಕರಿಸಿದನು. ಅನಂತರ ಭಸ್ಮಲೇಪಿತ ಶರೀರವುಳ್ಳವನೂ,

ಸ್ಕಂದೋಽಭ್ಯುವಾಚ ತಂ ಶಾಂಗಂ ಭಸ್ಮಾಂಗಂ ಲಿಂಗಪೂಜಕಂ ।
ಅನಂಗಮಾತಂಗಹರಪಾದಪದ್ಮಾಂತರಂಗಕಂ ॥೧೩॥

॥ ಶ್ರೀಸ್ಕಂದ ಉವಾಚ ॥

ಸಾಧು ಪೃಷ್ಟಂ ತ್ವಯಾ ಶೈವ ಶಿವಪಾದಾರ್ಚನೇ ರತ ।
ಶಂಭೋರ್ನಾಮಸಹಸ್ರಂ ತೇ ಶೇಷಾಶೇಷಮುಖೋದ್ಗತಂ ॥೧೪॥

ಪಾತಾಳೇ ಹಾಟಕೇಶಾಚಾರಣಂ ತಾರಣಂ ನೃಣಾಂ ।
ಶೃಣು ತ್ವಂ ಗಣವೃಂದೈಶ್ಚ ವೃಂದಾರೈಶ್ಚ ಮುನೀಶ್ವರೈಃ ॥೧೫॥

ತೇನ ಧನ್ಯೋಽಸಿ ಮಾನ್ಯೋಽಸಿ ಮಹಾಮನ್ಯುಪ್ರಸಾದಭಾಕ್ ।
ಯಥಾ ಶಿವಕಥಾಸಿಂಧುತರಂಗಾನಂದಶೀಕರಃ ॥೧೬॥

ಸಂಸಾರತಾಪಸಂತಪ್ತಂ ಶೀತಯತ್ಯಂತರೇವ ಹಿ ।
ನ ತಥಾ ಸ್ವರ್ಧುನೀ ಧನ್ಯಾ ಕಿಂ ಪಾವಯತಿ ತಂ ನರಂ ॥೧೭॥

---

ಶಿವಲಿಂಗಪೂಜಕನೂ, ಮನ್ಮಥನೆಂಬ ಮದಿಸಿದ ಆನೆಯನ್ನು ಸಂಹರಿಸಿದ ಶಿವನ ಪಾದಕಮಲಗಳನ್ನು ಮನಸ್ಸಿನಲ್ಲಿಟ್ಟುಕೊಂಡಿರುವವನೂ ಆದ ಆ ಶಾಂಭವನನ್ನು ಕುರಿತು ಷಣ್ಮುಖನು ಇಂತೆಂದನು. ||೧೨-೧೩||

ಅಯ್ಯ ಶಿವಭಕ್ತಾಗ್ರಣಿಯೇ, ಶಿವನ ಅಡಿದಾವರೆಗಳ ಪೂಜೆಯಲ್ಲಿ ನಿರತನಾಗಿರುವ ನೀನು ಉಚಿತವಾಗಿ ಪ್ರಶ್ನೆಮಾಡಿರುವೆ. ಆ ಆದಿಶೇಷನ ಸಾವಿರ ಮುಖಗಳಿಂದಲೂ ಹೇಳಲ್ಪಟ್ಟಿರುವ ಶಂಭುವಿನ ಸಾವಿರನಾಮಗಳನ್ನು ನಿನಗೆ ಹೇಳುತ್ತೇನೆ; ಪಾತಾಳಲೋಕದಲ್ಲಿ ಆ ಆದಿಶೇಷನು ಸುವರ್ಣಮಯವಾದ ಈಶ್ವರನ ಪೂಜೆಯು ಕಾರಣವಾಗಿ, ಆ ಸರ್ಪರಾಜನು ಮಾನವರನ್ನು ಉದ್ಧಾರಮಾಡುವ ಈ ಸಹಸ್ರನಾಮವನ್ನು ಹೇಳಿರುವನು. ಓ ಜೈಗೀಷವ್ಯಮುನಿಯೇ, ಆ ದಿವ್ಯನಾಮಗಳನ್ನು ನೀನು ಈ ಗಣಗಳ ಸಮೂಹದೊಡನೆಯೂ, ದೇವತೆಗಳು ಮತ್ತು ಮುನಿಶ್ರೇಷ್ಠರೊಡನೆಯೂ ಶ್ರದ್ಧೆಯಿಂದ ಕೇಳುವನಾಗು. ||೧೪-೧೫||

ಆದರಿಂದ ನೀನು ಧನ್ಯನೂ, ಮಾನ್ಯನೂ ಆಗಿ, ಆ ಮಹಾದೇವನ ಅನುಗ್ರಹಕ್ಕೆ ಪಾತ್ರನಾಗುವೆ. ಶಿವಕಥೆಗಳೆಂಬ ಸಮುದ್ರದ ಅಲೆಗಳು ಆನಂದವೆಂಬ ತುಂತುರುಗಳುಳ್ಳವಾಗಿ ಸಂಸಾರದುಃಖದಿಂದ ತಾಪಹೊಂದಿದವರನ್ನು ಒಳಗೇ ತಂಪು

ಗಂಗಾ ಲಿಂಗೈಕಸಂಗಾಪಿ ಪಾಪಭಂಗಾಯ ಸಾ ನೃಪ ।
ನ ಮುಕ್ತಿಕಾಂತಾ ಸಂಗಾಯ ಶಾಂಗಾಯೈವೇಹ ಕೇವಲಂ ॥೧೮॥

ಭವಂತಿ ಭವಪಾದಾಬ್ಜಸ್ಮರಣೇನ ವಿಭೂತಯಃ ।
ಮತಯಃ ಸುಪ್ರಸನ್ನಾಃ ಸ್ಯುಃ ಪ್ರಸನ್ನೇ ಪರಮೇಶ್ವರೇ ॥೧೯॥

ಪನ್ನಾನಿ ಸರ್ವಪಾಪಾನಿ ಛಿನ್ನಪ್ರಾಯೋ ಭವೇತ್ಸ ಹಿ ।
ಯಃ ಸದಾ ಧ್ಯಾಯತಿ ಹೃದಾ ಮುದೈವ ಪರಮೇಶ್ವರಂ ॥೨೦॥

ಯದಾ ಕದಾ ಸದಾವಾಪಿ ಸ ತದಾ ಮುಕ್ತಿಭಾಗ್ಭವೇತ್ ।
ಯಚ್ಚಿತ್ತಂ ವಿಹರೇತ್ಸಾಧು ಸದಾಶಿವಪದಾಂಬುಜೇ ॥೨೧॥

ತದೇವ ಚಿತ್ತಂ ಶೈವೇಂದ್ರ ಅನ್ಯತ್ಪಿತ್ತವಿಕಾರಕಂ ।
ವಿತ್ತಾಶಯಾಭ್ರಮಂತ್ಯಜ್ಞಾಃ ಹೃತ್ತಾಪಕರಣಂ ಹಿ ತತ್ ॥೨೨॥

---

ಗೊಳಿಸುವಂತೆ ಧನ್ಯಳೆನಿಸಿದ ದೇವಗಂಗೆಯು ಮಾನವನನ್ನು ಪಾವನಗೊಳಿಸುವ ಳೇನು? ಆ ಗಂಗೆಯು ಶಿವಲಿಂಗವೊಂದರ ಸಹವಾಸದಲ್ಲಿಯೇ ಇದ್ದರೂ ಮಾನವರ ಪಾಪಗಳನ್ನು ಮಾತ್ರ ನಾಶಮಾಡಬಲ್ಲಳೇ ಹೊರತು, ತನ್ನನ್ನು ನಂಬಿದ ಭಕ್ತನಿಗೆ ಮೋಕ್ಷಾಂಗನಾಪ್ರಾಪ್ತಿಯನ್ನುಂಟುಮಾಡಲಾರಳು. ॥೧೬-೧೭-೧೮॥

ಶಿವಸ್ಮರಣೆಯಿಂದ ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವಗಳೆಂಬ ಅಷ್ಟೈಶ್ವರ್ಯಗಳೂ ಸುಲಭವಾಗಿ ದೊರೆಯು ವುವು. ಆ ಪರಮೇಶ್ವರನು ಪ್ರಸನ್ನನಾದರೆ ಬುದ್ಧಿಗಳೆಲ್ಲಾ ನಿರ್ಮಲವಾಗುವುವು. ಸಕಲ ಪಾಪಗಳೂ ಧ್ವಂಸವಾಗುವುವು. ಸಾಮಾನ್ಯವಾಗಿ ಯಾವಾಗಲೂ ಸಂತೋಷ ದಿಂದ ಪರಮೇಶ್ವರನನ್ನು ಧ್ಯಾನಮಾಡುವವನು ಈ ಸಾಂಸಾರಿಕ ಬಂಧನಗಳಿಂದ ಬಿಡುಗಡೆ ಹೊಂದಿದಂತೆಯೇ ಸರಿ. ಯಾವಾಗಲಾದರೂ ಒಂದುಸಲವಾಗಲೀ, ಅಥವಾ ಅನವರತವಾಗಲೀ ಯಾರ ಮನಸ್ಸು ಆ ಸದಾಶಿವನ ಅಡಿದಾವರೆಗಳಲ್ಲಿ ಸಾಧು ವಾಗಿ ವಿಹರಿಸುವುದೋ ಅವನು ಮುಕ್ತಿಯನ್ನು ಪಡೆಯುತ್ತಾನೆ. ॥೧೯-೨೦-೨೧॥

ಎಲೈ ಶಿವಭಕ್ತಾಗ್ರೇಸರನೇ, ಶಿವನ ಧ್ಯಾನಾದಿಗಳಲ್ಲಿ ನೆಲಸಿದ ಮನಸ್ಸೇ ಸರಿಯಾದ ಮನವೆನಿಸುವುದು. ವಿಪರೀತವಾಗಿರುವುದು ಪಿತ್ತವಿಕಾರಕ್ಕೆ ಕಾರಣವೆನಿ ಸುವುದು. ಈ ರೀತಿಯಾದವರು ಮನಸ್ಸಿನ ತಾಪಕ್ಕೆ ಕಾರಣವಾದ ವಿತ್ತಾರ್ಜನೆಯಲ್ಲಿ

ಮುಧಾ ಸುಧಾಂ ವಿಹಾಯಾಂಧಾಃ ಪತಂತಿ ವಿಷಯಾವಟೇ ।
ದೇವೋರುಜಟಿನೀಜೂಟಂ ಕರಟಿತ್ವಕ್ಕೃತಾಂಬರಂ ॥೨೩॥

ವಿಹಾಯ ಪಾರ್ವತೀಕಾಂತಂ ಹಾಮುಧಾ ಪರಿಮೋಹಿತಾಃ ।
ಕೃತಾಂತಸದನೇ ತಾಂತಾಃ ಶಾಂತಾ ಅಪಿ ಕಲೌ ದ್ವಿಜ ॥೨೪॥

ನ ತಥಾ ತ್ವಂ ಮಹಾಬುದ್ಧೇ ಸಿದ್ಧೇಃ ಪಾತ್ರಂ ತ್ವಮೇವ ಹಿ ।
ತ್ರಿನೇತ್ರ ಸುಚರಿತ್ರಾಣಾಂ ದ್ವಿತ್ರಾಣಾಂ ಶ್ರಾವಕೋಽಪಿ ಯಃ ॥೨೫॥

ಶ್ರೋತ್ರನೇತ್ರಮಹಾಹಾರಪಾದಪಂಕಜಸೇವಿನಾಂ ।
ಐಹಿಕಾಮುಷ್ಮಿಕೀ ಸಿದ್ಧಿರ್ಯುಷ್ಮತ್ಸು ಮುನಿಸತ್ತಮಾಃ ॥೨೬॥

ಹೃತ್ತಮೋನಾಶಕಂ ಜ್ಞಾನಂ ಮುಕ್ತಾ ಏವ ಭವಿಷ್ಯಥ ।
ಕಾಲಾಂತಕಂ ಸಕೃತ್ಪೂಜ್ಯ ಕಾಲಾತೀತೋ ಭವಿಷ್ಯತಿ ॥೨೭॥

---

ಆಶೆಯುಳ್ಳವರಾಗಿ ಅಲೆಯುತ್ತಾರೆ. ಸುಲಭವಾಗಿ ದೊರೆಯುವ ಅಮೃತವನ್ನು ಬಿಟ್ಟು ಕುರುಡರಂತೆ ಸ್ರಕ್ಚಂದನವನಿತಾರೂಪವಾದ ವಿಷಯಗಳ ಹಳ್ಳದಲ್ಲಿ ಬೀಳುತ್ತಾರೆ. ಅಯ್ಯ ಬ್ರಾಹ್ಮಣೋತ್ತಮನೇ, ಕ್ರೀಡಾದಿಗುಣವಿಶಿಷ್ಟನೂ, ಗಂಗೆಯನ್ನು ತನ್ನ ದೊಡ್ಡ ಜಡೆಯಲ್ಲಿ ಧರಿಸಿರುವವನೂ, ಆನೆಯ ಚರ್ಮವನ್ನು ಬಟ್ಟೆಯನ್ನಾಗಿ ಧರಿಸಿರುವನೂ, ಪಾರ್ವತೀರಮಣನಾದ ಶಿವನನ್ನು ಬಿಟ್ಟು ವ್ಯರ್ಥವಾಗಿ ಮೋಹಗೊಳ್ಳುತ್ತಾರೆ. ಶಾಂತರಾಗಿರುವ ಈ ಮಾನವರೂ ಸಹ ಕಲಿಯುಗದಲ್ಲಿ ಈ ರೀತಿಯಾಗಿ ಶಿವಾರಾಧನೆ ಮಾಡದೇ ಯಮಲೋಕದಲ್ಲಿ ನಾನಾವಿಧವಾದ ಯಾತನೆಗಳನ್ನನುಭವಿಸುವರು. ||೨೨-೨೩-೨೪||

ಮಹಾಮೇಧಾವಿಯಾದ ಜೈಗೀಷವ್ಯನೇ, ನೀನು ಹಾಗಲ್ಲ. ನೀನೇ ಸಕಲ ಸಿದ್ಧಿಗಳಿಗೂ ಪಾತ್ರನಾಗಿರುವೆ. ಆ ಮುಕ್ಕಣ್ಣನ ಎರಡು ಮೂರು ಉತ್ತಮ ಚರಿತ್ರೆಗಳನ್ನು ಶ್ರವಣಮಾಡುವವನೂ, ಕಣ್ಣನ್ನೇ ಕಿವಿಯ ಸ್ಥಾನದಲ್ಲಿ ಉಪಯೋಗಿಸುವ ಸರ್ಪವನ್ನೇ ಹಾರಮಾಡಿಕೊಂಡಿರುವ ಆ ಮಹಾದೇವನ ಪಾದಕಮಲಗಳನ್ನು ಸೇವಿಸುವವರೂ ಆದ, ನಿಮ್ಮಲ್ಲಿರುವ ಋಷಿಪುಂಗವರಿಗೆಲ್ಲಾ ಇಹಪರಗಳೆರಡರಲ್ಲಿಯೂ ಸಿದ್ಧಿಯುಂಟಾಗುವುದು. ಓ ಮುನಿಶ್ರೇಷ್ಠರೇ, ಹೃದಯಾಂಧಕಾರವನ್ನು ನಾಶಮಾಡುವ ಜ್ಞಾನಪಡೆದವರೆಲ್ಲಾ ಮುಕ್ತರೇ ಆಗುವರು. ಆ ಯಮಾಂತಕನನ್ನು ಒಂದುಬಾರಿ ಪೂಜಿಸುವವನು ಯಮನನ್ನು ಎಂದೂ ಲೆಕ್ಕಿಸನು. ||೨೫-೨೬-೨೭||

ನ ಕಾಲಸದನಂ ಯಾತಿ ಮದನಾಂತಕಪೂಜಯಾ ।
ಜಯೋಽಪಿ ಹಿ ಭವೇತ್ತಸ್ಯ ವಿಭವೋಽಪಿ ಹಿ ಶಾಶ್ವತಃ ॥೨೮॥

ಭವಭಾವಪ್ರಪನ್ನಾನಾಂ ಭಾವಾನಾಂ ಭವನಾಶನಂ ।
ಜಾಯತೇ ನಾತ್ರ ಸಂದೇಹೋ ಭವೋದ್ಭವಪದಾರ್ಚನಾತ್ ॥೨೯॥

ಭವಾನೀರಮಣಾಚಾರ್ಯಾಂ ಯೋ ನಿಷ್ಠಸ್ತುಷ್ಟ ಏವ ಸಃ ।
ಅಣೀಯೋಽಪಿ ಸ ಹಿ ಜ್ಯಾಯಾನ್ ನ ದ್ವಿಜೋಽಪಿ ದ್ವಿಜಾಂ ವರಃ ॥೩೦॥

ದ್ವಿಜರಾಜಕಲಾಮೌಳಿ ಪಾದಪಂಕಜಸೇವಯಾ ।
ದ್ವಿಜಾನಾಮೇವ ಸರ್ವೇಷಾಂ ಧ್ಯೇಯಃ ಸಾಂಬಸ್ತ್ರಿಲೋಚನಃ ॥೩೧॥

ಉಮಾಪತಿರ್ಯೋ ವಿಶ್ವೇಶೋ ಜಗದ್ದುಃಖಾಪಹಾರಕಃ ।
ತಾರಕಃ ಸರ್ವಜಂತೂನಾಂ ಸರ್ವೇಷಾಮೇವ ಶಂಕರಃ ॥೩೨॥

ಕಿಂಕರಾಸ್ತಸ್ಯ ಸರ್ವೇಽಪಿ ಅಸುರಾ ಭೂಸುರಾಃ ಸುರಾಃ ।
ಪೂಜನೀಯಃ ಸದಾ ಲಿಂಗೇ ಬಿಲ್ವಪತ್ರೈಶ್ಚ ಕೋಮಲೈಃ ॥೩೩॥

ಮಾನವನು ಶಂಕರನ ಪೂಜೆಯಿಂದ ಯಮಲೋಕವನ್ನೈದುವುದಿಲ್ಲ. ಅವನಿಗೆ ಜಯವೂ, ಕೂಡಲೇ ಶಾಶ್ವತವಾದ ವೈಭವವೂ ಸಹ ಉಂಟಾಗುವುದು. ಶಂಕರನಲ್ಲಿ ಭಕ್ತಿಭಾವನೆ ಹೊಂದಿರುವ ಭಕ್ತರಿಗೆ ಆ ಮಹಾದೇವನ ಪಾದಪೂಜೆಯಿಂದ ಈ ಸಂಸಾರಬಂಧನವು ನಾಶವಾಗಿ, ಪುನಃ ಅವನಿಗೆ ಜನ್ಮವೇ ಉಂಟಾಗುವುದಿಲ್ಲ. ಆ ಉಮಾಕಾಂತನ ಪೂಜೆಯಲ್ಲಿ ಆಸಕ್ತನಾದವನು ಸಂತುಷ್ಟನೇ ಸರಿ. ಅವನು ಚಿಕ್ಕವನಾದರೂ ದೊಡ್ಡವನೆನಿಸುವನು. ಬ್ರಾಹ್ಮಣನಲ್ಲದಿದ್ದರೂ ಬ್ರಾಹ್ಮಣೋತ್ತಮನೆನಿಸುವನು. ॥೨೮-೨೯-೩೦॥

ಚಂದ್ರಮೌಳಿಯಾದ ಗೌರೀಶಂಕರನ ಪಾದಕಮಲಸೇವೆಯಿಂದ ಸರ್ವರೂ ಮುಕ್ತರಾಗುವರು. ಎಲ್ಲಾ ಬ್ರಾಹ್ಮಣರಿಂದಲೂ ಆ ಅಂಬಿಕಾಪತಿಯಾದ ಮುಕ್ಕಣ್ಣನು ಧ್ಯಾನಾರ್ಹನಾಗಿರುವನು. ಉಮಾಕಾಂತನಾದ ಆ ವಿಶ್ವೇಶ್ವರನು ಪ್ರಪಂಚದ ದುಃಖವನ್ನೆಲ್ಲಾ ಹೋಗಲಾಡಿಸುವನು. ಸಕಲ ಪ್ರಾಣಿಗಳನ್ನೂ ಇತರರನ್ನೂ ಆ ಶಂಕರನು ಉದ್ಧರಿಸುವನು. ಆ ಮಹಾದೇವನಿಗೆ ರಾಕ್ಷಸರು, ದೇವತೆಗಳು ಮತ್ತು ಬ್ರಾಹ್ಮಣರು ಇವರೆಲ್ಲರೂ ಸೇವಕರಾಗಿರುವರು. ಆ ಮಹೇಶ್ವರನನ್ನು ಯಾವಾಗಲೂ ಶಿವಲಿಂಗದಲ್ಲಿ ಮೃದುವಾದ ಬಿಲ್ವದಳಗಳಿಂದ ಪೂಜೆಮಾಡಬೇಕು. ॥೩೧-೩೨-೩೩॥

ದ್ವಿತ್ರೈರ್ವಾಽಪಿ ಪವಿತ್ರೈರ್ವಾ ತ್ರಿನೇತ್ರೋ ಮೋಚಕಃ ಸದಾ ।
ಭಸ್ಮಾಭ್ಯಕ್ತಸ್ತ್ರಿಪುಂಡ್ರಾಂಕೋ ರುದ್ರಾಕ್ಷಾಮಲಹಾರಕಃ ॥೩೪॥

ಯಸ್ತು ಸಂಪೂಜಯೇಲ್ಲಿಂಗೇ ತುಂಗೇ ಶಾಂಗೇ ಮಹಾಮನಾಃ ।
ಅಲಿಂಗೇಽಪಿ ಮಹಾದೇವಸ್ತತ್ಪಾಪಂ ಭಂಗಯತ್ಯಪಿ ॥೩೫॥

ತುಂಗಂ ವಾಪ್ಯಂತರಂಗಂ ವಾ ವಸನ್ ಸಂಗಂ ಕರೋತ್ಯಸೌ ॥೩೬॥

॥ ಶ್ರೀ ಸ್ಕಂದ ಉವಾಚ ॥

ಯಃ ಕೋಽಪಿ ಶಾಂಗೋ ಭುವಿ ಭಸ್ಮಸಂಗೋ
ಲಿಂಗೋತ್ತಮಾಂಗೇ ವಿಮಲಂ ಸುತುಂಗೇ ।
ಬಿಲ್ವಂ ತಥಾಬ್ಜಂ ಕರವೀರಪುಷ್ಪಂ
ಗಂಗಾಂಭಸಾ ಸ್ನಾಪ್ಯ ದದಾತಿ ಭಾಗ್ಯೈಃ ॥೩೭॥

---

ಹೆಚ್ಚು ಬಿಲ್ವದಳಗಳು ದೊರೆಯದಿದ್ದರೆ ಎರಡು ಅಥವಾ ಮೂರು ಪವಿತ್ರವಾದ ಬಿಲ್ವದಳಗಳಿಂದ ಪೂಜಿಸಲ್ಪಟ್ಟರೂ ಆ ಮುಕ್ಕಣ್ಣನು ಯಾವಾಗಲೂ ತನ್ನ ಭಕ್ತರನ್ನು ಭವಬಂಧನದಿಂದ ಬಿಡುಗಡೆ ಮಾಡುವನು. ಭಸ್ಮಲೇಪನ, ಭಸ್ಮತ್ರಿಪುಂಡ್ರಧಾರಣೆಗಳಿಂದ ಪೂತನಾಗಿ, ಪಾವನವಾದ ರುದ್ರಾಕ್ಷಮಾಲೆಯನ್ನು ಧರಿಸಿ, ಸ್ಥಿರ ಮನಸ್ಸಿನಿಂದ ಎತ್ತರವಾದ ಶಿವಲಿಂಗದಲ್ಲಿ ಆ ಶಿವನನ್ನು ಪೂಜೆಮಾಡುವವನ ಪಾಪವನ್ನು ಮಹಾದೇವನು ನಾಶಮಾಡುವನು. ಲಿಂಗವಿಲ್ಲದಿದ್ದರೂ ಬೇರೆಡೆಯಲ್ಲಿ ಪೂಜೆಮಾಡಿದರೂ ಪಾಪಪರಿಹಾರವಾಗುವುದು. ಎತ್ತರವಾಗಲೀ, ಸಣ್ಣದಾಗಲೀ ತನ್ನನ್ನು ಲಿಂಗದಲ್ಲಿ ಪೂಜಿಸುವವರಿಗೆ ಈ ಮಹಾದೇವನು ತನ್ನ ಸಾನ್ನಿಧ್ಯವನ್ನು ಕರುಣಿಸುತ್ತಾನೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೩೪-೩೫-೩೬॥

ಯಾವನೋ ಒಬ್ಬ ಪುಣ್ಯಾತ್ಮನು, ಈ ಭೂಮಿಯಲ್ಲಿ ಭಸ್ಮಧಾರಣೆ ಮಾಡಿಕೊಂಡು, ತುಂಬಾ ಎತ್ತರವಾದ ಶಿವಲಿಂಗದ ಮೇಲೆ, ಪವಿತ್ರವಾದ ಬಿಲ್ವದಳ, ತಾವರೇಹೂ, ಕಣಿಗಲೆಹೂಗಳನ್ನಿಟ್ಟು ಗಂಗಾನೀರಿನಿಂದ ಅಭಿಷೇಕಮಾಡಿ ಭಾಗ್ಯವಶದಿಂದ ಪೂಜೆಮಾಡುತ್ತಾನೆ. ॥೩೭॥

ಸ ಏವ ಮಾತಂಗಹರಾಂಗಸಂಗ
ಮೋಕ್ಷೈಕಸಂಗಾಯ ಭವೇದಸಂಗಃ ।
ಯೋ ಖಂಡಬಿಲ್ವೀದಳಮಿಂದುಮೌಳೇ
ಶ್ರೀಖಂಡಲಿಪ್ತೇ ಶಿರಸಿ ಕ್ಷಿಪಂತಿ ॥೩೮॥

ಆಖಂಡಲಾದ್ಯೈರಭಿವಂದನೀಯಾ ।
ಸ್ತೇ ಖಂಡಚಂದ್ರಂ ಶಿರಸಾ ವಹಂತಿ ॥೩೯॥

ಇತಿ ಶ್ರೀಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ
ಜೈಗೀಷವ್ಯಸ್ಕಂದಸಂವಾದೇ ಶಿವಪೂಜಾಮಹಿಮಾವರ್ಣನಂ ನಾಮ
ಪ್ರಥಮೋಽಧ್ಯಾಯಃ

---

ಹೀಗೆ ಪೂಜೆಮಾಡುವವನೇ ಶಿವಸಾಯುಜ್ಯರೂಪವಾದ ಮೋಕ್ಷಪ್ರಾಪ್ತಿಗೆ ಪಾತ್ರನಾಗಿ, ಪುನಃ ಈ ಪ್ರಾಪಂಚಿಕಸಂಬಂಧಶೂನ್ಯನಾಗುತ್ತಾನೆ. ಆ ಚಂದ್ರಮೌಳಿಯಾದ ಶಂಕರನ ತಲೆಯಲ್ಲಿ ತುಂಡಾದ ಬಿಲ್ವದಳವನ್ನು ಇರಿಸುವವರೂ ಇಂದ್ರನೇ ಮೊದಲಾದವರಿಂದ ನಮಸ್ಕಾರಾರ್ಹನಾಗಿರುವ ಆ ಚಂದ್ರಖಂಡವನ್ನು ತಲೆಯಲ್ಲಿ ಧರಿಸಿ, ತಾವೂ ಶಿವಸಾರೂಪ್ಯವನ್ನೈದುವರು ಎಂದು ಕುಮಾರಸ್ವಾಮಿಯು ಜೈಗೀಷವ್ಯಮುನಿಗೆ ಹೇಳಿದನು. ॥೩೮-೩೯॥

ಇಲ್ಲಿಗೆ ಶ್ರೀ ಶಿವರಹಸ್ಯದ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಜೈಗೀಷವ್ಯ ಮತ್ತು ಕುಮಾರಸ್ವಾಮಿ ಇವರ ಸಂವಾದದಲ್ಲಿ
ಶಿವಪೂಜಾಪ್ರಭಾವವರ್ಣನೆಯೆಂಬ ಮೊದಲನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ದ್ವಿತೀಯೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಶೇಷಾಶೇಷಮುಖೋದ್ಗೀತಾಂ ನಾಮಸಾರಾವಳೀಮಿಮಾಮ್ ।
ಹಾಟಕೇಶೋರುಕಟಕಭೂತೇನಾಹೀನಕೇನ ತು ॥೧॥

ಸಹಸ್ರನಾಮ ಯತ್ಪ್ರೋಕ್ತಂ ತತ್ತೇ ವಕ್ಷ್ಯಾಮ್ಯಹಂ ಶೃಣು ।
ಧನ್ಯಂ ಮಾನ್ಯಂ ಮಹಾಮಸ್ಯಪ್ರೀತಿದಾಯಕಮುತ್ತಮಮ್ ॥೨॥

ನಾನ್ಯೇಷು ಜಾಪನೀಯಂ ತೇ ನ ದೇಯಂ ವೇದಮೀದೃಶಮ್ ।
ಪಂಚಾಸ್ಯಹೃದಯಾಶಾಸ್ಯಮನುಶಾಸ್ಯಾಮಿ ತೇ ಹೃದಿ ॥೩॥

---

## ಎರಡನೆಯ ಅಧ್ಯಾಯ

ಕುಮಾರಸ್ವಾಮಿಯು ಜೈಗೀಷವ್ಯನಿಗೆ–ಅಯ್ಯ ಜೈಗೀಷವ್ಯನೇ, ಪಾತಾಳವಾಸಿಯಾಗಿ ಸುವರ್ಣಮಯವಾದ ಈಶ್ವರನ ಕಂಕಣಾಭರಣನಾಗಿರುವ ಸರ್ಪರಾಜನಾದ ಆದಿಶೇಷನ ಸಕಲ ಮುಖಗಳಿಂದಲೂ ಹೊರಟ ಶಿವನಾಮಗಳ ಸಾರಭೂತವಾದ ಈ ಸಾವಿರ ನಾಮಗಳ ವಿಶೇಷ ಮಹಿಮೆಯನ್ನು ನಿನಗೆ ಹೇಳುತ್ತೇನೆ. ಧನ್ಯವೂ, ಪೂಜಾರ್ಹವೂ, ಮಹಾದೇವನಿಗೆ ಪ್ರೀತಿದಾಯಕವೂ, ಉತ್ತಮವೂ ಆದ ಆ ದಿವ್ಯನಾಮಗಳನ್ನು ಶ್ರದ್ಧೆಯಿಂದ ಕೇಳುವನಾಗು. ಎಂದು ಮುಂದುವರಿಸಿದನು. ॥೧-೨॥

ಎಲೈ ಭಕ್ತನೇ, ಈ ವೇದರೂಪವಾದ ಉಪದೇಶವನ್ನು ಇತರರಿಗೆ ಕೊಡಬಾರದು. ಇದು ಆ ಪಂಚಮುಖನಾದ ಶಿವನಿಗೆ ಪ್ರೀತಿದಾಯಕವಾಗಿ ಅವನ ಅನುಗ್ರಹಪ್ರಾಪ್ತಿಗೆ ಕಾರಣಭೂತವಾಗಿರುವುದು. ಇದನ್ನು ನಾನು ನಿನಗೆ ಉಪದೇಶಿ

ಋಷಿರಸ್ಯಾದಿಶೇಷೋ ವೈ ದೇವದೇವೋ ಮಹೇಶ್ವರಃ ।
ಸರ್ವತ್ರ ವಿನಿಯೋಗೋಽಸ್ಯ ಕರ್ಮಸ್ವಪಿ ಸದಾ ದ್ವಿಜ ।೪॥

ಧ್ಯಾನಂ ತಸ್ಯಾನುವಕ್ಷ್ಯಾಮಿ ತ್ವಮೇಕಾಗ್ರಮನಾಃ ಶೃಣು ।೫।

॥ ಶ್ರೀ ಸ್ಕಂದ ಉವಾಚ ॥

ಧ್ಯಾಯೇದಿಂದುಕಲಾಧರಂ ಗಿರಿಧನುಂ ಸೋಮಾಗ್ನಿಫಾಲೋಜ್ಜ್ವಲಂ
ವೈಕುಂಠೋರುವಿಶಾಲಬಾಣಸುಕರಂ ದೇವಂ ರಥೇಽಧಿಷ್ಠಿತಂ ।
ವೇದಾಶ್ವಂ ವಿಧಿಸಾರಥಿಂ ಗಿರಿಜಯಾ ಚಿತ್ತೇಽನುಸಂದಧ್ಮಹೇ
ನಾನಾಕಾಮಕಲಾವಿಲಾಸಜಗದಾನಂದಸಂಪೂರ್ತಯೇ ॥೬॥

ಏವಂ ಧ್ಯಾತ್ವಾ ಮಹಾದೇವಂ ನಾಮ್ನಾಂ ಸಾಹಸ್ರಮುತ್ತಮಂ ।
ಪ್ರಜಪೇನ್ನಿಯತೋ ಮಂತ್ರೀ ಭಸ್ಮರುದ್ರಾಕ್ಷಭೂಷಣಃ ॥೭॥

---

ಸುವೆನು. ಹೃದಯದಲ್ಲಿರಿಸಿಕೋ. ಈ ಸಹಸ್ರನಾಮಮಂತ್ರಕ್ಕೆ ಸರ್ಪರಾಜನಾದ ಆದಿಶೇಷನೇ ಋಷಿಯು, ದೇವಾದಿದೇವನಾದ ಮಹೇಶ್ವರನೇ ದೇವತೆ. ಅಯ್ಯ ಬ್ರಾಹ್ಮಣನೇ, ಈ ಮಂತ್ರಕ್ಕೆ ಎಲ್ಲಾ ಕರ್ಮಗಳಲ್ಲಿಯೂ ವಿನಿಯೋಗವೇರ್ಪಟ್ಟಿರುವುದು ; ಯಾವಾಗಲೂ ಬೇಕಾದರೆ ವಿನಿಯೋಗಿಸಿಕೊಳ್ಳಬಹುದು. ಆ ಮಂತ್ರಕ್ಕೆ ಧ್ಯಾನವನ್ನರುಹುವೆನು. ಸ್ಥಿರಚಿತ್ತನಾಗಿ ಲಾಲಿಸು. ॥೩-೪-೫॥

ಚಂದ್ರಕಲಾಧರನೂ, ಮೇರುಪರ್ವತವನ್ನು ಬಿಲ್ಲಾಗಿ ಧರಿಸಿರುವವನೂ, ಚಂದ್ರನನ್ನು ತಲೆಯಲ್ಲಿಯೂ, ಅಗ್ನಿಯನ್ನು ಹಣೆಯಲ್ಲಿಯೂ ಧರಿಸಿ ಪ್ರಜ್ವಲಿಸುತ್ತಿರುವವನೂ, ನಾರಾಯಣನನ್ನು ಬಾಣವನ್ನಾಗಿ ಮಾಡಿಕೊಂಡು ಕೈಯಲ್ಲಿ ಹಿಡಿದಿರುವವನೂ, ಕ್ರೀಡಾದಿ ಗುಣಸಂಪನ್ನನೂ, ಭೂಮಿಯೆಂಬ ರಥದಲ್ಲಿ ಕುಳಿತಿರುವವನೂ, ವೇದಗಳನ್ನು ಕುದುರೆಗಳನ್ನಾಗಿಯೂ, ಬ್ರಹ್ಮನನ್ನೇ ಸಾರಥಿಯನ್ನಾಗಿಯೂ ಉಳ್ಳ ಗಿರಿಜೆ (ಪಾರ್ವತಿ) ಯೊಡಗೂಡಿದ ಮಹಾದೇವನನ್ನು ಅನೇಕ ವಿಧವಾದ ಮನ್ಮಥಕಲಾವಿಲಾಸಯುಕ್ತವಾದ ಈ ಪ್ರಪಂಚವು ಆನಂದಪರಿಪೂರ್ಣವಾಗುವುದಕ್ಕೋಸ್ಕರ ಮನಸ್ಸಿನಲ್ಲಿ ಅನುಸಂಧಾನಮಾಡುತ್ತೇನೆಂದು ಧ್ಯಾನಮಾಡಬೇಕು. ॥೬॥

ಹೀಗೆ ಆ ಮಹಾದೇವನನ್ನು ಧ್ಯಾನಮಾಡಿದಮೇಲೆ ಆ ದೇವದೇವನ ಉತ್ತಮವಾದ ಸಹಸ್ರನಾಮವನ್ನು ಭಸ್ಮರುದ್ರಾಕ್ಷಧಾರಣೆಮಾಡಿ, ಮಂತ್ರಪುರಶ್ಚರಣೆ

ಲಿಂಗಮಭ್ಯರ್ಚಯನ್ವಾಪಿ ಬಿಲ್ವಕೋಮಲಪಲ್ಲವೈಃ ।
ಪಂಕಜೈರುತ್ಪಲೈರ್ವಾಪಿ ಪ್ರಸಾದಾಯ ಮಹೇಶಿತುಃ ॥೮॥

ಅಷ್ಟಮ್ಯಾಂ ವಾ ಚತುರ್ದಶ್ಯಾಂ ಪರ್ವಸ್ವಪಿ ವಿಶೇಷತಃ ।
ಯಂ ಯಂ ಕಾಮಂ ಸದಾ ಚಿತ್ತೇ ಭಾವಯೇತ್ತತ್ತದಾಪ್ನುಯಾತ್ ॥೯॥

॥ಓಂ॥ ಗಂಗಾಧರೋಽಂತಕರಿಪುಃ ಪಿನಾಕೀ ಪ್ರಮಥಾಧಿಪಃ ।
ಭವ ಈಶಾನ ಆತಾರ್ಯೋಽನೇಕಧನ್ವಾ ಮಹೇಶ್ವರಃ ॥೧೦॥

ಮಹಾದೇವಃ ಪಶುಪತಿಃ ಸ್ಥಾಣುಃ ಸರ್ವಜ್ಞ ಈಶ್ವರಃ ।
ವಿಶ್ವಾಧಿಕಃ ಶಿವಃ ಶಾಂತೋ ವಿಶ್ವಾತ್ಮಾ ಗಗನಾಂತರಃ ॥೧೧॥

ಪರಾವರೋಽಂಬಿಕಾನಾಥಃ ಶರದಿಂದುಕಲಾಧರಃ ।
ಗಣೇಶತಾತೋ ದೇವೇಶೋ ಭವವೈದ್ಯಃ ಪಿತಾಮಹಃ ॥೧೨॥

---

ಮಾಡಿದನಂತರ ನಿಯಮದಿಂದ ಜಪಮಾಡಬೇಕು. ಅಥವಾ ಶಿವಲಿಂಗವನ್ನು ಕೋಮಲವಾದ ಬಿಲ್ವದಳಗಳಿಂದ ಪೂಜೆಮಾಡುವಾಗಲಾದರೂ, ತಾವರೆ ಹೂ ಅಥವಾ ಕನ್ನೈದಿಲೆಹೂಗಳಿಂದ ಪೂಜಿಸುವಾಗಲೂ ಆ ಮಹೇಶ್ವರನ ಅನುಗ್ರಹ ಪ್ರಾಪ್ತಿಗೋಸ್ಕರ ಉಚ್ಚರಿಸಬೇಕು. ಈ ಸಹಸ್ರನಾಮವನ್ನು ಅಷ್ಟಮೀ, ಚತುರ್ದಶೀ ತಿಥಿಗಳಲ್ಲಿಯೂ ವಿಶೇಷವಾಗಿ ಪರ್ವತಿಥಿಗಳಲ್ಲಿಯೂ ಮನಃಪೂರ್ವಕವಾಗಿ ಶುದ್ಧ ಹೃದಯದಿಂದ ಜಪಿಸುವವನು ಯಾವಾಗಲೂ ಸಕಲ ಇಷ್ಟಾರ್ಥಗಳನ್ನೂ ಪಡೆಯುವ ನೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿ ಮುಂದೆ ಆ ಸಹಸ್ರನಾಮವನ್ನು ಹೇಳಲುಪಕ್ರಮಿಸಿದನು. ॥೭-೮-೯॥

ಪರಶಿವನು ಗಂಗೆಯನ್ನು ಜಡೆಯಲ್ಲಿ ಧರಿಸಿರುವನು, ಯಮಾಂತಕನು, ಪಿನಾಕ ವೆಂಬ ಬಿಲ್ಲನ್ನು ಹಿಡಿದವನು, ಪ್ರಮಥಗಣಗಳಿಗೆ ಒಡೆಯನು, ಜಗದುತ್ಪತ್ತಿಕಾರಣನು, ಐಶ್ವರ್ಯಸಂಪನ್ನನು, ಭಕ್ತರನ್ನು ಉದ್ಧಾರಮಾಡುವವನು, ಅನೇಕ ಧನುಸ್ಸುಳ್ಳ ವನು, ತುಂಬಾ ಐಶ್ವರ್ಯಯುಕ್ತನು, ದೇವತೆಗಳಲ್ಲಿ ದೊಡ್ಡವನು, ಪಶುಗಳೆನಿಸಿದ (ಬಂಧನಕ್ಕೊಳಗಾದ) ಜೀವರಾಶಿಗಳಿಗೆಲ್ಲಾ ಸ್ವಾಮಿಯು, ಪ್ರಳಯಕಾಲದಲ್ಲಿ ಶಾಶ್ವತವಾಗಿ ನೆಲಸಿರುವನು, ಎಲ್ಲವನ್ನೂ ಅರಿತವನು, ಐಶ್ವರ್ಯವಂತನು, ಜಗಚ್ಛ್ರೇಷ್ಠನು, ಯೋಗಿಗಳ ಮನಸ್ಸಿನಲ್ಲಿ ನೆಲಸಿರುವವನು, ಶಾಂತಿಗುಣಯುಕ್ತನು, ಪ್ರಪಂಚಸ್ವರೂಪನು, ಆಕಾಶದಂತೆ ಅಂತರವುಳ್ಳವನು, ಎಲ್ಲರಿಗಿಂತಲೂ ಶ್ರೇಷ್ಠ

ತರಣಸ್ತಾರಕಸ್ತಾಮ್ರೋ ಪ್ರಪಂಚರಹಿತೋ ಹರಃ ।
ವಿನಾಯಕಸ್ತುತಪದೋ ಕ್ಷ್ಮಾರಥೋ ನಂದಿವಾಹನಃ ॥೧೩॥

ಗಜಾಂತಕೋ ಧನುರ್ಧಾರೀ ವೀರಘೋಷಃ ಸ್ತುತಿಪ್ರಿಯಃ ।
ಪ್ರಜಾಸಂಹರಣಶ್ಚಂಡತಾಂಡವೋ ಮನ್ಮಥಾಂತಕಃ ॥೧೪॥

ಶಿಪಿವಿಷ್ಟಃ ಶಾಶ್ವತಾತ್ಮಾ ಮೇಘವಾಹೋ ದುರಾಸದಃ ।
ಆನಂದಪೂರ್ಣೋ ವರ್ಷಾತ್ಮಾ ರುದ್ರಃ ಸಂಹಾರಕಾರಕಃ ॥೧೫॥

---

ನೆಂದೂ, ಕನಿಷ್ಠನೆಂದು ತೋರುವವನೂ, ಅಂಬಿಕಾರಮಣನು. ಶರಚ್ಚಂದ್ರನ ಕಲೆಗಳನ್ನು ಧರಿಸಿರುವನೂ, ಗಣಪತಿಯ ತಂದೆಯೂ, ದೇವತೆಗಳಿಗೆ ಒಡೆಯನೂ, ಸಂಸಾರವೆಂಬ ರೋಗಕ್ಕೆ ವೈದ್ಯನೂ, ಪ್ರಪಂಚದ ಸೃಷ್ಟಿಸ್ಥಿತ್ಯಾದಿಕಾರಣನಾದುದರಿಂದ ಆಜ್ಜನೆನಿಸಿದವನೂ, (ಅಥವಾ ಪುರಾತನನೂ) ಆಗಿರುವನು. ॥೧೦-೧೧-೧೨॥

ಜನಗಳನ್ನು ಸಂಸಾರಸಾಗರದಿಂದ ದಾಟಿಸುವವನೂ, ಪ್ರಾಣಿಗಳ ಜನನಮರಣ ರೂಪವಾದ ಬಂಧನದಿಂದ ಉದ್ಧಾರಮಾಡುವವನೂ,ಕೆಂಪುಬಣ್ಣವುಳ್ಳವನೂ,ಪ್ರಪಂಚ ಶೂನ್ಯನೂ, ಭಕ್ತರ ಪಾಪಗಳನ್ನು ನಾಶಮಾಡುವವನೂ, ವಿನಾಯಕನಿಂದ ಸ್ತುತಿಸಲ್ಪಟ್ಟ ಪಾದಗಳುಳ್ಳವನೂ, ಭೂಮಿಯನ್ನು ರಥವನ್ನಾಗಿ ಮಾಡಿಕೊಂಡಿರುವವನೂ, ನಂದಿಕೇಶ್ವರನನ್ನು ವಾಹನಮಾಡಿಕೊಂಡಿರುವವನೂ, ಗಜಾಸುರನನ್ನು ನಾಶಮಾಡಿದವನೂ, ಧನುಸ್ಸನ್ನು ಧರಿಸಿರುವವನೂ, ವೀರವಾದ ಧ್ವನಿಯುಳ್ಳವನೂ, ಸ್ತೋತ್ರಪ್ರಿಯನೂ, ಪ್ರಜೆಗಳನ್ನು ಪ್ರಳಯಕಾಲದಲ್ಲಿ ಸಂಹರಿಸುವವನೂ, ಕೋಪಯುಕ್ತನಾಗಿ ಪ್ರಳಯದಲ್ಲಿ ತಾಂಡವನಾಟ್ಯವಾಡುವವನೂ, ಮನ್ಮಥರಿಪುವೂ, ಕಿರಣಗಳಿಂದ ವ್ಯಾಪಿಸಿರುವವನೂ, (ಅಥವ ಶಿಪಿಯೆಂದರೆ ಪಶುಗಳೆನಿಸಿದ ಪ್ರಾಣಿಗಳಲ್ಲಿ ವಿಷ್ಟಃ ವ್ಯಾಪಿಸಿರುವನು) ಶಾಶ್ವತವಾದ ಸ್ವರೂಪವುಳ್ಳವನೂ, ಮೋಡಗಳನ್ನು ಒಯ್ಯುವ ವಾಯುಸ್ವರೂಪವುಳ್ಳವನೂ, ಸುಲಭವಾಗಿ ತಿಳಿಯಲು ಅಸಾಧ್ಯನೂ, ಆನಂದದಿಂದ ಪರಿಪೂರ್ಣನೂ, ಮಳೆಯ ಸ್ವರೂಪವುಳ್ಳವನೂ, ಜನಗಳ ಪಾಪಗಳನ್ನು ಹೋಗಲಾಡಿಸುವವನೂ, ಪ್ರಳಯದಲ್ಲಿ ಪ್ರಪಂಚವನ್ನು ಸಂಹಾರಮಾಡುವವನೂ, ಎನಿಸಿರುವನು. ॥೧೩-೧೪-೧೫॥

ಭಗನೇತ್ರಪ್ರಮಥನೋ ನಿತ್ಯಜೇತಾಽಪರಾಜಿತಃ ।
ಮಹಾಕಾರುಣಿಕಃ ಶುಭ್ರಃ ಪ್ರಸನ್ನಾಸ್ಯೋ ಮಖಾಂತಕಃ ॥೧೬॥

ಘನಾಭಕಂಠೋ ಗರಭುಗ್ವೃಷಭೋ ವೀರ್ಯವರ್ಧನಃ ।
ಪ್ರಕಟಸ್ತಪನೋ ದಾನೀ ಮನಸ್ವೀ ಜ್ಞಾನದಾಯಕಃ ॥೧೭॥

ಕಂದರ್ಪದರ್ಪಸಂಘಘ್ನೋ ವಿಷಾದೀ ನೀಲಲೋಹಿತಃ ।
ಕಾಲಾಂತಕೋ ಯುಗಾವರ್ತಃ ಸಂಕ್ರಂದನಸುನಂದನಃ ॥೧೮॥

ದೀನಪೋಷೋ ಪಾಶಹಂತಾ ಶಾಂತಾತ್ಮಾ ಕ್ರೋಧವರ್ಧನಃ ।
ಕಂದರ್ಪವಿಲಸಚ್ಚಂದ್ರೋ ಲಿಂಗಾಧ್ಯಕ್ಷೋ ಗಜಾಂತಕಃ ॥೧೯॥

ವೈಕುಂಠಪೂಜ್ಯೋ ವಿಶ್ವಾತ್ಮಾ ತ್ರಿನೇತ್ರೋ ವೃಷಭಧ್ವಜಃ ।
ಜಹ್ನುಜಾಪತಿರೀಶಾನಃ ಸ್ಮಶಾನನಿಲಯೋ ಯುವಾ ॥೨೦॥

---

ದಕ್ಷಬ್ರಹ್ಮನ ಯಾಗದಲ್ಲಿ ಭಗನೆಂಬ ದೇವತೆಯ ಕಣ್ಣನ್ನು ಕಿತ್ತವನೂ, ನಿತ್ಯಜಯವುಳ್ಳವನೂ, ಯಾವಾಗಲೂ ಯಾರಿಂದಲೂ ಸೋತಿಲ್ಲದವನೂ, ತುಂಬಾ ದಯಾಶಾಲಿಯೂ, ಬಿಳಿಯ ಬಣ್ಣವುಳ್ಳವನೂ, ನಿರ್ಮಲವಾದ ಮುಖವುಳ್ಳವನೂ, ದಕ್ಷಬ್ರಹ್ಮನ ಯಜ್ಞವನ್ನು ನಾಶಮಾಡಿದವನೂ; ಮೋಡದ ಕಾಂತಿಯಂತೆ ಕಂಠವುಳ್ಳವನೂ, ಕಾಲಕೂಟವಿಷವನ್ನು ಪಾನಮಾಡಿದವನೂ, ವೃಷಭವನ್ನು ಧರಿಸಿದವನೂ, ಪರಾಕ್ರಮವನ್ನು ಹೆಚ್ಚಿಸುವವನೂ, ಪ್ರಸಿದ್ಧವಾಗಿ ಗೋಚರಿಸುವವನೂ, ಸ್ತೋತ್ರಾರ್ಹನೂ, ಅಭಿಮಾನವಿಶಿಷ್ಟನೂ, ಶ್ರೇಷ್ಠವಾದ ಮನಸ್ಸುಳ್ಳವನೂ, ಜ್ಞಾನಪ್ರದನೂ, ಮನ್ಮಥನ ಅಹಂಕಾರರಾಶಿಗಳನ್ನು ನಾಶಮಾಡಿದವನೂ, ವಿಷವನ್ನು ಭಕ್ಷಿಸಿದವನೂ, ಕೊರಳಿನಲ್ಲಿ ಕಪ್ಪುಬಣ್ಣವನ್ನೂ ತಲೆಯಲ್ಲಿ ಕೆಂಪುಬಣ್ಣವನ್ನೂ ಹೊಂದಿರುವವನೂ, ಯಮನನ್ನು ನಿಗ್ರಹಿಸಿದವನೂ, ಯುಗದ ಕೊನೆಯಲ್ಲಿ ಪ್ರಪಂಚವನ್ನೆಲ್ಲಾ ನಾಶಮಾಡಿ ಪುನಃ ಯುಗಗಳನ್ನು ಪ್ರಾರಂಭಿಸುವವನೂ, ಇಂದ್ರನಿಗೆ ತುಂಬಾ ಆನಂದವನ್ನುಂಟುಮಾಡುವವನೂ, ॥೧೬-೧೭-೧೮॥

ದೀನರನ್ನು ಕಾಪಾಡುವವನೂ, ಬಂಧನವನ್ನು ಹೋಗಲಾಡಿಸುವವನೂ, ಶಾಂತಸ್ವರೂಪನೂ, ಕೋಪವನ್ನು ಹೆಚ್ಚಿಸುವವನೂ, ಮನ್ಮಥನಂತೆ ಶೋಭಿಸುತ್ತಿರುವ ಚಂದ್ರನನ್ನು ಧರಿಸಿರುವವನೂ, ಲಿಂಗದಲ್ಲಿ ಐಕ್ಯವಾಗಿರುವವನೂ ಅಥವಾ

ಪಾರ್ವತೀಜಾನಿರುದ್ಭಾಟ್ಯೋ ನಾಟ್ಯವಿದ್ಯಾಪರಾಯಣಃ ।
ಸಾಮವೇದಪ್ರಿಯೋ ವೇದ್ಯೋ ವಿದ್ಯಾಧಿಪತಿರೀಶ್ವರಃ ॥೨೦॥

ಕುಮಾರಜನಕೋ ಮಾರಮಾರಕೋ ವೀರಸತ್ತಮಃ ।
ಕಂಬಲಾಶ್ವತರೋದ್ಗಾರಿಸುಫಣೋತ್ಕೃಷ್ಟಕುಂಡಲಃ ॥೨೨॥

ಆನಂದವನವಾಸೋಽಥ ಅವಿಮುಕ್ತ ಮಹೇಶ್ವರಃ ।
ಓಂಕಾರನಿಲಯೋ ಧನ್ವೀ ಕೇದಾರೇಶೋಽಮಿತಪ್ರಿಯಃ ॥೨೩॥

ನರ್ಮದಾಲಿಂಗನಿಲಯೋ ನಿಷ್ಪಾಪಜನವತ್ಸಲಃ ।
ಮಹಾಕೈಲಾಸಲಿಂಗಾತ್ಮಾ ವೀರಭದ್ರಪ್ರಸಾದಕೃತ್ ॥೨೪॥

---

ಲಿಂಗರೂಪವಾದ ಆಕೃತಿಯಿಂದ ಗೋಚರಿಸುವವನೂ, ಗಜಾಸುರನನ್ನು ಕೊಂದವನೂ, ವಿಷ್ಣುವಿನಿಂದ ಪೂಜಿಸಲ್ಪಟ್ಟವನೂ, ಪ್ರಪಂಚಸ್ವರೂಪನೂ, ಮೂರುಕಣ್ಣುಗಳುಳ್ಳವನೂ, ವೃಷಭವನ್ನೇ ಧ್ವಜದ ಚಿಹ್ನೆಯಾಗುಳ್ಳವನೂ, ಗಂಗಾದೇವಿಯ ಪತಿಯೂ, ಐಶ್ವರ್ಯಸಂಪನ್ನನೂ, ಸ್ಮಶಾನದಲ್ಲಿ ವಾಸಮಾಡುವವನೂ, ಯೌವನದಿಂದ ಕೂಡಿದವನೂ, ॥೧೯-೨೦॥

ಪರ್ವತರಾಜಕುಮಾರಿಕಾಪತಿಯೂ, ಭಕ್ತರ ಚೇಷ್ಟೆಗಳಿಂದ ಗೋಚರವಾಗತಕ್ಕವನೂ, ನಾಟ್ಯವಿದ್ಯಾನಿಪುಣನೂ, (ಪರನೂ) ಸಾಮವೇದದಲ್ಲಿ ತುಂಬಾ ಪ್ರೀತಿಯುಳ್ಳವನೂ, ಜ್ಞಾನಗಮ್ಯನೂ, ವಿದ್ಯೆಗಳಿಗೆಲ್ಲಾ ಒಡೆಯನೂ, ಐಶ್ವರ್ಯಸಂಪನ್ನನೂ, ಷಣ್ಮುಖಸ್ವಾಮಿಯ ತಂದೆಯೂ, ಮನ್ಮಥನನ್ನು ಕೊಂದವನೂ, ವೀರರಲ್ಲಿ ಅಗ್ರೇಸರನೂ, ಪ್ರಶಸ್ತವಾದ ಫಣಾಮಂಡಲದಿಂದ ರಂಜಿಸುವ ಕಂಬಲ, ಅಶ್ವತರಗಳೆಂಬ ನಾಗಗಳನ್ನೇ ಕುಂಡಲವನ್ನಾಗಿ ಮಾಡಿಕೊಂಡಿರುವವನೂ, ಆನಂದವನದಲ್ಲಿ ವಾಸಮಾಡುವವನೂ, ಅವಿಮುಕ್ತಕ್ಷೇತ್ರವಾಸಿಯೆನಿಸಿದ ಮಹಾದೇವನೂ, ಓಂಕಾರವೆಂಬ ಮನೆಯುಳ್ಳವನೂ, ಶ್ರೇಷ್ಠವಾದ ಬಿಲ್ಲುಳ್ಳವನೂ, ಕೇದಾರೇಶ್ವರಸಂಜ್ಞಕನೂ, ಸ್ವಲ್ಪವಾಗಿ ತನ್ನ ಭಕ್ತರು ಮಾಡಿದ ಸೇವೆಯಿಂದಲೂ ಪ್ರೀತಿಹೊಂದುವವನೂ ಆಗಿರುವನು. ॥೨೧-೨೨-೨೩॥

ನರ್ಮದಾಲಿಂಗದಲ್ಲಿ ನೆಲಸಿರುವವನೂ, ಪಾಪಶೂನ್ಯರಾದ ಜನರಲ್ಲಿ ವಿಶ್ವಾಸವುಳ್ಳವನೂ, ಮಹಾಕೈಲಾಸಪರ್ವತದಲ್ಲಿನ ಲಿಂಗರೂಪಿಯೂ, ವೀರಭದ್ರನಿಗೆ ಅನುಗ್ರಹಮಾಡಿದವನೂ, ಪ್ರಳಯಕಾಲದ ಅಗ್ನಿಯಂತೆ ಭಯಂಕರಸ್ವರೂಪನೂ,

ಕಾಲಾಗ್ನಿ ರುದ್ರೋಽನಂತಾತ್ಮಾ ಭಸ್ಮಾಂಗೋ ಗೋಪತಿಪ್ರಿಯಃ ।
ವೇದಾಶ್ವಃ ಕಂಜಜಾಜಾನಿನೇತ್ರಪೂಜಿತಪಾದುಕಃ ॥೨೫॥

ಜಲಂಧರವಧೋದ್ಯುಕ್ತದಿವ್ಯಚಕ್ರಪ್ರದಾಯಕಃ ।
ವಾಮನೋ ವಿಕಟೋ ಮುಂಡಸ್ತುಹುಂಡಕೃತಸಂಸ್ತುತಿಃ ॥೨೬॥

ಫಣೀಶ್ವರಮಹಾಹಾರೋ ರುದ್ರಾಕ್ಷಕೃತಕಂಕಣಃ ।
ವೀಣಾಪಾಣಿರ್ಗಾನರತೋ ಢಕ್ಕಾವಾದ್ಯಪ್ರಿಯೋ ವಶೀ ॥೨೭॥

ವಿಶಾಲವಕ್ಷಾಃ ಶೈಲೇಂದ್ರಜಾಮಾತಾಮರಸತ್ತಮಃ ।
ಹೃತ್ತಮೋನಾಶಕೋ ಬುದ್ಧೋ ಜಗತ್ಕಂದೋರ್ದನೋ ಬಲೀ॥೨೮॥

ಪಲಾಶಪುಷ್ಪಪೂಜ್ಯಾಂಘ್ರಿಃ ಪಲಾಶನವರಪ್ರದಃ ।
ಸಾಗರಾಂತರ್ಗತೋ ಘೋರಃ ಸದ್ಯೋಜಾತೋಽಂಬಿಕಾಸಖಃ ॥೨೯॥

---

ಅಪರಿಮಿತವಾದ ಆಕೃತಿಗಳುಳ್ಳವನೂ, ಭಸ್ಮವನ್ನು ದೇಹಕ್ಕೆ ಲೇಪನಮಾಡಿಕೊಂಡಿರುವವನೂ, ವಿಷ್ಣುವಿಗೆ ಪ್ರೀತಿಪಾತ್ರನೂ, ವೇದಗಳನ್ನೇ ಕುದುರೆಗಳನ್ನಾಗಿ ಮಾಡಿಕೊಂಡವನೂ, ಕಮಲೋದ್ಭವಳಾದ ಲಕ್ಷ್ಮಿಯ ಪತಿಯಾದ ವಿಷ್ಣುವಿನ ಕಣ್ಣಿನಿಂದ ಪೂಜೆಮಾಡಲ್ಪಟ್ಟ ಪಾದವುಳ್ಳವನೂ, ಜಲಂಧರನೆಂಬ ರಾಕ್ಷಸನನ್ನು ಕೊಲ್ಲಲು ಪ್ರಯತ್ನಿಸಿದ ವಿಷ್ಣುವಿಗೆ ದಿವ್ಯವಾದ ಸುದರ್ಶನಚಕ್ರವನ್ನು ಕೊಟ್ಟವನೂ, ವಾಮನಮೂರ್ತಿಯೂ, ಮೂರುಕಣ್ಣು, ಸರ್ಪಾಭರಣಾದಿಗಳಿಂದ ವಿಕಾರಸ್ವರೂಪನಾಗಿ ಕಾಣುವವನೂ, ಮುಂಡ, ತುಹುಂಡ ಎಂಬವರಿಂದ ಸ್ತೋತ್ರಮಾಡಲ್ಪಟ್ಟವನೂ, ಎನಿಸಿರುವನು. ॥೨೪-೨೫-೨೬॥

ಸರ್ಪರಾಜನಾದ ಆದಿಶೇಷನನ್ನು ದೊಡ್ಡ ಹಾರವನ್ನಾಗಿ ಮಾಡಿಕೊಂಡಿರುವನೂ, ರುದ್ರಾಕ್ಷಗಳಿಂದ ಕಂಕಣಮಾಡಿಕೊಂಡಿರುವವನೂ, ವೀಣೆಯನ್ನು ಕೈಲಿ ಹಿಡಿದು ಸಂಗೀತದಲ್ಲಿ ನಿರತನಾಗಿರುವವನೂ, ಢಕ್ಕಾವಾದ್ಯದಲ್ಲಿ ಪ್ರೀತಿಯುಳ್ಳವನೂ, ಜಿತೇಂದ್ರಿಯನೂ, ವಿಸ್ತಾರವಾದ ಎದೆಯುಳ್ಳವನೂ, ಪರ್ವತರಾಜನ ಅಳಿಯನೂ, ದೇವತೋತ್ತಮನೂ, ಹೃದಯದ ಅಂಧಕಾರವನ್ನು ನಾಶಮಾಡುವವನೂ, ಜ್ಞಾನಸ್ವರೂಪನೂ, ಜಗತ್ತಿಗೆ ದುಃಖವನ್ನುಂಟುಮಾಡುವ ದುಷ್ಟರನ್ನು (ಬಲಿಹಾಕುವವನೂ) ಸದೆಬಡಿಯುವವನೂ, ಬಲಶಾಲಿಯೂ, ಮುತ್ತುಗದ ಹೂವಿನಿಂದ

ವಾಮದೇವಃ ಸಾಮಗೀತಃ ಸೋಮಃ ಸೋಮಕಲಾಧರಃ ।
ನಿಃಸೀಮಮಹಿಮೋದಾರೋ ದೂರಿತಾಖಿಲಪಾತಕಃ ॥೩೦॥

ತಪನಾಂತರ್ಗತೋ ಧಾತಾ ಧೇನುಪುತ್ರವರಪ್ರದಃ ।
ಬಾಣಹಸ್ತಃಪ್ರದೋ ನೇತಾ ನಮುಚಿರ್ವೀರ್ಯವರ್ಧನಃ ॥೩೧॥

ನಾಗಾಜಿನಾಂಗೋ ನಾಗೇಶೋ ನಾಗೇಶವರಕಂಕಣಃ ।
ಅಗೇಶಶಾಯೀ ಭೂತೇಶೋ ಗಣಕೋಲಾಹಲಪ್ರಿಯಃ ॥೩೨॥

ಪ್ರಸನ್ನಾಸ್ಯೋಽನೇಕಬಾಹುಃ ಶೂಲಧೃಕ್ಕಲಿತಾಪನಃ ।
ಕಾಲಪ್ರಮಥನಃ ಕೂರ್ಮಮಹಾಖರ್ಪರಟಿಧಾರಕಃ ॥೩೩॥

---

ಪೂಜಿಸಲು ಯೋಗ್ಯವಾದ ಪಾದಗಳುಳ್ಳವನೂ, ರಾಕ್ಷಸರಿಗೆ ವರಗಳನ್ನು ಕೊಡುವವನೂ, ಸಾಗರಗಳ ಒಳಗೆ ಇರುವವನೂ, ಶತ್ರುಗಳಿಗೆ ಭಯಂಕರಸ್ವರೂಪನೂ, ಸದ್ಯೋಜಾತನೂ, ಅಂಬಿಕಾದೇವಿಯ ಸಹಚಾರಿಯೂ, ॥೨೭-೨೮-೨೯॥

ಸುಂದರಾಂಗಿಯಾದ ಪಾರ್ವತಿಯಿಂದ ಪ್ರಕಾಶಿಸುವವನೂ, ಸಾಮವೇದದಿಂದ ಗಾನಮಾಡಲ್ಪಟ್ಟವನೂ, ಉಮಾಸಹಚರನೂ, ಚಂದ್ರಕಲೆಗಳನ್ನು ಧರಿಸಿರುವವನೂ, ಎಲ್ಲೆಯಿಲ್ಲದ ಪ್ರಭಾವವುಳ್ಳವನೂ, ಉದಾರಸ್ವಭಾವನೂ, ಸಕಲ ಪಾಪಗಳನ್ನೂ ದೂರಮಾಡಿದವನೂ, ಸೂರ್ಯನ ಮಧ್ಯದಲ್ಲಿ ನೆಲಸಿರುವವನೂ,(ದ್ವಾದಶಾದಿತ್ಯರಲ್ಲಿ ಒಬ್ಬನೂ) ಧಾತೃವೆನಿಸಿರುವವನೂ, ಕಾಮಧೇನುವಿನ ಮಗನಿಗೆ ವರವನ್ನು ಕೊಟ್ಟವನೂ, ಬಾಣವನ್ನು ಕೈಯಲ್ಲಿ ಹಿಡಿದಿರುವವನೂ, ಪ್ರಪಂಚವನ್ನೆಲ್ಲಾ ತನ್ನ ಅಪ್ಪಣೆಯಂತೆ ನಡೆಸುವವನೂ, ನಮುಚಿಯೂ(ಭಕ್ತರನ್ನು ಬಿಡದವನು) ಪರಾಕ್ರಮವನ್ನು ಹೆಚ್ಚಿಸುವವನೂ, ಗಜಚರ್ಮವನ್ನು ದೇಹದಲ್ಲಿ ಧರಿಸಿರುವವನೂ, ಸರ್ಪಗಳಿಗೆಲ್ಲಾ ಒಡೆಯನೂ, ಸರ್ಪರಾಜನನ್ನೇ ಶ್ರೇಷ್ಠವಾದ ಕಂಕಣವಾಗಿ ಮಾಡಿಕೊಂಡಿರುವವನೂ, ಪರ್ವತಗಳಿಗೊಡೆಯನಾದ ಹಿಮವತ್ಪರ್ವತದಲ್ಲಿ ಯಾವಾಗಲೂ ಮಲಗಿರುವವನೂ, ಭೂತಗಳಿಗೆಲ್ಲಾ ಒಡೆಯನೂ, ಪ್ರಮಥಗಣಗಳ ಕೋಲಾಹಲ ಧ್ವನಿಯಿಂದ ಪ್ರೀತಿಹೊಂದುವವನೂ, ॥೩೦-೩೧-೩೨॥

ನಿರ್ಮಲವಾದ ಮುಖವುಳ್ಳವನೂ, ಅನೇಕ ತೋಳುಗಳುಳ್ಳವನೂ, ಶೂಲಾಯುಧವನ್ನು ಧರಿಸಿರುವವನೂ, ಕಲಿದೋಷವನ್ನು ಪೀಡಿಸುವನೂ, ಯಮನನ್ನು ದಂಡಿಸಿದವನೂ, ಆಮೆಯಾಕಾರದ ಕಪ್ಪರವನ್ನು ಹಿಡಿದವನೂ, ನರಸಿಂಹನ

ನಾರಸಿಂಹಾಜಿನಧರೋ ಮಹಾಲಾಂಗಲಧೃಗ್ಬಲೀ ।
ಕಕುದೋನ್ಮಥನೋ ಹೇತುರಹೇತುಃ ಸರ್ವಕಾರಣಃ ॥೩೪॥

ಕೃಶಾನುರೇತಸೋತ್ಫುಲ್ಲಫಾಲನೇತ್ರೋऽಸುರಾರಿಹಾ ।
ಮೃಗಬಾಲಧರೋ ಧನ್ವೀ ಶಕ್ರಬಾಹುವಿಭಂಜಕಃ ॥೩೫॥

ದಕ್ಷಯಜ್ಞಪ್ರಮಥನಃ ಪ್ರಮಥಾಧಿಪತಿಃ ಶಿವಃ ।
ಶತಾವರ್ತೋ ಯುಗಾವರ್ತೋ ಮೇಘಾವರ್ತೋ ದುರಾಸದಃ ॥೩೬॥

ಮನೋಜವೋ ಜಾತಜನೋ ವೇದಾಧಾರಃ ಸನಾತನಃ ।
ಪಾಂಡರಾಂಗೋ ಗೋಜಿನಾಂಗಃ ಕರ್ಮಾದಿ ಜನವತ್ಸಲಃ ॥೩೭॥

ಚಾತುರ್ಹೋತ್ರೋ ವೀರಹೋತಾ ಶತರುದ್ರೀಯಮಧ್ಯಗಃ ।
ಭೀಮೋ ರುದ್ರ ಉದಾವರ್ತೋ ವಿಷಮಾಕ್ಷೋರುಣೇಶ್ವರಃ ॥೩೮॥

---

ಚರ್ಮವನ್ನು ಧರಿಸಿರುವವನೂ, ದೊಡ್ಡ ನೇಗಿಲನ್ನು ಹಿಡಿದಿರುವವನೂ, ಬಲ ಶಾಲಿಯೂ, ಗರ್ವಿಷ್ಠರಾದವರ ಭುಜವನ್ನು ಕಡಿದವನೂ, ಸಕಲ ಪ್ರಪಂಚಕ್ಕೂ ಕಾರಣನೂ, ತಾನುಮಾತ್ರ ಕಾರಣಶೂನ್ಯನೂ, ಸರ್ವಕಾರ್ಯಗಳಿಗೂ ಕಾರಣ ಭೂತನೂ, ಅಗ್ನಿರೇತಸ್ಕನೂ, ಹೊಳೆಯುತ್ತಿರುವ ಹಣೆಗಣ್ಣುಳ್ಳವನೂ, ರಾಕ್ಷಸರನ್ನು ಧ್ವಂಸಮಾಡುವವನೂ, ಎಳೆಯ ಜಿಂಕೆಯನ್ನು ಧರಿಸಿಕೊಂಡಿರುವವನೂ, ಉತ್ತಮ ವಾದ ಧನುಸ್ಸುಳ್ಳವನೂ, ಇಂದ್ರನ ತೋಳನ್ನು ಮುರಿದವನೂ, ॥೩೩-೩೪-೩೫॥

ದಕ್ಷಬ್ರಹ್ಮನ ಯಾಗವನ್ನು ಹಾಳುಮಾಡಿದವನೂ, ಪ್ರಮಥಗಣಗಳಿಗೆ ಸ್ವಾಮಿಯೂ, ಮಂಗಳವನ್ನುಂಟುಮಾಡುವವನೂ, ಅನೇಕರೀತಿ, ಯುಗಗಳರೂಪ ದಲ್ಲಿ, ಮೇಘರೂಪದಲ್ಲಿ ಪ್ರಳಯವನ್ನು ಕಲ್ಪಿಸುವವನು. ಸುಲಭವಾಗಿ ದೊರೆಯ ದವನೂ, ಮನೋವೇಗವುಳ್ಳವನೂ, ಜನಗಳನ್ನು ಸೃಷ್ಟಿಸಿದವನೂ, ವೇದಗಳಿಗೆಲ್ಲಾ ಆಧಾರಭೂತನೂ, ಸನಾತನನೆನಿಸಿದವನೂ, (ಹಿಂದಿನವನು) ಬಿಳಿಯ ಬಣ್ಣದ ದೇಹ ವುಳ್ಳವನೂ, ಗೋಚರ್ಮವನ್ನು ದೇಹದಮೇಲೆ ಧರಿಸಿರುವವನೂ, ಕೆಲಸಮಾಡುವ ಜನರ ಮೇಲೆ ವಾತ್ಸಲ್ಯವುಳ್ಳವನೂ, ಎನಿಸಿರುವನು. ॥೩೬-೩೭॥

ಚತುರ್ಹೋತೃಮಂತ್ರಸ್ವರೂಪನಾದವನು, ಸಮರ್ಥನಾದವನು, ಹೋತೃ ಸ್ವರೂಪನು, ಶತರುದ್ರೀಯಮಂತ್ರದ ಮಧ್ಯದಲ್ಲಿ ನೆಲಸಿರುವವನು, ಅತಿಭಯಂಕರನು,

ಯಕ್ಷರಾಜನುತೋ ನಾಥೋ ನೀತಿಶಾಸ್ತ್ರಪ್ರವರ್ತಕಃ ।
ಕಪಾಲಪಾಣಿರ್ಭಗವಾನ್ವೈಯ್ಯಾಘ್ರತ್ವಗಲಂಕೃತಃ ॥೩೯॥

ಮೋಕ್ಷಸಾರೋಽಧ್ವರಾಧ್ಯಕ್ಷೋ ಧ್ವಜಬಾಹುರ್ಮರುತ್ಸಖಾ ।
ಆರುಣೇಯಸ್ತ್ವಗಾಧ್ಯಕ್ಷೋ ಕಾಮನಾರಹಿತಸ್ತರುಃ ॥೪೦॥

ಬಿಲ್ವಪೂಜ್ಯೋ ಬಿಲ್ವನೀಶೋ ಹರಿದಶ್ವೋಽಪರಾಜಿತಃ ।
ಬೃಹದ್ರಥಂತರಸ್ತುತ್ಯೋ ವಾಮದೇವ್ಯಸ್ತವಪ್ರಿಯಃ ॥೪೧॥

ಅಘೋರತನುರೋಜಿಷ್ಠೋ ಗಂಭೀರೋ ಮನ್ಯುರೀಶ್ವರಃ ।
ಕಲಿಪ್ರವರ್ತಕೋ ಯೋಗೀ ಸಾಂಖ್ಯಮಾಯಾವಿಶಾರದಃ ॥೪೨॥

---

ಭಕ್ತರ ಪಾಪಗಳನ್ನು ಹೋಗಲಾಡಿಸುವವನು, ಪ್ರವಾಹಮಧ್ಯದಲ್ಲಿ ಸುಳಿಯರೂಪದಲ್ಲಿರುವವನು. ವಿಷಮವಾದ ಕಣ್ಣುಗಳುಳ್ಳವನು, (ಮುಕ್ಕಣ್ಣನಾದುದರಿಂದ) ಕೆಂಪುಬಣ್ಣವುಳ್ಳವನು, ಐಶ್ವರ್ಯಸಂಪನ್ನನು, ಕುಬೇರನಿಂದ ಸ್ತೋತ್ರಮಾಡಲ್ಪಟ್ಟವನು, ಜಗದೊಡೆಯನು, ನೀತಿಶಾಸ್ತ್ರಗಳಿಗೆ ಪ್ರವರ್ತಕನು, ಬ್ರಹ್ಮಕಪಾಲವನ್ನು ಕೈಯಲ್ಲಿ ಹಿಡಿದಿರುವವನು, ಷಡ್ಗುಣಪರಿಪೂರ್ಣನು, ಹುಲಿಯ ಚರ್ಮವನ್ನು ಅಲಂಕರಿಸಿಕೊಂಡಿರುವನು, ಮೋಕ್ಷದ ಸಾರಸ್ವರೂಪನು, ಯಾಗಗಳಿಗೆ ಅಧ್ಯಕ್ಷನು, ತೋಳಿನಲ್ಲಿ ಧ್ವಜವುಳ್ಳವನು, ವಾಯುವಿನ ಸ್ನೇಹಿತನು, ಕೆಂಪುಬಣ್ಣದಿಂದ ಶೋಭಿಸುವವನು, ಚರ್ಮಗಳಿಗೆ ಅಧ್ಯಕ್ಷನು, ಇಚ್ಛಾಶೂನ್ಯನು, ಕಲ್ಪವೃಕ್ಷದಂತೆ ಇರುವವನು. ॥೩೮-೩೯-೪೦॥

ಬಿಲ್ವಪತ್ರೆಗಳಿಂದ ಪೂಜಿಸಲ್ಪಡುವವನು, ಬಿಲ್ವವನಗಳಿಗೆ ಅಧಿಪತಿಯು, ಹಸುರುಬಣ್ಣದ ಕುದುರೆಗಳುಳ್ಳವನು, ಯಾರಿಂದಲೂ ಸೋಲಲ್ಪಡದವನು, ಬೃಹದ್ರಥಂತರವೆಂಬ ಸಾಮದಿಂದ ಸ್ತೋತ್ರಮಾಡಲ್ಪಡುವವನು, ವಾಮದೇವವೆಂಬ ಸಾಮಗಾನದ ಸ್ತೋತ್ರಪ್ರಿಯನೆನಿಸಿರುವನು, ಶಾಂತಸ್ವರೂಪವುಳ್ಳವನು, ಬಲಶಾಲಿಯು, ಗಂಭೀರವಾದ ಮೂರ್ತಿಯುಳ್ಳವನು, ಕೋಪಸ್ವರೂಪನು, ಐಶ್ವರ್ಯಯುಕ್ತನು, ಕಲಿಪ್ರೇರಕನು, ಯೋಗನಿರತನು, ಸಾಂಖ್ಯಶಾಸ್ತ್ರಪ್ರತಿಪಾದಿತವಾದ ಮಾಯಾವಿದ್ಯೆಯಲ್ಲಿ ನಿಪುಣನು. ॥೪೧-೪೨॥

ವಿಧಾರಣೋ ಧೈರ್ಯಧುರ್ಯೋ ಸೋಮಧಾಮಾಂತರಸ್ಥಿತಃ ।
ಶಿಪಿವಿಷ್ಟೋ ಗಹ್ವರೇಷ್ಟೋ ಜ್ಯೇಷ್ಠೋ ದೇವಃ ಕನಿಷ್ಠಕಃ ॥೪೩॥

ಪಿನಾಕಹಸ್ತೋಽಪರಜೋ ದುಂದುಭ್ಯೋಽವರ್ಷ್ಯ ರೈಷ್ಟ್ರ್ಯಕಃ ।
ಕವಚೀ ಚ ನಿಷಂಗೀ ಚ ರಥಘೋಷೋಽಮಿತಪ್ರಭಃ ॥೪೪॥

ಕಾಲಂಜರೋ ದಂದಶೂಕೋ ವಿದರ್ಭೇಶೋ ಗುಣಾತಿಗಃ ।
ಗಭಸ್ತೀಶೋ ಮುನಿಶ್ರೇಷ್ಠೋ ಮಹರ್ಷಿಃ ಸಂಶಿತವ್ರತಃ ॥೪೫॥

ಕರ್ಣಿಕಾರವನಾವಾಸೀ ಕರವೀರಸುಮಪ್ರಿಯಃ ।
ನೀಲೋತ್ಪಲಮಹಾಸ್ರಗ್ವೀ ಕರಹಟ್ಟಪುರೇಶ್ವರಃ ॥೪೬॥

---

ಪ್ರಪಂಚವನ್ನೆಲ್ಲಾ ಧರಿಸಿರುವವನು, ಧೈರ್ಯದ ಭಾರವನ್ನು ಹೊತ್ತಿರುವವನು, (ಅಂದರೆ ತುಂಬಾ ಧೈರ್ಯವಂತನು) ಚಂದ್ರನ ತೇಜಸ್ಸಿನಿಂದ ಶೋಭಿಸುವವನು, ಸರ್ವಾಂತರ್ಯಾಮಿಯು, ಸಕಲ ಪ್ರಾಣಿಗಳಲ್ಲಿಯೂ ವ್ಯಾಪಿಸಿರುವನು, ಅಥವಾ ಕಿರಣಗಳಿಂದ ಕೂಡಿದವನು. ಅಥವಾ ವಿಷ್ಣುವಿನ ಆಕೃತಿಯನ್ನು ಧರಿಸಿರುವನು, ವಿಷಮವಾದ ಬೆಟ್ಟ, ಗುಹೆ ಮುಂತಾದವುಗಳಲ್ಲಿ ಇರುವವನು, ವಿದ್ಯೆ, ಐಶ್ವರ್ಯ ಮುಂತಾದವುಗಳಿಂದ ಹಿರಿಯವನು, ಕ್ರೀಡಾದಿಗುಣಸಂಪನ್ನನು, ವಿದ್ಯೆ, ಐಶ್ವರ್ಯ ಗಳಿಂದ ರಹಿತನು, ಪಿನಾಕವೆಂಬ ಬಿಲ್ಲನ್ನು ಕೈಯಲ್ಲಿ ಹಿಡಿದಿರುವವನು, ಪ್ರಳಯಕಾಲ ದಲ್ಲಿ ಕಾಲಾಗ್ನಿಯೇ ಮುಂತಾದ ರೂಪುಗಳಿಂದ ಉತ್ಪನ್ನವಾಗುವವನು, ದುಂದುಭಿ ವಾದ್ಯದಲ್ಲಿ ಹುಟ್ಟುವ ಶಬ್ದರೂಪನು, ಸಮುದ್ರವೇ ಮೊದಲಾದವುಗಳ ನೀರಿನ ಸ್ವರೂಪನು, ಪ್ರಳಯಕಾಲದಲ್ಲಿ ಪ್ರಪಂಚನಾಶಕ್ಕೋಸ್ಕರ ಉಂಟಾಗುವ ಕಲ್ಲು, ಬಂಡೆ ಮುಂತಾದವುಗಳಿಂದ ಕೂಡಿದ ಮಳೆಯ ನೀರಿನ ಸ್ವರೂಪವುಳ್ಳವನು, ಕವಚವುಳ್ಳ ವನು, ಬತ್ತಳಿಕೆಯಿಂದ ಕೂಡಿದವನು, ರಥದ ಧ್ವನಿಸ್ವರೂಪನು, ಅಪರಿಮಿತ ಕಾಂತಿಯುಳ್ಳವನು, ಯಮನ ಅಹಂಕಾರವನ್ನಡಗಿಸಿದವನು, ದಂದಶೂಕನು, ಸರ್ಪದ ಆಕಾರದಲ್ಲಿರುವವನು. ವಿದರ್ಭೇಶ್ವರನು, ಗುಣಗಳನ್ನು ಮೀರಿರುವನು, ಕಿರಣ ಗಳಿಗೆ ಒಡೆಯನು, ಮುನಿಶ್ರೇಷ್ಠನು, ಋಷಿಪುಂಗವನು, ವ್ರತನಿಯಮವನ್ನಾಚರಿಸಿ ದವನು. ॥೪೩-೪೪-೪೫॥

ಕಣಿಗಲಹೂವನದಲ್ಲಿ ವಾಸಮಾಡುವವನು, ಕರವೀರಪುಷ್ಪದಲ್ಲಿ (ಕಣಿಗಲೆ) ಪ್ರೀತಿಯುಳ್ಳವನು, ಕನ್ನೈದಿಲೇ ಹೂವಿನ ದೊಡ್ಡ ಹಾರವುಳ್ಳವನು, ಕರಹಟ್ಟವೆಂಬ

ಶತಾರ್ಚನಃ ಪರಾನಂದೋ ಬ್ರಾಹ್ಮಣಾರ್ಚ್ಯೋಪವೀತವಾನ್ ।
ಬಲೀ ಬಾಲಪ್ರಿಯೋ ಧರ್ಮೋ ಹಿರಣ್ಯಪತಿರಪ್ಪತಿಃ ॥೪೭॥

ಯಮಪ್ರಮಥನೋಽಕ್ಷೀ ಚಕ್ರಹಸ್ತಃ ಪುರಾಂತಕಃ ।
ವಸುಷೇಣೋಽಂಗನಾದೇಹಃ ಕೌಲಾಚಾರಪ್ರವರ್ತಕಃ ॥೪೮॥

ತಂತ್ರಾಧ್ಯಕ್ಷೋ ಮಂತ್ರಮಯೋ ಗಾಯತ್ರೀಮಧ್ಯಗಃ ಶುಚಿಃ ।
ವೇದಾತ್ಮಾ ಯಜ್ಞಸಂಪ್ರೀತೋ ಗರಿಷ್ಠೋ ಪಾರದಃ ಕಲಿಃ ॥೪೯॥

ಋಗ್ಯಜುಃ ಸಾಮರೂಪಾತ್ಮಾ ಸರ್ವಾತ್ಮಾ ಕ್ರತುರೀಶ್ವರಃ ।
ಹಿರಣ್ಯಗರ್ಭಜನಕೋ ಹಿರಣ್ಯಾಕ್ಷವರಪ್ರದಃ ॥೫೦॥

ಕ್ಷಮಿತಾಶೇಷಪಾಷಂಡೋ ದಂಡಹಸ್ತೋ ದುರಾಸದಃ ।
ದೂರ್ವಾರ್ಚನಪ್ರಿಯಕರೋ ರಂತಿದೇವೋಽಮರೇಶ್ವರಃ ॥೫೧॥

---

ಪಟ್ಟಣಕ್ಕೆ ಒಡೆಯನು, ಅನೇಕಾವರ್ತಿ ಪೂಜೆಯನ್ನು ಕೈಗೊಳ್ಳುವವನು, ಉತ್ಕೃಷ್ಟವಾದ ಆನಂದಸ್ವರೂಪನು, ಬ್ರಾಹ್ಮಣರಿಂದ ಪೂಜಿಸಲು ಯೋಗ್ಯನು, ಉಪವೀತವನ್ನು ಧರಿಸಿರುವವನು, ತುಂಬಾ ಬಲಶಾಲಿಯು, ಹುಡುಗರಲ್ಲಿ ಪ್ರೀತಿಯುಳ್ಳವನು, ಧರ್ಮಸ್ವರೂಪನು, ಸುವರ್ಣಕ್ಕೆ ಒಡೆಯನು, ಜಲಾಧಿಪತಿಯು, ಯಮನನ್ನು ನಿಗ್ರಹಿಸಿದವನು, ಕವಚವುಳ್ಳವನು, ಚಕ್ರವನ್ನು ಕೈಲಿ ಹಿಡಿದಿರುವವನು, ತ್ರಿಪುರಾಸುರ ಶತ್ರುವು, ದ್ರವ್ಯಗಳಿಗೆ ಆಶ್ರಯನು. ಅರ್ಧನಾರೀದೇಹವುಳ್ಳವನು, ಕುಲಾಚಾರಗಳಿಗೆ ಪ್ರವರ್ತಕನಾಗಿರುವವನು. ॥೪೬-೪೭-೪೮॥

ತಂತ್ರಗಳಿಗೆಲ್ಲಾ ಅಧ್ಯಕ್ಷನು, ಮಂತ್ರಸ್ವರೂಪನು, ಗಾಯತ್ರೀಮಂತ್ರದ ಮಧ್ಯದಲ್ಲಿರುವವನು, ಶುಚಿಯಾಗಿರುವವನು, ವೇದಸ್ವರೂಪನು, ಯಾಗದಿಂದ ಪ್ರೀತಿಹೊಂದಿದವನು, ಎಲ್ಲರಲ್ಲಿಯೂ ಹಿರಿಯವನು, ಪಾದರಸಸ್ವರೂಪನು, ಕಲಿರೂಪನು, ಋಕ್ಕು, ಯಜುಸ್ಸು ಮತ್ತು ಸಾಮರೂಪವಾದ ವೇದಗಳ ಸ್ವರೂಪನು, ಸಕಲ ಪ್ರಪಂಚಸ್ವರೂಪನು, ಯಜ್ಞರೂಪಿಯು, ಐಶ್ವರ್ಯಯುಕ್ತನು, ಬ್ರಹ್ಮನ ತಂದೆಯು, ಹಿರಣ್ಯಾಕ್ಷನೆಂಬ ದಾನವನಿಗೆ ವರವನ್ನಿತ್ತವನು. ॥೪೯-೫೦॥

ಎಲ್ಲಾ ಪಾಷಂಡರನ್ನೂ ಕ್ಷಮಿಸಿದವನು, ದಂಡವನ್ನು ಕೈಯ್ಯಲ್ಲುಳ್ಳವನು, ಹೊಂದಲು ಅಸಾಧ್ಯನೂ, ಗರಿಕೆಯ ಪೂಜೆಯಿಂದ ಪ್ರೀತಿಯನ್ನು ತೋರಿಸುವ

ಅಮೃತಾತ್ಮಾ ಮಹಾದೇವೋ ಹರಃ ಸಂಸಾರಕಾರಕಃ ।
ತ್ರಿಗುಣೋ ವಿಖನಾ ವಾಗ್ಮೀ ತ್ವಙ್ಮಾಂಸರುಧಿರಾಸನಃ ॥೫೨॥

ವಸಾಪ್ರಿಯೋ ವಸಾನಿಷ್ಠೋ ವಿಷ್ಣುರಕ್ತಪ್ರಿಯೋ ಗುರುಃ ।
ಕಿರಾತವೇಷಃ ಶೋಣಾತ್ಮಾ ರತ್ನಗರ್ಭೋಽರುಣೇಕ್ಷಣಃ ॥೫೩॥

ಸುರಾಸವಬಲಿಪ್ರೀತಸ್ತತ್ಪೂರುಷೋ ಗಂಧದೇಹವಾನ್ ।
ವ್ಯೋಮಕೇಶಃ ಕೋಶಹೀನಃ ಕಲ್ಪನಾರಹಿತಃ ಕ್ಷಮೀ ॥೫೪॥

ಸಹಮಾನಶ್ಚ ವಿವ್ಯಾಧೀ ಸ್ಫಟಿಕೋಪಲನಿರ್ಮಲಃ ।
ಮೃತ್ಯುಂಜಯೋ ದುರಾರಾಧ್ಯೋ ಭಕ್ತಿಪ್ರೀತೋ ಭಯಾಪಹಃ ॥೫೫॥

---

ವನು, ರಂತಿದೇವನೆಂಬ ಸಂಜ್ಞೆಯುಳ್ಳವನು, ದೇವತೆಗಳಿಗೆ ಸ್ವಾಮಿಯು, ಅಮೃತ ಸ್ವರೂಪನು, ದೇವತೆಗಳಲ್ಲಿ ದೊಡ್ಡವನು, ಭಕ್ತರ ಪಾಪಗಳನ್ನು ನಾಶಮಾಡುವವನು, ಸಂಸಾರಬಂಧನವನ್ನುಂಟುಮಾಡುವವನು, ಸತ್ವ, ರಜಸ್ಸು ಮತ್ತು ತಮಸ್ಸುಗಳೆಂಬ ಮೂರುಗುಣಗಳ ಸ್ವರೂಪನು, ವಿಖನಸನು, ವಾಚಾಳಿಯು, ಚರ್ಮ, ಮಾಂಸ ಮತ್ತು ರಕ್ತಗಳನ್ನೇ ಆಸನವನ್ನಾಗಿ ಉಳ್ಳವನು, ವಪೆಯಲ್ಲಿ ಪ್ರೀತಿಯುಳ್ಳವನು, ವಿಷ್ಣುವಿನ ರಕ್ತದಲ್ಲಿ ಪ್ರೀತಿಯುಳ್ಳವನು, ಗುರುವು, ಅಂಧಕಾರವನ್ನು ಹೋಗಲಾಡಿಸುವವನು, ಬೇಡನ ವೇಷವುಳ್ಳವನು, ಕೆಂಪುಬಣ್ಣದ ಆಕೃತಿಯುಳ್ಳವನು, ರತ್ನಗಳನ್ನು ಗರ್ಭದಲ್ಲಿ ಅಡಗಿಸಿಕೊಂಡಿರುವನು, ಸಮುದ್ರಸ್ವರೂಪನು, ಕೆಂಪಾದ ಕಣ್ಣುಗಳುಳ್ಳವನು. ॥೫೧-೫೨-೫೩॥

ದೇವತೆಗಳ ಆಸವ (ಮಧು) ರೂಪವಾದ ಬಲಿಯಿಂದ ಪ್ರೀತಿಹೊಂದಿದವನೂ, ತತ್ಪುರುಷನೆನಿಸಿದವನೂ, (ತತ್ಪುರುಷಮೂರ್ತಿಯು) ಗಂಧಮಯವಾದ ದೇಹವುಳ್ಳವನೂ, ಆಕಾಶವನ್ನೇ ಕೂದಲನ್ನಾಗಿ ಧರಿಸಿರುವನೂ, ಕೋಶವಿಲ್ಲದವನೂ, ಕಲ್ಪನೆಗಳಿಲ್ಲದವನೂ, ದಯೆಯಿಂದ ಕ್ಷಮಿಸುವ ಸ್ವಭಾವವುಳ್ಳವನೂ, ವಿರೋಧಿಗಳನ್ನು ತಿರಸ್ಕರಿಸುವವನೂ, ವೈರಿಗಳನ್ನು ವಿಶೇಷವಾಗಿ ಧ್ವಂಸಮಾಡುವವನೂ, ಸ್ಫಟಿಕಮಣಿಯಂತೆ ನಿರ್ಮಲಸ್ವಭಾವವುಳ್ಳವನೂ, ಮೃತ್ಯುವನ್ನು ಜಯಿಸಿದವನೂ, ಕ್ಲೇಶದಿಂದ ಪೂಜಿಸಲು ಅರ್ಹನೂ, ಭಕ್ತಿಯಿಂದ ಪ್ರೀತಿಹೊಂದುವವನೂ, ಭಯಗಳನ್ನು ಹೋಗಲಾಡಿಸುವನೂ, ಗಂಧರ್ವರ ಸಂಗೀತದಿಂದ ತುಂಬಾ ಪ್ರೀತಿಹೊಂದುವವನೂ, ಸರ್ವವ್ಯಾಪಿಯಾದುದರಿಂದ ವಿಷ್ಣುವಿನ ಹೃದಯದಲ್ಲಿ ನೆಲಸಿರು

ಗಂಧರ್ವಗಾನಸುಪ್ರೀತೋ ವಿಷ್ಣುಗರ್ಭೋಽಮಿತದ್ಯುತಿಃ ।
ಬ್ರಹ್ಮಸ್ತುತಃ ಸೂರ್ಯನೇತ್ರೋ ವೀತಿಹೋತ್ರೋಽರ್ಜುನಾಂಗಕಃ ॥೫೬॥

ಗರ್ವಾಪಹಾರಕೋ ವಾಗ್ಮೀ ಕುಂಭಸಂಭವಪೂಜಿತಃ ।
ಮಲಯೋ ವಿಂಧ್ಯನಿಲಯೋ ಮಹೇಂದ್ರೋ ಮೇರುನಾಯಕಃ ॥೫೭॥

ಪಾರ್ವತೀನಾಯಕೋ ಜಪ್ಯೋ ಜಂಗಮಾಜಂಗಮಾಶ್ರಯಃ ।
ಕುರುವಿಂದಾರುಣಸ್ತನ್ವೀ ಅಸ್ಥಿಭೂಷೋ ನಿಶಾಕರಃ ॥೫೮॥

ಸಮುದ್ರಮಥನೋದ್ಭೂತಕಾಲಕೂಟವಿಷಾದನಃ ।
ಸುರಾಸುರೇಂದ್ರವರದೋ ದಯಾಮೂರ್ತಿಃ ಸಹಸ್ರಪಾತ್ ॥೫೯॥

ಕಾರಣೋ ವೀರಣಃ ಪುತ್ರೀ ಜಂತುಗರ್ಭೋ ಗರಾದನಃ ।
ಶ್ರೀಶೈಲಮೂಲನಿಲಯಃ ಶ್ರೀಮದ್ದಭ್ರಸಭಾಪತಿಃ ॥೬೦॥

---

ವನೂ, ಅಪರಿಮಿತವಾದ ಕಾಂತಿಯುಳ್ಳವನೂ, ಬ್ರಹ್ಮನಿಂದ ಸ್ತೋತ್ರಮಾಡಲ್ಪಟ್ಟವನೂ, ಸೂರ್ಯನನ್ನೇ ಕಣ್ಣಾಗಿ ಧರಿಸಿರುವವನೂ, ಅಗ್ನಿರೂಪನೂ ಅರ್ಜುನನಲ್ಲಿ ವಾತ್ಸಲ್ಯವುಳ್ಳವನೂ, ||೫೪-೫೫-೫೬||

ಅಹಂಕಾರವನ್ನು ಹೋಗಲಾಡಿಸುವವನೂ, ವಾಚಾಳಿಯೂ, ಅಗಸ್ತ್ಯಮುನಿಯಿಂದ ಪೂಜಿಸಲ್ಪಟ್ಟವನೂ, ಮಲಯಪರ್ವತಸ್ವರೂಪನೂ, ವಿಂಧ್ಯಪರ್ವತವಾಸಿಯೂ, ಮಹೇಂದ್ರನೂ (ಇಂದ್ರರೂಪಿಯೂ) ಮೇರುವಿಗೊಡೆಯನೂ, ಪರ್ವತರಾಜಕುಮಾರಿಕಾರಮಣನೂ, ಜಪಿಸಲು ಯೋಗ್ಯವಾದವನೂ, ಸ್ಥಾವರಜಂಗಮಾತ್ಮಕವಾದ ಪ್ರಪಂಚಕ್ಕೆಲ್ಲಾ ಆಶ್ರಯನೂ, ಕೊನ್ನಾರೀಗೆಡ್ಡೆಯಂತೆ ಕೆಂಪುವರ್ಣವುಳ್ಳವನೂ, ನಾರೀರೂಪನೂ, ಮೂಳೆಗಳ ಆಭರಣವುಳ್ಳವನೂ, ಚಂದ್ರರೂಪಿಯೂ, ||೫೭-೫೮||

ಸಮುದ್ರವನ್ನು ಕಡೆದುದರಿಂದುಂಟಾದ ಕಾಲಕೂಟವೆಂಬ ವಿಷವನ್ನು ಭಕ್ಷಣೆಮಾಡಿದವನೂ, ದೇವದಾನವಶ್ರೇಷ್ಠರಿಗೆ ವರವನ್ನು ಕೊಡುವವನೂ, ದಯಾಸ್ವರೂಪನೂ, ಸಾವಿರ ಕಾಲ್ಗಳುಳ್ಳವನೂ, ಜಗತ್ಕಾರಣನೂ, ವೀರರನ್ನು ಮುಂದಕ್ಕೆ ತರುವವನೂ, ಉತ್ತಮರಾದ ಮಕ್ಕಳುಳ್ಳವನೂ, ಸಕಲ ಪ್ರಾಣಿಗಳನ್ನೂ ಗರ್ಭದಲ್ಲಿ ಧರಿಸಿರುವವನೂ, ವಿಷವನ್ನು ತಿಂದವನೂ, ಶ್ರೀಶೈಲಪರ್ವತದ ಬುಡದಲ್ಲಿ

ದಕ್ಷಿಣಾಮೂರ್ತಿರನಘೋ ಜಲಂಧರನಿಪಾತನಃ ।
ದಕ್ಷಿಣ್ಯೋ ಯಜಮಾನಾತ್ಮಾ ದೀಕ್ಷಿತೋ ದೈತ್ಯನಾಶಕಃ ॥೬೧॥

ಕಲ್ಮಾಷಪಾದ ಪೂಜ್ಯಾಂಘ್ರಿರತಿದೋ ತುರಗಪ್ರಿಯಃ ।
ಉಮಾಧವೋ ದೀನದಯೋ ದಾತಾ ದಾಂತೋ ದಯಾಪರಃ ॥೬೨॥

ಶ್ರೀಮದ್ದಕ್ಷಿಣಕೈಲಾಸನಿವಾಸೋ ಜನವತ್ಸಲಃ ।
ದರ್ಭರೋಮಾ ಬಲೋನ್ನೇತಾ ತಾಮಸಸ್ತನುವರ್ಧನಃ ॥೬೩॥

ನಮಸ್ಕಾರಪ್ರಿಯೋ ನಾಥೋ ಆನಂದಾತ್ಮಾ ಸನಾತನಃ ।
ತಮಾಲನೀಲಸುಗಲೋ ಕುತರ್ಕವಿನಿವಾರಕಃ ॥೬೪॥

ಕಾರ್ಯರೂಪಃ ಪ್ರಶಾಂತಾತ್ಮಾ ಕರಣಾನಾಂ ಚ ಕಾರಣಃ ।
ತೃಣಪಾಣಿಃ ಕಾಂತಿಪರೋ ಮಣಿಪಾಣಿಃ ಕುಲಾಚಲಃ ॥೬೫॥

---

ನೆಲಸಿರುವವನೂ, ಸಂಪದ್ಯುಕ್ತನಾದ ದಭ್ರಸಭೆಗೆ ಒಡೆಯನೂ, ದಕ್ಷಿಣಾ ಮೂರ್ತಿಯೂ, ದೋಷರಹಿತನೂ, ಜಲಂಧರನನ್ನು ಬೀಳಿಸಿದವನೂ, (ಕೊಂದ ವನೂ) ದಕ್ಷಿಣದಿಕ್ಕಿನಲ್ಲಿ ವಾಸಿಸುವವನೂ, ಯಜಮಾನಸ್ವರೂಪಿಯೂ, ದೀಕ್ಷಾ ಧಾರಿಯೂ, ರಾಕ್ಷಸರನ್ನು ನಾಶಮಾಡುವವನೂ, ॥೫೯-೬೦-೬೧॥

ಕಲ್ಮಾಷಪಾದನೆಂಬ ಋಷಿಯು ಪೂಜಾಯೋಗ್ಯವಾದ ಚರಣಗಳುಳ್ಳ ವನೂ, ಉತ್ಸಾಹವನ್ನುಂಟುಮಾಡುವವನೂ, ಕುದುರೆಗಳಲ್ಲಿ ಪ್ರೀತಿಯುಳ್ಳ ವನೂ, ಉಮಾರಮಣನೂ, ದೀನರಲ್ಲಿ ದಯೆಯುಳ್ಳವನೂ, ದಾನಮಾಡು ವವನೂ, ಜಿತೇಂದ್ರಿಯನೂ, ದಯಾಪರನೂ, ಕಾಂತಿಯುಕ್ತವಾದ ದಕ್ಷಿಣ ಕೈಲಾಸದಲ್ಲಿ ವಾಸಮಾಡುವವನೂ, ಜನಗಳಲ್ಲಿ ಪ್ರೀತಿಯುಳ್ಳವನೂ, ದರ್ಭೆಗಳಂತೆ ರೋಮಗಳುಳ್ಳವನೂ, ಬಲದಿಂದ ಪ್ರಪಂಚವನ್ನೆಲ್ಲಾ ನಯನಮಾಡುವವನೂ, ತಾಮಸಪ್ರಕೃತಿಯೂ, ತಮೋಗುಣಯುಕ್ತನೂ, ಶರೀರವನ್ನು ಅಭಿವೃದ್ಧಿಗೊಳಿಸು ವವನೂ, ನಮಸ್ಕಾರದಲ್ಲಿ ಪ್ರೀತಿಯುಳ್ಳವನೂ, ಜಗದೊಡೆಯನೂ, ಆನಂದ ಸ್ವರೂಪನೂ, ಪುರಾತನಪುರುಷನೂ, ಹೊಂಗೆಯಂತೆ ಕಪ್ಪಾದ ಕೊರಳುಳ್ಳವನೂ, ಜ್ಞಾನಸ್ವರೂಪನೂ, ನೀಚತರ್ಕಗಳನ್ನು ನಿವಾರಣೆಮಾಡುವವನೂ, ॥೬೨-೬೩-೬೪॥

ಕೆಲಸಗಳ ರೂಪುಳ್ಳವನೂ, ಶಾಂತಸ್ವರೂಪನೂ, ಇಂದ್ರಿಯಗಳಿಗೆಲ್ಲಾ ಕಾರಣಸ್ವರೂಪನೂ, ಹುಲ್ಲನ್ನು ಕೈಯಲ್ಲಿ ಧರಿಸಿರುವವನೂ, ಕಾಂತಿಯುಕ್ತನೂ,

ಕಸ್ತೂರೀತಿಲಕಾಕ್ರಾಂತಫಾಲೋ ಭಸ್ಮತ್ರಿಪುಂಡ್ರವಾನ್ ।
ವಾರಣಾಂಗಾಲಂಕೃತಾಂಗೋ ಮಹಾಪಾಪನಿವಾರಣಃ ॥೬೬॥

ಪ್ರಕಾಶರೂಪೋ ಗುಹ್ಯಾತ್ಮಾ ಬಾಲರೂಪೋ ಬಿಲೇಶಯಃ ।
ಭಿಕ್ಷುಪ್ರಿಯೋ ಭಕ್ಷ್ಯಭೋಕ್ತಾ ಭರದ್ವಾಜಪ್ರಿಯೋ ವಶೀ ॥೬೭॥

ಕರ್ಮಣ್ಯೋ ನರಕೋದ್ಧರ್ತಾ ತರುಣೋ ಯೂನಹರ್ಷದಃ ।
ವೃಷಗಾಮೀ ಧರ್ಮಗೋಪ್ತಾ ಕಾಮೀ ಕಾಮಾಂಗನಾಶನಃ ॥೬೮॥

ಕಾರಣ್ಯೋ ವಾಜಿರೂಪಾತ್ಮಾ ನಿಧರ್ಮೋ ಗ್ರಾಮಣೀಃ ಪ್ರಭುಃ ।
ಅರಣ್ಯಪಶುಹಸ್ತಶ್ಚ ಸೈನಿಕೋ ಮೇಘವಾಹನಃ ॥೬೯॥

ಕುಮಾರಗುರುರಾನಂದೋ ವಾಮನೋ ವಾಗ್ಭವೋ ಯುವಾ ।
ಸ್ವರ್ಧುನೀಚಂದ್ರಮೌಲಿಶ್ಚ ತರುರಾಜೋ ಮಹಾಮನಾಃ ॥೭೦॥

---

ರತ್ನಪಾಣಿಯೂ, ಕುಲಪರ್ವತರೂಪಿಯೂ, ಹಣೆಯಲ್ಲಿ ಕಸ್ತೂರೀತಿಲಕವನ್ನು ಧರಿಸಿರುವವನೂ, ಭಸ್ಮತ್ರಿಪುಂಡ್ರವನ್ನಲಂಕರಿಸಿರುವವನೂ, ಆನೆಯ ಚರ್ಮದಿಂದ ಅಲಂಕೃತವಾದ ದೇಹವುಳ್ಳವನೂ, ಮಹಾಪಾಪಗಳನ್ನು ಹೋಗಲಾಡಿಸುವನೂ, ಪ್ರಕಾಶಸ್ವರೂಪನೂ, ಗುಹ್ಯೇಂದ್ರಿಯರೂಪಿಯು ಅಥವಾ ಗುಟ್ಟಾದ ಸ್ವರೂಪವುಳ್ಳವನೂ, ಬಾಲಕರ ರೂಪಿನಿಂದ ತೋರುವನೂ, ಸರ್ಪರೂಪಿನಿಂದ ಗೋಚರಿಸುವವನೂ, ಭಿಕ್ಷುಕರಲ್ಲಿ ಪ್ರೀತಿಯುಳ್ಳವನೂ, ಭಕ್ಷ್ಯಗಳನ್ನು ತಿನ್ನುವವನೂ, ಭರದ್ವಾಜನಿಗೆ ಪ್ರೀತಿಪಾತ್ರನೂ, ಜಿತೇಂದ್ರಿಯನೂ ಆಗಿರುವನು. ॥೬೫-೬೬-೬೭॥

ಕರ್ಮಗಳಲ್ಲಿ ಗೋಚರಿಸುವವನೂ, ನರಕದಿಂದ ಭಕ್ತರನ್ನು ಉದ್ಧಾರಮಾಡುವವನೂ, ತರುಣನೂ, ಯುವಕರಿಗೆ ಸಂತೋಷವನ್ನುಂಟುಮಾಡುವವನೂ, ವೃಷಭದಮೇಲೆ ಸಂಚರಿಸುವವನೂ, ಧರ್ಮವನ್ನು ಕಾಪಾಡುವವನೂ, ಇಚ್ಛಾವಂತನೂ, ಮನ್ಮಥನ ದೇಹವನ್ನು ನಾಶಮಾಡಿದವನೂ, ಪ್ರಪಂಚಕಾರಣಭೂತವಾದ ಪದಾರ್ಥಗಳಲ್ಲಿರುವವನೂ, ಕುದುರೆಯ ರೂಪುಳ್ಳವನೂ, ಧರ್ಮರಹಿತನೂ, ಗ್ರಾಮಕ್ಕೆ ಮುಖ್ಯಾಧಿಕಾರಿಯೂ, ಸರ್ವಸಮರ್ಥನೂ, ಕಾಡುಜಿಂಕೆಯನ್ನು ಕೈಲುಳ್ಳವನೂ, ಸೈನಿಕಸ್ವರೂಪನೂ, ಇಂದ್ರರೂಪಿಯೂ, ಕುಮಾರಸ್ವಾಮಿಯ ತಂದೆಯೂ, ಆನಂದರೂಪನೂ, ವಾಮನಸ್ವರೂಪನೂ, ಮಾತುಗಳಲ್ಲಿ ಪ್ರಾದುರ್ಭವಿ

ಕಣಾಶನಸ್ತಾಮ್ರಘನೋ ಮಯಪ್ರೀತೋಜರಾಮರಃ ।
ದಾನವ್ಘೋ ಫಾಲನೇತ್ರೋ ವರ್ಣಾಶ್ರಮಪರಾಯಣಃ ॥೨೦॥

ಪುರಾಣವೃಂದಸಂಪ್ರೀತ ಇತಿಹಾಸವಿಶಾರದಃ ।
ಸಮರ್ಥೋ ನಮಿತಾಶೇಷದೇವೋ ದ್ಯೋತಕರಃ ಫಣೀ ॥೨೧॥

ಕರ್ಷಕೋ ಲಾಂಗಲೇಶಶ್ಚ ಮೇರುಧನ್ವಾ ಪ್ರಜಾಪತಿಃ ।
ಉಗ್ರಃ ಪಶುಪತಿರ್ಗೋಪ್ತಾ ಪವಮಾನೋ ವಿಭಾವಸುಃ ॥೨೨॥

ಉದಾವಸುರ್ವೀತರಾಗೋ ಉರ್ವೀಶೋ ವೀರ್ಯವರ್ಧನಃ ।
ಜ್ವಾಲಾಮಾಲೋಚಿತಾಂಗಶ್ಚ ವೈದ್ಯುದಗ್ನಿಪ್ರವರ್ತಕಃ ॥೨೩॥

ಕಮನೀಯಾಕೃತಿಃ ಪಾತಾ ಆಷಾಢಃ ಷಂಡವರ್ಜಿತಃ ।
ಪುಲಿಂದರೂಪಃ ಪುಣ್ಯಾತ್ಮಾ ಪುಣ್ಯಪಾಪಫಲಪ್ರದಃ ॥೨೪॥

---

ಸುವವನೂ, ಪ್ರಾಯುದವನೂ, ದೇವಗಂಗೆಯನ್ನೂ ಚಂದ್ರನನ್ನೂ ತಲೆಯಲ್ಲಿ ಧರಿಸಿರುವವನೂ, ವೃಕ್ಷರಾಜನೂ, ದೊಡ್ಡ ಮನಸ್ಸುಳ್ಳವನೂ, ॥೬೮-೬೯-೨೦॥

ಕಣಗಳನ್ನು ತಿನ್ನುವವನೂ, ತಾಮ್ರಮಯವಾದ ಮೇಘರೂಪನೂ, ಮಯನೆಂಬ ದಾನವ ಶಿಲ್ಪಿಯಲ್ಲಿ ಪ್ರೀತಿಯುಳ್ಳವನೂ, ಮುಪ್ಪು ಮತ್ತು ಸಾವುಗಳಿಲ್ಲದವನೂ, ರಾಕ್ಷಸಾಂತಕನೂ, ಹಣೆಯಲ್ಲಿ ಕಣ್ಣುಳ್ಳವನೂ, ವರ್ಣಾಶ್ರಮಧರ್ಮದಲ್ಲಿ ನಿರತನೂ, ಪುರಾಣಗಳ ಸಮೂಹದಿಂದ ಪ್ರೀತಿಪಡೆದವನೂ, ಇತಿಹಾಸನಿಪುಣನೂ, ಸಕಲಕಾರ್ಯಗಳಲ್ಲಿಯೂ ಸಮರ್ಥನೂ, ಸಮಸ್ತ ದೇವತೆಗಳಿಂದಲೂ ನಮಸ್ಕಾರ ಮಾಡಲ್ಪಟ್ಟವನೂ, ಪ್ರಕಾಶವನ್ನುಂಟುಮಾಡುವವನೂ, ಹೆಡೆಯುಳ್ಳ ಸರ್ಪರೂಪಿಯೂ: ॥೨೧-೨೨॥

ಮೇರುಪರ್ವತವನ್ನೇ ಬಿಲ್ಲುಮಾಡಿಕೊಂಡಿರುವವನೂ, ನೇಗಿಲುಗಳಿಗೆ ಒಡೆಯನೂ, (ಬ್ರಹ್ಮಸ್ವರೂಪನೂ,) ವೈರಿಗಳನ್ನು ಉಗ್ರವಾಗಿ ದಂಡಿಸುವವನೂ, ಪಶುಗಳಿಗೆ ಒಡೆಯನೂ, ಜಗದ್ರಕ್ಷಕನೂ, ವಾಯುರೂಪಿಯೂ, ಸೂರ್ಯರೂಪನೂ, ನೀರಿನಲ್ಲೆಲ್ಲಾ ವಾಸಿಸುವವನೂ, ಅಸೂಯಾರಹಿತನೂ, ಭೂಪತಿಯೂ, ವೀರ್ಯವನ್ನು ಹೆಚ್ಚಿಸುವವನೂ, ಜ್ವಾಲೆಗಳ ಸಮೂಹದಿಂದ ಕೂಡಿದ ಅಗ್ನಿರೂಪನೂ, ಜಿತೇಂದ್ರಿಯನೂ, ಮಿಂಚನ್ನು ಮತ್ತು ಅಗ್ನಿಯನ್ನೂ ಪ್ರೇರಿಸುವವನೂ, ಮನೋಹರವಾದ ಆಕಾರವುಳ್ಳವನೂ, ರಕ್ಷಕನೂ, ಗಜಚರ್ಮವುಳ್ಳವನೂ, ಹೇಡಿತನವಿಲ್ಲದವನೂ

ಗಾರ್ಹಪತ್ಯೋ ದಕ್ಷಿಣಾಗ್ನಿಃ ಸಭ್ಯೋ ವಸಥಕೃತ್ಕವಿಃ ।
ದ್ರುಮ ಆಹವನೀಯಶ್ಚ ತಸ್ಕರೋಽಥ ಮಯಸ್ಕರಃ ॥೭೬॥

ಶಂಕರೋ ವಾರಿದೋ ವಾಯ್ಯೋ ವಾತಚಕ್ರಪ್ರವರ್ತಕಃ ।
ಕುಲಿಶಾಯುಧಹಸ್ತಶ್ಚ ವಿಕೃತೋ ಜಟಿಲಃ ಶಿಖೀ ॥೭೭॥

ಸೌರಾಷ್ಟ್ರವಾಸೀ ದೇವೇಡ್ಯೋ ಸಹ್ಯಜಾತೀರಸಂಸ್ಥಿತಃ ।
ಮಹಾಕಾಯೋ ವೀತಭಯೋ ಗಣಗೀತೋ ವಿಶಾರದಃ ॥೭೮॥

ತಪಸ್ವೀ ತಾಪಸಾಚಾರ್ಯಃ ದ್ರುಮಹಸ್ತೋ ಜ್ವಲತ್ ಪ್ರಭುಃ ।
ಕಿಂದನೋ ಮಂಕಣಪ್ರೀತೋ ಜಾತೂಕರ್ಣಸ್ತುತಿಪ್ರಿಯಃ ॥೭೯॥

ವೇನೋ ವೈದ್ಯೋ ವಿಶಾಖಶ್ಚ ಕಂಪನೋ ರೋಮದಾರಕಃ ।
ಉಪಾಯದೋ ದಾರಿತಾಂಗೋ ನಾನಾಗಮವಿಶಾರದಃ ॥೮೦॥

---

ಬೇಡನರೂಪವುಳ್ಳವನೂ, ಪುಣ್ಯವಿಗ್ರಹನೂ, ಪುಣ್ಯ ಮತ್ತು ಪಾಪಗಳ ಫಲವನ್ನು ಕೊಡುವವನೂ; ||೭೩-೭೪-೭೫||

ಗಾರ್ಹಪತ್ಯ, ಮತ್ತು ದಕ್ಷಿಣಾಗ್ನಿಸ್ವರೂಪನೂ, ಸಭ್ಯ, ಅವಸಥ, ಕವಿ, ಮರ, ಈ ರೂಪಿಯೂ ,ಆಹವನೀಯಾಗ್ನಿಸ್ವರೂಪನೂ, ಕಳ್ಳರ ಸ್ವರೂಪನೂ, ಪ್ರಕಾಶ ವನ್ನುಂಟುಮಾಡುವವನೂ, ಜಗನ್ಮಂಗಳಕರನೂ, ಮೋಡದರೂಪನೂ, ಜಲದಲ್ಲಿ ತೋರುವವನೂ, ಗಾಳಿಯ ಚಕ್ರವನ್ನು (ಮಂಡಲವನ್ನು) ಪ್ರೇರಿಸುವವನೂ, ವಜ್ರಾಯುಧವನ್ನು ಹಿಡಿದಿರುವವನೂ, ವಿಕಾರಸ್ವರೂಪನೂ, ದೊಡ್ಡ ಜಡೆ ಗಳಿಂದ ಶೋಭಿಸುವವನೂ, ಹಣೆಯಲ್ಲಿ ಅಗ್ನಿಯನ್ನು ಧರಿಸಿರುವವನೂ, ಸೌರಾಷ್ಟ್ರ ದೇಶದಲ್ಲಿ ವಾಸಮಾಡುವವನೂ, ದೇವತೆಗಳಿಂದ ಸ್ತೋತ್ರಮಾಡಲ್ಪಡುವವನೂ, ಕಾವೇರೀನದಿಯ ದಡದಲ್ಲಿ ನೆಲಸಿರುವವನೂ, ದೊಡ್ಡ ದೇಹವುಳ್ಳವನೂ, ಭಯ ರಹಿತನೂ, ಗಣಗಳಿಂದ ಗಾನಮಾಡಲ್ಪಟ್ಟವನೂ, ಪಂಡಿತನೂ ; ||೭೬-೭೭-೭೮||

ತಪಸ್ಸನ್ನಾಚರಿಸುವವನೂ, ತಪಸ್ಸುಮಾಡುವವರಿಗೆಲ್ಲಾ ಒಡೆಯನೂ, ಮರವನ್ನು ಹಿಡಿದಿರುವವನೂ, ಉಜ್ವಲವಾದ ಕಾಂತಿಯುಳ್ಳವನೂ, ಕೆಟ್ಟ ಜನಗಳನ್ನು ನಿಗ್ರಹಿಸುವವನೂ, ಮಂಕಣನಿಂದ ಪ್ರೀತಿಹೊಂದಿದವನೂ, ಜಾತೂ ಕರ್ಣನು ಮಾಡಿದ ಸ್ತೋತ್ರದಲ್ಲಿ ಪ್ರೀತಿಯುಳ್ಳವನೂ, ವೇನರೂಪನೂ, ವೈದ್ಯನೂ,

ಕಾವ್ಯಾಲಾಪೈಕಕುಶಲೋ ಮೀಮಾಂಸಾವಲ್ಲಭೋ ಧ್ರುವಃ ।
ತಾಲಮೂಲನಿಕೇತಶ್ಚ ಬಿಲ್ವಮೂಲಪ್ರಪೂಜಿತಃ ॥೮೦॥

ವೇದಾಂಗೋ ಗಮನೋ ಗವ್ಯೋ ಗವ್ಯಪ್ರೀತಃ ಫಲಾದನಃ ।
ಗಂಗಾತೀರಸ್ಥಿತೋ ಲಿಂಗೀ ಅಲಿಂಗೋ ರೂಪಸಂಶ್ರಯಃ ॥೮೨॥

ಶ್ರಾಂತಿಹಾ ಪುಣ್ಯನಿಲಯಃ ಪಲಲಾಶೋಽರ್ಕಪೂಜಿತಃ ।
ಮಹೇಂದ್ರವಿಷ್ಣುಜನಕೋ ಬ್ರಹ್ಮತಾತೋ ಸ್ತುತೋಽನ್ಯಯಃ ॥೮೩॥

ಕರ್ದಮೇಶೋ ಮತಂಗೇಶೋ ವಿಶ್ವೇಶೋ ಗಂಧಧಾರಕಃ ।
ವಿಶಾಲೋ ವಿಮಲೋ ಜಿಷ್ಣುರ್ಜಯಶೀಲೋ ಜಯಪ್ರದಃ ॥೮೪॥

---

ಅಗ್ನಿಸ್ವರೂಪನೂ, ಪ್ರಪಂಚವನ್ನೆಲ್ಲಾ ಪ್ರಳಯಕಾಲದಲ್ಲಿ ನಡುಗಿಸುವವನೂ, ರೋಮಗಳನ್ನು ಧರಿಸಿರುವವನೂ, ಉಪಾಯವನ್ನುಂಟುಮಾಡುವವನೂ, ಶತ್ರುಗಳ ಅಂಗಗಳನ್ನು ಸೀಳಿದವನೂ, ಅನೇಕ ಆಗಮಗಳಲ್ಲಿ ಪಂಡಿತನೂ; ॥೭೯-೮೦॥

ಕಾವ್ಯಾಲಾಪಗಳಲ್ಲಿ ನಿಪುಣನೂ, ಮೀಮಾಂಸಾಶಾಸ್ತ್ರದಲ್ಲಿ ಪ್ರೀತಿಯುಳ್ಳವನೂ, (ಅಂದರೆ ವೇದಾರ್ಥಗಳನ್ನು ಮಾಡುವುದರಲ್ಲಿ ಸಮರ್ಥನೂ) ತಾಲವೃಕ್ಷದ ಬುಡದಲ್ಲಿ ಮನೆಮಾಡಿಕೊಂಡಿರುವವನೂ, ಬಿಲ್ವಮರದ ಬುಡದಲ್ಲಿ ಪೂಜಿಸಲ್ಪಟ್ಟವನೂ, ಶಿಕ್ಷಾ, ವ್ಯಾಕರಣ, ಛಂದಸ್ಸು, ಮೀಮಾಂಸಾ, ಜ್ಯೋತಿಷ, ಮತ್ತು ಕಲ್ಪಗಳೆಂಬ ಆರು ವೇದಾಂಗಸ್ವರೂಪನೂ, ಗಮನಶೀಲನೂ, (ಜ್ಞಾನರೂಪನೂ) ಹಸುವಿನ ಕ್ಷೀರಸ್ವರೂಪನೂ, ಆ ಹಾಲಿನಿಂದ ಪ್ರೀತಿಹೊಂದಿದವನೂ, ಹಣ್ಣುಗಳನ್ನು ತಿನ್ನುವವನೂ, ಗಂಗಾನದಿಯ ದಡದಲ್ಲಿರುವವನೂ, ಲಿಂಗಾಕೃತಿಯುಳ್ಳವನೂ, ರೂಪರಹಿತನಾದ ಪರಬ್ರಹ್ಮವಸ್ತುವೆನಿಸಿರುವನೂ, ರೂಪಗಳಿಗೆ ಆಶ್ರಯನೂ, ಶ್ರಮವನ್ನು ಹೋಗಲಾಡಿಸುವವನು, ಪುಣ್ಯಗಳಿಗೆ ನೆಲೆಮನೆಯಾಗಿರುವವನು, ಮಾಂಸವನ್ನು ಭಕ್ಷಣೆಮಾಡುವವನು, ಸೂರ್ಯನಿಂದ ಪೂಜಿಸಲ್ಪಟ್ಟವನು, (ಅಥವಾ ಎಕ್ಕದ ಹೂವಿನಿಂದ ಪೂಜಿಸಲ್ಪಟ್ಟವನು) ಇಂದ್ರ, ವಿಷ್ಣು ಇವರನ್ನು ನಿರ್ಮಿಸಿದವನು, ಬ್ರಹ್ಮನ ತಂದೆಯು, ಸ್ತೋತ್ರಮಾಡಲ್ಪಟ್ಟವನು, ಚ್ಯುತಿಯಿಲ್ಲದವನು; ॥೮೧-೮೨-೮೩॥

ಕೆಸರಿಗೆ ಒಡೆಯನು, (ಕರ್ದಮೇಶ್ವರಸಂಜ್ಞೆಯುಳ್ಳವನು) ಆನೆಗಳಿಗೆಲ್ಲಾ ಸ್ವಾಮಿಯು (ಮತಂಗೇಶ್ವರನೆಂದು ಪ್ರಸಿದ್ಧಿಪಡೆದಿರುವನು) ವಿಶ್ವೇಶ್ವರನೆಂದು

ದಾರಿದ್ರ್ಯಮಥನೋ ಮಂತ್ರೀ ಶಂಭುಃ ಶಶಿಕಲಾಧರಃ ।
ಶಿಂಶುಮಾರೋ ಶೌನಕೇಡ್ಯೋ ಶ್ವಾನಯೋಶ್ವೇತಜೀವದಃ ॥೮೫॥

ಮುನಿಬಾಲಪ್ರಿಯೋ ಗೋತ್ರೋ ಮಿಲಿಂದೋ ಮಂತ್ರಸಂಸ್ಥಿತಃ ।
ಕಾಶೀಶೋಽಮಿತಾಂಗಶ್ಚ ವಲ್ಲಕೀನಾದನಪ್ರಿಯಃ ॥೮೬॥

ಹಲ್ಲೀಸಲಾಸ್ಯ ನಿಪುಣೋ ಸಲ್ಲೀಲೋ ವಲ್ಲರೀಪ್ರಿಯಃ ।
ಮಹಾಪಾರದ ಸದ್ವೀರ್ಯೋ ವಹ್ನಿನೇತ್ರೋ ಜಟಾಧರಃ ॥೮೭॥

ಅಲಾದ್ಯೋಽನೇಕರೂಪಾತ್ಮಾ ಪುರುಷಃ ಪ್ರಕೃತಿಃ ವರಃ ।
ಸ್ಥಾಣುರ್ವೇಣುವನಪ್ರೀತೋ ರಣಜಿತ್ಪಾಕಶಾಸನಃ ॥೮೮॥

---

ಪ್ರಸಿದ್ಧನಾಗಿರುವನು, (ಜಗದೊಡೆಯನು) ಗಂಧವನ್ನು ಧರಿಸಿರುವನು, ವಿಶಾಲ ಸ್ವರೂಪನು, ನಿರ್ಮಲನು, ಜಯಶೀಲನು, ಜಯವನ್ನುಂಟುಮಾಡುವನು, ಬಡತನ ವನ್ನು ಹೋಗಲಾಡಿಸುವನು, ಮಂತ್ರಗಮ್ಯನು ಅಥವಾ ಮಂತ್ರಜ್ಞನು, ಜಗತ್ತಿಗೆ ಸುಖವನ್ನೆಸಗುವನು, ಚಂದ್ರನ ಕಲೆಗಳನ್ನು ಮೌಳಿಯಲ್ಲಿ ಧರಿಸಿರುವನು, ಶಿಂಶು ಮಾರನು, (ಶಿಂಶುಮಾರವೆಂಬ ವೃಕ್ಷರೂಪಿಯು) ಶೌನಕನಿಂದ ಸ್ತುತಿಸಲ್ಪಟ್ಟವನು ನಾಯಿಯನ್ನು ಹೊಂದಿದ ಕಾಲಭೈರವರೂಪಿಯು. ॥೮೪-೮೫॥

ಮುನಿಬಾಲಕರಲ್ಲಿ ಪ್ರೀತಿಯುಳ್ಳವನು, ಭೂಪಾಲಕನು, (ಅಥವಾ ಪರ್ವತ ರೂಪನು) ಭ್ರಮರರೂಪನು, ಮಂತ್ರದಲ್ಲಿ ಅಡಗಿರುವವನು, ಕಾಶೀಕ್ಷೇತ್ರದಲ್ಲಿ ವಾಸ ಮಾಡುವ ಭಕ್ತರ ಶೋಕಗಳನ್ನು ನಿವಾರಿಸಿ ತಾನು ಅದನ್ನು ಧರಿಸಿ, ಅಪರಿಮಿತ ವಾದ ದೇಹದಿಂದ ಶೋಭಿಸುತ್ತಿರುವವನು, ವೀಣೆಯನ್ನು ಬಾರಿಸುವುದರಲ್ಲಿ ಪ್ರೀತಿ ಯುಳ್ಳವನು, ಗ್ರಾಮ್ಯನರ್ತನದಲ್ಲಿ ನಿಪುಣನು, ಲೀಲಾಯುಕ್ತನು, ಪುಷ್ಪಗೊಂಚಲು ಗಳನ್ನು ಧರಿಸುವುದರಲ್ಲಿ ಪ್ರೀತಿಯುಳ್ಳವನು, ದೊಡ್ಡ ಪಾದರಸವನ್ನೇ ವೀರ್ಯವ ನ್ನಾಗಿ ಧರಿಸಿರುವನು, ಅಗ್ನಿನೇತ್ರನು, ಜಡೆಗಳನ್ನು ಧರಿಸಿರುವನು, ಅಲಾದ್ಯನು, (ಜಲರೂಪಿಯು) ಅನೇಕ ರೂಪಗಳಿಂದ ತೋರುವವನು, ಪುರುಷ, ಪ್ರಕೃತಿ ಎಂದು ಸಾಂಖ್ಯತತ್ತ್ವದಲ್ಲಿ ಪ್ರತಿಪಾದ್ಯನಾಗಿರುವವನು, ಶ್ರೇಷ್ಠನು, ಪ್ರಳಯಕಾಲದಲ್ಲಿಯೂ ಚ್ಯುತಿಯಿಲ್ಲದೇ ಶಾಶ್ವತವಾಗಿರುವವನು, ವೇಣುವನದಲ್ಲಿ ಪ್ರೀತಿಹೊಂದಿದವನು, ಯಾವಾಗಲೂ ಯುದ್ಧದಲ್ಲಿ ಜಯವುಳ್ಳವನು, ದೇವೇಂದ್ರಸ್ವರೂಪನು. ॥೮೬-೮೭-೮೮॥

ನಗ್ನೋ ನಿರಾಕೃತೋ ಧೂಮ್ರೋ ವೈದ್ಯುತೋ ವಿಶ್ವನಾಯಕಃ ।
ವಿಶ್ವಾಧಿಕಃ ಶಾಂತರವಃ ಶಾಶ್ವತಃ ಸುಮುಖೋ ಮಹಾನ್ ॥೮೯॥

ಅಣೋರಣುಃ ಶ್ವಭ್ರಗತೋ ಅವಟೇಶೋ ನಟೇಶ್ವರಃ ।
ಚಿತ್ರಧಾಮಾ ಚಿತ್ರಭಾನುರ್ವಿಚಿತ್ರಾಕೃತಿರೀಶ್ವರಃ ॥೯೦॥

ಇಂದ್ರೋಜೋಮೂರ್ತಿರೂಪಾತ್ಮಾ ಅಮೂರ್ತೋ ವಹ್ನಿಧಾರಕಃ ।
ಅಪಸ್ಮಾರಹರೋ ಗುಪ್ತೋ ಯೋಗಿಧ್ಯೇಯೋಽಖಿಲಾದನಃ ॥೯೧॥

ನಕ್ಷತ್ರರೂಪಃ ಕ್ಷತ್ರಾತ್ಮಾ ಕ್ಷುತ್ತೃಷ್ಣಾಶ್ರಮವರ್ಜಿತಃ ।
ಅಸಂಗೋ ಭೂತಹೃದಯೋ ವಾಲಖಿಲ್ಯೋ ಮರೀಚಿಪಃ ॥೯೨॥

ಪಂಚಪ್ರೇತಾಸನಾಸೀನೋ ಯೋಗಿನೀಗಣಸೇವಿತಃ ।
ನಾನಾಭಾಷಾನುಚರಿತೋ ನಾನಾದೇಶಸಮಾಶ್ರಯಃ ॥೯೩॥

---

ಬೆತ್ತಲೆಯಿರುವವನು, ಆಕಾರರಹಿತನು, ಧೂಸರಬಣ್ಣವುಳ್ಳವನು, ಮಿಂಚಿನ ಸ್ವರೂಪನು, ಜಗಕ್ಕೆಲ್ಲಾ ಒಡೆಯನು, ಜಗಚ್ಛ್ರೇಷ್ಠನು, ಶಾಂತವಾದ ಧ್ವನಿಯುಳ್ಳವನು, ಶಾಶ್ವತಸ್ವರೂಪನು, ಪ್ರಸನ್ನಮುಖವುಳ್ಳವನು, ಮಹಾತ್ಮನು, ಅಣುಪದಾರ್ಥಗಳಿಗಿಂತಲೂ ಚಿಕ್ಕವನು, ಪಾತಾಳದಲ್ಲಿರುವವನು, ಹಳ್ಳದ ಸ್ಥಲಗಳಿಗೆ ಒಡೆಯನು, ನಟೇಶ್ವರನು, ಚಿತ್ರವರ್ಣವಾದ ತೇಜಸ್ಸುಳ್ಳ ವಿಚಿತ್ರವಾದ ಕಿರಣಗಳಿಂದ ಕೂಡಿದವನು, ವಿಚಿತ್ರವಾದ ರೂಪವುಳ್ಳವನು, ಐಶ್ವರ್ಯಸಂಪನ್ನನು, ಪರಮೈಶ್ವರ್ಯಭರಿತನಾದ ಇಂದ್ರರೂಪಿಯು, ಉತ್ಪತ್ತಿರಹಿತವಾದ ಆಕೃತಿಯುಳ್ಳವನು, ಮೂರ್ತಿರಹಿತನು, ಅಗ್ನಿಯನ್ನು ಫಾಲನೇತ್ರದಲ್ಲಿ ಧರಿಸಿರುವವನು, ಮೂರ್ಛೆಯನ್ನು ಹೋಗಲಾಡಿಸುವವನು, ರಹಸ್ಯನು, ಯೋಗಿಗಳಿಂದ ಧ್ಯಾನಾರ್ಹನಾದವನು, ಪ್ರಳಯಕಾಲದಲ್ಲಿ ಚರಾಚರಾತ್ಮಕವಾದ ಪ್ರಪಂಚವೆಲ್ಲವನ್ನೂ ಭಕ್ಷಿಸುವವನು. ॥೮೯-೯೦-೯೧॥

ನಕ್ಷತ್ರರೂಪನು, (ನಾಶರಹಿತಾಕೃತಿಯುಳ್ಳವನು) ಪ್ರಜೆಗಳನ್ನು ಕಷ್ಟದಿಂದ ಪಾರುಮಾಡಿ ಸಲಹುವ ಕ್ಷತ್ರಿಯರೂಪನು, ಹಸಿವು, ಬಾಯಾರಿಕೆ, ಶ್ರಮ ಮುಂತಾದವುಗಳಿಲ್ಲದವನು, ನಿರ್ಲಿಪ್ತನು, ಸಕಲ ಪ್ರಾಣಿಗಳ ಮನಸ್ಸಿನಲ್ಲಿಯೂ ನೆಲಸಿರುವವನು, ವಾಲಖಿಲ್ಯಸ್ವರೂಪನು, ಕಿರಣಗಳನ್ನು ಸೇವಿಸುವವನು, ಐದು ಪ್ರೇತಗಳನ್ನೇ ಆಸನವಾಗಿ ಮಾಡಿಕೊಂಡು ಅದರಲ್ಲಿ ಕುಳಿತಿರುವವನು, ಯೋಗಿನೀಗುಂಪಿ

ವೃಂದಾರಕಗಣಸ್ತುತ್ಯಃ ಪುರಂದರನತಿಪ್ರಿಯಃ ।
ಪ್ರಘಸಾ ವಿಘಸಾಶೀ ಚ ಅನ್ನಾಧಿಪತಿರನ್ನಗಃ ॥೯೪॥

ಪನ್ನಗಾಭರಣೋ ಯೋಗೀ ಗುರುರ್ಲೋಕೈಕನಾಯಕಃ ।
ವಿರಾಜೋ ವಿಶ್ವತೋ ಧರ್ಮೀ ಬಭ್ಲುಶೋ ಬಾಹ್ಲಿಕಪ್ರಿಯಃ ।೯೫॥

ಪ್ರಧಾನನಿಪುಣೋ ಮಿತ್ರೋ ಊರ್ಧ್ವರೇತಾ ಮಹಾತಪಾಃ ।
ಕುರುಜಾಂಗಲವಾಸೀ ಚ ನಿತ್ಯತೃಪ್ತೋ ನಿರಂಜನಃ ॥೯೬॥

ಹಿರಣ್ಯಗರ್ಭೋ ಭೂತಾದಿಃ ಸ್ವರಾಟ್ ಸಂರಾಡ್ವಿರಾಟ್ಪ್ರಭುಃ ।
ಪಟಹಧ್ವನಿಸಂಪ್ರೀತೋ ನತಮುಕ್ತಿಪ್ರದಾಯಕಃ ॥೯೭॥

---

ನಿಂದ ಸೇವಿಸಲ್ಪಟ್ಟವನು, ಅನೇಕ ಭಾಷೆಗಳಿಂದ ತಿಳಿಯಲ್ಪಡುವ ಚರಿತ್ರೆಯುಳ್ಳವನು, ನಾನಾದೇಶಗಳಲ್ಲಿ ನೆಲಸಿರುವನು. ॥೯೨-೯೩॥

ದೇವತೆಗಳ ಸಮೂಹದಿಂದ ಸ್ತೋತ್ರಮಾಡಲ್ಪಡುವವನೂ, ಇಂದ್ರನ ನಮಸ್ಕಾರಗಳಿಂದ ಪ್ರೀತಿಹೊಂದುವವನೂ, ಪ್ರಘಸಗಳನ್ನೂ (ಪ್ರಕೃಷ್ಟವಾದ ಆಹಾರಗಳನ್ನು) ವಿಘಸಗಳನ್ನೂ ತಿನ್ನುವವನು, ಅನ್ನಕ್ಕೆ ಅಧಿಪತಿಯು, ಅನ್ನದಲ್ಲಿರುವನು, ಸರ್ಪಾಭರಣನು, ಯೋಗವುಳ್ಳವನು, ಜಗದ್ಗುರುವು, ಸಕಲ ಲೋಕಗಳಿಗೂ ಮುಖ್ಯನೂ, ಅದ್ವಿತೀಯನೂ ಆದ ಸ್ವಾಮಿಯು, ವಿರಾಟ್ಸ್ವರೂಪವುಳ್ಳವನು, ಎಲ್ಲಾ ಕಡೆಯಲ್ಲಿಯೂ ಧರ್ಮಸ್ವರೂಪನಾಗಿರುವನು, ವೃಷಭವನ್ನೇರಿರುವನು, ಬಾಹ್ಲಿಕನಲ್ಲಿ ಪ್ರೀತಿಯುಳ್ಳವನು, ದಾನಮಾಡುವುದರಲ್ಲಿ ನಿಪುಣನು, ಸ್ನೇಹಿತನು, ಯೋಗಶಕ್ತಿಯಿಂದ ಊರ್ಧ್ವಮುಖವಾಗಿ ಮಾಡಿಕೊಂಡಿರುವ ವೀರ್ಯವುಳ್ಳವನು, ತುಂಬಾ ತಪಸ್ಸನ್ನಾಚರಿಸುವವನು, ಕುರು, ಜಾಂಗಲವೆಂಬೆಡೆಗಳಲ್ಲಿ ವಾಸಮಾಡುವವನು, ನಿತ್ಯತೃಪ್ತನು, ನಿರ್ಲಿಪ್ತನು, ಪ್ರಾಪಂಚಿಕ ಬಂಧನಕ್ಕೊಳಗಾಗದವನು. ॥೯೪-೯೫-೯೬॥

ಸುವರ್ಣಮಯವಾದ ಗರ್ಭವುಳ್ಳವನು, ಭೂತಗಳನ್ನೆಲ್ಲಾ ಪ್ರಳಯದಲ್ಲಿ ಧ್ವಂಸಮಾಡುವವನು, ಸ್ವರ್ಗಾಧಿಪತಿಯು, ಚೆನ್ನಾಗಿ ಪ್ರಕಾಶಿಸುವವನು, ವಿರಾಟ್ಸ್ವರೂಪನು, ಸಮರ್ಥನು, ತಮಟೆಯ ಶಬ್ದದಿಂದ ಪ್ರೀತಿಹೊಂದುವವನು, ತನಗೆ ನಮಸ್ಕಾರಮಾಡುವವರಿಗೆ ಮುಕ್ತಿಯನ್ನು ಕೊಡುವವನು, ಭಕ್ತರಿಗೆ ಬೇಕಾದ ಫಲಗಳನ್ನು ಈಯುವವನು, ಹಣೆಗಣ್ಣನು, ಸರ್ಪರಾಜನ ದೊಡ್ಡ ದೇಹವನ್ನು

ಫಲಪ್ರದಃ ಫಾಲನೇತ್ರಃ ಫಣೀಶ್ವರ ಮಹಾಂಗಧೃಕ್ ।
ವಾಸ್ತುಪೋ ವಾಸವೋ ವಾತ್ಯೋ ವರ್ಮಭಿದ್ವಸನೋಜ್ಜ್ವಲಃ ॥೯೮॥

ಮೀಢುಷ್ಟಮಃ ಶಿವತಮೋ ವಸುಃ ಶಿವತರೋ ಬಲೀ ।
ನಿಧನೇಶೋ ನಿಧಾನೇಶೋ ಪುರಜಿದ್ರಾಷ್ಟ್ರವರ್ಧನಃ ॥೯೯॥

ಅಯುತಾಯುಃ ಶತಾಯುಶ್ಚ ಪ್ರಯುತಾಯುಃ ಶತಾಧ್ವರಃ ।
ಸಹಸ್ರಶೃಂಗೋ ವೃಷಭ ಉರುಗಾಯೋರುಮೀಢುಕಃ ॥೧೦೦॥

ಗಂತಾ ಗಮಯಿತಾ ಗಾತಾ ಗರುತ್ಮಾನ್ಗೀತವರ್ಧನಃ ।
ರಾಗರಾಗಿಣಿಕಾಪ್ರೀತೋ ತಾಲಪಾಣಿರ್ಗದಾಪಹಃ ॥೧೦೧॥

ದೇವೇಶಃ ಖಂಡಪರಶುಃ ಪ್ರಪಂಚತರವಿಕ್ರಮಃ ।
ಉರುಕ್ರಮೋ ಮಹಾಬಾಹುರ್ಹೇತಿಧೃಕ್ಪಾವಕಾದನಃ ॥೧೦೨॥

---

ಧರಿಸಿರುವನು, ವಾಸ್ತುವನ್ನು ಪಾಲಿಸುವನು, ಇಂದ್ರನು, ಪವನನಲ್ಲಿ ಗೋಚರಿಸುವವನು, ಕವಚವನ್ನು ಭೇದಿಸುವವನು, ವಸ್ತ್ರದಿಂದ ಉಜ್ವಲವಾಗಿ ಶೋಭಿಸುವವನು, ವಿಶೇಷವಾಗಿ ಕಾಮವನ್ನು ಅಭಿವೃದ್ಧಿಪಡಿಸುವವನು, ಮಂಗಳಪ್ರದರಲ್ಲಿ ಶ್ರೇಷ್ಠನು, ವಸುರೂಪನು, ಮಂಗಳಕರನು, ಬಲಶಾಲಿಯು, ಮೃತ್ಯುವಿಗೊಡೆಯನು, ನಿಧಿಗಳಿಗೆಲ್ಲಾ ಸ್ವಾಮಿಯು, ತ್ರಿಪುರರನ್ನು ಜಯಿಸಿದವನು, ರಾಜ್ಯವನ್ನು ಹೆಚ್ಚಿಸುವನು. ॥೯೭-೯೮-೯೯॥

ಹತ್ತುಸಾವಿರವರ್ಷ ಆಯುಸ್ಸುಳ್ಳವನು, ನೂರುವರ್ಷಾಯುಸ್ಸುಳ್ಳವನು, ಲಕ್ಷವರ್ಷ ಆಯುಸ್ಸಿನವನು, ನೂರು ಯಾಗಗಳನ್ನು ಮಾಡಿದವನು, ಸಾವಿರ ಶೃಂಗಗಳುಳ್ಳವನು, ವೃಷಭರೂಪನು, ಹೆಚ್ಚಾಗಿ ಗಾನಮಾಡುವವನು, ವಿಶೇಷವಾಗಿ ಸ್ತೋತ್ರಮಾಡಲ್ಪಡುವವನು, ಗಮನವುಳ್ಳವನು, ಮತ್ತೊಬ್ಬರನ್ನು ಗಮನಕಾರ್ಯದಲ್ಲಿ ಪ್ರೇರಿಸುವವನು, ಗಾನಮಾಡುವವನು, ಗರುಡಸ್ವರೂಪನು, ಗಾನವನ್ನು ಹೆಚ್ಚಿಸುವನು, ಅನುರಾಗಯುಕ್ತರಾದ ರಾಗಿಣಿಯರಿಂದ ಪ್ರೀತಿಹೊಂದುವವನು, ತಾಲವನ್ನು ಹಸ್ತದಲ್ಲಿ ಧರಿಸಿರುವನು, ರೋಗವನ್ನು ನಾಶಮಾಡುವವನು. ॥೧೦೦-೧೦೧॥

ದೇವತೆಗಳಿಗೊಡೆಯನು, ಕತ್ತರಿಸಲ್ಪಟ್ಟ ಪರಶುವೆಂಬ ಆಯುಧವುಳ್ಳವನು, ಹೆಚ್ಚಾದ ಪರಾಕ್ರಮವುಳ್ಳವನು, ದೊಡ್ಡ ಪಾದನ್ಯಾಸವುಳ್ಳವನು, ದೊಡ್ಡ ತೋಳ್ಗಳು

ಗಣಿಕಾನಾಟ್ಯನಿರತೋ ವಿಮರ್ಶೋ ವಾವದೂಕಕಃ ।
ಕಲಿಪ್ರಮಥನೋ ಧೀರೋ ಧೀರೋದಾಂತೋ ಮಹಾಹನುಃ ॥೧೦೩॥

ಕ್ಷಯದ್ವೀರೋ ಮುಂಜಿಕೇಶೋ ಕಲ್ಮಲೀಕಿಃ ಸುರೋತ್ತಮಃ ।
ವಜ್ರಾಂಗೋ ವಾಯುಜನಕೋ ಅಷ್ಟಮೂರ್ತಿಃ ಕೃಪಾಕರಃ ॥೧೦೪॥

ಪ್ರಹೂತಃ ಪರಮೋದಾರಃ ಪಂಚಾಕ್ಷರಪರಾಯಣಃ ।
ಕರ್ಕಂಧುಃ ಕಾಮದಹನೋ ನಲಿನಾಕ್ಷೋ ಜಡಾಜಡಃ ॥೧೦೫॥

ಕುಬೇರಪೂಜಿತಪದೋ ಮಹಾತಕ್ಷಕಕಂಕಣಃ ।
ಶಂಖಣೋ ಮಧುರಾರಾವೋ ಮೃಡಃ ಸಸ್ಪಿಂಜರೋಽಜರಃ ॥೧೦೬॥

ಮಾರ್ಗೋ ಮಾರ್ಗಪ್ರದೋ ಮುಕ್ತೋ ವಿಜಿತಾರಿಃ ಪರೋವರಃ ।
ಪ್ರಣವಾರ್ಥೋ ವೇದಮಯೋ ವೇದಾಂತಾಂಬುಜಭಾಸ್ಕರಃ ॥೧೦೭॥

---

ಳ್ಳವನು, ಅಗ್ನಿನೇತ್ರನು, ಬೆಂಕಿಯನ್ನು ತಿಂದವನು, ವೇಶ್ಯಾಸ್ತ್ರೀಯರ ನಾಟ್ಯದಲ್ಲಿ ನಿರತನಾದವನು, ವಿಮರ್ಶಾತ್ಮಕನು, ನಿಗ್ರಹಿಸಿ ಮಾತಾಡುವವನು, ಕಲಿಯನ್ನು ಹೊಡೆದೋಡಿಸುವನು, ಧೀರನು, ಪರಾಕ್ರಮಿಯು, ಜಿತೇಂದ್ರಿಯನು, ದೊಡ್ಡ ಕಪೋಲವುಳ್ಳವನು. ॥೧೦೨-೧೦೩॥

ತನ್ನ ಪರಾಕ್ರಮದಿಂದ ನಾಶಮಾಡುವ ವೀರರುಳ್ಳವನು, ಮುಂಜಿಕೇಶನು, (ಹೊಂಬಣ್ಣದ ಕೇಶವುಳ್ಳವನು) ಸರ್ವಮಲವನ್ನೂ ನಾಶಮಾಡುವ ತೇಜೋರೂಪಿಯು, ದೇವತೋತ್ತಮನು, ವಜ್ರದಂತೆ ಅಭೇದ್ಯವಾದ ಅವಯವವುಳ್ಳವನು, ವಾಯುವಿನ ತಂದೆಯು, ಎಂಟು ಮೂರ್ತಿಗಳುಳ್ಳವನು, (ಪೃಥಿವೀ, ಅಪ್, ತೇಜಸ್ಸು, ವಾಯು ಆಕಾಶ, ಸೂರ್ಯಚಂದ್ರರು ಮತ್ತು ಯಜಮಾನರೆಂಬಿವೇ ಎಂಟು ಮೂರ್ತಿಗಳು.) ದಯಾಸಾಗರನು, ದೇವತೆಗಳಿಂದ ರಾಕ್ಷಸರ ನಿಗ್ರಹಕಾರ್ಯಕ್ಕೋಸ್ಕರ ಕರೆಯಲ್ಪಟ್ಟವನು, ತುಂಬಾ ಉದಾರವಾದ ಸ್ವಭಾವವುಳ್ಳವನು, ಶಿವಪಂಚಾಕ್ಷರಮಂತ್ರಪರಾಯಣನು, ಬದರೀಹಣ್ಣಿನ ರೂಪನು, ಮನ್ಮಥನನ್ನು ಸುಟ್ಟವನು, ಕಮಲನೇತ್ರನು, ಜಡ ಮತ್ತು ಜಡವಲ್ಲದ ಸ್ವರೂಪವುಳ್ಳವನು. ॥೧೦೪-೧೦೫॥

ಕುಬೇರನಿಂದ ಪೂಜಿಸಲ್ಪಟ್ಟ ಪಾದವುಳ್ಳವನು, ಮಹಾತಕ್ಷಕಸರ್ಪವನ್ನೇ ಕಂಕಣವನ್ನಾಗಿ ಧರಿಸಿರುವವನು, ಶಂಖಣನೆಸಿಸಿದವನು, (ಶಂಖಧ್ವನಿರೂಪನು)

ಸರ್ವವಿದ್ಯಾಧಿಪಃ ಸೌಮ್ಯೋ ಯಜ್ಞೇಶೋ ಕ್ಷೇತ್ರನಾಯಕಃ ।
ಪಾಪನಾಶಕರೋ ದಿವ್ಯೋ ಗೋಭಿಲೋ ಗೋಪರೋ ಗಣಃ ॥೧೦೮॥

ಗಣೇಶಪೂಜಿತಪದೋ ಲಲಿತಾಂಬಾಮನೋಹರಃ ।
ಕಶ್ಮವಾಸೋ ಮಹೋಕ್ಷಾಂಕೋ ನಿಸ್ತಮಃ ಸ್ತೋಮವರ್ಜಿತಃ ॥೧೦೯॥

ನಿಃಸೀಮಮಹಿಮೋದಾರಃ ಪ್ರಭಾಮೂರ್ತಿಃ ಪ್ರಸನ್ನವಾಕ್ ।
ಸ್ತೋಮಪ್ರೀತೋ ಭಾರಭೂತೋ ಭೂಭಾರಹರಣಃ ಸ್ಥಿರಃ ॥೧೧೦॥

ಕ್ಷರಾಕ್ಷರೋ ಕ್ಷರೋದ್ಧರ್ತಾ ಸಾಗರಾಂತರ್ಗತೋ ವಶೀ ।
ರೇಷ್ಮ್ಯೋ ರವ್ಯೋ(ರಸ್ಯೋ) ರಜಸ್ಯೋಽಥ ಪ್ರವಾಹ್ಯೋ ವೈದ್ಯುತೋಽ
ನಲಃ ॥೧೧೧॥

---

ಮಧುರಧ್ವನಿಯುಳ್ಳವನು, ಸುಖಪ್ರದನು, ಎಳೆಯ ಹುಲ್ಲಿನಂತೆ ಪಿಂಜರ ಬಣ್ಣವುಳ್ಳವನು, ಜರಾರಹಿತನು, ಮಾರ್ಗಸ್ವರೂಪನು, ಮಾರ್ಗದರ್ಶಕನು, ಮುಕ್ತಿ ಪಡೆದಿರುವವನು, ಶತ್ರುಗಳನ್ನು ಜಯಿಸಿರುವವನು, ಶ್ರೇಷ್ಠನು, ಉತ್ತಮನೂ ಎನಿಸಿದವನು, ಓಂಕಾರಾರ್ಥಸ್ವರೂಪನು, ವೇದಮಯನು, ವೇದಾಂತವೆಂಬ ಕಮಲಕ್ಕೆ ಸೂರ್ಯನಂತಿರುವನು, ಸಕಲ ವಿದ್ಯೆಗಳಿಗೂ ಅಧಿಪತಿಯು, ಸೌಮ್ಯರೂಪನು, ಯಜ್ಞಗಳಿಗೊಡೆಯನು, ಕ್ಷೇತ್ರಗಳಿಗೆ ಅಧಿಪತಿಯು, ಪಾಪಗಳನ್ನು ನಾಶಮಾಡುವವನು, ದಿವ್ಯ ವಿಗ್ರಹನು, ಸ್ವರ್ಗಭೇದಕನು, ಗೋಪರವಾಗಿರುವವನು, (ದೇವತೆಗಳಲ್ಲಿ ಅಥವಾ ಹಸುಗಳಲ್ಲಿ ಶ್ರೇಷ್ಠನೆನಿಸಿದವನು) ರುದ್ರಗಣಸ್ವರೂಪನು. ||೧೦೬-೧೦೭-೧೦೮||

ಗಣೇಶನಿಂದ ಪೂಜೆಮಾಡಲ್ಪಟ್ಟ ಪಾದವುಳ್ಳವನು, ಲಲಿತಾಂಬಿಕೆಯ ಮನಸ್ಸನ್ನು ಅಪಹರಿಸಿದವನು, ಶ್ಮಶಾನವಾಸಿಯು, ದೊಡ್ಡ ವೃಷಭದ ಚಿಹ್ನೆಯುಳ್ಳವನು, ಅಜ್ಞಾನರಹಿತನು, ಗುಂಪುಗಳಿಂದ ಬಿಡಲ್ಪಟ್ಟವನು, ಎಲ್ಲೆಯಿಲ್ಲದ ಮಹಿಮೆಯಿಂದ ಉದಾರಗುಣಯುಕ್ತನೆನಿಸಿರುವನು, ಪ್ರಭಾಮೂರ್ತಿಯು, ಪ್ರಸನ್ನವಾದ ಮಾತುಳ್ಳವನು, ಗಣಗಳಿಂದ ಪ್ರೀತನಾದವನು. ಎಲ್ಲ ದೇವತೆಗಳಿಗಿಂತಲೂ ಗೌರವಗುಣವಿಶಿಷ್ಟನು, ಭೂಮಿಯ ಭಾರವನ್ನು ಇಳುಹುವನು, ಶಾಶ್ವತನು. ||೧೦೯-೧೧೦||

ನಾಶವೈದುವ ಪ್ರಾಣಿಸ್ವರೂಪನು, ನಾಶರಹಿತವಸ್ತುರೂಪನು, ಚ್ಯುತಿಹೊಂದು

ಸಿಕತ್ಯೋ ವಾದ್ಯ ಉರ್ವರ್ಯೋ ಮೇಘ್ಯೋ ಇಧ್ರಿಯ ವಾಕ್ಪಟುಃ ।
ಪ್ರಪಂಚಮಾಯಾರಹಿತೋ ಕೀರ್ತಿತೋ ವೀರ್ಯವರ್ಧನಃ ॥೧೧೨॥

ಕಾಲಚಕ್ರಾಂತರಹಿತೋ ನಿತ್ಯಾನಿತ್ಯೋಥ ಚೇತನಃ ।
ಗರ್ವೋನ್ನತೋ ಭಟಾಕಾರೋ ಮೃಗಯುರ್ಭವಹಾ ಭವಃ ॥೧೧೩॥

ಶಂಗಃ ಶತಾಂಗಃ ಶೀತಾಂಗೋ ನಾಗಾಂಗೋ ಭಸ್ಮಭೂಷಣಃ ।
ತ್ರಿಯಂಬಕೋಽಂಬಿಕಾಭರ್ತಾ ನಂದಿಕೇಶಪ್ರಸಾದಕೃತ್ ॥೧೧೪॥

ಚಂಡೀಶವರದೋ ದಿವ್ಯೋ ಮಾಯಾವಿದ್ಯಾವಿಶಾರದಃ ।
ಮೃಗಾಂಗಶೇಖರೋ ಭವ್ಯೋ ಗೌರೀಪೂಜ್ಯೋ ದಯಾಮಯಃ ॥೧೧೫॥

---

ವವರನ್ನು ಕಾಪಾಡುವವನು, ಸಾಗರಗಳ ಒಳಗಿರುವವನು, ಜಿತೇಂದ್ರಿಯನು, ಪ್ರಳಯ ಕಾಲದಲ್ಲಿ ಪ್ರಪಂಚನಾಶಕ್ಕೋಸ್ಕರ ಉಂಟಾಗುವ ಕಲ್ಲು, ಮುಳ್ಳುಗಳರೂಪವಾದ ವೃಷ್ಟಿಸ್ವರೂಪನು, ಮನೋಹರನು, (ರಸಗಳಲ್ಲಿ ಗೋಚರಿಸುವನು) ಧೂಳಿನಲ್ಲಿರುವ ರೂಪವುಳ್ಳವನು, ಪ್ರವಾಹರೂಪನು, ವಿದ್ಯುತ್ಸ್ವರೂಪನು, ಅಗ್ನಿರೂಪನು, ಮರಳಲ್ಲಿ ರುವವನು, ವಾದ್ಯಗಳಲ್ಲಿರುವನು, ಸಕಲ ಸಸ್ಯಸಂಪತ್ತಿಯಿಂದೊಡಗೂಡಿದ ಭೂಮಿ ಯಲ್ಲಿ ಧಾನ್ಯರೂಪದಿಂದ ಇರುವವನು, ಮೇಘರೂಪದಿಂದ ತೋರುವ ವಸ್ತುವಿನಲ್ಲಿ ಅಡಗಿರುವವನು, ಶರತ್ಕಾಲದ ಮೇಘದಲ್ಲಿ ಗೋಚರಿಸುವವನು, ವಾಕ್ಪಾಟವವುಳ್ಳ ವನು, ಈ ಪ್ರಪಂಚದ ಮಾಯೆಯಿಂದ ಬಿಡಲ್ಪಟ್ಟವನು, ಎಲ್ಲರಿಂದ ಕೀರ್ತಿಸಲ್ಪಟ್ಟ ವನು, ಶಕ್ತಿಯನ್ನು ಹೆಚ್ಚಿಸುವವನು, ಈ ಕಾಲವೆಂಬ ಚಕ್ರದ ಕೊನೆಯಿಲ್ಲದವನು, (ನಿತ್ಯನು) ನಿತ್ಯ (ಜನನ ಮರಣಗಳಿಲ್ಲದ್ದು) ಮತ್ತು ಅನಿತ್ಯ (ಶಾಶ್ವತವಲ್ಲದ) ರೂಪ ವಾದ ಚೇತನವುಳ್ಳವನು, ಗರ್ವದಿಂದ ಕೊಬ್ಬಿದವನು, ಸೈನಿಕನ ಆಕೃತಿಯುಳ್ಳವನು, ಬೇಡನ ಸ್ವರೂಪನು, ಸಂಸಾರಬಂಧನವನ್ನು ಹೋಗಲಾಡಿಸುವವನು, ಜಗದುತ್ಪತ್ತಿ ಕಾರಣನು. ॥೧೧೧-೧೧೨-೧೧೩॥

ಸುಖವನ್ನುಂಟುಮಾಡುವವನು, ನೂರು ಅಂಗಗಳುಳ್ಳವನು, ತಂಪಾದ ದೇಹವುಳ್ಳವನು, ಸರ್ಪವನ್ನು ಶರೀರದಲ್ಲಿ ಧರಿಸಿರುವವನು, ವಿಭೂತಿಯನ್ನು ಅಲಂಕರಿ ಸಿಕೊಂಡಿರುವವನು, ಮೂರುಕಣ್ಣುಳ್ಳವನು, ಅಂಬಿಕಾದೇವಿಯ ಗಂಡನು, ನಂದಿಕೇ ಶ್ವರನಿಗೆ ಅನುಗ್ರಹಮಾಡಿದವನು, ಚಂಡಿಕೇಶ್ವರನಿಗೆ ವರವನ್ನಿತ್ತವನು, ದೇವಾಂಶ

ಪ್ರಮಾಥನೋ ಶಿಕಥನೋ ಗರ್ಗೋ ವೀಣಾಪ್ರಿಯೋ ವಟುಃ ।
ವರ್ಣೀ ವನಸ್ಥೋ ಯತಿರಾಡ್ಗೂಢಗರ್ಭೋ ವಿರೋಚನಃ ॥೧೧೬॥

ಶಂಬರೋ ಬರ್ಬರೋ ಧೌಮ್ಯೋ ವಿರಾಡ್ರೂಪಃ ಸ್ಥಿತಿಪ್ರದಃ ।
ಮಹಾಕಾರುಣಿಕೋ ಭ್ರಾಂತಿನಾಶಕಃ ಶೋಕಹಾ ಪ್ರಭುಃ ॥೧೧೭॥

ಅಶೋಕಪುಷ್ಪಪೂಜ್ಯಾಂಘ್ರಿರ್ಮಣಿಭದ್ರೋ ಮಹೇಶ್ವರಃ ।
ಅಮೃತೇಶೋ ದ್ರುತಗತಿಸ್ತಗರೋಽರ್ಜುನಮಧ್ಯಗಃ ॥೧೧೮॥

ದನೋ ವಿರೋಧಹೃತ್ಕಾಂತೋ ನೀತಿಜ್ಞೋ ವಿಷ್ಣುಪೂಜಿತಃ ।
ಸುಮಪ್ರಿಯೋ ವಾತಮಯೋ ವರೀಯಾನ್ಕರ್ಮಠೋ ಯಮೀ ॥೧೧೯॥

---

ಯುಕ್ತನು, ಮಾಯಾವಿದ್ಯದಲ್ಲಿ ನಿಪುಣನು, ಚಂದ್ರಶೇಖರನು, ಮಂಗಳಸ್ವರೂಪನು, ಗೌರೀದೇವಿಯಿಂದ ಪೂಜಿಸಲ್ಪಡುವವನು, ದಯಾಮಯನು. ||೧೧೪-೧೧೫||

ದುಷ್ಟರನ್ನು ಧ್ವಂಸಮಾಡುವವನು, ಭಕ್ತರಿಗೆ ಏನುಬೇಕಾದರೂ ಹೇಳುವವನು, ಗರ್ಗಸ್ವರೂಪನು, ವೀಣೆಯಲ್ಲಿ ಪ್ರೀತಿಯುಳ್ಳವನು, ಬ್ರಹ್ಮಚಾರಿಯು, ವರ್ಣಾಶ್ರಮ ಧರ್ಮವುಳ್ಳವನು, ಕಾಡಿನಲ್ಲಿರುವನು, ಸಂನ್ಯಾಸಿಗಳಿಗೆ ರಾಜನು, ರಹಸ್ಯವಾದ ಗರ್ಭ ವುಳ್ಳವನು, (ತಿಳಿಯಲಶಕ್ಯವಾದ ಸ್ವರೂಪವುಳ್ಳವನು) ವಿರೋಚನನು, (ಕ್ರೂರಗುಣ ಗಳನ್ನು ಹೊಂದದವನು.) ಜಿಂಕೆಯರೂಪನು, ಬರ್ಬರರೂಪನು, ಧೌಮ್ಯ ರೂಪಿಯು, ವಿರಾಟ್ಸ್ವರೂಪವುಳ್ಳವನು, ರಕ್ಷಣೆಯನ್ನೀಯುವವನು, ತುಂಬಾ ದಯಾ ಶಾಲಿಯು, ಭ್ರಾಂತಿಯನ್ನು ಹೋಗಲಾಡಿಸುವವನು, ದುಃಖವನ್ನು ನೀಗುವನು, ಪ್ರಭುವು. ||೧೧೬-೧೧೭||

ಬಾಗೇಹೂವಿನಿಂದ ಪೂಜಿಸಲು ಯೋಗ್ಯವಾದ ಪಾದವುಳ್ಳವನು, ಮಣಿಭದ್ರ ನೆನಿಸಿರುವನು, (ಮಣಿಮಯಪೀಠವುಳ್ಳವನು.) ತುಂಬಾ ಐಶ್ವರ್ಯಸಂಪನ್ನನು, ಅಮೃತೇಶ್ವರನು, ವೇಗವಾದ ಗಮನವುಳ್ಳವನು, ತಗರವೃಕ್ಷರೂಪನು, ಮತ್ತಿಮರದ ಮಧ್ಯದಲ್ಲಿರುವವನು, ಇಂದ್ರಿಯನಿಗ್ರಹ ಮಾಡಿದವನು, ದ್ವೇಷವನ್ನು ಹೋಗ ಲಾಡಿಸುವವನು, ಮನೋಹರಾಕಾರನು, ನೀತಿಯನ್ನರಿತವನು, ವಿಷ್ಣುವಿನಿಂದ ಪೂಜಿಸಲ್ಪಟ್ಟವನು, ಹೂವಿನಲ್ಲಿ ಪ್ರೀತಿಯುಳ್ಳವನು, ವಾಯುಸ್ವರೂಪನು, ಶ್ರೇಷ್ಠನು, ಕರ್ಮನಿರತನು, ಮನಸ್ಸನ್ನು ಜಯಿಸಿದವನು, ದಿಗಂಬರನು, (ನಗ್ನನು) ಶಾಂತಿ

ದಿಗಂಬರೋ ಶಮಶಾನೋ ಧೂಮಪಃ ಶುಕ್ರಗರ್ಭಕಃ ।
ಅಟ್ಟಹಾಸಸ್ತಲ್ಪಶಯೋ ಆಸೀನೋ ಧಾವಮಾನಕಃ ॥೧೨೦॥

ತುರಾಷಾಣ್ಮೇಘಮಧ್ಯಸ್ಥೋ ನಿಸ್ತಾಶಾತೀರಸಂಸ್ಥಿತಃ ।
ಕುಲೋತ್ಪನ್ನಃ ಕುಲೀನಶ್ಚ ವ್ಯವಹಾರಪ್ರವರ್ತಕಃ ॥೧೨೧॥

ಕೇತುಮಾಲೀ ಹಿರಣ್ಯಾಂಗೋ ದ್ರಾಪಿಃ ಪುಷ್ಪಮಯೋ ಭೃಗುಃ ।
ವಿಶೇಷಕೋಽಗ್ನಿರತಸ್ತ್ವಗ್ಗತೋ ರುಧಿರಪ್ರಿಯಃ ॥೧೨೨॥

ಅಕೈತವಹೃದಾವಾಸೀ ಕ್ಷಪಾನಾಥಕಲಾಧರಃ ।
ನಕ್ತಂಚರೋ ದಿವಾಚಾರೀ ದಿವ್ಯದೇಹೋ ವಿಶಾಸಕಃ ॥೧೨೩॥

ಕದಂಬವನಮಧ್ಯಸ್ಥೋ ಹಿರಣ್ಯಾಂಗೋಽರ್ಮಿಮಧ್ಯಗಃ ।
ಯಮುನಾಜಲಮಧ್ಯಸ್ಥೋ ಜಾಲಕೋ ಜಾಮುಖೋ ವಸುಃ॥೧೨೪॥

---

ಮಯನು, ಧೂಮವನ್ನು ಪಾನಮಾಡುವವನು, ಶುಕ್ರವೆಂಬ ವೀರ್ಯವನ್ನು ಗರ್ಭದಲ್ಲಿ ಧರಿಸಿರುವನು, ಅಟ್ಟಹಾಸವುಳ್ಳವನು, ಸುಪ್ಪತ್ತಿಗೆಯ ಮೇಲೆ ಮಲಗುವವನು, ಯಾವಾಗಲೂ ನಿಂತು ಇರುವವನು, ಓಡುವವನು. ||೧೧೮-೧೧೯-೧೨೦||

ಇಂದ್ರಸ್ವರೂಪನು, ಮೋಡಗಳ ಮಧ್ಯದಲ್ಲಿರುವವನು, ಬಂಧನರಹಿತವಾದ ದಡದಲ್ಲಿರುವವನು, ಕುಲದಿಂದ ಉತ್ಪನ್ನನಾದವನು, ಸತ್ಕುಲಪ್ರಸೂತನು, ವ್ಯವಹಾರವನ್ನು ನಡೆಸುವವನು, ಧ್ವಜಮಾಲೆಯುಳ್ಳವನು, ಹೊಂಬಣ್ಣದ ಅವಯವವುಳ್ಳವನು, ಪಾಪಿಗಳನ್ನು ನರಕಾದಿಲೋಕಗಳಿಗೆ ತಳ್ಳಿ ಶಿಕ್ಷಿಸುವನು, (ದ್ರಾಪಿ) ಹೂಮಯನು, ಭೃಗುಸ್ವರೂಪನು, ಭೂಮಿಯನ್ನು ತನ್ನ ನೇತ್ರಜ್ವಾಲೆಯಿಂದ ಒಣಗಿಸುವವನು, ಭೂಮಿಯಲ್ಲಿ ತತ್ಪರನಾಗಿರುವವನು, ಚರ್ಮಸಮೂಹವುಳ್ಳವನು, ರಕ್ತದಲ್ಲಿ ಪ್ರೀತಿಯುಳ್ಳವನು, ನಿಷ್ಕಪಟವಾದ ಹೃದಯದಲ್ಲಿ ವಾಸಮಾಡುವವನು, ಚಂದ್ರನ ಕಲೆಗಳನ್ನು ಧರಿಸಿರುವವನು, ರಾತ್ರಿಯಲ್ಲಿ ಸಂಚರಿಸುವನನು, ಹಗಲಿನಲ್ಲಿ ತಿರುಗಾಡುವವನು, ದಿವ್ಯವಾದ ದೇಹವುಳ್ಳವನು, ದುಷ್ಟರನ್ನು ಶಿಕ್ಷಿಸುವವನು. ||೧೨೧-೧೨೨-೧೨೩||

ಈಚಲು ಕಾಡಿನ ಮಧ್ಯದಲ್ಲಿರುವವನು, ಹೊಂಬಣ್ಣದ ದೇಹವುಳ್ಳವನು, ಅಲೆಗಳ ಮಧ್ಯದಲ್ಲಿರುವವನು, ಯಮುನಾನದಿಯ ನೀರಿನ ಮಧ್ಯದಲ್ಲಿರುವವನು,

ವಸುಪ್ರದೋ ವೀರವರ್ಯಃ ಶೂಲಹಸ್ತಃ ಪ್ರತಾಪವಾನ್ ।
ಖಡ್ಗಹಸ್ತೋ ಮಂಗಲಾತ್ಮಾ ಮೃತ್ಯುರ್ಮೃತ್ಯುಜಿದೀಶ್ವರಃ ॥೧೨೫॥

ಲಂಕಾವಾಸೋ ಮೇಘಮಾಲೋ ಗಂಧಮಾದನಸಂಸ್ಥಿತಃ ।
ಭೈರವೋ ಭರಣೋ ಭರ್ತಾ ಭ್ರಾತೃವ್ಯೋ ನಾಮರೂಪಕಃ ॥೧೨೬॥

ಅವ್ಯಾಕೃತಾತ್ಮಾ ಭೂತಾತ್ಮಾ ಪಂಚಭೂತಾಂತರೋಽಸ್ಮಯಃ ।
ಆಹನನ್ಯಃ ಶಬ್ದಮಯಃ ಕಾಲಾಧಾರಃ ಕಲಾಧರಃ ॥೧೨೭॥

ಭೃಗುತುಂಗೋ ಚೀರವಾಸೀ ಕೈವರ್ತೋ ನಾಯಕೋಽರ್ಥಕಃ ।
ಕರೇಣುಪೋ ಗಂಧಮದಶ್ಚಾಂಪೇಯಕುಸುಮಪ್ರಿಯಃ ॥೧೨೮॥

---

ಕಿರಣಜಾಲವುಳ್ಳವನು, ಜಾಮುಖನೂ, (ಯಜ್ಞಪುರುಷನಾಗಿ ತೋರುವವನು.) ವಸುಸ್ವರೂಪನು, ಐಶ್ವರ್ಯವನ್ನೀವವನು, ಶೂರಾಗ್ರೇಸರನು, ತ್ರಿಶೂಲವನ್ನು ಹಿಡಿದಿರುವವನು, ಪ್ರತಾಪಶಾಲಿಯು, ಕತ್ತಿಯನ್ನು ಹಿಡಿದಿರುವವನು, ಮಂಗಳ ಸ್ವರೂಪನು, ಮೃತ್ಯುರೂಪನು, ಯಮನನ್ನು ಜಯಿಸಿದವನು, ಐಶ್ವರ್ಯಶಾಲಿಯು. ॥೧೨೪-೧೨೫॥

ಲಂಕಾನಗರಿಯಲ್ಲಿ ವಾಸಮಾಡುವವನು, ಮೇಘಗಳ ಸಮೂಹರೂಪನು, ಗಂಧಮಾದನಪರ್ವತದಲ್ಲಿ ನೆಲಸಿದವನು, ಭೈರವರೂಪನು, ಪ್ರಪಂಚ ರಕ್ಷಕನು, ಜಗತ್ತನ್ನೆಲ್ಲಾ ಧರಿಸಿರುವವನು, ಸೋದರಸಂಬಂಧವುಳ್ಳವನು, ಪ್ರಸಿದ್ಧವಾದ ರೂಪ ವುಳ್ಳವನು, ವಿಕೃತಿಹೊಂದದ ಸ್ವರೂಪವುಳ್ಳವನು, ಪ್ರಾಣಿಗಳ ಸ್ವರೂಪನು, ಪೃಥಿವ್ಯ ಪ್ತೇಜೋವಾಯುರೂಪವಾದ ಪಂಚಭೂತಗಳಲ್ಲಿಯೂ ಇರುವವನು, ಸ್ನೇಹವುಳ್ಳ ವನು, ಹೊಡೆತದಿಂದುಂಟಾಗುವ ಭೇರೀಮುಂತಾದ ವಾದ್ಯಗಳ ಶಬ್ದರೂಪನು, ಶಬ್ದ ಸ್ವರೂಪನು, ಕಾಲಕ್ಕೆ ಆಧಾರವಾಗಿರುವವನು, ಚಂದ್ರಕಲೆಗಳನ್ನು ಧರಿಸಿರುವನು, ಭೃಗುವಿನಂತೆ ಉನ್ನತವಾದ ಆಕೃತಿಯುಳ್ಳವನು, ಗಜಚರ್ಮವನ್ನು ಧರಿಸಿರುವನು, ಕೈವರ್ತನು, (ಬೆಸ್ತನು) ಒಡೆಯನು, ದ್ರವ್ಯಸ್ವರೂಪನು, ಹೆಣ್ಣಾನೆಗಳನ್ನು ಕಾಪಾಡುವವನು, ಗಂಧದಿಂದ ಮದಿಸಿದವನು, ಸಂಪಿಗೆಯ ಹೂವಿನಲ್ಲಿ ಪ್ರೀತಿ ಯುಳ್ಳವನು, ॥೧೨೬-೧೨೭-೧೨೮॥

ಭದ್ರ ದಕ್ಷ ಚರ್ಮವಸನೋ ವೈರಾಜಸ್ತೋತ್ರಕಾರಕಃ ।
ಸುಮಪ್ರೀತಃ ಸಾಮಗೀತಿರೂರ್ಜೋ ವರ್ಚಃ ಕುಲೇಶ್ವರಃ ॥೧೨೯॥

ಕಕುದ್ಮಾನ್ಪ್ರೀತವಸನೋ ಕುಧ್ರೇಶೋ ನಾರದಃ ಪಿತಾ ।
ಕ್ರವ್ಯಾದನೋ ನೀತಿಮಯೋ ಧರ್ಮಚಕ್ರಪ್ರವರ್ತಕಃ ॥೧೩೦॥

ಶಷ್ಪ್ಯಃ ಫೇನ್ಯೋ ವಿನಿರ್ಣೇತಾ ಕಂಕಣೋ ನಾಶಕೋವಿದಃ ।
ಏಣಾಂಕಃ ಶಲಭಾಕಾರಃ ಶಾಲೂರೋ ಗ್ರಾಮಸಂಸ್ಥಿತಃ ॥೧೩೧॥

ಮಹಾವಿಶೇಷಕಥನೋ ವಾರೀತೀರಸ್ಥಿತಃ ಸಲಃ ।
ಕೃಪೀಟಯೋನಿಃ ಶಾಂತಾತ್ಮಾ ಗುಣವಾನ್ಜ್ಞಾನವಾಂಛುಚಿಃ ॥೧೩೨॥

ಸರ್ವಪಾಪಹರೋ ಲಿಂಗೋ ಭಗಮಾಲೋ ಪ್ರತಾರಣಃ ।
ಆನಂದಘನ ಆತಾರ್ಯ್ಯೋ ಇರಿಣ್ಯೋಽಥ ಪ್ರಪಥ್ಯಕಃ ॥೧೩೩॥

---

ಮಂಗಳವನ್ನುಂಟುಮಾಡುವವನು, ಚರ್ಮವನ್ನು ಹೊದಿಯುವವನು, ವಿರಾಟ್ ಸ್ವರೂಪದಿಂದ ಗೋಚರಿಸುವವನು, ಸ್ತೋತ್ರಮಾಡುವವನು, ಹೂವಿನಲ್ಲಿ ಪ್ರೀತಿಯುಳ್ಳವನು, ಸಾಮವೇದದಿಂದ ಗಾನಮಾಡಲ್ಪಡುವವನು, ವೀರ್ಯವುಳ್ಳವನು, ವರ್ಚಸ್ವಿಯು, ಕುಲಗಳಿಗೆಲ್ಲಾ ಈಶ್ವರನು, ಒಳ್ಳೆಯ ಭುಜವುಳ್ಳವನು, ಬಟ್ಟೆಯಲ್ಲಿ ಪ್ರೀತಿಯುಳ್ಳವನು, ಭೂಪತಿಯು, ನಾರದನು, ಮನುಜರ ಸಂಬಂಧಿಯಾದ ದುಃಖವನ್ನು ಖಂಡಿಸುವವನು, ಜನಕನು, ಮಾಂಸವನ್ನು ತಿನ್ನುವವನು, ನೀತಿಮಯನು, ಧರ್ಮಚಕ್ರವನ್ನು ನಡೆಸುವವನು, ||೧೨೯-೧೩೦||

ಎಳೆಯ ಹುಲ್ಲಿನ ಸ್ವರೂಪನು, ಹಾಲಿನ ನೊರೆಯಲ್ಲಿರುವವನು, ಎಲ್ಲವನ್ನೂ ನಿರ್ಣಯಮಾಡುವವನು, ಕಂಕಣಸ್ವರೂಪನು, ಪ್ರಲಯಕಾರಿಯು, ಜಿಂಕೆಯ ಚಿಹ್ನೆಯುಳ್ಳವನು, ಪತಂಗದ ಆಕಾರವುಳ್ಳವನು, ಕಪ್ಪೆಯ ಸ್ವರೂಪನು, ಹಳ್ಳಿಗಳಲ್ಲಿರುವವನು, ವಿಶೇಷ ಸಮಾಚಾರವನ್ನು ಹೇಳುವವನು, ನೀರಿನ ದಡದಲ್ಲಿರುವವನು, ಗಜಾಕಾರನು, ಅಗ್ನಿಸ್ವರೂಪನು, ಶಾಂತಸ್ವಭಾವವುಳ್ಳವನು, ಗುಣವಂತನು. ಜ್ಞಾನಿಯು, ಶುಚಿಯಾಗಿರುವವನು, ಸಕಲ ಪಾಪಗಳನ್ನು ನಾಶಮಾಡುವವನು, ಲಿಂಗಾಕೃತಿಯುಳ್ಳವನು, ಸೂರ್ಯತೇಜಸ್ವಿಯು, ಸಂಸಾರಬಂಧನದಿಂದ ಭಕ್ತರನ್ನು ಉದ್ಧಾರಮಾಡುವವನು, ಆನಂದಮಯವೆನಿಸಿದ ಮೇಘರೂಪನು, ಸಂಸಾರ

ಗಂಗಾತೀರಸ್ಥಿತೋ ದೇವ ಅವಿಮುಕ್ತಸಮಾಶ್ರಿಯಃ ।
ಮಹಾಶ್ಮಶಾನನಿಲಯೋ ವಲಯೋ ವಾಲಿಪೂಜಿತಃ ॥೧೩೪॥

ಕರಂಧವೋ ವ್ರಾತ್ಯವರ್ಯೋ ಮಾನವೋ ಜೀವಕೇಶವಃ ।
ಕರ್ಮದೇವಮಯೋ ಬ್ರಹ್ಮ ಋತಂ ಸತ್ಯಂ ಮಹೇಶ್ವರಃ ॥೧೩೫॥

ಸುಮಂಗಲಃ ಸುಖಮಯೋ ಜ್ಞಾನಾನಂದೋಽಮಿತಾಶನಃ ।
ಮನೋಮಯಃ ಪ್ರಾಣಮಯೋ ವಿಜ್ಞಾನಾತ್ಮಾ ಪ್ರಸಾದನಃ॥೧೩೬॥

ಆನಂದಮಯ ಕೋಶಾತ್ಮಾ ಧಾಮಾ ಸೀಮಾಥ ಭೂಮಕಃ ।
ಸದಾಶಿವೋ ವಿಶಿಷ್ಟಾತ್ಮಾ ವಿಶಿಷ್ಟಾರ್ಚಿತಪಾದುಕಃ ॥೧೩೭॥

---

ಕರ್ಮಬಂಧನವುಳ್ಳ ಜೀವಸ್ವರೂಪನು, ಮರುಭೂಮಿಯಲ್ಲಿರುವವನು, ಅನೇಕ ಜನಗಳಿಂದ ಸೇವಿಸಲ್ಪಟ್ಟ ಮಾರ್ಗದಲ್ಲಿ ಆವಿರ್ಭವಿಸುವವನು, ||೧೩೧-೧೩೨-೧೩೩||

ಗಂಗಾನದಿಯ ದಡದಲ್ಲಿರುವವನು, ಕ್ರೀಡಾದಿಗುಣಸಂಪನ್ನನು, ಅವಿಮುಕ್ತಕ್ಷೇತ್ರವನ್ನು ಆಶ್ರಯಿಸಿರುವವನು, ದೊಡ್ಡ ಸ್ಮಶಾನದಲ್ಲಿ ನೆಲಸಿರುವವನು, ಪ್ರಳಯವನ್ನೆಸಗುವವನು, ವಾಲಿಯಿಂದ ಪೂಜಿಸಲ್ಪಟ್ಟವನು, ಕೈಗಾಣಿಕೆಯನ್ನು ಹೊಂದುವವನು, ಸಂಸ್ಕಾರರಹಿತರಲ್ಲಿ ಅಗ್ರಗಣ್ಯನು, ಮನುಷ್ಯನು, ಜೀವರ ಅಂತರಂಗದಲ್ಲಿ ಅಡಗಿರುವನು, ಕರ್ಮಸ್ವರೂಪನು, ದೇವತಾಸ್ವರೂಪನು, ಬ್ರಹ್ಮಸ್ವರೂಪನು, (ತಿಳಿಯಲಶಕ್ಯವಾದಷ್ಟು ದೊಡ್ಡ ರೂಪುಳ್ಳವನು) ಅನೃತರೂಪವಾದ ಅಸುರಭಾವಾಭಿಮಾನವಿಲ್ಲದವನು, ನಿಮಿತ್ತಕಾರಣವಾದ ದೇಶ, ಕಾಲ, ವಸ್ತ್ವಾದಿಗಳೆಲ್ಲಾ ನಾಶವಾಗುತ್ತಿದ್ದರೂ, ನಾಶವಾಗದ ಸ್ವರೂಪನು (ಸತ್ಯ), ತುಂಬಾ ಐಶ್ವರ್ಯಸಂಪನ್ನನು, ಒಳ್ಳೆಯ ಮಂಗಳವಿಗ್ರಹನು, ಸುಖರೂಪನು, ಜ್ಞಾನಾನಂದರೂಪನು, ಪರಿಮಿತಿಯಿಲ್ಲದಷ್ಟು (ಅನ್ನಮಯನು) ಭೋಗವುಳ್ಳವನು, ಮನೋಮಯನು, ಪ್ರಾಣಮಯನು, ವಿಜ್ಞಾನಮಯನು, ಯಾವಾಗಲೂ ಅನುಗ್ರಹವನ್ನು ಮಾಡುವವನು, ||೧೩೪-೧೩೫-೧೩೬||

ಆನಂದಮಯಕೋಶವುಳ್ಳವನು, ಸ್ಥಾನ ಎಲ್ಲೆ ಮುಂತಾದವುಗಳಿಗೆ ಆಶ್ರಯನು, ನಿತ್ಯಮಂಗಳಸ್ವರೂಪನು, ವಿಶಿಷ್ಟಸ್ವರೂಪನು, ವಿಶೇಷವಾಗಿ ಎಲ್ಲ

ನೀಲಗ್ರೀವಃ ಸೈನ್ಯಪಾಲೋ ದಿಶಾನಾಥೋ ನತಿಪ್ರಿಯಃ ।
ಕೇಶವೋನ್ಮಥನೋ ಮೌನೀ ಮಧುಸೂದನಸೂದನಃ ॥೧೩೬॥

ಉದುಂಬರಕರೋ ಡಿಂಭೋ ಬಂಭರೋ ಪಿಂಛಲಸ್ತಲಃ ।
ಮೂಲಸ್ತಾಲಕರೋ ವರ್ಣ್ಯೋ ಪರ್ಣಾದಃ ಪ್ರಾಣನಾಶಕಃ ॥೧೩೯॥

ಅಪರ್ಣಾಪತಿರಾಶಾಸ್ಯೋ ಸಂಪೂರ್ಣಃ ಪೂರ್ಣರೂಪವಾನ್ ।
ದೀಪಮಾಲೋ ಜಾಂಗಲಿಕೋ ವೈತುಂಡಸ್ತುಂಡಕಪ್ರಿಯಃ ॥೧೪೦॥

ಉಲೂಕಃ ಕಲವಿಂಕೋಽಥ ಶುಕನಾಸಪ್ರಸಾದಕೃತ್ ।
ಜೈಗೀಷವ್ಯ ತಪಃಪ್ರೀತೋ ರಾವಣೇಜ್ಯೋ ಬಲಾರ್ದನಃ ॥೧೪೧॥

ಮಾರ್ಕಂಡೇಯಮಹಾಮೃತ್ಯುನಾಶಕೋಽಜ್ಞಾನವಾರಕಃ ।
ಅಪವರ್ಗಣಕ್ರಿಯಾತೀತಃ ಸರ್ವಪ್ರೀತೋಽನಿಲಾಶನಃ ॥೧೪೨॥

---

ರಿಂದಲೂ ಪೂಜಿಸಲ್ಪಟ್ಟ ಪಾದುಕೆಯುಳ್ಳವನು, ಕಪ್ಪಾದ ಕೊರಳುಳ್ಳವನು, ಸೈನ್ಯವನ್ನು ಕಾಪಾಡುವವನು, ದಿಕ್ಕುಗಳಿಗೊಡೆಯನು, ನಮಸ್ಕಾರಪ್ರಿಯನು, ಕೇಶವನನ್ನು ನಿಗ್ರಹಿಸಿದವನು, ಮೌನವುಳ್ಳವನು, ಮಧುಸೂದನನೆನಿಸಿದ ವಿಷ್ಣುವನ್ನು ನರಸಿಂಹಾವತಾರದಲ್ಲಿ ಶರಭಾಕೃತಿಯಿಂದ ಭಂಗಪಡಿಸಿದವನು, ॥೧೩೭-೧೩೮॥

ಅತ್ತಿಮರದ ದಂಡವನ್ನು ಕೈಯಲ್ಲಿ ಹಿಡಿದಿರುವನು, ಬಾಲಸ್ವರೂಪನು, ಭ್ರಮರರೂಪಿಯು, ನವಿಲಸ್ವರೂಪನು, ಮಧ್ಯಸ್ವರೂಪನು, ಬುಡದರೂಪನು, ತಾಳಗಳನ್ನು ಕೈಲುಳ್ಳವನು, ವರ್ಣಿಸಲು ಯೋಗ್ಯನು, ಎಲೆಗಳನ್ನು ತಿನ್ನುವವನು, ಪ್ರಳಯಕಾಲದಲ್ಲಿ ಪ್ರಾಣಿಗಳ ಪ್ರಾಣಗಳನ್ನು ನಾಶಮಾಡುವವನು. ಅಪರ್ಣಾದೇವಿಯ ಗಂಡನು, ಶಾಸನಮಾಡಲು ಅರ್ಹನು, ಪರಿಪೂರ್ಣಸ್ವರೂಪನು, ಪೂರ್ಣವಾದ ಆಕೃತಿಯುಳ್ಳವನು, ದೀಪಗಳ ಮಾಲೆಗಳುಳ್ಳವನು, ವಿಷವೈದ್ಯನು, ವಿಸ್ತಾರವಾದ ಮುಖವುಳ್ಳವನು, ತುಂಡಕನೆಂಬ ಪ್ರಮಥನಲ್ಲಿ ಪ್ರೀತಿಯುಳ್ಳವನು. ॥೧೩೯-೧೪೦॥

ಗೂಬೆಯ ರೂಪವುಳ್ಳವನು, ಗುಬ್ಬಚ್ಚಿಯ ರೂಪನು, ಮತ್ತು ಶುಕನಾಸನಿಗೆ ಅನುಗ್ರಹಮಾಡಿದವನು, ಜೈಗೀಷವ್ಯನ ತಪಸ್ಸಿಗೆ ಮೆಚ್ಚಿ ಪ್ರೀತಿಸಿದವನು, ರಾವಣನಿಂದ ಪೂಜಿಸಲ್ಪಟ್ಟವನು, ಬಲಶಾಲಿಗಳೆಂದು ಕೊಬ್ಬಿದವರನ್ನು ಧ್ವಂಸಮಾಡುವವನು, ಮಾರ್ಕಂಡೇಯನಿಗೆ ಉಂಟಾಗಿದ್ದ ದೊಡ್ಡ ವಿಪತ್ತನ್ನು ನಾಶ

ವೇಗಾಧಾರೋ ಧೈರ್ಯಧುರೋ ಧನಧಾನ್ಯಪ್ರದಾಯಕಃ ।
ನಾದ್ಯೋ ವಾದ್ಯೋ ವೈದ್ಯರತೋ ಗದ್ಯಪದ್ಯಸ್ತುತೋದ್ಯಕಃ ॥೧೪೩॥

ಭೇರೀಝಾಂಕಾರನಿರತೋ ಮೃಗಚರ್ಮವಿಧಾರಕಃ ।
ಪುಣ್ಯಕೀರ್ತಿಃ ಪುಣ್ಯಲಭ್ಯೋ ಮೋಹನಾಸ್ತ್ರವಿಶಾರದಃ ॥೧೪೪॥

ಕೈಲಾಸಶಿಖರಾವಾಸಃ ಪಾರಿಜಾತವನಾಶ್ರಯಃ ।
ಇಲಾಂದರವಸಂಪ್ರೀತೋ ಮಹೇಂದ್ರಸ್ತುತಿಹರ್ಷಿತಃ ॥೧೪೫॥

ಯೂಪಾವಟೋ ಭಾರವಕಃ ಕೋಮಲಾಂಗೋ ಜನಾಶ್ರಯಃ ।
ವಿಶ್ವಾಮಿತ್ರಪ್ರಿಯೋ ಬಾಲೋ ಪಾಕಯಜ್ಞರತಃ ಸುಖೀ ॥೧೪೬॥

---

ಮಾಡಿದವನು, ಅಜ್ಞಾನವನ್ನು ನಾಶಮಾಡುವವನು, ಅಹರ್ಗಣಗಳ ವ್ಯಾಪಾರವನ್ನು ಮೀರಿದವನು, ಸರ್ಪಗಳಲ್ಲಿ ಪ್ರೀತಿಯುಳ್ಳವನು, ವಾಯುಭಕ್ಷಕನು, ॥೧೪೧-೧೪೨॥

ವೇಗಗಳಿಗೆ ಆಧಾರನೂ, ಧೈರ್ಯದ ಭಾರವನ್ನು ಹೊತ್ತಿರುವವನೂ, ಅಂದರೆ ತುಂಬಾ ಧೈರ್ಯಶಾಲಿಯೂ, ಧನ ಮತ್ತು ಧಾನ್ಯಗಳನ್ನು ಭಕ್ತರಿಗೆ ಕೊಡುವವನೂ, ನಾದದಲ್ಲಿ ತೋರುವವನೂ, ವಾದ್ಯಸ್ವರೂಪನೂ, ವೈದ್ಯದಲ್ಲಿ ನಿರತನೂ, ಗದ್ಯ ಮತ್ತು ಪದ್ಯರೂಪವಾದ ನುಡಿಗಳಿಂದ ಸ್ತೋತ್ರಮಾಡಲ್ಪಟ್ಟವನು, ಪ್ರಪಂಚವನ್ನು ಸಂಹರಿಸುವವನು, ಭೇರೀವಾದ್ಯದ ಝಾಂಕಾರಧ್ವನಿಯನ್ನು ಕೇಳುವುದರಲ್ಲಿ ಆಸಕ್ತನೂ, ಜಿಂಕೆಯ ಚರ್ಮವನ್ನು ಧರಿಸಿರುವವನು, ಪುಣ್ಯರೂಪವಾದ ಕೀರ್ತಿಯುಳ್ಳವನು, ಪುಣ್ಯದಿಂದ ಮಾತ್ರ ಹೊಂದಲು ಸಾಧ್ಯನಾಗಿರುವನು, ಸಮ್ಮೋಹನಾಸ್ತ್ರಪ್ರಯೋಗದಲ್ಲಿ ನಿಪುಣನು, ॥೧೪೩-೧೪೪॥

ಕೈಲಾಸಪರ್ವತದ ಶಿಖರದಲ್ಲಿ ವಾಸಮಾಡುವವನು, ಪಾರಿಜಾತವನವನ್ನು ಆಶ್ರಯಿಸಿರುವನು, ಇಲಾದವೆಂಬ ವಾದ್ಯಧ್ವನಿಯಿಂದ ತೃಪ್ತನಾಗುವವನು. ಇಂದ್ರನ ಸ್ತೋತ್ರದಿಂದ ಸಂತುಷ್ಟನಾದವನು, ಯೂಪಸ್ತಂಬದಲ್ಲಿ ನೆಲಸಿರುವವನು, ಕೋಮಲವಾದ (ಮೃದುವಾದ) ಅವಯವವುಳ್ಳವನು, ಜನಗಳಿಗೆಲ್ಲಾ ಆಶ್ರಯನು, ವಿಶ್ವಾಮಿತ್ರನಲ್ಲಿ ಪ್ರೀತಿಯುಳ್ಳವನು, ಬಾಲರೂಪನು, ಪಾಕಯಜ್ಞದಲ್ಲಿ ನಿರತನು, ಸುಖಸ್ವರೂಪನು, ಯಾವಾಗಲೂ ವಾಮಾಚಾರದಲ್ಲಿ (ವಿರುದ್ಧ ಆಚಾರಗಳಲ್ಲಿ) ಪ್ರೀತಿಯುಳ್ಳವನು, ಪ್ರಪಂಚವನ್ನೆಲ್ಲಾ ಸರಿಯಾದ ರೀತಿಯಲ್ಲಿ ನಯನಮಾಡುವವನು, ಶಕ್ತ್ಯಾಯುಧ

ವಾವಾಚಾರಪ್ರಿಯೋ ನೇತಾ ಶಕ್ತಿಹಸ್ತೋ ದುರಾಸದಃ ।
ಸರ್ವಾಕಾರಃ ಶಾಶ್ವತಾತ್ಮಾ ವಾಙ್ಮನೋದೂರಗೋ ಹರಃ ॥೧೪೭॥

॥ ಶ್ರೀಸ್ಕಂದ ಉವಾಚ ॥

ಇತ್ಯೇತನ್ನಾಮಸಾಹಸ್ರಂ ಶೇಷಾಶೇಷಮುಖೋದ್ಗತಂ ।
ಶಂಭೋರ್ದಿವ್ಯಂ ಮುನಿಶ್ರೇಷ್ಠ ಶ್ರವಣಾತ್ಪಾಪನಾಶನಂ ॥೧೪೮॥

ಸರ್ವಾನ್ಕಾಮಾನವಾಪ್ನೋತಿ ಶಿವಾರ್ಚನಪರಾಯಣಃ ।
ತ್ವಮೇಭಿರ್ಮುನಿಮುಖ್ಯೈಶ್ಚ ಶೃಣ್ವನ್ಭಕ್ತಿಮವಾಪ್ನುಯಾತ್ ॥೧೪೯॥

ಕುಮಾರೀ ಪತಿಮಾಪ್ನೋತಿ ನಿರ್ದ್ರವ್ಯೋ ಧನವಾನ್ಭವೇತ್ ।
ಜಯಾರ್ಥೀ ಜಯಮಾಪ್ನೋತಿ ಕ್ಷಯದ್ವೀರಪ್ರಸಾದತಃ ॥೧೫೦॥

---

ವನ್ನು ಕೈಲಿ ಹಿಡಿದಿರುವವನು, ಕ್ಲೇಶದಿಂದ/ಹೊಂದಲು ಸಾಧ್ಯನು, ಎಲ್ಲರ ಆಕೃತಿ ಯಿಂದಲೂ ಗೋಚರಿಸುವನು, ಸ್ಥಿರಸ್ವರೂಪವುಳ್ಳವನು, ವಾಕ್ಕು, ಮನಸ್ಸು ಇವು ಗಳಿಗೆ ಗೋಚರವಾಗದಿರುವವನು. ಮತ್ತು ಹರನೂ, ಭಕ್ತರ ಪಾಪಗಳನ್ನು ನಾಶಮಾಡು ವವನೂ ಆಗಿರುವನು. ॥೧೪೫-೧೪೬-೧೪೭॥

ಎಲೈ ಜೈಗೀಷವ್ಯನೇ! ಮುನಿಶ್ರೇಷ್ಠನಾದ ನೀನು, ಈರೀತಿಯಾಗಿ ಆದಿಶೇಷನ ಸಾವಿರ ಮುಖಗಳಿಂದಲೂ ಹೊರಟ, ಶ್ರವಣಮಾತ್ರದಿಂದ ಸಕಲ ಪಾಪಗಳನ್ನೂ ನಾಶಮಾಡುವ, ಶಂಭುವಿನ ದಿವ್ಯವಾದ ಸಹಸ್ರನಾಮಾವಳಿಯನ್ನು ಕೇಳಿರುವೆ. ಎಲೈ ಮುನಿಪುಂಗವನೇ! ಶಿವಪೂಜಾನಿರತನು ಇದರಿಂದ ಸಕಲಇಷ್ಟಾ ರ್ಥಗಳನ್ನೂ ಪಡೆಯುತ್ತಾನೆ. ನೀನು ಈ ಮುನಿಪುಂಗವರೊಡನೆ, ಈ ದಿವ್ಯ ನಾಮಗಳನ್ನು ಕೇಳುತ್ತಾ ಭಕ್ತಿಯನ್ನು ಪಡೆಯುವೆ. ಈ ದಿವ್ಯಸಹಸ್ರನಾಮಗಳನ್ನು ಭಕ್ತಿಯಿಂದ ಶ್ರವಣಮಾಡುವ, ಕುಮಾರಿಯು ಉತ್ತಮವಾದ ಪತಿಯನ್ನು ಪಡೆಯುತ್ತಾಳೆ. ಹಣವಿಲ್ಲದವನು ಹಣ ಹೊಂದುತ್ತಾನೆ (ಧನಿಕನಾಗುತ್ತಾನೆ). ಜಯವನ್ನಪೇಕ್ಷಿಸುವವನು ವಿಜಯವನ್ನು ಪಡೆಯುತ್ತಾನೆ. ಈರೀತಿ ಎಲ್ಲರೂ ಕ್ಷಯದ್ವೀರನೆನಿಸಿದ (ವಿರೋಧಿಗಳಾದ ವೀರರನ್ನು ನಾಶಮಾಡುವ) ಪರಮೇಶ್ವರನ ಅನುಗ್ರಹದಿಂದ ತಮ್ಮ ಇಷ್ಟಾರ್ಥಗಳನ್ನು ಪಡೆಯುತ್ತಾರೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೧೪೮-೧೪೯-೧೫೦॥

॥ ಶ್ರೀ ಸ್ಕಂದ ಉವಾಚ ॥

ಇತಿ ತವ ಗದಿತಮೇತನ್ನಾಮಸಾಹಸ್ರಮದ್ಯ
ಹರಪದ ಚರಣಾಬ್ಜಾರಾಧನೇ ಸಾಧನಂ ತೇ ।
ಮುನಿಗಣನರವರ್ಯೈರ್ಧಾರ್ಯಮೇತತ್ಸುರಾದ್ಯೈಃ
ಪರಮಪದಮವಾಪ್ತುಂ ಶಂಕರಾಜ್ಞಾವಶೇನ ॥೧೫೧॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಆದಿಶೇಷಕೃತ
ಶ್ರೀಶಿವಸಹಸ್ರನಾಮಕಥನಂ ನಾಮ ದ್ವಿತೀಯೋಽಧ್ಯಾಯಃ

---

ಅಯ್ಯಾ ಜೈಗೀಷವ್ಯಮುನಿಯೇ! ಇಂದು, ಈರೀತಿ ನಿನಗೆ ಈ ಶಿವಸಹಸ್ರ ನಾಮವನ್ನು ಹೇಳಿದೆನು. ಈ ನಾಮವು ಶ್ರೇಷ್ಠವಾದ ಶಿವನ ಅಡಿದಾವರೆಗಳನ್ನು ಪೂಜಿಸುವುದರಲ್ಲಿ ನಿನಗೆ ಸಾಧನವಾಗಿರುವುದು. ಆ ಶಂಕರನ ಅಪ್ಪಣೆಗೆ ಅಧೀನರಾಗಿ ಉತ್ತಮ ಪದವಿಯನ್ನು (ಮೋಕ್ಷವನ್ನು) ಪಡೆಯುವುದಕ್ಕೋಸ್ಕರ ಶ್ರೇಷ್ಠರಾದ ಮುನಿಗಳ ಸಮೂಹವೂ, ದೇವತೆಗಳೇ ಮೊದಲಾದವರೂ ಇದನ್ನು ಅವಶ್ಯವಾಗಿ ಧರಿಸಬೇಕೆಂದು ಪುನಃ ಷಣ್ಮುಖನು ಜೈಗೀಷವ್ಯನಿಗೆ ಹೇಳಿದನು. ॥೧೫೧॥

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಆದಿಶೇಷನಿಂದ ಮಾಡಲ್ಪಟ್ಟ ಶ್ರೀ ಶಿವಸಹಸ್ರನಾಮ ಕಥನವೆಂಬ
ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ತೃತೀಯೋಽಧ್ಯಾಯಃ

॥ ಜೈಗೀಷವ್ಯ ಉವಾಚ ॥

ಶ್ರುತಂ ತೇ ತಾರಕಾರಾತೇ ನಾಮಸಾಹಸ್ರಮುತ್ತಮಂ ।
ವಿಶೇಷತಃ ಶೇಷಕೃತಮಶೇಷಾಘನಿವಾರಕಂ ॥೧॥

ಪ್ರಶ್ನಮೇನಂ ವದಾದ್ಯ ತ್ವಂ ಪೃಚ್ಛೇ ತ್ವಾಂ ವೈ ಕುತೂಹಲಾತ್ ।
ಕೃತತ್ರೇತಾದ್ವಾಪರೇಷು ಸರ್ವಧರ್ಮಪ್ರಕಾಶಿಷು ॥೨॥

ಯುಗೇಷ್ವಪಿ ಮಹಾದೇವೇ ಭಕ್ತಿರ್ನೈರಪ್ಯೋಪಜಾಯತೇ ।
ಕಥಂ ಕಲಿಯುಗೇ ಘೋರೇ ನಷ್ಟಧರ್ಮೇ ಮತಿಃ ಶಿವೇ ॥೩॥

---

ತಾರಕಾಸುರ ಶತ್ರುವಾದ ಎಲೈ ಕುಮಾರಸ್ವಾಮಿಯೇ! ಸಕಲಪಾಪ ನಾಶಕವೂ, ವಿಶೇಷವಾಗಿ ಆದಿಶೇಷನಿಂದ ಹೇಳಲ್ಪಟ್ಟುದೂ, ಆದ ಉತ್ತಮವಾದ ಈ ಶಿವಸಹಸ್ರನಾಮಗಳನ್ನು ನಿನ್ನನುಗ್ರಹದಿಂದ ಕೇಳಿದೆನು. ಸ್ವಾಮಿಯೇ! ಕುತೂಹಲದಿಂದ ಕೇಳುವ ಈ ಪ್ರಶ್ನೆಯೊಂದಕ್ಕೆ ಉತ್ತರಕೊಡುವವನಾಗು ? ಸಕಲ ಧರ್ಮಗಳನ್ನೂ ಪ್ರಕಾಶಪಡಿಸುವ ಕೃತ, ತ್ರೇತ ಮತ್ತು ದ್ವಾಪರಯುಗಗಳಲ್ಲಿಯೇ ಸಾಮಾನ್ಯವಾಗಿ ಆ ಪರಶಿವನಲ್ಲಿ ಭಕ್ತಿಯುಂಟಾಗುವದು ವಿರಳವಾಗಿದೆ. ಹೀಗಿರುವಾಗ ಧರ್ಮಗಳೆಲ್ಲವೂ ನಾಶವಾಗಿರುವ ಈ ಘೋರವಾದ ಕಲಿಯುಗದಲ್ಲಿ ಮಾನವರಿಗೆ ಪರಶಿವನಲ್ಲಿ ಹೇಗೆ ಮನಸ್ಸುಂಟಾಗುತ್ತದೆ? ॥೧-೨-೩॥

ಕಥಂ ನಾ ಕಲಿಜಾನಾಂ ತು ಶಿವಭಕ್ತಿರ್ಭವಿಷ್ಯತಿ ।
ಸಂಕರಾಣಾಂ ಜಾರಜಾನಾಂ ದುರ್ಬೀಜಾನಾಂ ವಿಶೇಷತಃ ॥೪॥

ವರ್ಣಾಶ್ರಮಾದಿಹೀನಾನಾಮವೇದಾನಾಂ ಶಿವಾತ್ಮಜ ।
ಭಕ್ತಿಃ ಕಥಂ ಭವೇಚ್ಛಂಭೌ ಸಾಕ್ಷಾನ್ಮುಕ್ತಿಪ್ರದಾಯಿನೀ ॥೫॥

ಯಾ ಸಾನಂತತಪೋಲಭ್ಯಾ ಅಲಭ್ಯೈವ ದುರಾತ್ಮನಾಂ ।
ಯಃ ಶಿವಾನುಗ್ರಹೀತಶ್ಚೇತ್ಸ ಭಕ್ತೇಃ ಪಾತ್ರತಾಮಿಯಾತ್ ॥೬॥

ಸಾ ನ ಧರ್ಮತಪೋಲಭ್ಯಾ ಅಲಭ್ಯಾ ಯೋಗಿನಾಮಪಿ ।
ನೋರ್ವರಾದ್ವಾನತೋ ಲಭ್ಯಾ ಯದತ್ಯುತ್ತಮದಾನತಃ ॥೭॥

ನ ರೌಪ್ಯಕುಪ್ಯದಾನೈರ್ವಾ ಸಾಂಬರಾದಿ ಪ್ರದಾನತಃ ।
ನ ತುಲಾಪುರುಷಾದ್ಯೈರ್ವಾ ದಶಧೇನುಪ್ರದಾನತಃ ॥೮॥

---

ಎಲೈ ಶಿವಕುಮಾರನೇ! ಕಲಿಯುಗದಲ್ಲಿ ಹುಟ್ಟುವವರಿಗೆ ಹೇಗೆತಾನೇ ಶಿವನಲ್ಲಿ ಭಕ್ತಿಯುಂಟಾದೀತು? ವಿಶೇಷವಾಗಿ ಜಾತಿಸಾಂಕರ್ಯದಿಂದ ಜನಿಸಿದವರೂ, ವ್ಯಭಿಚಾರಜಾತರೂ, ಹೀನಬೀಜಜನ್ಯರೂ, ವರ್ಣಾಶ್ರಮಧರ್ಮಬಾಹಿರರೂ, ವೇದವನ್ನಭ್ಯಾಸಿಸದವರೂ, ಆದ ಈ ಕಲಿಯುಗದ ಜನಗಳಿಗೆ ಸಾಕ್ಷಾನ್ಮುಕ್ತಿಯನ್ನುಂಟುಮಾಡುವಂತಹ ಆ ಪರಶಿವನಲ್ಲಿ ಭಕ್ತಿಯು ಹೇಗೆ ಉಂಟಾಗುವುದು? ॥೪-೫॥

ಆ ಪರಶಿವಭಕ್ತಿಯು, ಅನೇಕತಪಃಫಲಗಳಿಂದ ಲಭ್ಯವಾಗುವಾಗ ದುಷ್ಟರಿಗೆ ಹೊಂದಲು ಅದು ಅಸಾಧ್ಯವೇ ಆಗಿರುವುದು. ಶಿವನಿಂದ ಅನುಗ್ರಹಪಡೆದವನೇ ಆ ಶಿವಭಕ್ತಿಗೆ ಪಾತ್ರನಾಗುವನು. ಆ ಶಿವಭಕ್ತಿಯಾದರೋ, ಧರ್ಮ, ಅಥವಾ ತಪಸ್ಸುಗಳಿಂದ ಎಂದಿಗೂ ಲಭ್ಯವಲ್ಲವು. ಅದು ಯೋಗಿಗಳಿಂದಲೂ ಹೊಂದಲಸಾಧ್ಯವಾಗಿರುವುದು. ಅತ್ಯುತ್ತಮವೆಂದು ಹೇಳುವ ಶ್ರೇಷ್ಠವಾದ ದಾನದಿಂದಲೂ ಕೂಡ ಅದು ದೊರೆಯಲಾರದು. ॥೬-೭॥

ರಜತ ಕರಂಡಕಾದಿಗಳನ್ನೂ, ವಸ್ತ್ರಾದಿ ಮಹಾದಾನಗಳನ್ನೂ ಮಾಡಿದರೂ, ಸುವರ್ಣ ತುಲಾಭಾರಾದಿಗಳಿಂದಲೂ, ಹತ್ತು ಗೋದಾನಗಳಿಂದಲೂ, ಪರಶಿವಭಕ್ತಿಯು ಮಾನವನಿಗೆ ಲಭಿಸಲಾರದು. ॥೮॥

ನ ಗೋಸಹಸ್ರದಾನೈರ್ವಾ ನೋ ವಾಜಿವರದಾನತಃ ।
ನ ರಥಾಯುತದಾನೈರ್ವಾ ಹಿರಣ್ಯಾದಿಕದಾನತಃ ॥೯॥

ನ ಸತ್ರಾಹೀನ ಏಕಾಹ ದಕ್ಷದೀಕ್ಷೋಪಸಂಘಕೈಃ ।
ಸಾ ಭಕ್ತಿಃ ಶಾಂಭವೀ ಜಾತು ಭವಿಷ್ಯತಿ ಕದಾಚನ ॥೧೦॥

ನಾನ್ನತೋಯಪ್ರದಾನೈರ್ವಾ ವಿಪ್ರಗ್ರಾಮಪ್ರದಾನತಃ ।
ಪ್ರಪಾಮಂಡಪವಿಸ್ತಾರ ಛಾಯಾವನಸುರೋಪಣೈಃ ॥೧೧॥

ಸರಸ್ತೀರಬಂಧೈರ್ವಾ ಸಾ ಭಕ್ತಿಃ ಶಾಂಭವೀ ಭವೇತ್ ।
ಯೋ ಮಹಾದೇವ ಪಾದಾಬ್ಜಧ್ಯಾನಾನಂದೈಕಮೇದುರಃ ॥೧೨॥

ತೇನೈವ ಲಭ್ಯಾ ಸಾ ಭಕ್ತಿಃ ಸಾಕ್ಷಾನ್ಮೋಕ್ಷಪ್ರದಾಯಿನೀ ।
ನ ವರ್ಣಾಶ್ರಮಧರ್ಮೈರ್ವಾ ನ ವಾಚಾರಾನುಪಾಲನೈಃ ॥೧೩॥

ಆಭಿಜಾತ್ಯೇನ ಶೀಲೇನ ಸಾ ನ ಲಭ್ಯಾ ಕಥಂ ಚ ನ ।
ನ ವೇದಾಂತಾದಿವಾಕ್ಯೈರ್ವಾ ನ ಶಬ್ದೈಸ್ತರ್ಕಕೋಟಿಭಿಃ ॥೧೪॥

---

ಸಾವಿರಾರು ಗೋದಾನ, ಶ್ರೇಷ್ಠವಾದ ತುರಗದಾನ, ಹತ್ತುಸಾವಿರ ರಥದಾನ, ಅಥವಾ ಸುವರ್ಣ ದಾನ, ಯಾಗಸಂಬಂಧಿಯಾದ ಒಂದುದಿನದ ಸಮರ್ಥವಾದ ದೀಕ್ಷಾದಿಸಂಗ್ರಹಗಳಿಂದಲಾದರೂ ಸಹ ಆ ಶಂಭುವಿನ ಭಕ್ತಿಯು ಯಾವಾಗಲೂ ಒಂದುಬಾರಿಯಾದರೂ ಉಂಟಾಗಲಾರದು. ॥೯-೧೦॥

ಅನ್ನದಾನವಾಡುವುದರಿಂದಲಾಗಲೀ, ಬ್ರಾಹ್ಮಣರಿಗೆ ಗ್ರಾಮಗಳನ್ನು ದಾನವಾಡುವುದರಿಂದಲಾಗಲೀ, ಪಾನೀಯಶಾಲಿಕೆಗಳನ್ನೂ (ಅರವಟ್ಟಿಗೆಗಳನ್ನೂ) ನೆರಳುಳ್ಳ ತೋಪುಗಳನ್ನೂ, ನಿರ್ಮಿಸುವುದರಿಂದಲಾಗಲೀ, ಅಥವಾ ಕೆರೆಕಟ್ಟೆಗಳ ದಡಗಳನ್ನು ಕಟ್ಟುವುದರಿಂದಲಾಗಲೀ ಆ ಶಂಕರನಲ್ಲಿ ಭಕ್ತಿಯುಂಟಾಗುವುದಿಲ್ಲ. ಅಂಥ ಮಹಾದೇವನ ಅಡಿದಾವರೆಗಳ ಧ್ಯಾನಾನಂದದಿಂದ ಕೂಡಿರುವನಿಗೆ ಮಾತ್ರ ಆ ಭಕ್ತಿಯುಂಟಾಗುತ್ತದೆ. ॥೧೧-೧೨॥

ಅಂತಹವನಿಂದಲೇ ಸಾಕ್ಷಾನ್ಮೋಕ್ಷವನ್ನುಂಟುಮಾಡುವ ಆ ಶಿವಭಕ್ತಿಯು ಹೊಂದಲ್ಪಡುವುದು. ಇತರ ವರ್ಣಾಶ್ರಮಧರ್ಮಗಳು, ಆಚಾರಗಳನ್ನು ನಡೆಸುವುದು, ಉತ್ತಮಕುಲಜನ್ಮ, ಸ್ವಭಾವ ಮುಂತಾದವುಗಳಿಂದ ಹೇಗೂ ಹೊಂದಲ್ಪಡುವುದಿಲ್ಲ.

ನ ಮೀಮಾಂಸಾಸಹಸ್ರೈರ್ವಾ ನ ಮೀಮಾಂಸ್ಯಾ ಕಥಂಚನ ।
ಪ್ರಸಾದಃ ಶಾಂಕರೋ ಯಸ್ಯ ತಸ್ಯ ಭಕ್ತಿರ್ಮಹೇಶ್ವರೇ ॥೧೫॥

ಯಂ ಚಿಂತಯತಿ ಗೌರೀಶೋ ಮೋಚಯಾಮೀತಿ ಪಾಶತಃ ।
ತಂ ಭಕ್ತಿಭಾಗ್ಯಧೌರೇಯಂ ಕುರುತೇ ಕರುಣಾಕರಃ ॥೧೬॥

ಶರಣಾಗತಪಾಲಾಯ ಶಿವಾಯ ಪರಮಾತ್ಮನೇ ।
ಯೋ ನಮಸ್ಕುರುತೇ ಪ್ರೀತ್ಯಾ ಸ ಮುಕ್ತೋ ಮೋಚಯೇತ್ಪರಾನ್ ॥೧೭॥

ದ್ವಿಜೋ ವಾ ಶ್ವಪಚೋ ವಾಪಿ ನ ತಸ್ಯ ಸುಮಹಾನಣುಃ ।
ಭಾವಪ್ರೀತೋ ಮಹಾದೇವೋ ಭಾವದಃ ಪರಮೇಶ್ವರಃ ॥೧೮॥

ನ ತಸ್ಯ ಕಶ್ಚಿನ್ಮಿತ್ರೋ ವಾ ಶತ್ರುರ್ವಾಸ್ತಿ ಕದಾಚನ ।
ಸರ್ವೇ ಸುರಾಸುರಾ ವಿಪ್ರಾಃ ಪಶವಸ್ತದ್ವಶೇ ಸ್ಥಿತಾಃ ॥೧೯॥

---

ವೇದಾಂತಗಳ ವಾಕ್ಯವೇ ಮೊದಲಾದವುಗಳಿಂದಲೂ, ಶಬ್ದಶಾಸ್ತ್ರಗಳಿಂದಲೂ, ತರ್ಕಶಾಸ್ತ್ರದ ಕೋಟಿಗಳಿಂದಲೂ, ಸಾವಿರಾರು ಮೀಮಾಂಸಾಶಾಸ್ತ್ರವಿಚಾರಗಳಿಂದಲೂ ಸಹ ಖಂಡಿತವಾಗಿಯೂ ಆ ಶಿವಭಕ್ತಿಯು ಹೊಂದಲ್ಪಡುವುದು ಅಸಾಧ್ಯವು. ಆ ಶಂಕರನ ಅನುಗ್ರಹವಿರುವನಿಗೆ ಮಾತ್ರ ಮಹೇಶ್ವರನಲ್ಲಿ ಭಕ್ತಿಯುಂಟಾಗುವುದು. ॥೧೩-೧೪-೧೫॥

ಜನನ ಮರಣರೂಪವಾದ ಈ ಸಂಸಾರಬಂಧನದಿಂದ ಯಾರನ್ನು ಬಿಡುಗಡೆ ಮಾಡುತ್ತೇನೆಂದು ಆ ಗೌರೀರಮಣನು ಯೋಚಿಸುತ್ತಾನೆಯೋ, ಅವನನ್ನೇ ಆ ದಯಾಸಾಗರನು ಭಕ್ತಿಯೆಂಬ ಭಾಗ್ಯಕ್ಕೆ ಆಶ್ರಯನನ್ನಾಗಿ ಮಾಡುತ್ತಾನೆ. ಶರಣು ಬಂದವರನ್ನು ಪಾಲಿಸುವ ಪರಮಾತ್ಮನಾದ ಪರಶಿವನಿಗೆ ಪ್ರೀತಿಯಿಂದ ನಮಸ್ಕಾರ ಮಾಡುವವನು ತಾನು ಮುಕ್ತನಾಗಿ ಮತ್ತೊಬ್ಬರನ್ನೂ ಬಂಧನದಿಂದ ಬಿಡಿಸುತ್ತಾನೆ. ॥೧೬-೧೭॥

ಬ್ರಾಹ್ಮಣನಾಗಲೀ, ಚಂಡಾಲನೇ ಆಗಲಿ, ತುಂಬಾ ದೊಡ್ಡವನಾಗಲೀ ಅಥವಾ ಪರಮಾಣುವೇ ಆಗಲಿ, ಅವನಿಗೆ ತಾರತಮ್ಯವಿಲ್ಲ. ಭಾವನೆಯಿಂದ ಪ್ರೀತಿ ಹೊಂದುವ ಪರಮೇಶ್ವರನು, ಅವರವರ ಇಷ್ಟಾರ್ಥಗಳನ್ನು ಕೊಡುತ್ತಾನೆ. ಅವನಿಗೆ ಸ್ನೇಹಿತರಾಗಲಿ, ಶತ್ರುವಾಗಲೀ ಯಾರೂ ಇಲ್ಲ. ಎಲ್ಲಾ ದೇವ, ದಾನವ

ಸ ಏವ ದೇವದೇವೇಶಃ ಪಶುಪಾಶನಿಕೃಂತನಃ ।
ತಸ್ಯ ಮಾಯಾಮಯಂ ಸರ್ವಂ ಜಗದೇತಚ್ಚರಾಚರಂ ॥೨೦॥

ಯಸ್ಯಾಷ್ಟಮೂರ್ತಿಭಿರ್ವ್ಯಾಪ್ತಂ ತೇನ ಭಿನ್ನಂ ನ ಕಿಂಚನ ।
ಈಶಾವಾಸ್ಯೇತಿ ವೇದೇನ ಸರ್ವಂ ಶಿವಮಯಂ ಜಗತ್ ॥೨೧॥

ಯೋಽಸೌ ಸೂರ‍್ಯಸ್ಥಿತೋ ದೇವಸ್ತಮಿಂಧಯತಿ ತೇಜಸಾ ।
ಯೋಽಸಾವಗ್ನಿಸ್ಥಿತೋ ದೇವೋ ವರ್ಚಸಾ ತಂ ಪ್ರಪೂರಯೇತ್ ॥೨೨॥

ಯೋಽಸೌ ಚಂದ್ರಸ್ಥಿತೋ ದೇವಃ ಕಾಂತ್ಯಾ ತಂ ಸಮಪೂರಯೇತ್ ।
ಯೋಽಸೌ ವಾಯುಸ್ಥಿತೋ ದೇವಃ ಚಲನೈರಾವಿಶೇಚ್ಚ ತಂ ॥೨೩॥

ಯೋಽಸೌ ವಿಷ್ಣುಸ್ಥಿತೋ ದೇವಃ ಪಾಲಕೋ ಶಕ್ತಿತೋ ಯತಃ ।
ಯೋಽಸೌ ಬ್ರಹ್ಮಣಿ ವಿಶ್ವಾತ್ಮಾ ಸೃಷ್ಟಿಕರ್ತಾತ್ಮನಾ ಸ್ಥಿತಃ ॥೨೪॥

---

ಬ್ರಾಹ್ಮಣರೆಲ್ಲರೂ ಪಶುಗಳೆನಿಸಿ, ಅವನ ಅಧೀನದಲ್ಲಿರುವರು. ದೇವಾದಿದೇವನಾದ ಅವನೇ ಪಶುಗಳೆನಿಸಿರುವ ಈ ದೇವಾದಿಗಳ ಬಂಧನವನ್ನು ಕತ್ತರಿಸಿ ಕಾಪಾಡುತ್ತಾನೆ. ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚವೆಲ್ಲವೂ ಅವನ ಮಾಯೆಯಿಂದಲೇ ವ್ಯಾಪಿಸಿದೆ. ॥೧೮-೧೯-೨೦॥

ಪೃಥಿವ್ಯಪ್ತೇಜೋವಾಯ್ವಾಕಾಶಗಳು, ಸೂರ್ಯಚಂದ್ರರು ಮತ್ತು ಯಜಮಾನನೂ ಈ ಎಂಟು ಮೂರ್ತಿಗಳಿಂದ ವ್ಯಾಪ್ತನಾಗಿರುವ ಪರಶಿವನಿಗಿಂತಲೂ ಭಿನ್ನವಾದುದಾವುದೂ ಲೋಕದಲ್ಲಿ ಇಲ್ಲ. "ಈಶಾವಾಸ್ಯಮಿದಂ ಸರ್ವಂ" ಎಂಬ ವೇದವಚನದಂತೆ ಈ ಜಗತ್ತೆಲ್ಲವೂ ಶಿವಮಯವೇ ಆಗಿರುವುದು. ಇದೇ ಪರಮಾತ್ಮನು ಸೂರ್ಯನಲ್ಲಿ ನೆಲಸಿ, ತನ್ನ ತೇಜಸ್ಸಿನಿಂದ ಬೆಳಗಿ, ಲೋಕಕ್ಕೆ ಬೆಳಕನ್ನುಂಟುಮಾಡುತ್ತಾನೆ. ಹಾಗೆಯೇ ಅಗ್ನಿಯಲ್ಲಿ ನೆಲಸಿ ತನ್ನ ವರ್ಚಸ್ಸಿನಿಂದ ಅವನನ್ನು ವಿಶೇಷವಾಗಿ ಪ್ರಕಾಶಪಡಿಸುತ್ತಾನೆ. ॥೨೧-೨೨॥

ಯಾವ ಈ ದೇವನೇ ಚಂದ್ರನಲ್ಲಿದ್ದುಕೊಂಡು ಕಾಂತಿಯಿಂದ ಅವನನ್ನು ಪೂರ್ಣಚಂದ್ರನೆನಿಸುವನು. ವಾಯುವಿನಲ್ಲಿ ನೆಲಸಿ ಚಲನಾದಿಗಳಿಂದ ಅವನನ್ನು ಸರ್ವತ್ರ ಪ್ರೇರಿಸುತ್ತಾನೆ. ವಿಷ್ಣುವಿನಲ್ಲಿ ನೆಲಸಿ, ಜಗದ್ರಕ್ಷಕನೆಂದೂ ಶಕ್ತಿಯುಕ್ತನೆಂದೂ ಹೇಳಿಸಿಕೊಳ್ಳುವನು. ಜಗದ್ರೂಪನಾದ ಈ ಪರಮಾತ್ಮನು ಚತುರ್ಮುಖ

ಯೋಽಸೌ ರುದ್ರಾತ್ಮಕೋ ದೇವಃ ಸ ಕಾಲೇ ಸಂಹರೇಜ್ಜಗತ್ ।
ಯೋಽಸಾವಿಂದ್ರಾತ್ಮಕೋ ದೇವಸ್ತ್ರಿವಿಷ್ಟಪನಿಸಿಷ್ಟಪಃ ॥೨೫॥

ಯೋಽಸೌ ಭೂಮಿಮಯೋ ದೇವೋ ಧತ್ತೇ ಸರ್ವಂ ಚರಾಚರಂ ।
ಯೋಽಸೌ ಸವರುಣೋ ದೇವ ಅಪಃ ಪಾತಿ ತ್ವಿಷಾಂ ಪತಿಃ ॥೨೬॥

ಯೋಽಸಾವಾಕಾಶಗೋ ದೇವೋ ವ್ಯಾಪ್ಯ ತಿಷ್ಠತಿ ರೋದಸೀ ।
ಯೋಽಸಾವಪಾಂ ಶರೀರೋಽನ್ಯೈ ನದೀನದಗಣಾಧಿಪಃ ॥೨೭॥

ಯೋಽಸೌ ಸರ್ವಾತ್ಮಕೋ ದೇವಃ ಸರ್ವಭೂತಗುಹಾಶಯಃ ।
ಪುರುಷಃ ಪರಿಪೂರ್ಣಾತ್ಮಾ ತೇನ ಪೂರ್ಣಮಿದಂ ಜಗತ್ ॥೨೮॥

ತಸ್ಯೈವ ಕೃಪಯಾ ಭಕ್ತಿರ್ಜಾಯತೇ ನೇತರೇಚ್ಛಯಾ ।
ಭಕ್ತಿಜ್ಞಾನಂ ವಿಜಾಯೇತ ಸೈವ ಭಕ್ತಿಪ್ರಸಾದತಃ ॥೨೯॥

---

ಬ್ರಹ್ಮನಲ್ಲಿ ನೆಲಸಿ ಪ್ರಪಂಚದ ಸೃಷ್ಟಿಕರ್ತೃವೆನಿಸಿಕೊಳ್ಳುವನು. ಹಾಗೆಯೇ ರುದ್ರ ರೂಪಿನಿಂದ ತೋರುತ್ತಾ ಪ್ರಳಯಕಾಲದಲ್ಲಿ ಚರಾಚರಾತ್ಮಕವಾದ ಪ್ರಪಂಚವನ್ನೆಲ್ಲಾ ಸಂಹಾರಮಾಡುವನು. ಸ್ವರ್ಗದಲ್ಲಿ ಅಧಿಪತಿಯಾಗಿರುವ ಇಂದ್ರರೂಪಿನಿಂದ ಗೋಚರಿಸುತ್ತಿರುವನು. ಈತನೇ ಭೂಮಿರೂಪನಾಗಿ ಸಮಸ್ತ ಸ್ಥಾವರಜಂಗ ಮಾತ್ಮಕವಾದ ಜಗತ್ತನ್ನೆಲ್ಲಾ ಹೊತ್ತಿರುವನು. ಈ ದೇವನೇ ವರುಣರೂಪಿನಿಂದ ಜಲರಾಶಿಯನ್ನು ರಕ್ಷಿಸುತ್ತಿರುವನು. ತೇಜಸ್ಸುಗಳಿಗೆ ಒಡೆಯನಾದ ಇವನಿಂದಲೇ ಸರ್ವತೇಜಸ್ಸೂ ಇಂದು ನಮ್ಮನ್ನು ರಕ್ಷಿಸುತ್ತಿರುವುದು. ॥೨೩-೨೪-೨೫-೨೬॥

ಪೂಜ್ಯನಾದ ಈ ದೇವನೇ ಆಕಾಶದಲ್ಲಿ ಸಂಚರಿಸುತ್ತಾ ಭೂಮ್ಯಂತರಿಕ್ಷ ಗಳನ್ನು ವ್ಯಾಪಿಸಿರುವನು. ಅಲ್ಲದೇ ನದಿಗಳೂ ಮತ್ತು ನದಗಳೂ ಇವುಗಳ ಒಡೆಯನಾದ ವರುಣನ (ನೀರಿನ) ಶರೀರವೂ ತಾನೇ ಆಗಿರುವನು. ಸರ್ವಜಗದ್ರೂಪಿ ಯಾದ ಈ ದೇವನೇ ಸಕಲ ಭೂತಗಳೆಂಬ ಗುಹೆಗಳಲ್ಲಿಯೂ ನೆಲಸಿರುವನು. ಪುರುಷನೂ, ಪರಿಪೂರ್ಣರೂಪನೂ ಆದ ಈ ದೇವದೇವನಿಂದ ಸಕಲ ಜಗತ್ತೂ ಪರಿಪೂರ್ಣವಾಗಿರುವುದು. ॥೨೭-೨೮॥

ಆದೇವನ ದಯೆಯಿಂದಲೇ ಭಕ್ತಿಯುಂಟಾಗುವುದು. ಇತರ ಯಾರ ಇಚ್ಛೆಯಿಂದಲೂ ಅದು ದೊರೆಯುವುದಿಲ್ಲ. ಭಕ್ತಿರೂಪವಾದ ದೇವದೇವನ ಅನು

ಸ್ವತಂತ್ರಸ್ಯ ಮಹೇಶಸ್ಯ ನಿರಿಚ್ಛಸ್ಯ ಪಿನಾಕಿನಃ ।
ಭಕ್ತ್ಯೈವ ಲಭ್ಯತೇ ಮುಕ್ತಿರ್ನಾನ್ಯಥಾ ವೇದವಾದತಃ ॥೩೦॥

ಯಸ್ಯೈವ ಆತ್ಮಾ ವೃಣುತೇ ಇತಿ ಮಂತ್ರಾನುಶಾಸನಾತ್ ।
ಪರಾಂಚಿ ಖಾನಿ ದೇವೇಶೋ ವ್ಯತೃಣತ್ಪರಮೇಶ್ವರಃ ॥೩೧॥

ತಸ್ಮಾದ್ಬ್ರಹ್ಮಾದಯೋ ದೇವಾಃ ಮೋಹಿತಾಃ ಶಿವಮಾಯಯಾ ।
ಕಶ್ಚಿದ್ಧೀರೋ ಮಹಾದೇವ ಪ್ರಸಾದಾದೇವ ಶೂಲಿನಃ ॥೩೨॥

ಪ್ರತ್ಯಗಾತ್ಮಾನಮಿಚ್ಛೇತ ಶಿವಮೇವ ಸನಾತನಂ ।
ಸರ್ವಭೂತೇಷ್ವಸಂಗಂ ತಂ ಲಿಂಗಸ್ಥಂ ವಾಪಿ ಭಕ್ತಿತಃ ॥೩೩॥

ತೇನೈವ ಸುಕರೋ ಮಾರ್ಗೋ ದರ್ಶಿತಃ ಶೂಲಪಾಣಿನಾ ।
ಸರ್ವೇಷಾಂ ಭಕ್ತಿಲಾಭಾಯ ಮುಕ್ತಯೇಽಪಿ ಚ ಶಾಶ್ವತಃ ॥೩೪॥

---

ಗ್ರಹದಿಂದಲೇ ಭಕ್ತಿಜ್ಞಾನವೂ ದೊರೆಯುತ್ತದೆ. ಸ್ವತಂತ್ರನೂ, ಮಹೇಶ್ವರನೂ, ಇಚ್ಛಾಶೂನ್ಯನೂ ಆದ ಪಿನಾಕಪಾಣಿಯಾದ ಆ ಮಹಾದೇವನ ಭಕ್ತಿಯಿಂದಲೇ ಮುಕ್ತಿಯುಂಟಾಗುವುದೇ ವಿನಾ ಇತರ ವೇದವಾದಗಳಾವುದರಿಂದಲೂ ಮೋಕ್ಷವು ದೊರೆಯಲಾರದು. ॥೨೯-೩೦॥

'ಯಸ್ಯೈವ ಆತ್ಮಾ ವೃಣುತೇ' ಎಂಬ ಮಂತ್ರದ ಶಾಸನದಿಂದ ಆತ್ಮನು ಯಾರಿಗೆ ಒಲಿಯುತ್ತಾನೆಯೋ ಅವರಿಗೇನೇ ದೇವದೇವನೂ, ಪರಮೇಶ್ವರನೂ ಉತ್ತಮವಾದ ಸ್ಥಾನವನ್ನು ದೊರಕಿಸುತ್ತಾನೆ. ಆದ್ದರಿಂದಲೇ ಬ್ರಹ್ಮನೇ ಮೊದಲಾದ ದೇವತೆಗಳೆಲ್ಲರೂ ಪರಶಿವನ ಮಾಯೆಯಿಂದ ಮೋಹಗೊಂಡಿರುವರು. ಆ ಶೂಲಾಯುಧಧಾರಿಯಾದ ಮಹಾದೇವನ ಅನುಗ್ರಹದಿಂದಲೇ ಮಾನವನು, ॥೩೧-೩೨॥

ಪ್ರತ್ಯಗ್ರೂಪನೂ, ಶಿವನೂ, (ಮಂಗಳಸ್ವರೂಪನೂ) ಸನಾತನನೂ ಸಕಲ ಪ್ರಾಣಿಗಳಲ್ಲಿಯೂ ಸಂಬಂಧರಹಿತನೂ, ಲಿಂಗಾಂತರ್ಗತನೂ ಆದ ಆ ಶಂಕರನನ್ನೇ ಭಕ್ತಿಯಿಂದ ಸೇವಿಸಲು ಇಚ್ಛಿಸಿಯಾನು. ಶೂಲಾಯುಧಪಾಣಿಯಾದ ಆ ಪರಮೇಶ್ವರನಿಂದಲೇ ಎಲ್ಲರಿಗೂ ಭಕ್ತಿಯೊದಗಿ ಶಾಶ್ವತವಾದ ಮೋಕ್ಷಪ್ರಾಪ್ತಿಗೋಸ್ಕರ ಅತಿ ಸುಲಭವಾದ ಮಾರ್ಗವು ತೋರಿಸಲ್ಪಡುವುದು. ॥೩೩-೩೪॥

ಅಗ್ನಿರಿತ್ಯಾದಿಭಿರ್ಮಂತ್ರೈಸ್ತ್ರಿಕಾಲಂ ಭಸ್ಮಧಾರಣಂ ।
ತ್ರಿಯಾಯುಷೇಣ ಮಂತ್ರೇಣ ತ್ರಿಪುಂಡ್ರಸ್ಯ ಚ ಧಾರಣಂ ॥೩೫॥

ತ್ರಿಯಂಬಕೇನ ಮಂತ್ರೇಣ ರುದ್ರಾಕ್ಷಾಣಾಂ ಚ ಧಾರಣಂ ।
ಪಂಚಾಕ್ಷರೇಣ ಮಂತ್ರೇಣ ತ್ರಿಕಾಲಂ ಲಿಂಗಪೂಜನಂ ॥೩೬॥

ರುದ್ರಾಧ್ಯಾಯಜಪಶ್ಚೈವ ತ್ರಿಕಾಲಂ ಸಾವಧಾನತಃ ।
ಬಿಲ್ವಪತ್ರೈರ್ಮಹಾದೇವಪೂಜನಂ ಸೋಮವಾಸರೇ ॥೩೭॥

ಕಾಲಾಷ್ಟಮ್ಯಾಂ ಮಹಾದೇವಂ ಬಿಲ್ವಪತ್ರೈಶ್ಚ ಪೂಜಯೇತ್ ।
ಚತುರ್ದಶ್ಯಾಮಪಾಮಾರ್ಗೈರ್ನಿಶಿ ಬಿಲ್ವೈಶ್ಚ ಪೂಜನಂ ॥೩೮॥

ಅಸ್ತದೋಷೇ ಪ್ರದೋಷೇ ಚ ಬಿಲ್ವೈರ್ಲಿಂಗಸ್ಯ ಪೂಜನಂ ।
ಶಿವಕ್ಷೇತ್ರನಿವಾಸಶ್ಚ ಅವಿಮುಕ್ತೇ ವಿಶೇಷತಃ ॥೩೯॥

---

"ಅಗ್ನಿರಿತಿಭಸ್ಮ" ಮುಂತಾದ ಮಂತ್ರಗಳಿಂದ ಪ್ರಾತರ್ಮಧ್ಯಾಹ್ನಸಾಯಂಕಾಲರೂಪವಾದ ಮೂರು ಕಾಲಗಳಲ್ಲಿಯೂ ಭಸ್ಮಧಾರಣೆ ವಿಹಿತವಾಗಿದೆ. "ತ್ರಿಯಾಯುಷಂ" ಎಂಬ ಮಂತ್ರದಿಂದ ಭಸ್ಮತ್ರಿಪುಂಡ್ರಧಾರಣೆಯೂ, "ತ್ರಿಯಂಬಕಂ" ಎಂಬ ಮಂತ್ರದಿಂದ ರುದ್ರಾಕ್ಷಗಳನ್ನು ಧರಿಸುವುದೂ, ಶಿವಪಂಚಾಕ್ಷರಮಂತ್ರಪೂರ್ವಕವಾಗಿ ಮೂರು ಕಾಲಗಳಲ್ಲಿಯೂ ಶಿವಲಿಂಗಾರ್ಚನೆಯೂ, ಸಾವಧಾನವಾಗಿ ರುದ್ರಾಧ್ಯಾಯಮಂತ್ರವನ್ನು ಜಪಮಾಡುವುದೂ, ಸೋಮವಾರದ ದಿನ ಬಿಲ್ವದಳಗಳಿಂದ ಮಹಾದೇವನನ್ನು ಪೂಜೆಮಾಡುವುದೂ, ಅಂತೆಯೇ ಕೃಷ್ಣಾಷ್ಟಮೀ ದಿನ ಬಿಲ್ವಪತ್ರೆಗಳಿಂದ ಮಹಾದೇವನನ್ನು ಪೂಜಿಸುವುದೂ ವಿಹಿತವಾಗಿರುವುದು. ಚತುರ್ದಶೀ ದಿವಸ ಹಗಲು ಅಪಾಮಾರ್ಗ (ಉತ್ತರಣೆ)ಗಳಿಂದಲೂ, ರಾತ್ರಿಯಲ್ಲಿ ಬಿಲ್ವದಗಗಳಿಂದಲೂ ಸಹ ಮಹಾದೇವನನ್ನು ಪೂಜೆಮಾಡಬೇಕು. ॥೩೫-೩೬-೩೭-೩೮॥

ಸಕಲ ದೋಷಗಳೂ ನಾಶವಾಗುವ ಪ್ರದೋಷವೇಳೆಯಲ್ಲಿ ಬಿಲ್ವದಳಗಳಿಂದ ಲಿಂಗಪೂಜೆಯೂ, ಶಿವಕ್ಷೇತ್ರಗಳಲ್ಲಿ ನೆಲಸುವುದೂ, ಅದರಲ್ಲಿಯೂ ವಿಶೇಷವಾಗಿ ಅವಿಮುಕ್ತಕ್ಷೇತ್ರವಾಸವೂ, ತಮ್ಮ ಭಾಗ್ಯ ಮತ್ತು ಭೋಗಾನುಗುಣವಾಗಿ ಶಾಂಭವರನ್ನು ಅಭಿರುಚಿಯಿಂದ ಅರ್ಚಿಸುವುದೂ, ಶಿವನ ಸಂಬಂಧವಾದ ಉತ್ಸವಗಳೇ

ಶಿವಭಕ್ತಾರ್ಚನಂ ವಾಪಿ ಭೋಗಭಾಗ್ಯೈರ್ಯಥಾರುಚಿಃ ।
ಶಿವೋತ್ಸವಾದಿದರ್ಶಶ್ಚ ಶಿವಾಶ್ರಮನಿಷೇವಣಂ ॥೪೦॥

ಶಿವಧ್ಯಾನಂ ಮಹಾಮೂರ್ತೇಃ ಸಾಂಬಸ್ಯ ಚ ವಿಶೇಷತಃ ।
ನೃತ್ಯಮಾನಂ ತ್ರಯೀನೇತ್ರಂ ಸಾಂಬಂ ಚಂದ್ರಕಲಾಧರಂ ॥೪೧॥

ನೀಲಕಂಠಂ ಚ ಸಾನಂದಂ ನಂದಿಭೃಂಗಿ ನಿಷೇವಿತಂ ।
ಗಣೇಶಸ್ಕಂದಜನಕಂ ಧ್ಯಾಯೇದ್ದೇವಂ ಮಹೇಶ್ವರಂ ॥೪೨॥

ಕ್ಷಣಾರ್ಧಂ ವಾ ತದರ್ಧಂ ವಾ ಸಮುಕ್ತೋ ಭವತಿ ಧ್ರುವಂ ।
ಏವಂ ಭಕ್ತಿರ್ವಿರೂಪಾಕ್ಷೇ ಯಸ್ಯ ಸಾಧಾರಣೀ ಭವೇತ್ ॥೪೩॥

ಸ ತರತ್ಯೇವ ಸಂಸಾರಮಸಾರಂ ಜನ್ಮಮೃತ್ಯುದಂ ।
ಸಾ ಕಥಂ ಜಾಯತೇ ಸ್ಕಂದ ಕಲಿಸ್ಥಾನಾಂ ವಿಶೇಷತಃ ॥೪೪॥

---

ಮುಂತಾದವುಗಳನ್ನು ನೋಡುವುದೂ, ಶಾಂಭವರ ಆಶ್ರಮಗಳಲ್ಲಿ ನೆಲಸಿ ಸೇವೆ ಮಾಡುವುದೂ ಶಿವಾನುಗ್ರಹವನ್ನು ಒದಗಿಸುವ ಕಾರ್ಯಗಳು. ॥೩೯-೪೦॥

ಅಂಬಿಕಾರಮಣನೂ, ಮಹಾಮೂರ್ತಿಯುಳ್ಳವನೂ ಆದ ಆ ಪರಶಿವನು ವಿಶೇಷವಾದ ಧ್ಯಾನಗೋಚರನು. ಅವನು ಸದಾ ನರ್ತನಮಾಡುತ್ತಿರುವವನು, ಮುಕ್ಕಣ್ಣನು, ಅಂಬಿಕಾಪತಿಯು, ಚಂದ್ರನ ಕಲೆಗಳನ್ನು ಧರಿಸಿರುವವನು, ವಿಷಭಕ್ಷಣೆಯಿಂದ ಕಪ್ಪಾದ ಕೊರಳುಳ್ಳವನು, ಆನಂದವಾಗಿ ನಂದಿ, ಭೃಂಗಿ ಮುಂತಾದ ಗಣಶ್ರೇಷ್ಠರಿಂದ ಸೇವಿಸಲ್ಪಡುತ್ತಿರುವವನು, ಗಣೇಶ, ಕುಮಾರಸ್ವಾಮಿ ಇವರಿಗೆ ತಂದೆಯಾಗಿರುವವನು. ಪೂರ್ಣ ಐಶ್ವರ್ಯಸಂಪನ್ನನು. ಇಂತಹ ಮಹಾದೇವನನ್ನು ಭಕ್ತಿಯಿಂದ ಸರ್ವದಾ ಧ್ಯಾನಮಾಡಬೇಕು. ॥೪೧-೪೨॥

ಈ ರೀತಿಯಾಗಿ ಅರ್ಧಕ್ಷಣ ಅಥವಾ ತದರ್ಧಕ್ಷಣಕಾಲವಾದರೂ ಆ ವಿರೂಪಾಕ್ಷನಲ್ಲಿ ಸಾಧಾರಣವಾದ ಭಕ್ತಿಯುಳ್ಳವನು ಕೂಡ ಸತ್ಯವಾಗಿಯೂ ಮುಕ್ತನಾಗುವನು. ಅಲ್ಲದೇ ಅವನು ಜನನಮರಣರೂಪದುಃಖಭೂಯಿಷ್ಠವಾಗಿ ಸಾರರಹಿತವಾಗಿರುವ ಈ ಸಂಸಾರವನ್ನೂ ದಾಟುತ್ತಾನೆ. ಓ ಕುಮಾರಸ್ವಾಮಿಯೇ, ಅಂತಹ ಶಿವಭಕ್ತಿಯು ಈ ಕಲಿಯುಗದಲ್ಲಿರುವ ಜನಗಳಿಗೆ ಉಂಟಾಗುವ ಬಗೆ ಹೇಗೆ? ಅದರಲ್ಲಿಯೂ ವಿಶೇಷವಾಗಿ ಅತ್ಯಂತ ಪಾಪಿಗಳೂ, ಸಂಕರ ಜಾತಿಯವರೂ,

ನೃಣಾಮತ್ಯಂತಪಾಪಾನಾಂ ಸಂಕರಾಣಾಂ ದುರಾತ್ಮನಾಂ।
ಕಲೇಃ ಸ್ವರೂಪಮಧುನಾ ವದ ಶಂಕರಸಂಭವ ॥೪೫॥

ತ್ವತ್ತೋ ನಾನ್ಯೋ ರಹಸ್ಯಜ್ಞೋ ಗುರುರ್ಮೇ ನಾಸ್ತಿ ಕಶ್ಚನ।
ತಸ್ಮಾತ್ತ್ವಾಂ ಪರಿಪೃಚ್ಛಾಮಿ ಇಚ್ಛಾ ಪ್ರಶ್ನನಿರೂಪಣೇ ॥೪೬॥

॥ ಸೂತ ಉವಾಚ ॥

ಇತಿ ಮುನಿವಚನಂ ನಿಶಮ್ಯ ಹರ್ಷಾದ್ಭ
ವಸೂನುಃ ಕಮಲಚ್ಛದಾಚ್ಛನೇತ್ರಃ।
ಮುನಿಮಾನಸಹರ್ಷವರ್ಷಧಾರಾ
ವರಕೇಕಾರವವಾಹನೋಽಭ್ಯುವಾಚ ॥೪೭॥

ಇತಿ ಶ್ರೀ ಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ ಭಕ್ತಿಯೋಗೇ
ಕಲಿಸ್ವರೂಪಪ್ರಶ್ನೇ ತೃತೀಯೋಽಧ್ಯಾಯಃ

---

ದುರುಳರೂ ಆಗಿರುವ ಮಾನವರಿಗೆ ಹೇಗೆ ಉಂಟಾದೀತು? ಶಂಕರಸೂನುವಾದ ಸ್ಕಂದದೇವನೆ, ಆ ಕಲಿಸ್ವರೂಪವನ್ನು ಈಗ ನನಗೆ ದಯವಿಟ್ಟು ಹೇಳು. ಕುಮಾರ ಸ್ವಾಮಿಯೇ, ನಿನಗಿಂತಲೂ ರಹಸ್ಯವನ್ನರಿತ ಗುರುವೂ ಬೇರೆ ಯಾರೂ ಇಲ್ಲವಾದ್ದರಿಂದ ಇಷ್ಟಪಟ್ಟು ನಿನ್ನನ್ನು ಪ್ರಶ್ನೆಮಾಡುತ್ತಿರುವೆನು. ಎಂದು ಜೈಗೀಷವ್ಯನು ಕುಮಾರಸ್ವಾಮಿಯನ್ನು ಪ್ರಶ್ನೆಮಾಡಿದನು. ॥೪೩-೪೪-೪೫-೪೬॥

ಈ ರೀತಿಯಾಗಿ ಪ್ರಶ್ನೆಮಾಡಿದ ಜೈಗೀಷವ್ಯಮುನಿಯ ಮಾತುಗಳನ್ನು ಕೇಳಿ ಕಮಲದಳದಂತೆ ಶುಭ್ರವಾದ ಕಣ್ಣುಗಳುಳ್ಳವನೂ, ಶಿವಕುಮಾರನೂ ಮುನಿಗಳ ಮನಸ್ಸಿಗೆ ಸಂತೋಷವೆಂಬ ವೃಷ್ಟಿಧಾರೆಯನ್ನು ಕರೆಯುವವನೂ, ಉತ್ತಮವಾದ ಕೇಕಾನಾದವನ್ನು ಗೈಯುವ ಮಯೂರವಾಹನನೂ ಆದ ಷಣ್ಮುಖಸ್ವಾಮಿಯು ಹೀಗೆ ನುಡಿದನೆಂದು ಸೂತರು ಶೌನಕಾದಿಗಳಿಗೆ ನಿರೂಪಿಸಿದರು. ॥೪೭॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಭಕ್ತಿಯೋಗಪ್ರಕರಣದಲ್ಲಿ ಕಲಿಸ್ವರೂಪಪ್ರಶ್ನರೂಪವಾದ
ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಚತುರ್ಥೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಯದಾಪೃಚ್ಛೇ ತ್ವಯಾ ತಾತ ಪ್ರಶ್ನಮೇನಂ ಮನೋಹರಂ ।
ಸರ್ವಲೋಕೋಪಕಾರಾಯ ಕೈಲಾಸೇ ಶಂಕರಾಲಯೇ ॥೧॥

ಮಣಿಸೌಧಸಹಸ್ರಾಢ್ಯೇ ರತ್ನಪ್ರಾಕಾರವಿಸ್ತೃತೇ ।
ಮಣಿಮಂಡಪಸಾಹಸ್ರೈರನ್ವಿತೇರಚಿತೋಪಲೇ ॥೨॥

ನವರತ್ನಮಣಿಜ್ಯೋತಿಪ್ರಭಾಕೀಲಿತ ದಿಙ್ಮುಖೇ ।
ವೈಡೂರ್ಯಸೂತ್ರಾಂತರಗಕಾಂತಿಕಾಂಚಿತದಿಕ್ತಟೇ ॥೩॥

---

## ನಾಲ್ಕನೆಯ ಅಧ್ಯಾಯ

ಕುಮಾರಸ್ವಾಮಿಯು ಜೈಗೀಷವ್ಯನನ್ನು ಕುರಿತು ಅವನ ಸಂದೇಹಗಳಿಗೆ ಉತ್ತರವಾಗಿ ಹೀಗೆ ನುಡಿದನು—ವತ್ಸ ಜೈಗೀಷವ್ಯನೇ, ನಿನ್ನಿಂದ ಮಾಡಲ್ಪಟ್ಟ ಮನೋಹರವಾದ ಈ ಪ್ರಶ್ನೆಯನ್ನೇ ಹಿಂದೆ ನಾನು ಸಕಲ ಲೋಕೋಪಕಾರ ಕ್ಕೋಸ್ಕರ, ಶಂಕರನ ಆಶ್ರಯಸ್ಥಾನವಾಗಿರುವ ಕೈಲಾಸದಲ್ಲಿ ದೇವದೇವನಾದ ಶಂಕರನನ್ನು ಪ್ರಶ್ನೆಮಾಡಿದೆನು. ಆ ಕೈಲಾಸಪರ್ವತವು ಸಾವಿರಾರು ರತ್ನಗಳಿಂದ ಖಚಿತವಾಗಿ, ರತ್ನಮಯವಾದ ಪ್ರಾಕಾರಗಳಿಂದ ಬಹು ವಿಸ್ತಾರವಾಗಿರುವುದು. ಸಹಸ್ರಮಣಿಮಂಟಪಗಳಿಂದ ಶೋಭಿಸುತ್ತಿರುವುದು. ಉತ್ತಮವಾದ ಚಂದ್ರಕಾಂ ತಾದಿ ಶಿಲೆಗಳಿಂದ ಸ್ಫುರಿಸುತ್ತಿರುವುದು. ನವರತ್ನಗಳು ಮತ್ತು ದಿವ್ಯಮಣಿಗಳ

ಹರಿದ್ಭೂರಮಣೀಗರ್ಭಸಂಛನ್ನಾಮಲಭೂತಲೇ ।
ಮಣಿಗೋಪುರಗೋದ್ಭಾಸಿಕಲಶದ್ಯೋತಿತಾಂಬರೇ ॥೪॥

ಚಲತ್ಪತಾಕಾನಿವಹಸಂವಹೋದ್ಭೂತವಾತಕೇ ।
ಸಭಾವಿಭಾಸಿನಟನಕಂಪಿತಾಖಿಲಭೂತಲೇ ॥೫॥

ಮಣಿಧಾರಾಮಹೋದಾರಾದೂರೀಕೃತ ತಮಸ್ತತಿಃ ।
ಪ್ರಾಕಾರಗೋಪುರೋತ್ತುಂಗಗೋಪುಂಗವವಿರಾಜಿತೇ ॥೬॥

ಮಣಿಗರ್ಭಶಿವಾಗಾರಸಂಶೋಭಿಸುಮನೋಹರೇ ।
ಕೈಲಾಸೇಶಮಹಾಲಿಂಗತುಂಗಧಾಮೋಪಶೋಭಿತೇ ॥೭॥

---

ಬೆಳಕಿನಪ್ರಭೆಯಿಂದ ಸರ್ವ ದಿಕ್ಕುಗಳ ಭಾಗಗಳೆಲ್ಲವೂ ವ್ಯಾಪ್ತವಾಗಿರುವುವು. ವೈಡೂರ್ಯಗಳ ಹಾರಗಳ ಮಧ್ಯದಲ್ಲಿ ಹೊರಡುವ ಕಾಂತಿಯು ದಿಕ್ಪ್ರದೇಶಗಳನ್ನೆಲ್ಲಾ ಬೆಳಗಿಸುತ್ತಿರುವುದು. ॥೧-೨-೩॥

ಹರಿದ್ವರ್ಣಳಾಗಿ ತೋರುತ್ತಿರುವ ಭೂದೇವಿಯು ಗರ್ಭದಲ್ಲಿ ಅಡಗಿರುವ ರತ್ನಗಳ ಕಾಂತಿಯಿಂದ ಭೂಮಂಡಲವೆಲ್ಲವೂ ನಿರ್ಮಲವಾಗಿರುವುದು. ಮಣಿಮಯವಾದ ಗೋಪುರಗಳಲ್ಲಿ ಪ್ರಕಾಶಿಸುವ ರತ್ನಕಲಶಗಳ ಪ್ರಭೆಯು ಆಕಾಶವನ್ನೆಲ್ಲಾ ಬೆಳಗಿಸುತ್ತಿರುವುದು. ಆ ಗೋಪುರಗಳ ಮೇಲೆ ಕಟ್ಟಿರುವ ಪತಾಕೆಗಳ ಸಮೂಹವು ವಾಯುವಿನ ಹೊಡೆತದಿಂದ ಅಲೆದಾಡುತ್ತಿರುವುದು. ಸಭೆಯಲ್ಲಿ ಪ್ರಕಾಶಮಾನನಾಗಿ ಶಿವನು ನರ್ತನಮಾಡುವ ಸಮಯದಲ್ಲಿ ಆ ವೇಗಕ್ಕೆ ಸಕಲ ಭೂಮಂಡಲವೂ ನಡುಗುತ್ತಿರುವುದು. ॥೪-೫॥

ಅಲ್ಲಿರುವ ರತ್ನಧಾರೆಯ ಕಾಂತಿಯು ಉದಾರವಾಗಿ ಎಲ್ಲೆಡೆಯಲ್ಲಿಯೂ ಹರಡಿ ಕತ್ತಲೆಯ ಸಮೂಹವನ್ನೆಲ್ಲಾ ಹೋಗಲಾಡಿಸುತ್ತಿರುವುದು. ಎತ್ತರವಾದ ಪ್ರಾಕಾರ ಮತ್ತು ಗೋಪುರಗಳಲ್ಲಿ ವೃಷಭರಾಜನು ವಿರಾಜಿಸುತ್ತಿರುವನು. ರತ್ನಗರ್ಭವಾದ ಶಿವದೇವಾಲಯಗಳಲ್ಲಿ ಶೋಭಿಸುತ್ತಿರುವ ರತ್ನಗಳಿಂದ ಕೈಲಾಸಪರ್ವತವೇ ಅತಿ ಮನೋಹರವಾಗಿ ತೋರುತ್ತಿದ್ದಿತು. ಮತ್ತು ಆ ಗಿರಿಯು ಕೈಲಾಸೇಶ್ವರನ ಉನ್ನತವಾದ ಮಹಾಲಿಂಗಕಾಂತಿಯಿಂದ ಶೋಭಿಸುತ್ತಿರುವುದು. ॥೬-೭॥

ಪಂಚಗಂಗಾತಟೋದ್ಭಾಸಿ ಲಿಂಗಪಂಕ್ತಿವಿರಾಜಿತೇ ।
ತತ್ತೀರಸುಮನೋಹಾರಿರತ್ನಸೋಪಾನಸಂಯುತೇ ॥೮॥

ಅಂಬಿಕೇಶಾಲಯೋದ್ದಾಮಕುಂಭದೀಧಿತಿದೀಪಿತೇ ।
ನಂದಿಕೇಶಾದಿಗಣಪಕೃತಸೂರ್ಯರವೈರ್ಯುತೇ ॥೯॥

ಗಣೇಶಸ್ಕಂದಸದನಸಾನಂದಗಿರಿಮಸ್ತಕೇ ।
ದೇವೀಶ್ವರಮಹಾಧಾಮಧಗದ್ಧಗಿತದಿಕ್ತಟೇ ॥೧೦॥

ಮಹಾಗಿರಿವರೋತ್ತುಂಗರತ್ನಸೌಧವಿರಾಜಿತೇ ।
ಮಾಣಿಕ್ಯಖಚಿತೋದಾರತಾರಹೀರವಿರಾಜಿತೇ ॥೧೧॥

ಇಂದ್ರನೀಲಮಹಾಕಾಂತಿನೀಲಕಾಲಕಿತಾಂಬರೇ ।
ನಂದನಾನಂದನಶತಸುಚಂದನವನಾವೃತೇ ॥೧೨॥

---

ಕೈಲಾಸದಲ್ಲಿ ವಿರಾಜಿಸುವ ಪಂಚಗಂಗಾನದಿಯ ದಡದಲ್ಲಿ ಉಜ್ವಲವಾದ ಲಿಂಗಪಂಕ್ತಿಗಳು ಸದಾ ವಿರಾಜಿಸುತ್ತಿರುವುವು. ಆ ನದಿಯ ದಡದಲ್ಲಿ ಬೆಳೆದಿರುವ ಹೂಗಳಿಂದ ಅಲ್ಲಿನ ರತ್ನಸೋಪಾನಗಳು ಅಲಂಕೃತವಾಗಿರುವುವು. ಅಂಬಿಕೇಶ್ವರನ ದೇವಾಲಯದಲ್ಲಿ ದೊಡ್ಡ ದೊಡ್ಡ ಕಲಶಗಳ ಕಾಂತಿಯು ದೀಪವನ್ನು ಹತ್ತಿಸಿದಂತಿರುವುದು. ಅದರ ಕಾಂತಿಯಿಂದ ಆ ಗಿರಿಯೇ ಪ್ರಜ್ವಲಿಸುತ್ತಿರುವುದು. ನಂದಿಕೇಶನೇ ಮುಂತಾದ ಗಣಾಧಿಪತಿಗಳು, ಕಹಳೆಯೇ ಮೊದಲಾದ ವಾದ್ಯಗಳನ್ನು ಧ್ವನಿಗೈಸುತ್ತಾ ಇರುವುದರಿಂದ ಆ ನಾದವು ಎಲ್ಲೆಡೆಗಳಲ್ಲಿಯೂ ವ್ಯಾಪಿಸಿರುವುದು. ||೮-೯||

ಗಣೇಶ ಮತ್ತು ಕುಮಾರಸ್ವಾಮಿಯ ಮನೆಗಳಿಂದ ಆ ಪರ್ವತಶಿಖರವು ಆನಂದಭರಿತವಾಗಿ ತೋರುತ್ತಿದ್ದಿತು. ಪಾರ್ವತೀದೇವಿ ಮತ್ತು ಮಹಾದೇವನ ನಿಲಯಗಳ ಕಾಂತಿಯು ದಿಕ್ಪ್ರದೇಶಗಳನ್ನೆಲ್ಲಾ ಉರಿಸುತ್ತಿರುವಂತೆ ಧಗಧಗಿಸುತ್ತಿರುವುದು. ಆ ದೊಡ್ಡ ಕೈಲಾಸಪರ್ವತವು ಎತ್ತರವಾದ ರತ್ನಸೌಧಗಳಿಂದ ವಿರಾಜಿಸುತ್ತಿರುವುದು. ಮಾಣಿಕ್ಯಗಳಿಂದ ಖಚಿತವಾದ ಉದಾರವಾದ ತಾರ ಮತ್ತು ಹೀರ ರತ್ನಗಳು ವಿರಾಜಿಸುತ್ತಿರುವುವು. ಇಂದ್ರನೀಲಮಣಿಗಳ ನೀಳವಾದ ಕಾಂತಿಯಿಂದ ಆಕಾಶವೆಲ್ಲವೂ ನೀಲವರ್ಣವಾಗಿ, ಕೈಲಾಸಪರ್ವತದ ಮುಂಗುರುಳಿನಂತೆ ತೋರುತ್ತಿರುವುದು. ಅತ್ಯಾನಂದಪ್ರದವಾದ ನೂರಾರು ಸುಗಂಧಮಯವಾದ ಚಂದನವೃಕ್ಷಗಳ ವನಗಳು ಇಲ್ಲಿ ಆವರಿಸಿರುವುವು. ||೧೦-೧೧-೧೨||

ತಮಾಲಸಾಲವಿಪಿನಮಧ್ಯಪ್ರಾಸಾದಶೋಭಿತೇ ।
ಹರಿನ್ಮಣಿ ಮಹಾರಂಭಾಚಲತ್ಪತ್ರಶತಾವೃತೇ ॥೧೩॥

ರತ್ನತಾಲವನೋದ್ದಾಮಘರ್ಘರಾಕುಲಮಾರುತೇ ।
ಮಹಾಸರೋವರೋದ್ಭಾಸಿ ಫುಲ್ಲನೀರಾಜಶೋಭಿತೇ ॥೧೪॥

ರತ್ನಕಲ್ಹಾರಕುಮುದ ಶತಪತ್ರವಿರಾಜಿತೇ ।
ಚಂಪಕಾಶೋಕಕಾದಂಬ ಬಿಲ್ವನಾಗವನಾವೃತೇ ॥೧೫॥

ಭ್ರಮದ್ಭ್ರಮರತತ್ಪುಷ್ಪಗುಚ್ಛಛಾದಿತಮಸ್ತಕೇ ।
ಬಿಲ್ವಮೂಲಸ್ಥಿತೋತ್ತುಂಗ ಲಿಂಗಸಂಗತಭೂತಲೇ ॥೧೬॥

ಪ್ರವಾಲಜಾಲಕೋದ್ದಾಮಸ್ತಂಭಮಂಡಪಸುಂದರೇ ।
ನಾನಾಪಕ್ಷಿಯುತಾಪಾರರುತಾಸ್ಪಂದಿತಕಂದರೇ ॥೧೭॥

---

ಹೊಂಗೆ, ಸಾಲಗಳೆಂಬ ಮರಗಳ ವನಗಳ ಮಧ್ಯದಲ್ಲಿ ರಚಿತವಾಗಿರುವ ಪ್ರಾಸಾದಗಳು ಈ ಕೈಲಾಸ ಪರ್ವತದಲ್ಲಿ ಬಹಳವಾಗಿ ಶೋಭಿಸುತ್ತಿರುವುವು. ಹಸುರು ಪಚ್ಚೆಮಣಿಗಳಂತೆ ಸುಂದರವಾಗಿ ಅಲುಗಾಡುತ್ತಿರುವ ನೂರಾರು ಬಾಳೆಮರದ ಎಲೆಗಳು ಮನೋಹರವಾಗಿರುವುವು. ಇಲ್ಲಿ ರತ್ನಮಯವಾದ ತಾಳೆಯಮರದ ವನಗಳಮೇಲೆ ವಾಯುವು ಬೀಸಿ, ಘರ್ಘರವೆಂದು ಧ್ವನಿಗೈಯ್ಯುತ್ತಿರುವುದು. ಅಲ್ಲಿರುವ ಉತ್ತಮವಾದ ದೊಡ್ಡ ದೊಡ್ಡ ಸರಸ್ಸುಗಳಲ್ಲಿ ಕಮಲಗಳುಚೆನ್ನಾಗಿ ಅರಳಿ ಶೋಭಿಸುತ್ತಿರುವುವು. ||೧೩-೧೪||

ರತ್ನಮಯವಾದ ಕಲ್ಹಾರ, ನೈದಿಲೆ, ಕಮಲಪುಷ್ಪಗಳಿಂದ ಕೈಲಾಸ ಗಿರಿಯು ವಿರಾಜಿಸುತ್ತಿರುವುದು. ಸಂಪಿಗೆ, ಅಶೋಕ, ಈಚಲು, ಬಿಲ್ವ, ನಾಗವೃಕ್ಷಗಳ ವನಗಳು ಅಲ್ಲಿ ವಿಶೇಷವಾಗಿ ಆವರಿಸಿರುವುವು. ಪರ್ವತಶಿಖರದಲ್ಲಿ ಹೂಗಳ ಜೊಂಪೆಗಳಿಗೆ ಮುತ್ತಿ ಕೊಂಡಿರುವ ಭ್ರಮರಗಳು ಸಂತೋಷದಿಂದ ಮೊರೆಯುತ್ತಿರುವುವು. ಆ ಕೈಲಾಸ ಪರ್ವತದ ಭೂಭಾಗದಲ್ಲಿ ಬಿಲ್ವವೃಕ್ಷಗಳ ಬುಡದಲ್ಲಿ ದೊಡ್ಡ ದೊಡ್ಡ ಶಿವಲಿಂಗಗಳು ಕಾಣುತ್ತಿರುವುವು. ಹವಳಗಳ ಸಮೂಹದಿಂದ ಶೋಭಿಸುವ ದೊಡ್ಡ ದೊಡ್ಡ ಕಂಬ ಗಳಿಂದ ರಚಿತವಾದ ಮಂಟಪಗಳು ಎಲ್ಲೆಲ್ಲೂ ಸುಂದರವಾಗಿ ತೋರುತ್ತಿರುವುವು. ಅನೇಕಬಗೆಯ ಪಕ್ಷಿಗಳಿಂದ ಯುಕ್ತವಾಗಿ ಅಪಾರವಾದ ಆ ಪಕ್ಷಿಗಳ ಧ್ವನಿಗಳಿಂದ

ಮೃಗಮಾತಂಗಶರಭಸಾರಂಗಮಹಿಷಾವೃತೇ ।
ಚಮರೀಸಮರೋದ್ದಂಡಕೋಲಕೂಲೈಶ್ಚ ಶೋಭಿತೇ ॥೧೮॥

ಮಯೂರಶುಕಜಾರಾವಪುಂಸ್ಕೋಕಿಲವಿನಾದಿತೇ ।
ಸಿಂಹರ್ಕ್ಷವೃಕಶಾರ್ದೂಲವನಗೋಖಡ್ಗಶೋಭಿತೇ ॥೧೯॥

ಗಣವಕ್ತ್ರಮಹಾತೂರ್ಯದುಂದುಭ್ಯಾಘಾತನಾದಿತೇ ।
ಮೃದಂಗಶಂಖನಿನದ ವಿನಾದಿತದಿಗಂತರೇ ॥೨೦॥

ವೀಣಾವೇಣುಸ್ವನಾಕೀರ್ಣೇ ಮಹಾಕೈಲಾಸಪರ್ವತೇ ।
ಪರಿಘಾಕಾರಸಂಲಗ್ನಪಾದಮೂಲಕಸಾಗರೇ ॥೨೧॥

ಸುಧಾಸಾಗರಜೋತ್ತುಂಗತರಂಗೋತ್ಥಿತಶೀಕರೈಃ ।
ವಾತಪೋತಸಮಾನೀತೈಃ ಪುಷ್ಪರೇಣುಸಮನ್ವಿತೈಃ ॥೨೨॥

---

ಆನಂದವನ್ನುಂಟುಮಾಡುತ್ತಿರುವ ತಪ್ಪಲುಪ್ರದೇಶಗಳು ಕೈಲಾಸಗಿರಿಯನ್ನು ರಮ್ಯವನ್ನಾಗಿ ಮಾಡಿರುವುವು. ॥೧೫-೧೬-೧೭॥

ಜಿಂಕೆ, ಆನೆ, ಶರಭ, ಸಾರಂಗ, ಕಾಡೆಮ್ಮೆ, ಚಮರೀಮೃಗ, ಯುದ್ಧದಲ್ಲಿ ಕೊಬ್ಬಿದ ಕಾಡುಹಂದಿಗಳ ಸಮೂಹದಿಂದ ಆ ವನಪ್ರದೇಶವು ಪೂರ್ಣವಾಗಿರುವುದು. ಅಲ್ಲಿ ನವಿಲು, ಗಿಳಿ ಮುಂತಾದ ಪಕ್ಷಿಗಳು ಧ್ವನಿಮಾಡುವುವು. ಮದಿಸಿದ ಗಂಡುಕೋಗಿಲೆಗಳು ಮನೋಹರವಾಗಿ ಧ್ವನಿಗೈಯುತ್ತಿರುವುವು. ಅಲ್ಲದೇ ಸಿಂಹ, ಕರಡಿ, ತೋಳ, ಹುಲಿ, ಕಾಡುಹಸು, ಖಡ್ಗಮೃಗಗಳು ಅಲ್ಲಿ ಬಹಳವಾಗಿ ಕಾಣುತ್ತಿರುವುವು. ॥೧೮-೧೯॥

ಶಿವಗಣಗಳು ತಮ್ಮ ಬಾಯಿಯಿಂದ ಊದುತ್ತಿರುವ ದೊಡ್ಡ ತೂರ್ಯವಾದ್ಯ, ನಗಾರೀ ಇವುಗಳ ಧ್ವನಿಯಿಂದ ಆ ಗಿರಿಯು ನಾದಯುಕ್ತವಾಗಿದ್ದಿತು. ಮೃದಂಗ ಮತ್ತು ಶಂಖಗಳ ಧ್ವನಿಯಿಂದ ದಿಕ್ತಟಗಳೆಲ್ಲವೂ ನಾದಮಯವಾಗಿದ್ದುವು. ವೀಣೆ, ಕೊಳಲು ಇವುಗಳ ಸ್ವರದಿಂದ ಆ ಮಹಾಕೈಲಾಸಪರ್ವತವು ವ್ಯಾಪ್ತವಾಗಿದ್ದಿತು. ಪರಿಘಾಯುಧದ ಆಕಾರದಂತೆ ಪರ್ವತದ ಬುಡದಲ್ಲಿ ದಿವ್ಯವಾದ ಸಾಗರವು ಸುತ್ತಲೂ ವ್ಯಾಪಿಸಿದ್ದಿತು. ॥೨೦-೨೧॥

ಅಮೃತಸಮುದ್ರದ ದೊಡ್ಡ ದೊಡ್ಡ ಅಲೆಗಳಿಂದೆದ್ದ ತುಂತುರುಗಳನ್ನೂ ಹೂವಿನ ಪರಾಗಗಳೊಡನೆ ವಾಯು ಒಯ್ದುಕೊಂಡುಬಂದು ಹೊಂಗೆಯ ವನದಲ್ಲಿ

ತಮಾಲವನಸಂಲಗ್ನಶೀತವಾತಮನೋಹರೇ ।
ಮಹಾನೀಪಾವನೀಜನ್ಯತತ್ಸನೋದ್ಬುದ್ಧಮಾರುತೇ ॥೨೩॥

ಶರತ್ಕಾನೋದಕೀಫುಲ್ಲಕುಮುದಾನೋದಬಂಧುರೇ ।
ಫುಲ್ಲಹಲ್ಲಕಸಲ್ಲಾಸಿವಾತವಾತಾಯನೈರ್ಯುತೇ ॥೨೪॥

ಗಲತ್ಕ್ಷೌದ್ರಮಹಾಧಾರಾ ಆದ್ಯಾದ್ರ್ಯದ್ರೋಣಭೂತಲೇ ।
ಕರಿಕುಂಭಮಹಾಧಾರಾಪಂಕಿಲೇ ಪುಷ್ಪರೇಣುಭಿಃ ॥೨೫॥

ಕಸ್ತೂರಿಕಾಮದೋದ್ಧೂತ ಗಂಧಸಂವೋದಿದಿಕ್ತಟೇ ।
ವಿಕಾಚಕಮಲೋದಾರಪಾರಗಾರಕ್ತಭೂತಲೇ ॥೨೬॥

ಕೇತಕೀಧೂಲಿಕಾಪಾಲಿಪಾಟಲಾವೋದಿವಾಯುಭಿಃ ।
ಉದಗ್ರಕುರವೋದ್ದಾಮಪಿಪ್ಪಲೀಗಂಧಮೇಧುರೇ ॥೨೭॥

---

ತಂಪಾಗಿ ಬೀಸುತ್ತಾ ಮನೋಹರಗೊಳಿಸುತ್ತಿದ್ದಿತು. ಇದರ ಜೊತೆಗೆ ದೊಡ್ಡ ಈಚಲ ವನದಲ್ಲಿ ಬೆಳೆದ ಹೂಗಳನ್ನೂ ಮಂದ ಮಾರುತನು ಇಲ್ಲಿ ಸದಾ ಹೊತ್ತುತರುತ್ತಿರುವನು. ||೨೨-೨೩||

ಶರತ್ಕಾಲದ ಬೆಳದಿಂಗಳಿನಿಂದ ಅರಳಿದ ಕನ್ನೈದಿಲೆಯು ಸುಗಂಧದಿಂದ ಮನೋಹರವಾಗಿದ್ದಿತು. ಅರಳಿದ ಕೆಂದಾವರೆ (ಹಲ್ಲಕ)ಗಳೊಡನೆ ಸರಸವಾಡಿ ಬೀಸುತ್ತಿರುವ ವಾಯುವು ಸುಗಂಧವಾಗಿ ಬೀಸುತ್ತಾ ಪ್ರವೇಶಿಸಲು ಯೋಗ್ಯವಾದ ಅನೇಕ ವಾತಾಯನಗಳು ಅಲ್ಲಲ್ಲಿ ಕಂಡುಬರುತ್ತಿದ್ದುವು. ಸುತ್ತಲೂ ಸುರಿಯುತ್ತಿರುವ ಜೇನಿನ ದೊಡ್ಡಧಾರೆಯಿಂದ ಆಗತಾನೇ ತೊಯ್ದಿರುವ ಭೂಮಿಯು ಎಲ್ಲೆಲ್ಲೂ ಕಂಗೊಳಿಸುತ್ತಿರುವುದು. ಹೂವಿನ ಪರಾಗಗಳು ಆನೆಗಳ ಕುಂಭಸ್ಥಳದಲ್ಲಿ ಬಿದ್ದು ಅಲ್ಲಿಂದ ಮದೋದಕಧಾರೆಯೊಡನೆ ಬೆರೆತು ಕೆಸರಾಗಿ ಕೆಳಕ್ಕೆ ಸುರಿಯುತ್ತಿದ್ದಿತು. ||೨೪-೨೫||

ಕಸ್ತೂರೀಮೃಗಗಳ ಮದರೂಪವಾದ ಕಸ್ತೂರಿಯು ಗಂಧದಿಂದ ದಿಗ್ಭಾಗಗಳೆಲ್ಲವೂ ಸುವಾಸಿತವಾಗಿದ್ದುವು. ಅರಳಿದ ಕೆಂಪು ಕಮಲಗಳು ಅಪಾರವಾಗಿ ಇದ್ದುದರಿಂದ ಆ ಪ್ರದೇಶವೆಲ್ಲಾ ಅವುಗಳ ಕಾಂತಿಯಿಂದ ಕೆಂಪಾಗಿಯೇ ಕಾಣುತ್ತಿದ್ದಿತು. ವಾಯುವು ತಾಳೆಯ ಹೂವಿನ ಪರಾಗಗಳನ್ನು ಹೊತ್ತು ಹೊಂಬಣ್ಣವಾಗಿ

ಮಹಾಗೋಪುರಮಧ್ಯಸ್ಥಮಣಿಸಿಂಹಾಸನೇ ಶಿವೌ ।
ಚಿಕ್ರೀಡತುಸ್ತದಾ ತಸ್ಮಿನ್ಮಹಾಕೈಲಾಸಪರ್ವತೇ ॥೨೮॥

ಕದಾಚಿದ್ಧೀರಫಲಕಮಂಚಮಧ್ಯಸ್ಥಿತಃ ಶಿವಃ ।
ದೇವ್ಯಾಸ್ತೇ ಸುಮನೋದ್ದಾಮಭೂಷಣಾ ಗಿರಿಸಾನುಷು ॥೨೯॥

ಕ್ವಚಿತ್ಪ್ರಾಸಾದಮಧ್ಯಸ್ಥೋ ವಿಹರತ್ಯಂಬಯಾ ಶಿವಃ ।
ಕದಾಚಿತ್ಸರಸೀಮಧ್ಯಸೌಧಮಂಚೋತ್ತರೇ ಶಿವಃ ॥೩೦॥

ಕ್ವಚಿತ್ಸುಧಾಫಲೋದ್ದಾಮವನೇಷು ವಿಹರೇದ್ಧರಃ ।
ಕದಾಚಿದಾಂದೋಲಗತೌ ಮುಮುದಾತೇ ಶಿವೌ ಮುನೇ ॥೩೧॥

---

ಬೀಸುತ್ತಾ ಆನೋದವನ್ನೆಸಗುತ್ತಿರುವುವು. ಅರಳಿದ ಕೆಂಪುಗೋರಂಟಿ ಹೂಗಳು ಮತ್ತು ಅತಿಶಯವಾದ ಹಿಪ್ಪಲಿ ಇವುಗಳ ಗಂಧದಿಂದ ವ್ಯಾಪ್ತವಾಗಿರುವ ಮಹಾ ಕೈಲಾಸಪರ್ವತದ ದೊಡ್ಡ ಗೋಪುರದ ಮಧ್ಯಭಾಗದಲ್ಲಿರುವ ಮಣಿಮಯವಾದ ರತ್ನಸಿಂಹಾಸನದ ಮೇಲೆ ಆಗಾಗ ಶಿವಪಾರ್ವತಿಯರು ಸಂತೋಷದಿಂದ ಕುಳಿತು ಸಂಭಾಷಣೆನಡೆಸುತ್ತಿದ್ದರು. ಹೀಗೆ ರಮ್ಯವಾದ ಕೈಲಾಸಗಿರಿಯು ಶಿವದಂಪತಿಗಳಿಗೆ ವಿಹಾರಕ್ಷೇತ್ರವಾಗಿ ಕಂಡುಬರುತ್ತಿದ್ದಿತು. ॥೨೬-೨೭-೨೮॥

ಪಾರ್ವತೀಪರಶಿವರು ಕೈಲಾಸಗಿರಿಯ ತಪ್ಪಲುಪ್ರದೇಶದಲ್ಲಿ ಸಂಚರಿಸುತ್ತಾ ಒಂದೊಂದುಸಾರಿ ಅಲ್ಲಿಯೇ ತಾನೇತಾನಾಗಿ ಬೆಳೆದ ಹೂವಿನಗೊಂಚಲುಗಳನ್ನು ತಾವೇ ಕೊಯ್ದು ಅದನ್ನು ಸಂತೋಷದಿಂದ ಮುಡಿದುಕೊಂಡು, ಹೀರಮಣಿ ಮಯವಾದ ರತ್ನಮಂಚದಲ್ಲಿ ಕುಳಿತು ಆನಂದಪಡುತ್ತಿದ್ದರು. ಹಾಗೆಯೇ ಮುಂದೆ ಹೋಗಿ ಅಲ್ಲಿಯೇ ಕಾಣುವ ಉಪ್ಪರಿಗೆಯಮೇಲೆ ಹತ್ತಿ ಆ ಗಿರಿಯಸೊಬಗನ್ನು ನೋಡುತ್ತಲೂ, ಅದರಪಕ್ಕದಲ್ಲಿಯೇ ರಮ್ಯವಾಗಿ ಕಂಗೊಳಿಸುವ ಸರೋವರ ಮಧ್ಯಗತವಾದ ಪ್ರಾಸಾದಕ್ಕೆ ಬಿಜಯಮಾಡಿ ಅಲ್ಲಿರುವ ಮಂಚದಮೇಲೆ ಪವಡಿಸುತ್ತಲೂ ವಿಹರಿಸುತ್ತಿದ್ದರು. ॥೨೯-೩೦॥

ಹೀಗೆ ಶಿವಪಾರ್ವತಿಯರು ಅಮೃತಮಯವಾದ ಮತ್ತು ಫಲಭರಿತವಾದ ಉದ್ಯಾನಗಳಲ್ಲಿ ಓಡಾಡುತ್ತಲೂ, ಅಲ್ಲಲ್ಲಿ ದೊರೆತ ಉಯ್ಯಾಲೆಗಳಲ್ಲಿ ಕುಳಿತು ತೂಗಿಕೊಳ್ಳುತ್ತಲೂ ಹರ್ಷಿಸುತ್ತಿದ್ದರು. ಕಲಾಸಕ್ತಿಬಂದಾಗ ಸಾಕ್ಷಾತ್ ಪಾರ್ವತಿಯೇ ವೀಣೆಯನ್ನು ಹಿಡಿದು ರಾಗರಂಜಿತವಾದ ಶಿವಸ್ತುತಿಗಳನ್ನು

ಹೀರಸಾರಮಹಾಸೌಧೇ ವೀಣಾಪಾಣ್ಯಂಬಯಾ ಸಹ ।
ತತ್ತಂತ್ರೀವಕ್ತ್ರಸಂಬದ್ಧರಾಗರಕ್ತೋಂಬಯಾ ಯುತಃ ॥೩೨॥

ತಪನೋದ್ದಾಮಕಿರಣಸಂತಪ್ತಾಂಗೋಂಬಯಾ ಶಿವಃ ।
ಧಾರಾಸಾರಗೃಹೇ ತುಂಗೇ ವಿಹರತ್ಯೇವ ಶಂಕರಃ ॥೩೩॥

ಅಚ್ಛಾದರ್ಶತಲಾಚ್ಛಿದ್ರಗೃಹೇಷು ವಿಹರತ್ಯಪಿ ।
ಚಂದ್ರಚಂದನಸಂಲಿಪ್ತೌ ಶಿವೌ ವಿಹರತಾಂ ವನೇ ॥೩೪॥

ಕದಾಚಿದಾಸ್ಥಾನಗತೌ ನಂದಿಭೃಂಗ್ಯಾದಿಭಿಸ್ಸಹ ।
ಮಹಾಕೈಲಾಸಲಿಂಗಾನಿ ಪ್ರಾಸಾದಸ್ಥೋ ನಿರೀಕ್ಷತೇ ॥೩೫॥

ಕೈಲಾಸೇಶಮಹಾಲಿಂಗೇ ಕರೋತ್ಯರ್ಚನಮಂಬಯಾ ।
ಕ್ವಚಿತ್ಸಭಾಸು ಸಂಧ್ಯಾಯಾಂ ನೃತ್ಯತ್ಯಾನಂದನಿರ್ಭರಃ ॥೩೬॥

---

ಹಾಡುತ್ತಿದ್ದಳು. ವೀಣಾತಂತಿಗಳ ಮೀಟುವಿಕೆಯಿಂದ ಮೊದಲೇ ಕೆಂಪುಬಣ್ಣದಿಂದ ರಂಜಿಸುವ ದೇವಿಯ ಕೈಗಳು, ಮತ್ತು ರಕ್ತವರ್ಣದ ವೈಖರಿಯಿಂದ ವಿರಾಜಿಸುವುದನ್ನು ನೋಡಿ ಮಹಾದೇವನು ಪರಿಹಾಸಮಾಡುತ್ತಿದ್ದನು. ॥೩೧-೩೨॥

ಬಿಸಲಿನತಾಪದಿಂದ ಪಾರ್ವತಿಯು ಬಳಲಿದುದನ್ನು ನೋಡಿದೊಡನೆಯೇ ಶಂಕರನು ದೇವಿಯೊಡಗೂಡಿ ಅಲ್ಲಿಯೇ ಎತ್ತರವಾದಸ್ಥಳದಲ್ಲಿ ಜಲಧಾರಾಯುಕ್ತವಾಗಿ ಶೀತಲವಾಗಿರುವ ಪ್ರಾಸಾದಕ್ಕೆ ಬಿಜಯಮಾಡುತ್ತಿದ್ದನು. ಒಂದೊಂದುಸಾರಿ ನಿರ್ಮಲವಾದ ಕನ್ನಡಿಗಳಿಂದಲೂ, ಬಣ್ಣಬಣ್ಣದ ಕಿಟಕಿಗಳಿಂದಲೂ ಸುಂದರವಾಗಿದ್ದ ಕೊಠಡಿಗಳಲ್ಲಿ ಕುಳಿತು ಚಂದ್ರಕಿರಣಗಳ ಸೊಬಗನ್ನೂ, ಚಂದನದ್ರವದ ಸುಗಂಧವನ್ನೂ ಅನುಭವಿಸುತ್ತಾ ಸ್ವೇಚ್ಛಾವಿಹಾರಿಗಳಾಗಿ ಕಾಲಕಳೆಯುತ್ತಿದ್ದರು. ॥೩೩-೩೪॥

ಸಭೆಯನ್ನು ನಡೆಸಬೇಕೆಂದು ಅವರಿಗೆ ಇಷ್ಟಬಂದಾಗ ನಂದಿ, ಭೃಂಗಿ ಮೊದಲಾದ ಗಣನಾಯಕರನ್ನು ಬರಮಾಡಿಕೊಂಡು ಕೈಲಾಸಗಿರಿಯ ಮೇಲ್ಭಾಗದಲ್ಲಿ ಕುಳಿತುಕೊಳ್ಳುತ್ತಿದ್ದರು. ಆಗ ಅವರಿಗೆ ಆಗಿರಿಯಲ್ಲಿದ್ದ ಸಮಸ್ತ ಶಿವಲಿಂಗಗಳೂ ದೃಷ್ಟಿಗೋಚರವಾಗುತ್ತಿದ್ದುವು. ಹಾಗೆಯೇ ಭಕ್ತಿಭಾವನಾಗಮ್ಯನಾದ ಶಂಕರನೂ ಪಾರ್ವತಿಯೊಡಗೂಡಿ ಕೈಲಾಸೇಶ್ವರಲಿಂಗವನ್ನು ಅರ್ಚಿಸಬೇಕೆಂಬ ಕುತೂಹಲದಿಂದ, ಕೈಲಾಸೇಶ್ವರಾಲಯಕ್ಕೆ ಹೋಗಿ ವಿಧಿವತ್ತಾಗಿ ಆ ಲಿಂಗವನ್ನು ಆರಾಧಿಸುವನು.

ಷಡ್ವಕ್ತ್ರಂ ಗಜವಕ್ತ್ರಂ ಚ ನಿರೀಕ್ಷತಿ ಮುಹುರ್ಮುಹುಃ ।
ಚಿಕ್ರೀಡತೋಸ್ತಯೋರೇವಂ ಮಹಾಕೈಲಾಸಪರ್ವತೇ ॥೩೭॥

ಕಸ್ತಸ್ಯ ವರ್ಣಯೇದುಕ್ತ್ವಾ ಚಿತ್ರಾಂ ಲೀಲಾಂ ಮಹೇಶಿತುಃ ।
ತ್ವಯಾ ಯದುಕ್ತಂ ತದ್ದೇವೀ ಪೃಚ್ಛತಿಸ್ಮ ಮಹೇಶ್ವರಂ ॥೩೮॥

ಹರ್ಷವರ್ಷಯುತಂ ಶಂಭುಂ ಸುಧಾಸಾಗರ ಸೌಧಕೇ ॥೩೯॥

ಶಂಭುಸ್ಸುಧಾಸಾಗರಮಧ್ಯಗೋಂಬಾಂ
ಸಮಭ್ಯವರ್ಷತ್ಕರಯಂತ್ರಸೇಚನೈಃ ।
ಸಾ ಚಾಲಿಸಂಘೈಃ ಸ್ವಕರಾಗ್ರಸಂಸ್ಥ
ಧಾರಾಭಿರಾಚ್ಛಾದಯದೀಶ್ವರಾರ್ಕಂ ॥೪೦॥

---

ಸಂಧ್ಯಾಕಾಲದಲ್ಲಿ ತಾಂಡವಮೂರ್ತಿಯಾಗಿ ದೇವಿಯ ಎದುರಿನಲ್ಲಿ ದಿವ್ಯನಾಟ್ಯವನ್ನು ಅಭಿನಯಿಸಿ ಆನಂದಮಯಮೂರ್ತಿಯಾಗುವನು. ॥೩೫-೩೬॥

ಜೈಗೀಷವ್ಯಮಹಾಮುನಿಯೇ ಕೇಳು, ಹೀಗೆ ಆನಂದದಿಂದ ವಿಹರಿಸುತ್ತಾ ಪರಶಿವನು ತನ್ನ ಪತ್ನಿಯೊಡನೆಯೂ, ಪುತ್ರಶ್ರೇಷ್ಠರಾದ ಕುಮಾರ ಗಣಪತಿಯರೊಡನೆಯೂ ಕೈಲಾಸಗಿರಿಯಲ್ಲಿ ನಾಟ್ಯವಾಡುವುದನ್ನು ನಾನು ನಿನಗೆ ಯಾವರೀತಿ ವರ್ಣಿಸಲಿ? ಆ ದಿವ್ಯಲೀಲಾಮೂರ್ತಿಯ ವಿಹಾರದ ಸೊಬಗನ್ನು ವಿಸ್ತಾರವಾಗಿ ತಿಳಿಸಲು ನನ್ನಿಂದ ಸಾಧ್ಯವಾಗಲಾರದು. ಇಂತಹ ವಿಹಾರಸಮಯದಲ್ಲಿಯೇ ಪಾರ್ವತಿಯು ಒಂದೊಂದು ಸಾರಿ ಪರಶಿವನನ್ನು ಕುರಿತು, ನೀನು ನನ್ನನ್ನು ಆಗಾಗ ಪ್ರಶ್ನಿಸುವಂತೆ ಮಧ್ಯೆ ಮಧ್ಯೇ ಶಿವರಹಸ್ಯದ ವಿಷಯವಾಗಿ ಪ್ರಾರ್ಥಿಸಿಕೊಳ್ಳುವಳು. ಪಾರ್ವತಿಯು ಸುಧಾಸಾಗರ ಮಧ್ಯದಲ್ಲಿರುವ ರತ್ನಮಯವಾದ ಪ್ರಾಸಾದದಲ್ಲಿ ಶಂಕರನು ಹರ್ಷದಿಂದಿರುವಾಗಲೇ ವಿಶೇಷವಾಗಿ ಇಂತಹ ಪ್ರಶ್ನೆಗಳನ್ನು ಕೇಳಿಕೊಳ್ಳುವಳು. ॥೩೭-೩೮-೩೯॥

ಸುಧಾಸಾಗರಮಧ್ಯವರ್ತಿಯಾದ ಪ್ರಾಸಾದದಲ್ಲಿ ಶಂಕರನು ನೀರನ್ನೆರಚುವ ಯಂತ್ರವನ್ನು (ಪಿಚಕಾರಿ) ಹಿಡಿದು ಅದರಿಂದ ದೇವಿಯ ದೇಹವನ್ನೆಲ್ಲಾ ನೆನೆಸುತ್ತಿದ್ದನು. ಅದಕ್ಕೆ ಪ್ರತಿಯಾಗಿ ದೇವಿಯೂ ಕೂಡ ತನ್ನ ದಾಸಿಯರೊಡಗೂಡಿ ಧಾರಾಕಾರವಾದ ನೀರು ಶಂಕರನ ಮೇಲೆ ಸುರಿಯುವಂತೆ ಏರ್ಪಡಿಸುತ್ತಿದ್ದಳು.

ಸಿತಾಸಿತಸುಪಾಟಲೀಪಟಲ ಕುಂದಮಂದಾರಜ
ರಜೋದ್ಧತಮರಂದಪಭ್ರಮಣಶೀತಮಂದಾನಿಲೇ ।
ವಸಂತಸಮಯೋಲ್ಲಸದ್ದ್ವಿಜ ದಿನಾಂತಸನ್ಮಲ್ಲಿಕಾ
ಲತಾಗೃಹನಿಕುಂಜಭೂಪ್ರಥಿತಮಂಚತಲ್ಪೇ ಶಿವಃ ॥೪೧॥

ಮಂಚೇ ಸಿಂಚತಿ ಪುಷ್ಪಸಾರಸಲಿಲೈರ್ದೇವೋ ಲಸನ್ಮಲ್ಲಿಕಾ
ಭಾರಭ್ರಾಮ್ಯನ್ಮಧುವ್ರತಪ್ರಕಟಿತಾಮೋದಧಾರಾಯುತಃ ।
ಅನಲ್ಪಕುಸುಮೋಚ್ಚಯಪ್ರಮಥಮಾನ ತಲ್ಪೇಂಬಿಕಾಂ
ರಿರಂಸಯತಿ ಕೋಕಿಲಾಮಧುರಕಾಕಲೀನಾಂ ರವೈಃ ॥೪೨॥

---

ಆದರೆ ಸೂರ್ಯನಂತೆ ಉಗ್ರವಾದ ಕಾಂತಿಯುಳ್ಳ ಮಹಾದೇವನನ್ನು ಈ ಜಲಧಾರೆಯು ಸ್ವಲ್ಪವೂ ತೋಯಿಸುತ್ತಿರಲಿಲ್ಲ. ॥೪೦॥

ವಸಂತಋತುವಿನಲ್ಲಂತೂ, ಬಿಳುಪು ಮತ್ತು ಕೆಂಪು ಬಣ್ಣಗಳಿಂದ ಅರಳಿ ಗಮಗಮಿಸುವ ಹೂವುಗಳ ಮೇಲೆ ಮಂದಮಾರುತವು ಬೀಸಿ ಅವುಗಳ ಮಕರಂದ ವನ್ನು ತಂದು ಶಿವದಂಪತಿಗಳ ಮೇಲೆ ಎರೆಚುತ್ತಿದ್ದಿತು. ಸಾಯಂಕಾಲದ ವೇಳೆ ಯಲ್ಲಿ ಅರಳು ಮೊಗ್ಗುಗಳಿಂದ ರಂಜಿತವಾಗಿದ್ದ ಮಲ್ಲಿಕಾವನದ ಲತಾಗೃಹದಲ್ಲಿ ದಿವ್ಯಮಂಚದ ಮೇಲೆ ಕುಳಿತು ಆ ಶಿವದಂಪತಿಗಳು ಆನಂದಭರಿತರಾಗುತ್ತಿದ್ದರು. ॥೪೧॥

ಮಲ್ಲಿಗೆ ಉದ್ಯಾನದ ಮಧ್ಯಭಾಗದಲ್ಲಿ ಒಂದು ದಿವ್ಯವಾದ ಮಂಚವಿರು ವುದು. ಅದು ಪುಷ್ಪಹಾರದಿಂದ ಅಲಂಕೃತವಾಗಿದ್ದುದರಿಂದ ಅದರ ಮೇಲೆ ನಾನಾ ರೀತಿಯ ದುಂಬಿಗಳು ಸದಾ ಝೇಂಕಾರಮಾಡುತ್ತಾ ಶಬ್ದಮಯವನ್ನಾಗಿ ಮಾಡಿ ದ್ದುವು. ಹಾಗೆಯೇ ಆ ಮಂಚದ ಮೇಲೆ ಹೂವಿನ ರಾಶಿಯಿಂದ ನಿರ್ಮಿತವಾದ ದಿವ್ಯಹಾಸಿಗೆಯು ಯಾವಾಗಲೂ ಸಿದ್ಧವಾಗಿರುವುದು. ಆ ಉದ್ಯಾನದಲ್ಲಿ ಕೋಗಿಲೆ ಗಳು ಅವ್ಯಕ್ತಮಧುರವಾದ ಧ್ವನಿಯಿಂದ ಅಲ್ಲಲ್ಲಿ ಹಾರಾಡುತ್ತಿರುವುವು. ಇಂತಹ ಮಂಚದಲ್ಲಿ ಕುಳಿತೊಡನೆಯೇ ಶಂಕರನು ಪಾರ್ವತಿಯೊಡನೆ ಸಂಭೋಗಸುಖವನ್ನು ಅಪೇಕ್ಷಿಸುವನು. ॥೪೨॥

ಪರಿಮಲಮಿಲದಲಿವೃಂದಮಲ್ಲೀಸಂಫುಲ್ಲವಲ್ಲೀ
ಚಲದನಿಲಕುಲಾಯೋಡ್ಡೀನಪತ್ರಾಂಡಜೈಶ್ಚ ।
ಮಧುರವರಸುಜಾಜೀಮಲ್ಲಿಧಮ್ಮಿಲ್ಲಭಲ್ಲೀ
ಕೃತಸುಮಶರವಲ್ಲ್ಯಾ ಲೀಲಯಾಮಾಸ ಶಂಭುಃ ॥೪೩॥

ಫಾಲೇ ಕಸ್ತೂರಿಕಾತ್ತಂ ತಿಲಕಮಲಕಜಸ್ಫಾರಸೌಂದರ್ಯಧಾರಾ
ನಾನಾಗಂಧಾನುಬಂಧ ದ್ಯುತಿದಲಿತಲಸತ್ಸಾಂದ್ರಸಿಂದೂರರೇಖಾಂ ।
ಮಲ್ಲೀಕುಟ್ಮಲಜಂ ನಿಚೋಲಮಚಲಾಧೀಶಾಂಗಜಾಂಗೇ ಹರಃ ।
ಪಶ್ಯಂಸ್ತದ್ವದಸಂ ಮುದಾ ಪುರಹರಃ ಸೀಮಂತಸೀಮಂತಿಕಾಂ ॥೪೪॥

ನೇತ್ರೈಸ್ತ್ರೈರನಿಮೇಷಕೈಃ ಪ್ರತಿದಿನಂ ಶ್ರೀಚಕ್ರಕೇಶೋ ಹರ
ಸ್ತೋಷೋನ್ಮೇಷಮಿಷೇಣ ಸಾ ತ್ರಿಭುವನಾಧೀಶಂ ಪುಷಂತಂ ಹೃದಾ ।

---

ಸುವಾಸನೆಯನ್ನು ಎರಚುತ್ತಾ ಭ್ರಮರಸಮೂಹಗಳಿಂದ ಕೂಡಿ, ಬಳ್ಳಿಯಲ್ಲಿ ಅರಳಿ ನಿಂತಿರುವ ಹೂವಿನ ಮೇಲೆ ಮಂದಮಾರುತವು ಬೀಸಿ, ಅದರ ಸಾರದ ಸೊಬಗನ್ನು ಹೊತ್ತು ತಂದು ಪರಶಿವನನ್ನು ಆನಂದಗೊಳಿಸುವುದು. ಹಾಗೆಯೇ ಸುಂದರವಾದ ಪಕ್ಷಿಗಳು ಇಂಚರಗೈಯ್ಯುತ್ತಾ ಗಾಳಿಯ ರಭಸಕ್ಕೆ ಅಲ್ಲಲ್ಲಿ ಹಾರಾಡುತ್ತಾ ಶಂಕರನ ಮನಸ್ಸಿಗೆ ಹರ್ಷವನ್ನುಂಟುಮಾಡುವುವು. ಇಂತಹ ಸಮಯದಲ್ಲಿ ಶುಭ್ರವಾದ ಮತ್ತು ಸುಗಂಧಮಯವಾದ ಹೂವನ್ನು ತಲೆಗೆ ಮುಡಿದು ದಿವ್ಯ ಸೌಂದರ್ಯವನ್ನು ಬೀರುತ್ತಿರುವ ದೇವಿಯೊಡನೆ ಕಾಮಪರವಶನಾಗಿ ಮಹಾದೇವನು ಸಂಭೋಗಸುಖವನ್ನನುಭವಿಸುವನು. ॥೪೩॥

ಪರಶಿವನು ವಿಹಾರಕಾಲದಲ್ಲಿ ಪಾರ್ವತಿಯ ಹಣೆಯ ಮೇಲೆ ದಿವ್ಯಗಂಧಯುಕ್ತವಾದ ಕಸ್ತೂರೀತಿಲಕವನ್ನೂ, ಅದರ ಕೆಳಭಾಗದಲ್ಲಿ ನಾನಾವಿಧವಾದ ಸುಗಂಧದ್ರವ್ಯಗಳಿಂದ ಮಿಳಿತವಾಗಿರುವ ಕುಂಕುಮರೇಖೆಯನ್ನೂ ನೋಡುವನು. ವಿಹಾರಾರ್ಥವಾಗಿರುವ ದಿವ್ಯಶಯನದ ಮೇಲೆ ಹಾಸಿರುವ ಮುಗ್ಗಲುಹಾಸಿಗೆಯ ಬಟ್ಟೆಯು ಮಲ್ಲಿಗೆಯ ಮೊಗ್ಗುಗಳಿಂದ ಅಲಂಕೃತವಾಗಿರುವುದು. ಇಂತಹ ಹಾಸಿಗೆಯ ಮೇಲೆ ಕುಳಿತು ಪಾರ್ವತಿಯ ಬೈತಲೆಯನ್ನೂ, ಅದರಮೇಲಿರುವ ಅಮೂಲ್ಯವಾದ ಆಭರಣವನ್ನೂ ದೃಷ್ಟಿಸಿ ನೋಡುತ್ತಾ ಸ್ವೇಚ್ಛೆಯಾಗಿ ಕ್ರೀಡಿಸುವನು. ॥೪೪॥

ಕ್ರೀಡಾಕಾಲದಲ್ಲಿ ಪಾರ್ವತಿಯೂ ಸಹ ಸದಾ ಪರಶಿವನ ದಿವ್ಯಮುಖವನ್ನೇ

ಪುಷ್ಪಾಶೇಷವಿಶೇಷಶೋಷಿತಗರಂ ಭೂಷಾಕೃತಾಹೀಶ್ವರಂ
ಕಾಲಾಶೇಷಜಗತ್ಕ್ರಿಯಾದಿ ವಿಷಮವ್ಯಾಪಾರ ಸಾರಾದರಂ ॥೪೫॥

ಸಾ ದೇವೀ ವಿಷಯೇಷು ಸಕ್ತಹೃದಯಂ ವಾಚಾ ವಿಶೇಷೇಣ ತು ।
ಸ್ತುತ್ವಾ ಸ್ತೋತ್ರವರೇಣ ತುಷ್ಟಹೃದಯಂ ಶಂಭುಂ ತದಾ ಪೃಚ್ಛತಿ ॥೪೬॥

॥ ಶ್ರೀಶಿವಾ ಉವಾಚ ॥

ಭೋ ಭರ್ಗ ಸರ್ವ ಜಗತ್ಸರ್ಜಕ ಪಾಪವರ್ಗ
ಸಂಭರ್ಜಕೋರು ಭವತರ್ಜಕ ಭೋಗವರ್ಜ ।
ದುರ್ಜೀವಜಾತಜನುಷಾಂ ಕಲಿಚಿತ್ರಕೃತ್ಯಂ
ಶಂಭೋ ತ್ರಿನೇತ್ರ ವದ ಮೇ ಕರುಣಾ ಯದಿ ಸ್ಯಾತ್ ॥೪೭॥

---

ನೋಡುತ್ತಾ ರೆಪ್ಪೆಯನ್ನು ಸಹ ಮುಚ್ಚದೆ, ತ್ರಿಲೋಕನಾಯಕನಾದ ಶಂಕರನ ಮಹಿಮೆಯನ್ನೇ ಅನುಸಂಧಾನಮಾಡುವಳು. ಸಂಭೋಗಕಾಲದಲ್ಲಿ ಮಹಾದೇವನು ಲೋಕರಕ್ಷಣಾರ್ಥವಾಗಿ ಹಾಲಾಹಲವಿಷಪಾನಮಾಡಿದುದನ್ನೂ, ನಾಗಾಭರಣನಾಗಿದ್ದು ಪ್ರಪಂಚದ ಸೃಷ್ಟಿಸ್ಥಿತಿಲಯ ಕಾರ್ಯಗಳನ್ನು ನಿರ್ವಹಿಸುವುದನ್ನೂ ಸ್ಮರಿಸಿಕೊಳ್ಳುತ್ತಾ ಪಾರ್ವತಿಯು, ಮಹಾದೇವನ ವಿಷಯಸುಖವು ಪರಿಪೂರ್ತಿಯಾಗುವಂತೆ ತಾನು ನಡೆದುಕೊಳ್ಳುವಳು. ಅಂತಹ ಭೋಗಕಾಲದಲ್ಲಿ ಸ್ವಾನುರೂಪಳಾಗಿದ್ದು ತನ್ನ ಸೌಖ್ಯಕ್ಕೆ ಮೂಲಭೂತಳಾಗಿರುವ ಪಾರ್ವತಿಯು ಭಕ್ತಿಪೂರ್ವಕವಾಗಿ ಸ್ತುತಿಸುವುದನ್ನು ಮಹೇಶ್ವರನು ಅತ್ಯಾಸಕ್ತಿಯಿಂದ ಕೇಳಿ ಆನಂದಪಡುವನು. ಅದೇ ಕಾಲದಲ್ಲಿಯೇ ಪಾರ್ವತಿಯು ತನಗೆ ಬಂದ ಸಂದೇಹಗಳನ್ನು ನಿವಾರಿಸಿಕೊಳ್ಳಲು ಶಂಕರನನ್ನು ನಾನಾರೀತಿ ಪ್ರಶ್ನಿಸುವಳು. ॥೪೫-೪೬॥

ಪಾರ್ವತಿಯು ತಾನು ಪ್ರಶ್ನೆಮಾಡಲು ಪೂರ್ವಭಾವಿಯಾಗಿ ಶಂಕರನನ್ನು ಈ ರೀತಿ ಸ್ತುತಿಸುವಳು—"ಮಹೇಶ್ವರನೇ, ನೀನು ಸಮಸ್ತ ಲೋಕಗಳ ಸೃಷ್ಟಿಕರ್ತನು. ಭಕ್ತರ ಪಾಪರಾಶಿಯನ್ನೆಲ್ಲಾ ಧ್ವಂಸಗೊಳಿಸುವವನು. ಸಾಂಸಾರಿಕಗಳಾದ ಕ್ಲೇಶಗಳನ್ನೆಲ್ಲಾ ನಿವಾರಿಸುವವನು. ಕ್ಷಣಿಕಭೋಗಗಳನ್ನು ದೂರೀಕರಿಸುವವನು. ಆದರೆ ಕಲಿಯುಗದಲ್ಲಿ ಮಾನವರು ತಮ್ಮ ತಮ್ಮ ಪಾಪಕರ್ಮಾನುಗುಣವಾಗಿ ನಾನಾರೀತಿಯ ಸಾಂಸಾರಿಕ ಕ್ಲೇಶಗಳಿಗೆ ತುತ್ತಾಗಿ ದುಃಖವನ್ನನುಭವಿಸುವರು. ಅಂತಹವರ ಉದ್ಧಾರಕ್ಕಾಗಿ ಈಗ ನಾನು ನಿನ್ನಲ್ಲಿ ಕೆಲವು ವಿಷಯಗಳನ್ನು ಕೇಳ

॥ ಶ್ರೀ ಸ್ಕಂದ ಉವಾಚ ॥

**ತದ್ದೇವೀವಚನೇನ ಚಾರುವದನಾಂಭೋಜೋ ಮುದಾ ಶಂಕರೋ**
**ಧ್ಯಾನೋದ್ಬುದ್ಧ ಸಮಸ್ತಕಾಲಜಗತಾಂ ವ್ಯಾಪಾರಮೂಚೇ ಹರಃ ।**
**ಪಶ್ಯನ್ತದ್ವದನಾಂಬುಜಂ ಗಿರಿವರೇ ಸೌಧೋರುಮಂಚಸ್ಥಿತೋ ।**
**ಮುಂಚನ್ ಸ್ವಾಂ ಕರುಣಾಧುರೀಭರದೃಶಾ ಸದ್ಧರ್ಷವಾಚಂ ತದಾ ॥೪೮॥**

॥ ಶ್ರೀ ಶಿವಉವಾಚ ॥

**ಧನ್ಯಾಂ ಪೂಜ್ಯಾಂ ಮನೋಜ್ಞಾಂ ತ್ರಿಭುವನಜನನೀಂ ಶೈಲರಾಜೇಂದು ಕನ್ಯಾಂ**
**ಸೀಮಂತಿನ್ಯಾಂ ವರಿಷ್ಠಾಂ ಮಮ ಹೃದಯಮಹಾನಂದವನ್ಯಾಂ ಚ ಜನ್ಯಾಂ।**
**ಮನ್ಯೇ ಚಿತ್ತೇಽಪಿ ನಾನ್ಯಾಂ ತವ ಸದೃಶಮಹಾರೂಪಸಂಪತ್ಸಮೃದ್ಧಾಂ**
**ಸ್ಪರ್ಧನ್ಯಾಂ ವಾ ವಿಶಿಷ್ಟಾಂ ಭಗವತಿ ಭವತೀಂ ನಾನ್ಯಥೈತಚ್ಛೃಣು ತ್ವಂ ॥೪೯॥**

**ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಕೈಲಾಸವರ್ಣನಂ ಶಿವಯೋಃ ಕ್ರೀಡಾವರ್ಣನಂ ನಾಮ ಚತುರ್ಥೋಽಧ್ಯಾಯಃ**

---

ಬೇಕೆಂದಿರುವೆನು. ನನ್ನಲ್ಲಿ ನಿಜವಾಗಿಯೂ ದಯೆ ಇರುವುದಾದರೆ ನನ್ನ ಪ್ರಶ್ನೆಗಳಿಗೆ ನೀನು ಸಮಂಜಸವಾದ ಉತ್ತರವನ್ನೀಯಬೇಕು'' ಹೀಗೆ ಸ್ತುತಿಸಿ ಅನಂತರ ಇಷ್ಟ ಪ್ರಶ್ನೆಗಳನ್ನು ಮುಂದುವರಿಸುವಳು. ॥೪೭॥

ದೇವಿಯ ಮಾತುಗಳನ್ನು ಕೇಳಿ ಸುಂದರವಾದ ಮುಖಕಮಲವುಳ್ಳವನಾಗಿ ಜ್ಞಾನದೃಷ್ಟಿಯಿಂದ ಪ್ರಪಂಚದ ವ್ಯಾಪಾರವನ್ನೆಲ್ಲಾ ಅರಿತು, ದೇವಿಯ ಕಮಲದಂತಿರುವ ಮುಖವನ್ನು ನೋಡುತ್ತಾ, ಕೈಲಾಸಪರ್ವತದ ಉಪ್ಪರಿಗೆಯಲ್ಲಿರುವ ಮಂಚದ ಮೇಲೆ ಮಂಡಿಸಿ ದಯಾಪ್ರವಾಹವನ್ನು ಬೀರುವ ದೃಷ್ಟಿಯಿಂದ ದೇವಿಗೆ ಸಂತೋಷವನ್ನುಂಟುಮಾಡುವ ಮಾತನ್ನು ಇಂತು ನಿರೂಪಿಸಿದನೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಅರುಹಿದನು. ॥೪೮॥

ಎಲೌ ದೇವಿ, ಧನ್ಯಳೂ, ಪೂಜ್ಯಳೂ, ಮನೋಹರಳೂ, ಮೂರು ಲೋಕಕ್ಕೂ ತಾಯಿಯೂ, ಪರ್ವತರಾಜಕುವರಿಯೂ, ಉತ್ತಮವಾದ ಸೀಮಂತವುಳ್ಳವಳೂ, ನನ್ನ ಮನಸ್ಸಿನ ಮಹಾನಂದಕ್ಕೆ ಆಶ್ರಯಳೂ, ಜನ್ಮತಾಳುವವಳೂ,

ದೇವಗಂಗೆಗಿಂತಲೂ ಶ್ರೇಷ್ಠಳೆನಿಸಿದವಳೂ, ಆದ ನಿನ್ನ ಈ ರೂಪವು ನಿನಗೆ ಸಮಾನವಾದ ಸೌಂದರ್ಯದಿಂದ ಶೋಭಿಸುತ್ತಿರುವುದು. ದೇವಿ! ಮನಸ್ಸಿನಲ್ಲಿಯೂ ಸಹ ನಿನ್ನ ಹೊರತು ಬೇರೆ ಯಾವ ಸ್ತ್ರೀಯನ್ನೂ ನಾನು ಚಿಂತಿಸೆನು. ಎಲೌ ಪ್ರೇಯಸಿ, ಇದನ್ನು ಅನ್ಯಥಾ ಭಾವಿಸಬೇಡ. ಕೇಳು, ಎಂದು ಶಿವನು ಗಿರಿಜೆಗೆ ಸಮಾಧಾನದಿಂದ ಹೇಳಿದನು. ॥೪೯॥

ಇಲ್ಲಿಗೆ ಶ್ರೀಶಿವರಹಸ್ಯದ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ಕೈಲಾಸಪರ್ವತವರ್ಣನೆ, ಪಾರ್ವತೀಪರಶಿವರ ಕ್ರೀಡಾವರ್ಣನೆಯೆಂಬ ನಾಲ್ಕನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಪಂಚಮೋಽಧ್ಯಾಯಃ

॥ ಶ್ರೀಸದಾಶಿವ ಉವಾಚ ॥

ಶೃಣು ಪದ್ಮಾಮಲೋತ್ಫುಲ್ಲಲೋಚನೇ ಪರ್ವತಾತ್ಮಜೇ ।
ತ್ವಯಾ ನಾವಿದಿತಂ ಕಿಂಚಿತ್ಕಾಲಶಕ್ತಿಸ್ತ್ವಮೇವ ಹಿ ॥೧॥

ತ್ವಮೇವ ಶಕ್ತಿಃ ಪರಮಾ ಕಾಲಚಕ್ರಪ್ರವರ್ತಿಕಾ ।
ತ್ವಮೇವ ಪರಮಾ ಸಿದ್ಧಿಸ್ತ್ವಂ ಸ್ವಾಹಾ ತ್ವಂ ಸ್ವಧಾ ಶಿವೇ ॥೨॥

ತ್ವಮೇವ ಬ್ರಹ್ಮಣೋ ದೇವೀ ಸರ್ಗೇ ಶಕ್ತಿಕರೀ ಸ್ಮೃತಾ ।
ಗೀಯಸೇ ತ್ವಂ ಪುರಾಣಜ್ಞೈಃ ಸಾಕ್ಷಾದ್ದೇವೀ ಸರಸ್ವತೀ ॥೩॥

---

## ಐದನೆಯ ಅಧ್ಯಾಯ

ಶ್ರೀ ಸದಾಶಿವನು ದೇವಿಯನ್ನು ನೋಡುತ್ತಾ ಮತ್ತೂ ಹೀಗೆಂದನು.--"ನಿರ್ಮಲವಾಗಿ ಅರಳಿರುವ ಕಮಲಗಳಂತೆ ಕಣ್ಣುಳ್ಳ ಪರ್ವತರಾಜಕುಮಾರಿಯೇ! ಕೇಳು; ನೀನೇ ಕಾಲಶಕ್ತಿರೂಪಿಣಿಯಾಗಿರುವುದರಿಂದ ನಿನಗೆ ತಿಳಿಯದಿರುವುದು ಯಾವುದು? ಕಾಲಚಕ್ರವನ್ನು ನಡೆಸುವ ಉತ್ತಮವಾದ ಶಕ್ತಿಯೇ ನೀನಾಗಿರುವೆ. ಪರಮಸಿದ್ಧಿಯೂ, ಸ್ವಾಹಾ, ಮತ್ತು ಸ್ವಧಾಕಾರಗಳೂ ನೀನೇ ಆಗಿರುವೆಯಲ್ಲವೆ! ॥೧-೨॥

ಜಗತ್‌ಸೃಷ್ಟಿಕಾರ್ಯವನ್ನೆಸಗುವ ಬ್ರಹ್ಮನ ಸೃಷ್ಟಿಶಕ್ತಿಯನ್ನೆಸಗುವ ದೇವಿಯೇ ನೀನಾಗಿರುವೆ. ಪುರಾಣವನ್ನರಿತವರು ನಿನ್ನನ್ನು ಸಾಕ್ಷಾತ್ಸರಸ್ವತೀದೇವಿಯೆಂದೇ

ಸರ್ವಶಬ್ದಮಯೀ ವಿಶ್ವಂ ಪುನಾಸಿ ಪರಮೇಶ್ವರಿ ।
ತ್ವಂ ವಿಷ್ಣೌ ಪದ್ಮಜಾ ಶಕ್ತಿಃ ಸರ್ವಪಾಲನಕಾರಿಣೀ ॥೪॥

ತ್ವಯಾ ಸಮೃದ್ಧಂ ಯತ್ಕಿಂಚಿತ್ತದ್ವೃದ್ಧಿಮಧಿಗಚ್ಛತಿ ।
ತ್ವಮೇವ ರುದ್ರೇ ಪರಮಾ ಶಕ್ತಿಃ ಸಂಹಾರಕಾರಿಣೀ ॥೫॥

ತ್ವಂ ಪ್ರಭಾಸಿ ತಥಾ ಭಾನೌ ದಹನೇ ದಹನಾತ್ಮಿಕಾ ।
ಪವನೇ ಚಾಲಿನೀಶಕ್ತಿಸ್ತ್ವಂ ಕಾಂತಿಃ ಸೋಮಮಂಡಲೇ ॥೬॥

ಇಂದ್ರೇ ಪ್ರಭುತ್ವಶಕ್ತಿಸ್ತ್ವಂ ಯಮೇ ದಂಡಾತ್ಮಿಕಾಹ್ಯಸಿ ।
ಧನಾಧಿಪೇ ನಿಧಿಮಯೀ ನೈರ್ಋತೇ ಖಡ್ಗರೂಪಿಣೀ ॥೭॥

ವರುಣೇ ಪಾಶಶಕ್ತಿಸ್ತ್ವಂ ತ್ವಂ ಸರ್ವಂ ಮಾತೃಮಂಡಲಂ ।
ತ್ವಯೈವ ಶಕ್ತಿಮಾನಸ್ಮಿ ಅಸ್ಮಿನ್ಭುವನಮಧ್ಯಮೇ ॥೮॥

---

ಹೊಗಳಿ ಗಾನಮಾಡುವರು. ಎಲೌ ಪರಮೇಶ್ವರಿ! ಸಕಲ ಶಬ್ದರೂಪಿಣಿಯಾಗಿ ವಾಗ್ದೇವತೆಯಾಗಿ ನೀನು ಪ್ರಪಂಚವನ್ನೆಲ್ಲಾ ಪಾವನಗೊಳಿಸುವೆ. ಸಕಲ ಪ್ರಪಂಚವನ್ನೂ ಕಾಪಾಡುವ ವಿಷ್ಣುವಿನ ಲಕ್ಷ್ಮೀರೂಪವಾದ ಶಕ್ತಿಯೂ ನೀನೇ ಆಗಿರುವೆ. ॥೩-೪॥

ನಿನ್ನಿಂದ ಯುಕ್ತವಾದ ಸರ್ವಶಕ್ತಿಯೂ ಜಗತ್ತಿನಲ್ಲಿ ಅಭಿವೃದ್ಧಿಯನ್ನೈದುತ್ತದೆ. ರುದ್ರನಲ್ಲಿ ಶ್ರೇಷ್ಠವಾದ ಪ್ರಪಂಚಸಂಹಾರಶಕ್ತಿಯೂ, ಸೂರ್ಯನಲ್ಲಿ ಪ್ರಭೆಯನ್ನುಂಟುಮಾಡುವ ಶಕ್ತಿಯೂ, ಬೆಂಕಿಯಲ್ಲಿ ಸುಡುವ ಶಕ್ತಿಯೂ, ಚಂದ್ರಮಂಡಲದಲ್ಲಿ ಕಾಂತಿಯನ್ನುಂಟುಮಾಡುವ ಶಕ್ತಿಯೂ, ದೇವೇಂದ್ರನಲ್ಲಿ ಪ್ರಭುತ್ವ (ದೇವತೆಗಳ ರಾಜತ್ವ) ಶಕ್ತಿಯೂ, ಯಮನಲ್ಲಿ ಶಿಕ್ಷೆಮಾಡುವ ಶಕ್ತಿಯೂ, ಕುಬೇರನಲ್ಲಿ ನಿಧಿರೂಪವಾದ ಶಕ್ತಿಯೂ, ನೈಋತದಲ್ಲಿ ಖಡ್ಗರೂಪಶಕ್ತಿಯೂ, ವರುಣನಲ್ಲಿ ಪಾಶರೂಪವಾದ ಶಕ್ತಿಯೂ, ನೀನೇ ಆಗಿರುವೆ. ಸಕಲ ಮಾತೃಗಳ ಸಮೂಹವೂ ನೀನಾಗಿರುವೆ (ಅಂದರೆ, ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಮತ್ತು ಚಾಮುಂಡಾರೂಪರಾದ ಸಪ್ತಮಾತೃಕೆಗಳೂ ನೀನೇ ಆಗಿರುವೆ.) ಈ ಪ್ರಪಂಚದಲ್ಲಿ ನಿನ್ನಿಂದಲೇ ನಾನೂ ಸಹ ಶಕ್ತಿಯುಳ್ಳವನಾಗಿರುವನು.॥೫-೬-೭-೮॥

ಅಮೂರ್ತೋಽಹಂ ತ್ವಯಾ ಮೂರ್ತಿಂ ಗೃಹೀತ್ವಾ ಕ್ರೀಡಯಾಮ್ಯಹಂ।
ಲೋಕಮೇನಂ ಮಹಾದೇವಿ ತಸ್ಮಾನ್ಮೇ ಶಕ್ತಿರುತ್ತರಾ ॥೯॥

ಭುವಿ ತ್ವಂ ಧರಣೀಶಕ್ತಿರ್ನದೀಷು ಸ್ಯಂದರೂಪಿಣೀ ।
ಏವಂ ತ್ವನ್ಮಯಮೇವೇದಂ ಜಗಚ್ಛಕ್ತಿಸಮುದ್ಭವಂ ॥೧೦॥

ತಸ್ಮಾತ್ಕಾಲಾತ್ಮಿಕಾ ಶಕ್ತಿಃ ಕಾಲರೂಪಂ ವದಾಮಿ ತೇ ।
ಶೃಣು ತ್ವಂ ಸಾವಧಾನೇನ ನಾಖ್ಯೇಯಂ ಯಸ್ಯ ಕಸ್ಯಚಿತ್ ॥೧೧॥

ರಹಸ್ಯಮದ್ಭುತತರಂ ನೋಕ್ತಪೂರ್ವಂ ಮಯಾಂಬಿಕೇ ।
ಮದ್ಧರ್ಮವಾಹವೃಷಭಪಾದಾಸ್ತೇ ಯುಗಮೂರ್ತಯಃ ॥೧೨॥

ಕೃತತ್ರೇತದ್ವಾಪರಾಖ್ಯಾ ಕಲಿಕಾಲಯುಗಾದಯಃ ।
ಪಾದಸಂಧಿಖುರಾ ಯೇ ತು ತೇ ಸರ್ವೇ ಯುಗಸಂಧಯಃ ॥೧೩॥

ಯುಗೇಷು ಧರ್ಮವೃಷಭಃ ಪಾದಾನ್ಸಂಹರತಿ ಸ್ವಯಂ ।
ಮದಾಜ್ಞಾವಶತೋ ದೇವೀ ಕಾಲಚಕ್ರಪ್ರವರ್ತಕಃ ॥೧೪॥

---

ಆಕಾರಶೂನ್ಯನಾದ ನಾನು ನಿನ್ನ ಶಕ್ತಿಯಿಂದ ಮೂರ್ತಿಯುಳ್ಳವನಾಗಿ, ಈ ಲೋಕದಲ್ಲೆಲ್ಲಾ ವಿಹರಿಸುತ್ತಿರುವೆನು. ಎಲೌ ಮಹಾದೇವಿ! ಆದ್ದರಿಂದಲೇ ನನ್ನ ಶಕ್ತಿಯು ಹೆಚ್ಚು ಪರಿಣಾಮಕಾರಿಯಾಗಿದೆ. ನೀನು ಭೂಮಿಯಲ್ಲಿ ಸರ್ವವನ್ನೂ ಆಕರ್ಷಿಸುವ ಶಕ್ತಿಯುಳ್ಳವಳಾಗಿರುವೆ. ನದಿಗಳಲ್ಲಿ ಹರಿಯುವ ಶಕ್ತಿರೂಪದಿಂದಿರುವೆ. ಆದ್ದರಿಂದಲೇ ಶಕ್ತಿರೂಪಿಣಿಯಾಗಿರುವ ನಿನ್ನಿಂದ ಈ ಜಗತ್ತು ವ್ಯಾಪ್ತವಾಗಿರುವುದು. ದೇವಿಯೇ, ನೀನು ಕಾಲರೂಪಿಣಿಯು. ಕಾಲರೂಪವೇನೆಂಬುದನ್ನು ಈಗ ಹೇಳುವೆನು; ಸಾವಧಾನವಾಗಿ ಲಾಲಿಸು. ಇದನ್ನು ಸಿಕ್ಕಿದವರಿಗೆಲ್ಲಾ ಹೇಳಬಾರದು. ॥೯-೧೦-೧೧॥

ಎಲೌ ಅಂಬಿಕೇ, ಅತ್ಯದ್ಭುತವಾದ ಈ ಸಂಗತಿಯನ್ನು ಹಿಂದೆ ಯಾರಿಗೂ ನಾನು ಹೇಳಿದ್ದಿಲ್ಲ. ನನ್ನ ವಾಹನವಾದ ಧರ್ಮರೂಪಿಯಾದ ವೃಷಭದ ನಾಲ್ಕು ಕಾಲುಗಳೇ ಆ ಕೃತ, ತ್ರೇತ, ದ್ವಾಪರ ಮತ್ತು ಕಲಿಗಳೆಂಬ ನಾಲ್ಕು ಯುಗಗಳು. ಪಾದಗಳ ಗೊರಸಿನ ಸಂಧಿಭಾಗಗಳೇ ಆ ಯುಗಸಂಧಿಭಾಗಗಳೆನಿಸುವುವು. ಕ್ರಮವಾಗಿ ಆ ಧರ್ಮವೃಷಭವು ತಾನೇ ಒಂದೊಂದು ಪಾದವನ್ನು ಒಂದೊಂದು

ಕೃತೇ ಚತುಷ್ಪಾದ್ವೃಷಭಃ ಕೈಲಾಸೇಽಧಿಷ್ಠಿತಃ ಸದಾ ।
ವರ್ಣಾಶ್ರಮಾಂಗೋ ಇಷ್ಟಾದಿಪೂರ್ತಧರ್ಮೋರುಪಾದವಾನ್ ॥೧೫॥

ಪೂರ್ವಪಾದೌ ವೃಷಸ್ಯಾಸ್ಯ ಕೃತತ್ರೇತೇತಿ ಪಶ್ಚಿಮೇ ।
ದ್ವಾಪರಶ್ಚ ಕಲಿಶ್ಚೇತಿ ಪಶ್ಚಾತ್ಪಾದಾವುಭಾವಪಿ ॥೧೬॥

ಕೃತೇ ಚತುಷ್ಪದಸ್ತಿಷ್ಠೇದ್ವೃಷಭೋ ಮೇಽಗ್ರತಃ ಸದಾ ।
ಕೈಲಾಸೇ ತೇನ ಧರ್ಮೋಽಪಿ ಸಾತ್ವಿಕಃ ಸಂಪ್ರಜಾಯತೇ ॥೧೭॥

ದೇವತಿರ್ಯಙ್ಮನುಷ್ಯೇಷು ನೃಪೇಷು ಭುವಿ ಚಾಂಬಿಕೇ ।
ತಪಸ್ವಿಷು ದಮೋ ದಾನಂ ಸಂವಿಭಾಗೋ ಯಥಾರುಚಿ ॥೧೮॥

ಇಜ್ಯಾಧ್ಯಯನಸಂಪತ್ತಿಃ ಕ್ರೋಧಮಾತ್ಸರ್ಯವರ್ಜನಂ ।
ಬ್ರಾಹ್ಮಂ ಕೃತಯುಗಂ ಪ್ರೋಕ್ತಂ ಬ್ರಾಹ್ಮಣ್ಯಂ ತತ್ರ ವರ್ಧತೇ॥೧೯॥

---

ಯುಗದಲ್ಲಿ ಉಪಸಂಹಾರಮಾಡುತ್ತದೆ. ದೇವಿ, ನನ್ನ ಅಪ್ಪಣೆಯಿಂದ ಆ ಧರ್ಮ ವೃಷಭವು ಈ ರೀತಿ ಕಾಲಚಕ್ರವನ್ನು ನಡೆಸುತ್ತಿರುವುದು ||೧೨-೧೩-೧೪||

ಕೃತಯುಗದಲ್ಲಿ ವೃಷಭವು ನಾಲ್ಕು ಪಾದಗಳಿಂದಲೂ ಪೂರ್ಣವಾಗಿ ಕೈಲಾಸದಲ್ಲಿ ಯಾವಾಗಲೂ ಇರುವುದು. ಆಗ ವರ್ಣಾಶ್ರಮಧರ್ಮಗಳೂ ಮತ್ತು ಇಷ್ಟಾಪೂರ್ತವೇ ಮೊದಲಾದ ಯಜ್ಞಗಳು ಪರಿಪೂರ್ಣವಾಗಿ ನಡೆಯುತ್ತವೆ. ಆ ವೃಷಭದ ಮುಂದಿನ ಎರಡು ಕಾಲುಗಳನ್ನು ಕೃತ ಮತ್ತು ತ್ರೇತಾಯುಗಗಳೆಂದೂ ಹಿಂದಿನ ಎರಡು ಕಾಲುಗಳು ದ್ವಾಪರ ಮತ್ತು ಕಲಿಯುಗಗಳೆಂದೂ ತಿಳಿಯು ವವಳಾಗು. ಕೃತಯುಗದಲ್ಲಿ ನನ್ನ ಮುಂದೆ ಆ ವೃಷಭವು ನಾಲ್ಕು ಪಾದಗಳಿಂದಲೂ ಪೂರ್ಣವಾಗಿ ನಿಲ್ಲುವುದು. ಆದ್ದರಿಂದಲೇ ಕೈಲಾಸಪರ್ವತದಲ್ಲಿ ಸಾತ್ವಿಕವಾದ ಧರ್ಮವು ಸರಿಯಾಗಿ ಸದಾ ನಡೆಯುತ್ತಿರುವುದು. ||೧೫-೧೬-೧೭||

ಎಲೌ ಅಂಬಿಕೆ, ದೇವತೆಗಳು, ತಿರ್ಯಕ್ಪ್ರಾಣಿಗಳು, ಮಾನವರು, ರಾಜರು ಇವರುಗಳಿಂದ ಕೂಡಿದ ಭೂಮಿಯಲ್ಲಿ ಕೃತಯುಗದಲ್ಲಿ ಧರ್ಮವು ಸರಿಯಾಗಿ ನೆಲಸುವುದು. ಆಗ ತಪಸ್ವಿಗಳು, ಇಂದ್ರಿಯನಿಗ್ರಹ, ದಾನ, ವಿಭಾಗವೇ ಮೊದಲಾ ದವುಗಳನ್ನು ಸ್ವೇಚ್ಛೆಯಾಗಿ ನಡೆಸುವರು. ಯಾಗ ಮಾಡುವುದು, ವೇದಾಧ್ಯಯನ ಗೈಯ್ಯುವುದು, ಕೋಪ, ಹೊಟ್ಟೇಕಿಚ್ಚು ಇವುಗಳನ್ನು ಬಿಡುವುದು, ಇಂತಹ ಧರ್ಮ

ತ್ರಿಪುಂಡ್ರಧಾರಣಂ ಪುಣ್ಯಮಗ್ನಿರಿತ್ಯಾದಿಮಂತ್ರತಃ ।
ಭಸ್ಮನೋ ಧಾರಣಂ ಗೌರೀ ತಥಾ ರುದ್ರಾಕ್ಷಧಾರಣಂ ॥೨೦॥

ಲಿಂಗಾರ್ಚನಂ ರುದ್ರಜಪೋ ಪಂಚಾಕ್ಷರಜಪಸ್ತಥಾ ।
ಶಾಪೋತ್ಸರ್ಗೋ ನ ಚ ಕ್ರೋಧಾದೃಷೀಣಾಂ ವೈ ಕೃತೌ ಯುಗೇ ॥೨೧॥

ಮರೀಚಿರಂಗಿರಾಶ್ಚಾತ್ರಿರ್ಮಿತ್ರಾವರುಣ ಏವ ಚ ।
ಕಶ್ಯಪೋಽಥ ಭರದ್ವಾಜಃ ಸಂವರ್ತಶ್ಚ ಬೃಹಸ್ಪತಿಃ ॥೨೨॥

ಏತೇ ಕೃತಯುಗೇ ದೇವಿ ವೇತ್ತಾರೋ ಧರ್ಮನಿಶ್ಚಯಂ ।
ರಾಜಾನಃ ಸೋಮಸೂರ್ಯೋ ಚ ಸಂಭವಾಃ ಪುಣ್ಯಕೀರ್ತಯಃ ॥೨೩॥

ಹರಿಶ್ಚಂದ್ರೋ ಮರುತ್ತಶ್ಚ ಮಾಂಧಾತಾ ಸಗರಃ ಪೃಥುಃ ।
ಅನರಣ್ಯೋ ನೃಗೋ ಬಭ್ರುರಯುತಾಯುಃ ಶಿಬಿಸ್ತಥಾ ॥೨೪॥

ಏಷು ಶಾಸತ್ಸು ಪೃಥಿವೀ ಫಲಸಸ್ಯೋರುಮಾಲಿನೀ ।
ಕಾಲವರ್ಷೀ ಚ ಪರ್ಜನ್ಯೋ ನದ್ಯಃ ಸ್ಪಂದಂತಿ ನಿತ್ಯಶಃ ॥೨೫॥

---

ಗುಣಗಳು ಚೆನ್ನಾಗಿ ಆಚರಿಸಲ್ಪಡುವುವು. ಕೃತಯುಗವು 'ಬ್ರಾಹ್ಮ' ಯುಗವೆಂದು ಹೇಳಲ್ಪಟ್ಟಿದೆ. ಆದ್ದರಿಂದಲೇ ಆ ಯುಗದಲ್ಲಿ ಬ್ರಾಹ್ಮಣ ಧರ್ಮವು (ಬ್ರಾಹ್ಮಣ ಸಮೂಹವು) ವಿಶೇಷವಾಗಿ ಧರ್ಮಕಾರ್ಯನಿರತವಾಗಿ ಅಭಿವೃದ್ಧಿಯನ್ನೈದುವುದು. ||೧೮-೧೯||

"ಅಗ್ನಿರಿತಿಭಸ್ಮ" ಮುಂತಾದ ಮಂತ್ರಗಳಿಂದ ಪುಣ್ಯಪ್ರದವಾದ ಭಸ್ಮ ತ್ರಿಪುಂಡ್ರಧಾರಣೆ, ಭಸ್ಮಲೇಪನ ಮತ್ತು ರುದ್ರಾಕ್ಷಧಾರಣೆಗಳು, ಶಿವಲಿಂಗಪೂಜೆ, ರುದ್ರಜಪ, ಅಲ್ಲದೇ ಶಿವಪಂಚಾಕ್ಷರ ಮಂತ್ರಜಪಗಳು ಇವು ಕೃತಯುಗದಲ್ಲಿ ಸರಿಯಾಗಿ ಆಚರಿಸಲ್ಪಡುವುವು ಎಲೌ ಗೌರಿ! ಈ ಕೃತಯುಗದಲ್ಲಿ ಋಷಿಗಳಿಗೆ ಕೋಪದಿಂದ ಶಾಪಕೊಡುವ ಸ್ಥಿತಿಯೇ ಉಂಟಾಗುವುದಿಲ್ಲ. ಮರೀಚಿ, ಅಂಗಿರಸ್, ಅತ್ರಿ, ಮಿತ್ರಾವರುಣ, ಕಶ್ಯಪ, ಭರದ್ವಾಜ, ಸಂವರ್ತ, ಮತ್ತು ಬೃಹಸ್ಪತಿ, ಇವರೇ ಈ ಕೃತಯುಗದಲ್ಲಿ ಧರ್ಮಸೂಕ್ಷ್ಮವನ್ನರಿತ ಋಷಿಗಳೆನಿಸುವರು. ||೨೦-೨೧-೨೨||

ಈ ಕೃತಯುಗದಲ್ಲಿ ಚಂದ್ರಸೂರ್ಯವಂಶಸಂಭೂತರೂ, ಪುಣ್ಯಕೀರ್ತಿಗಳೂ ಆದ ರಾಜರೇ ರಾಜ್ಯವನ್ನಾಳುವರು. ಹರಿಶ್ಚಂದ್ರ, ಮರುತ್ತ, ಮಾಂಧಾತಾ, ಸಗರ,

ಅಶ್ವಮೇಧಪರಾಸ್ಸರ್ವೇ ದಾಕ್ಷಿಣಾ ಬಲವತ್ತರಾಃ ।
ಅಕ್ಷೌಹಿಣೀನಾಂ ಪತಯಃ ಕ್ಷೋಣೀಶಾ ಶಿವಭಾವನಾಃ ॥೨೬॥

ಭಸ್ಮರುದ್ರಾಕ್ಷಸಂಪನ್ನಾ ಲಿಂಗಾರ್ಚಾನಿರತಾಃ ಸದಾ ।
ಅನರಣ್ಯೇ ಮಹೀಪಾಲೇ ನಾರಣ್ಯಾನೀರಭೂಚ್ಚ ಭೂಃ ॥೨೭॥

ನಿರ್ದಸ್ಯುರಾಷ್ಟ್ರಾ ರಾಜಾನೋ ಯಾಯಜೂಕಾಃ ಪ್ರಿಯಂವದಾಃ ।
ದಾತಾರೋ ರಕ್ಷಿತಾರಸ್ತೇ ಜೇತಾರಃ ಸಮರೇ ರಿಪೂನ್ ॥೨೮॥

ಗೋರಕ್ಷಾರಸವಾಣಿಜ್ಯವಶ್ಯಾ ವೈಶ್ಯಾಃ ಕೃತೇ ಯುಗೇ ।
ಶೂದ್ರಾ ಶುಶ್ರೂಷವಃ ಸರ್ವೇ ತ್ರಿಷು ವರ್ಗೇಷು ನಿತ್ಯಶಃ ॥೨೯॥

---

ಪೃಥು, ಅನರಣ್ಯ, ನೃಗ, ಬಭ್ರು, ಅಯುತಾಯು, ಮತ್ತು ಶಿಬಿ ಈ ರಾಜರು ರಾಜ್ಯ ವಾಳುತ್ತಿರಲು, ಭೂಮಿಯು ವಿಶೇಷವಾಗಿ ಪೈರುಪಚ್ಚೆಗಳಿಂದ ಕಂಗೊಳಿಸುವುದು. ಮಳೆಯು ಸಕಾಲಗಳಲ್ಲಿ ಸುರಿದು, ನದಿಗಳು ನಿತ್ಯವೂ ಹರಿಯುತ್ತಿರುವುವು. ॥೨೩-೨೪-೨೫॥

ದಕ್ಷಿಣೆ ದ್ರವ್ಯಗಳಿಂದ ಯುಕ್ತರಾಗಿ, ಬಲಿಷ್ಠರಾದ ರಾಜರೆಲ್ಲರೂ ಅಶ್ವಮೇಧ ಯಾಗಮಾಡುವುದರಲ್ಲಿ ನಿರತರಾಗುವರು. ರಾಜರೆಲ್ಲರೂ ಅಕ್ಷೋಹಿಣಿ ಸಂಖ್ಯೆಯ ಸೈನ್ಯಗಳಿಗೆ ಒಡೆಯರಾಗಿ, ಶಿವಭಕ್ತಿಯುಳ್ಳವರಾಗಿ, ಭಸ್ಮ, ರುದ್ರಾಕ್ಷಗಳನ್ನು ಧರಿಸಿ, ಯಾವಾಗಲೂ ಶಿವಲಿಂಗಪೂಜಾತತ್ಪರರಾಗಿ ನಡೆಯುವರು. ಅನರಣ್ಯನು ಚಕ್ರವರ್ತಿ ಯಾಗಿ ಭೂಮಿಯನ್ನು ಪಾಲಿಸುತ್ತಿರಲು, ಈ ಭೂಮಿಯಲ್ಲಿ ದೊಡ್ಡ ದೊಡ್ಡ ಕಾಡು ಗಳೇ ಇಲ್ಲದೇ ಎಲ್ಲೆಡೆಗಳಲ್ಲಿಯೂ ಜನಭರಿತವಾದ ಪಟ್ಟಣಗಳೂ, ಸುಖಶಾಂತಿ ಗಳಿಂದ ಯುಕ್ತರಾದ ಪ್ರಜೆಗಳೂ ಇದ್ದರು. ॥೨೬-೨೭॥

ಆ ಕಾಲದಲ್ಲಿ ಕೊಳ್ಳೆಗಾರರ ಲೂಟಿಯಿಲ್ಲದೇ ರಾಜ್ಯವು ದಕ್ಷರಾದ ರಾಜರಿಂದ ಯುಕ್ತವಾಗಿತ್ತು. ರಾಜರು, ಯಜ್ಞಶೀಲರಾಗಿಯೂ, ಪ್ರಿಯವನ್ನೇ ಹೇಳುವವ ರಾಗಿಯೂ, ವಿಶೇಷವಾಗಿ ದಾನಮಾಡುವವರಾಗಿಯೂ, ಯುದ್ಧಗಳಲ್ಲಿ ಶತ್ರುಗಳನ್ನು ಜಯಿಸಿ, ಪ್ರಜೆಗಳನ್ನೆಲ್ಲಾ ರಕ್ಷಿಸುವವರಾಗಿಯೂ, ಇದ್ದರು. ವೈಶ್ಯರು ಈ ಕೃತಯುಗ ದಲ್ಲಿ ಗೋವುಗಳನ್ನು ಕಾಪಾಡುವುದು, ರಸಪದಾರ್ಥಗಳ ವ್ಯಾಪಾರ ಮುಂತಾದವುಗಳಲ್ಲಿ ನಿರತರಾಗಿದ್ದರು. ಶೂದ್ರರು, ಬ್ರಾಹ್ಮಣ, ಕ್ಷತ್ರಿಯ, ಮತ್ತು ವೈಶ್ಯರೆಂಬ ಈ ಮೂರು

ನರಾ ನಾರ್ಯೋ ವಿಶಃ ಶೂದ್ರಾಃ ಸತ್ಯನಿಷ್ಠಾಃ ಕೃತೇ ಯುಗೇ ।
ನಿಸ್ಸ್ವೈರಿಣ್ಯೋ ನಾನೃತಕಾಃ ಸರ್ವೇ ಧರ್ಮಪ್ರಭಾವನಾಃ ॥೩೦॥

ಮಾನವೋ ಹಿ ಕೃತೇ ಧರ್ಮಃ ಶ್ರುತಿಪ್ರೋಕ್ತೋ ವಿಶಿಷ್ಯತೇ ।
ವರ್ಣಾಶ್ರಮೋ ತಥಾ ಸರ್ವೇ ಸ್ವೇ ಸ್ವೇ ಕರ್ಮಣ್ಯಧಿಷ್ಠಿತಾಃ ॥೩೧॥

ಏವಂ ಕೃತಯುಗೇ ಧರ್ಮೋ ಪಶ್ಯ ದೇವಿ ಪ್ರವರ್ತತೇ ।
ದಯಾದಾಕ್ಷಿಣ್ಯಸಂಯುಕ್ತೋ ತ್ರ್ಯಕ್ಷಪಾದಾನುವರ್ತನಾತ್ ॥೩೨॥

ಏತತ್ತೇ ಸಂಗ್ರಹೇಣೈವ ಕೃತೇ ಧರ್ಮಃ ಪ್ರಕೀರ್ತಿತಃ ॥೩೩॥

ಕೃತೇ ಸುಕೃತರಾಶಯೋ ಭುವಿ ಭವಂತಿ ಸರ್ವೇಷ್ವಪಿ
ನ ಚಾನೃಜುಕುಕಾಪಥೋ ಭವತಿ ಕಶ್ಚಿದೇವೇಹ ಮೋ ।

---

ವರ್ಣಗಳ ಜನರಲ್ಲಿಯೂ, ಸೇವಾವೃತ್ತಿಯನ್ನು ಉಚಿತವಾಗಿ ಆಶ್ರಯಿಸಿ, ನಿತ್ಯವೂ ಕಾಲಕಳೆಯುತ್ತಿದ್ದರು. ಆ ಕೃತಯುಗದಲ್ಲಿ, ಗಂಡಸರು, ಹೆಂಗಸರಾದಿಯಾಗಿ, ವೈಶ್ಯ ಶೂದ್ರರೆಲ್ಲರೂ ಸತ್ಯನಿರತರಾಗಿದ್ದರು. ಸುಳ್ಳು ಆಡದೇ ವ್ಯಭಿಚಾರವನ್ನೂ ಮಾಡದೇ ಎಲ್ಲರೂ ಧರ್ಮಶ್ರದ್ಧೆಯುಳ್ಳವರಾಗಿದ್ದರು. ॥೨೮-೨೯-೩೦॥

ದೇವಿ, ಕೃತಯುಗದಲ್ಲಿ ಮನುಧರ್ಮಶಾಸ್ತ್ರದಲ್ಲಿ ಹೇಳಿದ ವೇದಪ್ರತಿಪಾದ್ಯವಾದ ಧರ್ಮವೆಲ್ಲವೂ ವಿಶೇಷವಾಗಿ ನಡೆಯುವುದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ವರೂ, ತಮ್ಮ ವರ್ಣಧರ್ಮಗಳಲ್ಲಿಯೂ, ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸವೆಂಬ ಆಶ್ರಮಧರ್ಮಗಳಲ್ಲಿಯೂ ನಿರತರಾಗಿ ಇತರ ಧರ್ಮಗಳನ್ನಾಶ್ರಯಿಸದೇ ತಮ್ಮ ತಮ್ಮ ಕರ್ಮಗಳಲ್ಲಿ ಮಾತ್ರ ತೊಡಗುತ್ತಾರೆ. ಅಂಬಿಕೇ, ಈರೀತಿ ಕೃತಯುಗದಲ್ಲಿ ಧರ್ಮವು ಅನುಸರಿಸಿ ನಡೆದುಕೊಂಡು ಬರುತ್ತದೆ. ಆ ಮುಕ್ಕಣ್ಣನ ಪಾದಗಳ ಸೇವೆಯಿಂದ ಜನಗಳೆಲ್ಲರೂ ದಯ ದಾಕ್ಷಿಣ್ಯಗಳನ್ನೊಳಗೊಂಡು ವ್ಯವಹರಿಸುವರು. ದೇವಿ, ಈ ಕೃತಯುಗದ ಧರ್ಮಸ್ವರೂಪವು ನಿನಗೆ ಸಂಗ್ರಹವಾಗಿ ಹೇಳಲ್ಪಟ್ಟಿತು. ॥೩೧-೩೨-೩೩॥

ಕೃತಯುಗದಲ್ಲಿ ಎಲ್ಲರಲ್ಲಿಯೂ ಪುಣ್ಯರಾಶಿಗಳೇ ವಿಶೇಷವಾಗಿ ಉಂಟಾಗುವುವು. ವಿರುದ್ಧಮಾರ್ಗದಲ್ಲಿಯಾಗಲೀ, ಅಥವಾ ಕೆಟ್ಟದಾರಿಯಲ್ಲಿಯಾಗಲೀ ಜನರು ಎಂದಿಗೂ ಹೋಗುವುದಿಲ್ಲ. ಸಕಲ ವರ್ಣಾಶ್ರಮಧರ್ಮಿಗಳೂ ನನ್ನ ಪಾದ

ಪದಾಂಬುಜಸಮರ್ಚಕೋ ಭವತಿ ಲೋಕಮಾಲೋಕಯಃ
ಶ್ರುತಿಪ್ರಕಟಿತೋ ವೃಷೋ ಭವತಿ ತೇಷು ಚಾಯುಃ ಪರಂ ॥೩೪॥

ಶತಾಯುತಭವಂ ಸದಾ ಭವಪಾದಾಂಬುಜಾರಾಧನಾತ್
ಸುನಿಶ್ಚಿತಮಿದಂ ಶಿವೇ ಸುಕೃತಮೇತದಾಲೋಕ್ಯತಾಂ ।
ಕದಾಚಿದಪಿ ಹೀಯತೇ ತನು ಸುವೃದ್ಧಮೇತಿ ದ್ರುತಂ
ತಪಸ್ವಿಜನವಲ್ಲಭಃ ಪರಮದುರ್ಲಭೋಽಯಂ ಯುಗಃ ॥೩೫॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ
ಶಿವಗೌರೀಸಂವಾದೇ ಕಾಲರೂಪಕೃತಯುಗಧರ್ಮಕಥನಂ ನಾಮ
ಪಂಚಮೋಽಧ್ಯಾಯಃ

---

ಕಮಲಗಳ ಪೂಜೆಯಲ್ಲಿ ನಿರತರಾಗಿ, ನನ್ನ ದರ್ಶನವನ್ನೇ ಲೋಕವೆಲ್ಲವೂ ಅಪೇಕ್ಷಿಸುವುದು. ವೇದದಲ್ಲಿ ಹೇಳಿರುವ ಧರ್ಮಗಳೆಲ್ಲವೂ ಆ ಕೃತಯುಗದಲ್ಲಿ ನಡೆದು ಮಾನವರು ಪೂರ್ಣವಾದ ಆಯುಸ್ಸುಳ್ಳವರಾಗಿರುವರು. ॥೩೪॥

ಎಲೌ ಗೌರಿ, ಈ ಕೃತಯುಗದಲ್ಲಿ ಯಾವಾಗಲೂ ಶಿವಪಾದಕಮಲಸೇವೆಯಿಂದ ಮಾನವರಿಗೆ ಒಂದು ಲಕ್ಷವರ್ಷ ವಯಸ್ಸುಂಟಾಗುವುದು. ಈ ಪುಣ್ಯವನ್ನು ನಡೆಸುವವರಿಗೆ ಯಾವಾಗಲೂ ಶರೀರವು ಕ್ಷೀಣವಾಗದೇ ಹೆಚ್ಚು ಹೆಚ್ಚು ಬಲವುಳ್ಳದ್ದಾಗಿಯೇ ಜಾಗ್ರತೆ ಅಭಿವೃದ್ಧಿಯನ್ನೈದುವುದು. ದೇವಿ, ತಪಸ್ಸುಮಾಡುವ ಜನಗಳಿಗೆ ಪ್ರೀತಿಕರವಾದ ಈ ಕೃತಯುಗವು ಸಾಮಾನ್ಯವಾಗಿ ದೊರೆಯುವುದು ತುಂಬಾ ದುರ್ಲಭವೇ ಸರಿ ಎಂದು ಶಿವನು ದೇವಿಗೆ ಹೇಳಿದನು. ॥೩೫॥

ಇಲ್ಲಿಗೆ ಶ್ರೀ ಶಿವರಹಸ್ಯದ ಸದಾಶಿವಸಂಜ್ಞಕವಾದ ಒಂಭತ್ತನೆಯ ಅಂಶದಲ್ಲಿ
ಶಿವ, ಗೌರೀ ಇವರಿಬ್ಬರ ಸಂವಾದದಲ್ಲಿ ಕಾಲರೂಪವಾದ ಕೃತಯುಗದ
ಧರ್ಮನಿರೂಪಣೆಯೆಂಬ ಐದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಷಷ್ಠೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

**ತ್ರೇತಾಸು ವೃಷಭೋ ಮೇಽದ್ಯ ತ್ರಿಪಾದಾಗ್ರೇ ಪ್ರತಿಷ್ಠಿತಃ ।**
**ಕೈಲಾಸೇ ಸಂವಸೇದ್ದೇವಿ ಪಾದೋನಂ ಹ್ರಸತೇ ತತಃ ॥೧॥**

**ಇಜ್ಯಾಪ್ರತಿಗ್ರಹಕ್ಷಾತ್ರಕೃಷಿಗೋರಕ್ಷಸೇವಿನಃ ।**
**ಬ್ರಾಹ್ಮಣಾ ಕ್ಷತ್ರಿಯಾ ವೈಶ್ಯಾಃ ಸ್ತ್ರಿಯಃ ಶೂದ್ರಾಶ್ಚ ಸಂಕರಾಃ ॥೨॥**

**ಸಾತ್ವಿಕೋ ರಜಸಾ ಮಿಶ್ರೋ ಗುಣಸ್ತೇಷೂಪಜಾಯತೇ ।**
**ಇಜ್ಯೈವ ವರ್ಧತೇ ಲೋಕೋ ಹಿಂಸ್ರಯೈವಾಂಬಿಕೇ ತದಾ ॥೩॥**

---

## ಆರನೆಯ ಅಧ್ಯಾಯ

ಪರಮೇಶ್ವರನು ಪಾರ್ವತಿಗೆ ತ್ರೇತಾಯುಗ ಧರ್ಮವನ್ನು ಹೇಳಿದುದು:—
ದೇವಿ, ತ್ರೇತಾಯುಗದಲ್ಲಿ ನನ್ನ ಈ ವೃಷಭವು ಮೂರು ಕಾಲುಗಳುಳ್ಳದ್ದಾಗಿ ನನ್ನ ಮುಂದೆ ಕೈಲಾಸದಲ್ಲಿರುವುದು. ಅದರ ಒಂದು ಕಾಲು ಆಗ ತುಂಡಾಗುವುದು. ಆದ್ದರಿಂದ ಆ ಯುಗದಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂಬ ಚಾತುರ್ವರ್ಣ್ಯದವರೂ ಹೆಂಗಸರೂ, ಸಂಕರರೂ ಕ್ರಮವಾಗಿ ಯಾಗ, ದಾನಸ್ವೀಕಾರಮಾಡುವುದು ; ಕ್ಷತ್ರಿಯ ಧರ್ಮ, ಕೃಷಿ ಮತ್ತು ಗೋವುಗಳನ್ನು ಪಾಲನೆಮಾಡುವುದು ; ಈ ಮೂರು ವರ್ಣದವರನ್ನು ಸೇವಿಸುವುದು ; ಈ ಕಾರ್ಯಗಳಲ್ಲಿ ನಿರತರಾಗುವರು. ॥೧-೨॥

ಆ ಜನಗಳಲ್ಲಿ ರಜೋಗುಣದಿಂದ ಮಿಶ್ರವಾದ ಸತ್ವಗುಣವು ವಿಶೇಷವಾಗಿ ಉಂಟಾಗುವುದು. ಎಲೌ ಅಂಬಿಕೆಯೇ, ತ್ರೇತಾಯುಗದಲ್ಲಿ ಪ್ರಪಂಚವೆಲ್ಲವೂ

ಪ್ರವರ್ತಿಷ್ಯಂತಿ ಮುನಯೋ ಶ್ರುತ್ಯುಕ್ತಾಚಾರತತ್ಪರಾಃ ।
ಭೃಗುಶ್ಚ ಜಮದಗ್ನಿಶ್ಚ ವಸಿಷ್ಠಶ್ಚ ಪರಾಶರಃ ॥೪॥

ಕಾತ್ಯಾಯನೋ ಜಾಮದಗ್ನಿರ್ವಿಶ್ವಾಮಿತ್ರಾದಯೋ ದ್ವಿಜಾಃ ।
ಕ್ಷತ್ರಿಯಾಶ್ಚ ದ್ವಿಜಾಸ್ಸರ್ವೇ ತತ್ರ ಧರ್ಮಪ್ರವರ್ತಕಾಃ ॥೫॥

ವರ್ಣಾಶ್ರಮೇಷು ಕಥಿತಾಃ ತತ್ರ ಧರ್ಮಪ್ರವರ್ತಕಾಃ ।
ತಪಃ ಫಲಮಯಂ ತತ್ರ ಇಜ್ಯಾ ಸ್ವರ್ಗಾರ್ಥಮೇವ ಹಿ ॥೬॥

ತತ್ರಾಪಿ ಭಸ್ಮನಿರತಾಸ್ತ್ರಿಪುಂಡ್ರಾಂಕಾ ದ್ವಿಜಾಃ ಸದಾ ।
ರುದ್ರಾಕ್ಷಧಾರಿಣಃ ಸರ್ವೇ ರುದ್ರಸೂಕ್ತಜಪಾದರಾಃ ॥೭॥

ಪಂಚಾಕ್ಷರಪರಾಃ ಸರ್ವೇ ರುದ್ರಲಿಂಗಾರ್ಚನಪ್ರಿಯಾಃ ।
ರುದ್ರಕ್ಷೇತ್ರನಿವಾಸಾಸ್ತೇ ತ್ರೇತಾಯಾಂ ಭಕ್ತಿತತ್ಪರಾಃ ॥೮॥

ಸೋಮಸೂರ್ಯಾನ್ವವಾಯೇ ಚ ರಾಜಾನೋ ಭೂರಿದಕ್ಷಿಣಾಃ ।
ಯಯಾತಿರ್ನಹುಷೋ ರಂತಿದೇವೋಽಥ ತೃಣಬಿಂದುಕಃ ॥೯॥

---

ಹಿಂಸೆಯಿಂದ ಕೂಡಿದ ಯಾಗಾನುಷ್ಠಾನದಿಂದಲೇ ಅಭಿವೃದ್ಧಿಹೊಂದುತ್ತದೆ. ಮುನಿಗಳೆಲ್ಲಾ ವೇದೋಕ್ತವಾದ ಆಚಾರಗಳಲ್ಲಿ ನಿರತರಾಗುತ್ತಾರೆ. ಭೃಗು, ಜಮದಗ್ನಿ, ವಸಿಷ್ಠ, ಪರಾಶರ, ಕಾತ್ಯಾಯನ, ಜಾಮದಗ್ನಿ, ವಿಶ್ವಾಮಿತ್ರ ಮುಂತಾದ ಬ್ರಾಹ್ಮಣರೂ ಮತ್ತು ಕ್ಷತ್ರಿಯರೂ ಇತರ ಬ್ರಾಹ್ಮಣವರ್ಗವೆಲ್ಲವೂ ಆ ತ್ರೇತಾ ಯುಗದಲ್ಲಿ ಧರ್ಮದಲ್ಲಿ ನಿರತರಾಗುತ್ತಾರೆ. ॥೩-೪-೫॥

ವರ್ಣಾಶ್ರಮಗಳಿಗೆ ಹೇಳಿರುವ ಧರ್ಮಗಳನ್ನೇ ಅವರು ನಡೆಸುವರು. ಲೋಕವೆಲ್ಲವೂ ತಪಸ್ಸಿನ ಫಲರೂಪವಾಗಿರುವುದು. ಯಾಗವು ಸ್ವರ್ಗಪ್ರಾಪ್ತಿ ಗೋಸ್ಕರ ಆಚರಿಸಲ್ಪಡುವುದು. ಆ ತ್ರೇತಾಯುಗದಲ್ಲಿಯೂ ಬ್ರಾಹ್ಮಣರು ಯಾವಾಗಲೂ ಭಸ್ಮಲೇಪನ, ತ್ರಿಪುಂಡ್ರಧಾರಣ, ರುದ್ರಾಕ್ಷಮಾಲೆಯನ್ನು ಧರಿಸು ವುದು, ರುದ್ರಸೂಕ್ತ ಮಂತ್ರಜಪಮಾಡುವುದರಲ್ಲಿ ಆದರ ಹೊಂದುವುದು, ಶಿವ ಪಂಚಾಕ್ಷರಮಂತ್ರಜಪ, ರುದ್ರಕ್ಷೇತ್ರವಾಸದಲ್ಲಿ ಆಸಕ್ತಿ, ಶಿವಲಿಂಗಪೂಜೆಯಲ್ಲಿ ಪ್ರೀತಿ ಇವುಗಳುಳ್ಳವರಾಗಿ ಭಕ್ತಿಯುಕ್ತರಾಗಿರುವರು. ॥೬-೭-೮॥

ಈ ತ್ರೇತಾಯುಗದಲ್ಲಿಯೂ, ಚಂದ್ರಸೂರ್ಯವಂಶಗಳಲ್ಲಿ ಹುಟ್ಟಿದ ಅನೇಕ

ಭಗೀರಥೋ ದಿಲೀಪಶ್ಚ ರಾಮೋ ದಾಶರಥಿಸ್ತಥಾ ।
ಸೋಽಪ್ಯಗಸ್ತ್ಯಮುನಿಂ ಪ್ರಾಪ್ಯ ಭಸ್ಮರುದ್ರಾಕ್ಷಭೂಷಣಃ ॥೧೦॥

ಜಪನ್ನಾಮಸಹಸ್ರಂ ಮೇ ರಾವಣಂ ದಾರಹಾರಿಣಂ ।
ನಿಜಿಗಾಯ ಸುರಾನ್ಯಾನ್ಯೋ ಮೇಧೇನಾಯಜದೀಶ್ವರಂ ॥೧೧॥

ಸೇತೌ ಮಲ್ಲಿಂಗಮಾರಾಧ್ಯ ಪಾಪಾನ್ಮುಕ್ತೋ ಬಭೂವ ಹ ।
ದಾತಾರೋ ರಕ್ಷಿತಾರಸ್ತೇ ಭುವೋ ಮಂಡಲಮಂಡನಾಃ ॥೧೨॥

ಭಸ್ಮರುದ್ರಾಕ್ಷಸಂಪನ್ನಾ ಯಾಯಜೂಕಾಃ ಶಿವಾರ್ಚಕಾಃ ।
ತೇಷು ಶಾಸತ್ಸು ಪೃಥಿವೀಂ ರಸಯುಕ್ತೌಷಧೀಷ್ವಪಿ ॥೧೩॥

ಪರ್ಜನ್ಯಃ ಕಾಲವರ್ಷೀ ಸ್ಯಾತ್ಸರ್ವೇ ಧರ್ಮೈಕಜೀವನಾಃ ।
ವಣಿಜಃ ಪಣ್ಯನಿಪುಣಾಃ ಪುಣ್ಯೇಷು ನಿರತಾಃ ಸದಾ ॥೧೪॥

---

ಮುಂದಿ ರಾಜರು, ತುಂಬಾ ಐಶ್ವರ್ಯಸಂಪನ್ನರಾಗಿ ರಾಜ್ಯಭಾರಮಾಡಿದರು. ಅವರಲ್ಲಿ ಯಯಾತಿ, ನಹುಷ, ರಂತಿದೇವ, ತೃಣಬಿಂದು, ಭಗೀರಥ, ದಿಲೀಪ ಮತ್ತು ದಶರಥ ಪುತ್ರನಾದ ರಾಮ ಇವರು ಪ್ರಸಿದ್ಧರಾದವರು. ಆ ರಾಮನಾದರೋ ಅಗಸ್ತ್ಯಮುನಿಯಿಂದ "ಆದಿತ್ಯಹೃದಯ"ವೆಂಬ ಮಂತ್ರವನ್ನು ಉಪದೇಶ ಹೊಂದಿ, ಭಸ್ಮ, ರುದ್ರಾಕ್ಷಗಳನ್ನಲಂಕರಿಸಿ ನನ್ನ ದಿವ್ಯಸಹಸ್ರನಾಮಗಳನ್ನು ಜಪಮಾಡುತ್ತಾ, ತನ್ನ ಪತ್ನಿಯಾದ ಸೀತೆಯನ್ನು ಕದ್ದಿದ್ದ ರಾವಣಾಸುರನನ್ನೂ, ಇತರ ರಾಕ್ಷಸರನ್ನೂ ಗೆದ್ದು, ಅಶ್ವಮೇಧಯಾಗದಿಂದ ಈಶ್ವರನಿಗೆ ಸಂತೋಷಪಡಿಸಿದನು. ||೯-೧೦-೧೧||

ಅಲ್ಲದೇ ಸೇತುವೆಯ ಸಮೀಪದಲ್ಲಿ ನನ್ನ ಶಿವಲಿಂಗವನ್ನು ಪೂಜೆಮಾಡಿ, ಪಾಪದಿಂದ ಬಿಡುಗಡೆಹೊಂದಿದನು. ಆ ಶ್ರೀರಾಮನು ಭೂಮಿಯನ್ನಾಳುತ್ತಿರಲು ಪ್ರಜೆಗಳು ದಾನಶೀಲರಾಗಿಯೂ, ರಕ್ಷಣೆಮಾಡುವವರಾಗಿಯೂ ಈ ಭೂಮಂಡಲಕ್ಕೇ ಅಲಂಕಾರಪ್ರಾಯರಾಗಿ, ಭಸ್ಮರುದ್ರಾಕ್ಷಗಳನ್ನು ಧರಿಸಿ, ಯಜ್ಞವನ್ನಾಚರಿಸುತ್ತಾ, ಶಿವಪೂಜಾನಿರತರಾಗಿರುತ್ತಿದ್ದರು. ಆ ರಾಜ್ಯಭಾರಕಾಲದಲ್ಲಿ ರಸಭರಿತವಾದ ಪೈರು ಪಚ್ಚೆಗಳೆಲ್ಲದರಲ್ಲಿಯೂ ಮಳೆಯು ಕಾಲಕಾಲಕ್ಕೆ ಸುರಿಯುತ್ತಾ, ಪ್ರಜೆಗಳೆಲ್ಲರೂ ಧರ್ಮವನ್ನೇ ಆಶ್ರಯಿಸಿ ಜೀವಿಸುತ್ತಿದ್ದರು. ವೈಶ್ಯರು ವ್ಯಾಪಾರದಲ್ಲಿ ನಿಪುಣರಾಗಿ, ಪುಣ್ಯಕಾರ್ಯಗಳಲ್ಲಿ ನಿರತರಾಗಿ ಯಾವಾಗಲೂ ಕಾಲಕಳೆಯುತ್ತಿದ್ದರು. ||೧೨-೧೩-೧೪||

ವಿರತಾ ಪಾಪಕರ್ಮಭ್ಯೋ ಇಭ್ಯಾಃ ಸಭ್ಯಾಃ ಸದೈವ ಹಿ ।
ಶೂದ್ರಾಃ ಶುಶ್ರೂಷವಃ ಸರ್ವೇ ಸರ್ವವರ್ಣೇಷು ನಿತ್ಯಶಃ ॥೧೫॥

ಸ್ತ್ರಿಯಃ ಸತೀವ್ರತಾಃ ಸರ್ವಾ ವರ್ಣಿನಃ ಪರ್ಣಭೋಜನಾಃ ।
ಅಪರ್ಣಾಪತಿಪಾದಾಬ್ಜೇ ತೂರ್ಣಂ ಸಂಪೂರ್ಣದೃಷ್ಟಯಃ ॥೧೬॥

ಗೃಹಸ್ಥಾಃ ಸ್ವಸ್ಥಚಿತ್ತಾಶ್ಚ ವಿಶ್ವಸ್ತಾ ಧರ್ಮವೃತ್ತಯಃ ।
ವನ್ಯಾಃ ಸಂನ್ಯಾಸಿನೋಽಪೀಶೇ ತಪಸ್ಯೈವ ಪ್ರವರ್ತಿನಃ ॥೧೭॥

ರುದ್ರಾಕ್ಷಭಸ್ಮಾಭರಣಾಃ ಶರಣಾ ಶಿವಪೂಜನೇ ।
ಕರುಣಾವಿಷ್ಟಹೃದಯಾ ಮರಣೇಽಪಿ ಪ್ರತಿಕ್ಷಣಂ ॥೧೮॥

ಅಯುತಂ ತೇಷು ಚಾಯುರ್ಹಿ ತಪೋಧರ್ಮೋಽಪಿ ವರ್ತತೇ ।
ಸ್ವಾಧ್ಯಾಯಶರಣಾಃ ಸರ್ವೇ ಶಿವಧ್ಯಾನಹತಾಶುಭಾಃ ॥೧೯॥

---

ಈ ವೈಶ್ಯರು ಪಾಪಕಾರ್ಯಗಳಿಂದ ವಿಮುಖರಾಗಿ ಯಾವಾಗಲೂ ಐಶ್ವರ್ಯವಂತರಾಗಿಯೂ, ಸಭ್ಯರಾಗಿಯೂ, ಇರುತ್ತಿದ್ದರು. ಶೂದ್ರವರ್ಣದವರು ನಿತ್ಯವೂ ಉಳಿದ ಮೂರುವರ್ಣಗಳವರನ್ನು ಸೇವೆಮಾಡುತ್ತಿದ್ದರು. ಹೆಂಗಸರೆಲ್ಲರೂ ಪತಿವ್ರತೆಯರಾಗಿದ್ದರು. ಬ್ರಹ್ಮಚಾರಿಗಳು ಎಲೆಗಳನ್ನು ತಿಂದು ಗಿರಿಜಾರಮಣನಾದ ನನ್ನ ಅಡಿದಾವರೆಯಲ್ಲಿ ಸಂಪೂರ್ಣವಾದ ದೃಷ್ಟಿಯುಳ್ಳವರಾಗಿ ತಪವಂಗೈಯುತ್ತಿದ್ದರು. ಗೃಹಸ್ಥರು ಶಾಂತಚಿತ್ತರಾಗಿ ಎಲ್ಲರಲ್ಲಿಯೂ ವಿಶ್ವಾಸಪಡೆದು ಧರ್ಮವ್ಯವಹಾರವುಳ್ಳವರಾಗಿದ್ದರು. ಸಂನ್ಯಾಸಿಗಳೂ ಕಾಡಿನಲ್ಲಿದ್ದುಕೊಂಡು ಆ ಈಶ್ವರನಲ್ಲಿ ಭಕ್ತಿಪೂರ್ವಕವಾಗಿ ತಪಸ್ಸುಮಾಡುತ್ತಾ ಇದ್ದರು. ॥೧೫-೧೬-೧೭॥

ರುದ್ರಾಕ್ಷ, ಭಸ್ಮಗಳನ್ನಲಂಕರಿಸಿಕೊಂಡು ಶಿವಪೂಜೆಯಲ್ಲಿ ನಿರತರಾಗಿ, ಮರಣಸಮಯದಲ್ಲಿಯೂ ಪ್ರತಿಯೊಂದು ಕ್ಷಣದಲ್ಲಿಯೂ ಎಲ್ಲರಲ್ಲಿಯೂ ದಯಾಪೂರ್ಣವಾದ ಮನಸ್ಸುಳ್ಳವರಾಗಿರುತ್ತಿದ್ದರು. ಅವರಿಗೆ ಹತ್ತುಸಾವಿರವರ್ಷ ವಯಸ್ಸು ನಿಯಮಿತವಾಗಿದ್ದಿತು. ತಪಸ್ಸು, ಧರ್ಮ ಇವುಗಳನ್ನಾಚರಿಸುವುದರಲ್ಲಿಯೇ ತಮ್ಮ ಆಯುಸ್ಸನ್ನು ವಿನಿಯೋಗಿಸುತ್ತಿದ್ದರು. ಎಲ್ಲರೂ ವೇದಾಧ್ಯಯನ ನಿರತರಾಗಿ, ಆ ಶಿವಧ್ಯಾನದಿಂದ ಸಕಲ ಅಮಂಗಳಗಳನ್ನೂ ಕಳೆದುಕೊಂಡಿದ್ದರು. ॥೧೮-೧೯॥

ನಿತ್ಯಂ ನದ್ಯಶ್ಚ ಸ್ಪಂದಂತೇ ಫಲಂತಿ ವನರಾಜಯಃ ।
ಘಟೋಧ್ನ್ಯಸ್ತಾಸ್ತಥೈವಾಘ್ನ್ಯಾಃ ಸರ್ವೇ ಧರ್ಮೈಕಜೀವನಾಃ॥೨೦॥

ಶಿವೈಕದೇವಾಃ ಸರ್ವೇಽಪಿ ಶಿವಾರ್ಚನಪರಾಯಣಾಃ ।
ದೇವಾ ಹವಿರ್ಭುಜಸ್ಸರ್ವೇ ಸರ್ವದಾ ಶರ್ವಪೂಜಕಾಃ ॥೨೧॥

ತ್ರಿನೇತ್ರಪೂತಪಾದಾಬ್ಜಧ್ಯಾಯಿನಃ ಸತ್ರಜೀವಿನಃ ।
ದೈತ್ಯಾಃ ಶರ್ವಾರ್ಚನರತಾಃ ಸರ್ವದಾ ಸಮರೋದ್ಧತಾಃ ॥೨೨॥

ಕೃತೇ ಹಿರಣ್ಯಕಶಿಪುಃ ಹಿರಣ್ಯಾಕ್ಷಶ್ಚ ವೃತ್ರಕಃ ।
ಏತೇ ವೈ ದೈತ್ಯರಾಜಾನೋ ಮಯೈವ ಪ್ರೇರಿತಾಃ ಶಿವೇ ॥೨೩॥

ಗರ್ವನಿರ್ವಾಪಣಾರ್ಥಾಯ ಸುರಾಣಾಂ ಚ ಪದೇಪದೇ ।
ತ್ರೇತಾಯುಗೇ ರಾವಣಶ್ಚ ಬಲಿಃ ಪ್ರಹ್ಲಾದ ಏವ ಚ ॥೨೪॥

ನಮುಚಿಶ್ಚ ಕುಜಂಭಶ್ಚ ನೃಪಾ ದೈತ್ಯಾಂಶಜಾಸ್ತಥಾ ।
ಗರ್ವಾಪಹರಣಾರ್ಥಾಯ ಸುರಾಣಾಮೇವ ತೇಽಂಬಿಕೇ ॥೨೫॥

---

ನದಿಗಳು ನಿತ್ಯವೂ ಪ್ರವಾಹಪೂರ್ಣವಾಗಿ ಹರಿಯುತ್ತಿರುವುವು. ವೃಕ್ಷ ಸಮೂಹಗಳೆಲ್ಲವೂ ಹಣ್ಣುಗಳಿಂದ ಪೂರ್ಣವಾಗಿ ಕಂಗೊಳಿಸುವುವು. ಹಸುಗಳು ಕೊಡಗಟ್ಟಲೆ ಹಾಲು ಕರೆಯುವುವು. ಆ ಕಾಲದಲ್ಲಿ ಎಲ್ಲರೂ ಧರ್ಮದಲ್ಲಿ ಮಾತ್ರ ನಿರತರಾಗಿ ಜೀವಿಸುವರು. ಜನಗಳೆಲ್ಲರೂ ಶಿವನೊಬ್ಬನೇ ದೈವವೆಂದು ನಂಬಿ ಶಿವಪೂಜಾನಿರತರಾಗಿರುವರು. ಶಿವಪೂಜಕರಾದ ಆ ದೇವತೆಗಳೆಲ್ಲರೂ ಸಕಾಲದಲ್ಲಿ ಹವಿಸ್ಸುಗಳನ್ನು ತಿಂದು ಯಾವಾಗಲೂ ತೃಪ್ತರಾಗಿರುವರು. ಮತ್ತು ಆ ಮುಕ್ಕಣ್ಣನ ಪಾವನವಾದ ಅಡಿದಾವರೆಗಳನ್ನು ಧ್ಯಾನಿಸುತ್ತಾ ಯಾಗಾನುಷ್ಠಾನಗಳಿಂದ ಜೀವನ ಮಾಡುವರಾಗುವರು. ರಾಕ್ಷಸರೂ ಸಹ ಯಾವಾಗಲೂ ಶಿವಪೂಜಾಸಕ್ತರಾಗಿ ಯುದ್ಧಪ್ರಿಯರಾಗಿ ಕೊಬ್ಬಿರುವರು. ॥೨೦-೨೧-೨೨॥

ಎಲೌ ಮಂಗಳಾಂಗಿಯೇ, ಕೃತಯುಗದಲ್ಲಿ ಹಿರಣ್ಯಕಶಿಪು, ಹಿರಣ್ಯಾಕ್ಷ, ವೃತ್ರಾಸುರರೆಂಬ ರಾಕ್ಷಸರಾಜರು ದೇವತೆಗಳ ಅಹಂಕಾರವನ್ನು ಪದೇ ಪದೇ ಅಡಗಿಸುವುದಕ್ಕೋಸ್ಕರ ನನ್ನಿಂದಲೇ ಪ್ರೇರಿತರಾಗಿ ಅವತರಿಸುವರು. ತ್ರೇತಾಯುಗ

ಮಯಾ ಸೃಷ್ಟಾ ವಿಶಿಷ್ಟಾಸ್ತೇ ಮಮ ಪೂಜಾಪರಾ ಹಿ ತೇ ।
ರಾಜಸಾ ತಾಮಸೋಪೇತಾಃ ಸುರೇಷು ಪ್ರಭವಿಷ್ಣವಃ ॥೨೬॥

ಯದಾ ತೈರ್ನಿರ್ಜಿತಾ ದೇವಾಸ್ತದಾ ಮಮ ಸಪರ್ಯಯಾ ।
ತೇಷಾಂ ಗರ್ವಾಪಹಾರಾಯ ಧರ್ಮಸಂಸ್ಥಾಪನಾಯ ಚ ॥೨೭॥

ಮತ್ಪದಾಬ್ಜೇ ತದಾ ಭಕ್ತಿಂ ವಿಷ್ಣವೇ ತಾಂ ದದಾಮ್ಯಹಂ ।
ತಯಾ ಭಕ್ತ್ಯಾ ಯುತೋ ವಿಷ್ಣುರವತಾರೇಷು ಮಾಂ ಯಜೇತ್ ॥೨೮॥

ಲಬ್ಧಚಕ್ರಸ್ತದಾ ದೈತ್ಯಾನ್ನಿಹತ್ವಾ ದೇವಸತ್ತಮೈಃ ।
ಏವಂ ತ್ರೇತಾಯುಗಮುಖೇ ಕೃತೋ ಧರ್ಮೋ ಮಯಾಂಬಿಕೇ ॥೨೯॥

ಸಾತ್ವಿಕೋ ರಜಸಾ ಮಿಶ್ರೋ ಮಿಶ್ರೋ ಧರ್ಮಃ ಪ್ರವರ್ತತೇ ।
ಕ್ಷಾತ್ರತ್ರೇತಾಯುಗಂ ಪ್ರೋಕ್ತಂ ಕ್ಷತ್ರಿಯಸ್ತತ್ರ ವರ್ಧತೇ ॥೩೦॥

---

ದಲ್ಲಿ ರಾವಣ, ಬಲಿ, ಪ್ರಹ್ಲಾದ, ನಮುಚಿ, ಕುಜಂಭರೆಂಬ ದೈತ್ಯರಾಜರು ಅವತರಿಸಿ ದೇವತೆಗಳ ಗರ್ವವನ್ನಡಗಿಸುವರು. ॥೨೩-೨೪-೨೫॥

ನನ್ನಿಂದ ಸೃಷ್ಟಿಸಲ್ಪಟ್ಟ ಅವರು ವಿಶೇಷವಾಗಿ ಪ್ರಖ್ಯಾತಿಹೊಂದಿ ನನ್ನ ಪೂಜೆಯಲ್ಲಿ ನಿರತರಾಗಿ ರಜೋಗುಣ, ತಮೋಗುಣಗಳಿಂದ ಕೂಡಿದವರಾಗಿ ದೇವತೆಗಳ ಮೇಲೆ ಬೀಳುವರು. ನನ್ನ ಪೂಜಾಮಹಿಮೆಯಿಂದ ಆ ರಾಕ್ಷಸರು ದೇವತೆಗಳನ್ನು ಜಯಿಸಲು ಆ ದೈತ್ಯರ ಅಹಂಕಾರವನ್ನು ಮುರಿಯುವುದಕ್ಕೂ ಧರ್ಮವನ್ನು ಸ್ಥಾಪಿಸುವುದಕ್ಕೂ ಸಹ ಆ ವಿಷ್ಣುವಿಗೆ ನನ್ನ ಪಾದಕಮಲದಲ್ಲಿ ಭಕ್ತಿಯನ್ನನುಗ್ರಹಿಸುವೆನು. ಆ ನನ್ನ ಭಕ್ತಿಯಿಂದ ಕೂಡಿದವನಾಗಿ ವಿಷ್ಣುವು ತನ್ನ ಅವತಾರಗಳಲ್ಲಿ ನನ್ನನ್ನು ಸೇವಿಸುತ್ತಾನೆ. ॥೨೬-೨೭-೨೮॥

ನನ್ನ ಸೇವೆಯಿಂದ ವಿಷ್ಣುವು ಚಕ್ರವನ್ನು ಪಡೆದು, ಆಗ ಆ ದೈತ್ಯರನ್ನೆಲ್ಲಾ ಸಂಹರಿಸಿ, ದೇವತೋತ್ತಮರೊಡನೆ ಸುಖವಾಗಿ ವಿಹರಿಸುತ್ತಾನೆ. ಎಲೌ ಅಂಬಿಕೆ, ಆ ತ್ರೇತಾಯುಗದಲ್ಲಿ ಈ ರೀತಿಯಾಗಿ ರಜೋಗುಣಮಿಶ್ರವಾದ ಸತ್ವಗುಣದ ಧರ್ಮವು ನನ್ನಿಂದ ನಿರ್ಮಿಸಲ್ಪಟ್ಟು ವ್ಯವಹರಿಸಲ್ಪಡುತ್ತದೆ. ಈ ತ್ರೇತಾಯುಗವು ಕ್ಷಾತ್ರಯುಗವೆಂದು ಹೇಳಲ್ಪಡುವುದು. ಇದರಲ್ಲಿ ಕ್ಷತ್ರಿಯರೇ ವಿಶೇಷವಾಗಿ ಅಭಿವೃದ್ಧಿ ಹೊಂದುತ್ತಾರೆ. ॥೨೯-೩೦॥

ತ್ರೇತಾಸ್ವಗ್ನಿತ್ರಿತಯಜನಿತಃ ಶ್ರೌತಧರ್ಮೋ ಮಖೇಚ್ಛಾ
ವಾಣಿಜ್ಯೇ ಚ ಪ್ರಭವತಿ ಜನೋ ಯಾಯಜೂಕಃ ಸದೈವ ।
ಶ್ರೀರುದ್ರಾರ್ಚಾಶ್ರುತಿಜನಯನಹೃತ್ಪಾಪಸಂತಾಪಹೀನೋ
ಲೋಕಃ ಶೋಕೈರ್ವಿಹೀನೋ ಭವತಿ ಯುಗವರೇ ಪಶ್ಯ ದೇವೇಶ್ವರಿ ತ್ವಂ ॥೩೧॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಶಿವಗೌರೀ ಸಂವಾದೇ
ತ್ರೇತಾಯುಗ ಧರ್ಮವರ್ಣನಂ ನಾಮ ಷಷ್ಠೋಽಧ್ಯಾಯಃ

---

ಈಶ್ವರನ ಅರ್ಧಾಂಗಿಯಾದ ದೇವಿಯೇ, ತ್ರೇತಾಯುಗದಲ್ಲಿ ದಕ್ಷಿಣಾಗ್ನಿ, ಗಾರ್ಹಪತ್ಯ ಮತ್ತು ಆಹವನೀಯಗಳೆಂಬ ಮೂರು ಅಗ್ನಿಗಳಿಂದ ಹುಟ್ಟಿದ ಶ್ರೌತ ಧರ್ಮವೂ, ಯಜ್ಞಯಾಗಾದಿಗಳೂ, ವ್ಯಾಪಾರವೂ ವಿಶೇಷವಾಗಿ ನಡೆಯುವುದು. ಜನಗಳು ಸದಾ ಯಾಗನಿರತರಾಗಿರುವರು. ಶ್ರೀರುದ್ರಪೂಜೆ, ವೇದೋಕ್ತವಾದ ಧರ್ಮದ ಆಚರಣೆ ಇವುಗಳಿಂದ ನಷ್ಟವಾದ ಪಾಪದಿಂದ ದುಃಖವಿಲ್ಲದವರಾಗಿ ಯಾವ ವಿಧವಾದ ಇತರ ಕ್ಲೇಶಗಳನ್ನೂ ಹೊಂದದೇ ಸುಖವಾಗಿರುವರು. ದೇವಿ, ನೋಡು ಎಂದು ಶಿವನು ಪಾರ್ವತಿಗೆ ಶ್ರೇಷ್ಠವಾದ ತ್ರೇತಾಯುಗಧರ್ಮವನ್ನರುಹಿದನು.॥೩೧॥

ಇಲ್ಲಿಗೆ ಶ್ರೀ ಶಿವರಹಸ್ಯದ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ಶಿವ ಮತ್ತು ಗೌರೀ ಇವರ ಸಂವಾದದಲ್ಲಿ ತ್ರೇತಾಯುಗದ ಧರ್ಮನಿರೂಪಣೆಯೆಂಬ ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಸಪ್ತಮೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

ದ್ವಾಪರೋಕ್ತಾನಿಮಾನ್ಧರ್ಮಾನ್ ಶೃಣು ತ್ವಂ ನಗಕನ್ಯಕೇ ।
ಪಾಶ್ಚಾತ್ಯಪಾದೈಃ ಕೈಲಾಸೇ ವೃಷೋ ಧರ್ಮಸ್ಥಿತೋ ಭವೇತ್ ॥೧॥

ರಾಜಸಾ ಗುಣತಃ ಸರ್ವೇ ಭವಂತಿ ಗುಣಸಂಭವಾಃ ।
ಜೀವಂತಿ ಚ ಸಹಸ್ರಂ ತೇ ತದ್ಗುಣೇನೈವ ಪಾರ್ವತಿ ॥೨॥

ತೇಽರ್ಚಯಂತಿ ವಿರೂಪಾಕ್ಷಂ ರುದ್ರಾಕ್ಷಾಭರಣಾ ನರಾಃ ।
ಭಸ್ಮಜಸ್ಯತ್ರಿಪುಂಡ್ರಾಂಕಾಃ ರುದ್ರಾಧ್ಯಾಯಾರ್ಥಪಾರಗಾಃ ॥೩॥

---

## ಏಳನೆಯ ಅಧ್ಯಾಯ

ಎಲೌ ಪರ್ವತರಾಜಕುಮಾರಿಯೇ, ದ್ವಾಪರಯುಗಕ್ಕೆ ಹೇಳಿರುವ ಈ ಧರ್ಮಗಳನ್ನು ಹೇಳುತ್ತೇನೆ, ಕೇಳು; ನನ್ನ ವೃಷಭವು ತನ್ನ ಹಿಂದಿನ ಕಾಲುಗಳಿಂದ ಕೈಲಾಸಪರ್ವತದಲ್ಲಿ ಧರ್ಮದಿಂದಿರುತ್ತದೆ. ಆ ದ್ವಾಪರ ಯುಗದಲ್ಲಿ ಎಲ್ಲರೂ ರಜೋಗುಣಯುಕ್ತರಾಗಿ ಅವತರಿಸುತ್ತಾರೆ. ಎಲೌ ಪಾರ್ವತಿ, ಅವರು ಸಾವಿರ ವರ್ಷಗಳ ಕಾಲ ತಮ್ಮ ಆ ಗುಣದಿಂದಲೇ ಬದುಕುವರು. ॥೧-೨॥

ಆ ದ್ವಾಪರಯುಗದ ಜನಗಳು ಶಂಕರನನ್ನು ಭಕ್ತಿಯಿಂದ ಪೂಜೆಮಾಡುವರು. ರುದ್ರಾಕ್ಷಾಭರಣ, ಭಸ್ಮಲೇಪನ, ಭಸ್ಮತ್ರಿಪುಂಡ್ರದಿಂದ ಶೋಭಿಸುವ ಹಣೆಗಳುಳ್ಳವರಾಗಿ, ರುದ್ರಮಂತ್ರದ ಅರ್ಥವನ್ನರಿತು, ಶಿವಪಂಚಾಕ್ಷರಮಂತ್ರ ಜಪಮಾಡುವುದರಲ್ಲಿ ನಿರತರಾಗಿರುವರು. ಎಲ್ಲರೂ ಶಿವಲಿಂಗಪೂಜೆಯಲ್ಲಿ ತುಂಬಾ ಪ್ರೀತಿಯುಳ್ಳವರಾಗಿರು

ಪಂಚಾಕ್ಷರಪರಾಃ ಸರ್ವೇ ಶಿವಲಿಂಗಾರ್ಚನಪ್ರಿಯಾಃ ।
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ನಾರ್ಯಶ್ಚ ಸಂಕರಾಃ ॥೪॥

ಶಾಂಕರಾ ಏವ ಸರ್ವೇಽಪಿ ದ್ವಾಪರೇ ತಪಸಿ ಸ್ಥಿತಾಃ ।
ವರ್ಣಾಶ್ರಮಾಚಾರರತಾ ದ್ವಿಜಾಃ ಸೌಮ್ಯಾಃ ಪ್ರಭಾವತಃ ॥೫॥

ಗರ್ಗಃ ಪರಾಶರೋ ಧೌಮ್ಯ ಉಪಮನ್ಯುರ್ದಧೀಚಕಃ ।
ಕಣ್ವಶ್ಚ ಗೌತಮಶ್ಚೈವ ದೂರ್ವಾಸಾ ದತ್ತ ಏವ ಚ ॥೬॥

ಸರ್ವೇ ಶರ್ವಾರ್ಚಕಾ ವಿಪ್ರಾ ಭಸ್ಮರುದ್ರಾಕ್ಷಭೂಷಣಾಃ ।
ತರುಣೇಂದುಕಲಾಮೌಲಿ ಲಿಂಗಾರ್ಚನಪರಾಯಣಾಃ ॥೭॥

ಗೃಹಸ್ಥಾ ಯತಯಶ್ಚೈವ ವರ್ಣಿನೋ ವನಜೀವನಃ ।
ಸ್ವಾಶ್ರಮಾಚಾರನಿಪುಣಾಃ ಪುಣ್ಯಾಃ ಸರ್ವೇಽಪಿ ರಾಜಸಾಃ ॥೮॥

ತತ್ರ ಧರ್ಮಃ ಪ್ರವರ್ತೇತ ಶಂಖೋ ಲಿಖಿತಚೋದಿತಃ ।
ರಾಜಾನಸ್ತತ್ರ ಸುಜನಾಃ ಗಯಶ್ಚೈವ ಉಶಾವಸುಃ ॥೯॥

---

ವರು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಹೆಂಗಸರು, ಸಂಕರಜಾತಿಯಲ್ಲಿ ಹುಟ್ಟಿದವರು ಇವರೆಲ್ಲರೂ ಶಂಕರನ ಭಕ್ತರೇ ಆಗಿರುವರು. ಬ್ರಾಹ್ಮಣರೆಲ್ಲರೂ ತಪಸ್ಸು ಮಾಡುವುದರಲ್ಲಿ ತೊಡಗುವರು. ವರ್ಣಾಶ್ರಮಗಳ ಆಚಾರಗಳನ್ನೇ ನಡೆಸುವುದರಲ್ಲಿ ನಿರತರಾಗಿ ತಮ್ಮ ಪ್ರಭಾವದಿಂದಲೇ ಅವರು ಸೌಮ್ಯರಾಗಿರುವರು.॥೩-೪-೫॥

ಗರ್ಗ, ಪರಾಶರ, ಧೌಮ್ಯ, ಉಪಮನ್ಯು, ದಧೀಚಿ, ಕಣ್ವ, ಗೌತಮ, ದೂರ್ವಾಸ ಮತ್ತು ದತ್ತಾತ್ರೇಯರೆಂಬುವರು ಮುನಿವರ್ಯರೆನಿಸುವರು. ಈ ಬ್ರಾಹ್ಮಣರೆಲ್ಲರೂ ಭಸ್ಮರುದ್ರಾಕ್ಷಗಳನ್ನಲಂಕರಿಸಿ, ಶಿವಪೂಜಾನಿರತರಾಗುವರು. ಬಾಲಚಂದ್ರನ ಕಲೆಗಳನ್ನು ತಲೆಯಲ್ಲಿ ಧರಿಸಿರುವ ಶಿವನ ಲಿಂಗಪೂಜಾಪರಾಯಣರಾಗುವರು. ॥೬-೭॥

ಗೃಹಸ್ಥರೂ, ಸಂನ್ಯಾಸಿಗಳೂ, ಬ್ರಹ್ಮಚಾರಿಗಳೂ ಮತ್ತು ವಾನಪ್ರಸ್ಥರೂ ತಮ್ಮ ತಮ್ಮ ಆಶ್ರಮಗಳ ಧರ್ಮಾಚರಣೆಯಲ್ಲಿ ನಿಪುಣರಾಗಿರುವರು. ಪುಣ್ಯಾಕರರಾದ ಅವರೆಲ್ಲರೂ ಈ ದ್ವಾಪರ ಯುಗದಲ್ಲಿ ರಜೋಗುಣಭೂಯಿಷ್ಠರಾಗಿಯೇ ಇರುವರು. ಈ ಯುಗದಲ್ಲಿ ಶಂಖಲಿಖಿತ ಧರ್ಮವೇ ನಡೆಯುವುದು. ಈ ಯುಗದ ರಾಜರೂ

ಕುರುಃ ಪೂರುಃ ಶತಾಯುಶ್ಚ ಪುರುಜಿದ್ಭರತಸ್ತಥಾ ।
ಯಾದವೋ ವಾಸುದೇವೋಽಥ ರಾಮೋಽಪಿ ಬಲಭದ್ರಕಃ ॥೧೦॥

ದುರ್ಯೋಧನಾದಯಃ ಸರ್ವೇ ಧಾರ್ತರಾಷ್ಟ್ರಾ ಮಹೌಜಸಃ ।
ದೇವಾಸುರಸಮುದ್ಭೂತಾಃ ದ್ವಾಪರೇ ವಿಗ್ರಹೇ ರತಾಃ ॥೧೧॥

ಅನ್ಯೋನ್ಯಮುಪಹಿಂಸಂತೋ ರಜಸಾ ತಮಸೇನ ಚ ।
ಯಥಾಸಂಭವಧರ್ಮೇಣ ವರ್ತಂತೇ ದ್ವಾಪರೇ ನೃಪಾಃ ॥೧೨॥

ಸರ್ವರಾಷ್ಟ್ರೇಷು ದೇಶೇಷು ವಿಷಯಾಸಕ್ತಚೇತಸಃ ।
ತೇಷ್ವಹಂ ತಾಮಸೀವೃತ್ತಿರ್ದದಾಮಿ ಪ್ರತಿಜನ್ಮನಿ ॥೧೩॥

ಯಾಯಜೂಕಾ ವದಾನ್ಯಾಸ್ತೇ ದಾತಾರೋ ದ್ವಾಪರೇ ನೃಪಾಃ ।
ವೈಶ್ಯಾಃ ಕೃಷ್ಯುಪಭೋಕ್ತಾರೋ ಗೋವಾಣಿಜರಸಕ್ರಿಯಾಃ ॥೧೪॥

---

ಒಳ್ಳೆಯ ಸ್ವಭಾವದವರು. ಅವರಲ್ಲಿ ಗಯ, ಉದಾವಸು, ಕುರು, ಪೂರು, ಶತಾಯು, ಪುರುಜಿತ್, ಭರತ, ಯದುವಂಶದಲ್ಲಿ ವಾಸುದೇವ (ಶ್ರೀಕೃಷ್ಣ) ಬಲರಾಮ ಇವರು ಮುಖ್ಯರಾದವರು. ॥೮-೯-೧೦॥

ಆ ಯುಗದಲ್ಲಿ ದೇವತೆಗಳು ಮತ್ತು ರಾಕ್ಷಸರೂ, ದುರ್ಯೋಧನನೇ ಮೊದಲಾದ ಧೃತರಾಷ್ಟ್ರನ ಮಕ್ಕಳೂ, ಧರ್ಮರಾಜನೇ ಮೊದಲಾದ ಪಾಂಡುವಿನ ಮಕ್ಕಳೂ ಆಗ ತುಂಬಾ ಬಲಶಾಲಿಗಳೆನಿಸಿದರು. ಪರಸ್ಪರ ಅವರಿಗೆ ಯುದ್ಧವು ಆರಂಭಿಸಿತು. ಪರಸ್ಪರವಾಗಿ ಕೌರವಪಾಂಡವರು ರಜೋಗುಣ ಮತ್ತು ತಮೋಗುಣಗಳಿಂದ ಯುಕ್ತರಾಗಿ ಒಬ್ಬರನ್ನೊಬ್ಬರು ಹಿಂಸೆಮಾಡಲು ಪ್ರಾರಂಭಿಸಿದರು. ಆ ದ್ವಾಪರ ಯುಗದಲ್ಲಿ ಆಗ ರಾಜರು ಉಚಿತವಾಗಿ ಸಾಧ್ಯವಾದಷ್ಟು ಧರ್ಮದಿಂದ ವ್ಯವಹರಿಸುತ್ತಿದ್ದರು. ॥೧೧-೧೨॥

ರಾಜರು ಎಲ್ಲಾ ರಾಜ್ಯಗಳಲ್ಲಿಯೂ, ಎಲ್ಲ ದೇಶಗಳಲ್ಲಿಯೂ, ವಿಷಯಸುಖದಲ್ಲಿ ಆಸಕ್ತವಾದ ಮನಸ್ಸುಳ್ಳವರಾಗುತ್ತಾರೆ. ಆ ಕಾಲದಲ್ಲಿ ನಾನು ಅವರಲ್ಲಿ ತಮೋಗುಣ ವ್ಯಾಪಾರವನ್ನು ಕಲ್ಪಿಸಿ ಪ್ರತಿಜನ್ಮದಲ್ಲಿಯೂ ತಾಮಸೀವೃತ್ತಿಯನ್ನು ಉಂಟುಮಾಡುವೆನು. ದ್ವಾಪರಯುಗದಲ್ಲಿ ರಾಜರು, ಯಜ್ಞಶೀಲರೂ, ದಾನಶೌಂಡರೂ, ಆಗುವರು. ವೈಶ್ಯರು ಕೃಷಿಯಿಂದ ಜೀವನ ನಡೆಸುತ್ತಾ ಹಸುಗಳನ್ನು ಕಾಪಾಡುವುದರಲ್ಲಿ, ವ್ಯಾಪಾರ ಮತ್ತು ರಸಸಂಬಂಧವಾದ ಕಾರ್ಯಗಳಲ್ಲಿ ನಡೆಯುವರು. ಶೂದ್ರರು, ಧನಿಕರೂ,

ಅಧ್ಯನಿೀಧುಷ್ಟವಾಚಾರ್ಯಾಂ ನಿರತಾಃ ಶೂದ್ರಜಾತಯಃ ।
ಸ್ತ್ರಿಯಃ ಸತ್ಯಸ್ತಥಾ ಸರ್ವೇ ಶುಶ್ರೂಷಾನಿರತಾಃ ಸದಾ ॥೧೫॥

ಕಾಲೇ ವರ್ಷತಿ ಪರ್ಜನ್ಯ ಉರ್ವರಾ ಶರ್ವಪೂಜಯಾ ।
ರಸಯುಕ್ತಾ ಭವೇತ್ತಸ್ಮಿನ್ಯುಗೇ ವೈ ಸಂಯುಗೇ ಶತಾಃ ॥೧೬॥

ವಿಯೋಗರಹಿತಾಃ ಸರ್ವೇ ಯೋಗಯುಕ್ತಾಃ ಸದೈವ ಹಿ ।
ಯಾಗೈರ್ದೇವಾನ್ಯಜಂತ್ಯೇವ ತ್ಯಜಂತಿ ಕಲಹಂ ನರಾಃ ॥೧೭॥

ಕುಲಜಾಶ್ಚ ನರಾಃ ಸರ್ವೇ ಜಲಜೋಪಮದೃಷ್ಟಯಃ ।
ವಿಸೃಷ್ಟಯಃ ಪ್ರಜಾಯಂತೇ ಶಿಪಿವಿಷ್ಟಪದಾಶ್ರಯಾತ್ ॥೧೮॥

ಇಷ್ಟಾಪೂರ್ತಮಹಾಧರ್ಮಸ್ತ್ವಭಿವೃದ್ಧೋ ಭವಿಷ್ಯತಿ ।
ತಸ್ಮಿನ್ನೃಪಾಃ ಶಾಂತನವಾಃ ಯಾದವಾಃ ಪೃಥಿವೀಭುಜಃ ॥೧೯॥

ಪಾಂಡವಾ ವ್ಯಾಸಪೌತ್ರಾಸ್ತೇ ಅಕ್ಷೈಃ ಸಂತ್ಯಜ್ಯ ಭೂಮಿಕಾಂ ।
ವನೇ ವನ್ಯೇನ ಜೀವಂತಿ ತ್ರ್ಯಕ್ಷಾಚಾರ್ಮಹಿಮಾವಶಾತ್ ॥೨೦॥

---

ಸ್ತುತ್ಯರೂ ಆದವರ ಪೂಜೆಯಲ್ಲಿ ನಿರತರಾಗುವರು. ಸ್ತ್ರೀಯರೆಲ್ಲರೂ ಪತಿವ್ರತೆಯು ರಾಗಿ ಪತಿಶುಶ್ರೂಷಣಕಾರ್ಯದಲ್ಲಿ ನಿರತರಾಗುವರು. ॥೧೩-೧೪-೧೫॥

ಶಂಕರನ ಪೂಜೆಯಿಂದ ಕಾಲಕಾಲದಲ್ಲಿ ಸರಿಯಾಗಿ ಮಳೆಗರೆಯುತ್ತದೆ. ಭೂಮಿಯು ರಸಭರಿತವಾಗಿ, ಪ್ರಜೆಗಳು ಯುದ್ಧಾಸಕ್ತರಾಗುತ್ತಾರೆ. ವಿಶೇಷಯೋಗ ವಿಶಿಷ್ಟರಾಗಿ, ಯಾಗಗಳಿಂದ ದೇವತೆಗಳನ್ನು ಸಂತೋಷಪಡಿಸುತ್ತಾರೆ. ಕಲಹ ಗಳನ್ನು ಮನಃಪೂರ್ವಕವಾಗಿ ಬಿಡುವವರಾಗುತ್ತಾರೆ. ॥೧೬-೧೭॥

ಮಾನವರೆಲ್ಲರೂ ಸತ್ಕುಲಪ್ರಸೂತರಾಗಿ, ಕಮಲಸಮಾನವಾದ ದೃಷ್ಟಿಯು ಳ್ಳವರಾಗುತ್ತಾರೆ. ಶಿಪಿವಿಷ್ಟನೆನಿಸಿದ ನನ್ನ ಪಾದಗಳನ್ನು ಆಶ್ರಯಿಸುವುದರಿಂದ ಪುನರ್ಜನ್ಮವಿಲ್ಲದವರಾಗುತ್ತಾರೆ. ಆ ದ್ವಾಪರಯುಗದಲ್ಲಿ ಇಷ್ಟಾಪೂರ್ತಯಾಗದ ಮಹಾಧರ್ಮವು ಹೆಚ್ಚಾಗುವುದು. ಮತ್ತು ದ್ವಾಪರಯುಗದಲ್ಲಿ ಶಂತನು ಮತ್ತು ಯದುವಂಶದಲ್ಲಿ ಹುಟ್ಟಿದ ರಾಜರು ಬಹುಕಾಲ ಭೂಮಿಯನ್ನಾಳುವರು. ॥೧೮-೧೯॥

ವ್ಯಾಸನ ಮೊಮ್ಮಕ್ಕಳಾದ ಆ ಪಾಂಡವರು ಪಗಡೆಯಾಟದಲ್ಲಿ ಕೌರವರಿಗೆ ಸೋತು, ಭೂಮಿಯನ್ನು ಬಿಟ್ಟು, ಕಾಡಿಗೆ ಹೋಗಿ ಅಲ್ಲಿ ಕಾಡಿನಲ್ಲಿ ಬೆಳೆಯುವ

ಪುನಸ್ತೇ ಪೃಥಿವೀಂ ಪ್ರಾಪ್ಯ ಧಾರ್ತರಾಷ್ಟ್ರೈಶ್ಚ ವಿಗ್ರಹಂ ।
ಉಗ್ರಪ್ರಸಾದಾತ್ಕೃತ್ವೈವ ನಿಗ್ರಹಂ ವೀರ್ಯವತ್ತರಾಃ ॥೨೦॥

ಬುಭುಜುಃ ಪೃಥಿವೀಂ ತೇ ವೈ ಯಾಯಜೂಕಾಃ ಪ್ರಿಯಂವದಾಃ ।
ಅಶ್ವಮೇಧೇನ ದೇವೇಶಂ ಸಾಕ್ಷಾನ್ಮೇಧಪತಿಂ ಶಿವಂ ॥೨೨॥

ಯಜಂತಿ ಶಿವಲಿಂಗೇಽಪಿ ವಾಸುದೇವೇನ ಚಾಂಬಿಕೇ ।
ಉಪಮನ್ಯುಪ್ರಸಾದೇನ ಕೃಷ್ಣೋ ಯದುಕುಲೋದ್ಭವಃ ॥೨೩॥

ಲೇಭೇ ಸ ಪರಮಾಂ ಸಿದ್ಧಿಂ ಮಲ್ಲಿಂಗಾರ್ಚಾಬಲೇನ ಹಿ ।
ವಿಜಿಗ್ಯೇ ಬಲಿಜಂ ಬಾಣಂ ದೋಃಸಹಸ್ರೈಕಜೀವನಂ ॥೨೪॥

ತಥಾನ್ಯಾನ್ಮುರಕಂಸಾದೀನ್ನರಕಂ ದೈತ್ಯನಾಯಕಂ ।
ಮಧುರಾಮಾಸ್ಥಿತೋ ದೇವಿ ದ್ವಾರವತ್ಯಾಮಪಿ ಸ್ಥಿತಃ ॥೨೫॥

---

ಗೆಡ್ಡೆಗೆಣಸುಗಳಿಂದ ಜೀವಿಸುತ್ತಾ ಕೊನೆಗೆ ಆ ಮುಕ್ಕಣ್ಣನ ಪೂಜಾಪ್ರಭಾವಮಹಿಮೆಯಿಂದ ಪುನಃ ಭೂಮಿಗೆ ಬಂದು, (ಕಾಡಿನಿಂದ ಬಂದು) ಧೃತರಾಷ್ಟ್ರಪುತ್ರರಾದ ದುರ್ಯೋದನಾದಿಗಳೊಡನೆ ಯುದ್ಧಮಾಡಿ, ಬಲಶಾಲಿಗಳಾದ ಆ ಪಾಂಡವರು, ಕೌರವರನ್ನು ಸೋಲಿಸಿ, ಆ ಶತ್ರುಭಯಂಕರನಾದ ಶಂಕರನ ಅನುಗ್ರಹದಿಂದಲೆ ರಾಜ್ಯವನ್ನು ಅನುಭವಿಸುವರು. ಅವರು ಯಾವಾಗಲೂ ಯಜ್ಞಶೀಲರಾಗಿ, ಹಿತವನ್ನೇ ನುಡಿಯುತ್ತಾ ಸಾಕ್ಷಾದ್ಯಜ್ಞಪತಿಯಾದ ನನ್ನನ್ನು ಅಶ್ವಮೇಧಯಾಗದಿಂದ ಸೇವಿಸುವರು. ಎಲೌ ಅಂಬಿಕೇ, ಆಗ ಶ್ರೀಕೃಷ್ಣನೊಡನೆ ಶಿವಲಿಂಗದಲ್ಲಿಯೂ ನನ್ನನ್ನು ಪೂಜೆಮಾಡುತ್ತಾರೆ. ॥೨೦-೨೧-೨೨॥

ಉಪಮನ್ಯುವೆನಿಸಿದ ಗುರುವಿನ ಅನುಗ್ರಹದಿಂದ ಯದುವಂಶದಲ್ಲಿ ಹುಟ್ಟಿದ ಶ್ರೀಕೃಷ್ಣನು, ನನ್ನ ಲಿಂಗಪೂಜಾಬಲ ಹೊಂದಿ ಉತ್ತಮವಾದ ಸಿದ್ಧಿಯನ್ನು ಪಡೆದನು. ಈ ಬಲದಿಂದಲೇ ಸಾವಿರ ತೋಳುಗಳಿಂದ ಜೀವಿಸುವ ಬಲಿದೈತ್ಯನು ಬಿಟ್ಟ ಬಾಣಗಳನ್ನು ತಡೆದು ಅವನನ್ನು ಗೆದ್ದನು. ಹಾಗೆಯೇ ಇನ್ನೂ ಬೇರೆ ಮುರ, ಕಂಸ ಮತ್ತು ನರಕಾಸುರರೆಂಬ ರಾಕ್ಷಸಾಧಿಪತಿಗಳನ್ನು ಸಂಹರಿಸಿದನು. ಈ ಕೃಷ್ಣನು ಮಧುರೆಯಲ್ಲಿಯೂ, ದ್ವಾರಕಿಯಲ್ಲಿಯೂ ವಾಸಮಾಡಿಕೊಂಡಿದ್ದನು. ॥೨೩-೨೪-೨೫॥

ಅಶ್ವತ್ಥಾಮಾ ದ್ರೋಣಸುತೋ ಮಮ ಪೂಜಾಪ್ರಭಾವತಃ ।
ಮಯಾ ದತ್ತೇನ ಖಡ್ಗೇನ ಜಿಗಾಯಾರಿಗಣಂ ತದಾ ॥೨೬॥

ಲೇಭೇ ಸ ಪರಮಾಂ ಸಿದ್ಧಿಂ ಲೋಕೇಽದ್ಯಾಪಿ ಪ್ರದೃಶ್ಯತೇ ।
ದ್ವಾಪರಾಂತೇಽಪಿ ಚ ನೃಪೋ ಪಾರಿಕ್ಷಿಜ್ಜನಮೇಜಯಃ ॥೨೭॥

ಅಶ್ವಮೇಧೇನ ದೇವೇಶಮಿಯಾಜಾಹಿಮುಖೇನ ಹಿ ।
ಪಿತರಂ ತಕ್ಷಕೋದ್ಭೂತವಿಷೇಣೋದ್ವೀಕ್ಷ್ಯ ತಂ ಮೃತಂ ॥೨೮॥

ತಕ್ಷಕಂ ಶಕ್ರಸಾಹಾಯ್ಯಾನ್ಮೋಚಿತೋ ನೃಪಸೂನುನಾ ।
ದ್ವಾಪರೇ ಧರ್ಮನಿಪುಣಾ ಪುಣ್ಯಪುಣ್ಯೈಕಜೀವನಾಃ ॥೨೯॥

ಆರಣ್ಯೇಷು ವಿಶೇಷೇಣ ತಪಸಾ ಶೋಷಯಂತಿ ಚ ।
ಋಷಯಃ ಕೃಷಿವಾಣಿಜ್ಯವ್ಯಾಪಾರಾದಪರಾಙ್ಮುಖಾಃ ॥೩೦॥

---

ದ್ರೋಣಾಚಾರ್ಯರ ಮಗನಾದ ಅಶ್ವತ್ಥಾಮನು ನನ್ನ ಪೂಜಾಪ್ರಭಾವ ದಿಂದಲೂ, ನಾನು ಕೊಟ್ಟ ಖಡ್ಗದ (ಕತ್ತಿಯ) ಬಲದಿಂದಲೂ ಯುದ್ಧದಲ್ಲಿ ಶತ್ರುಗಳನ್ನು ಜಯಿಸಿದನು. ಅಲ್ಲದೆ ಪರಮಶ್ರೇಷ್ಠವಾದ ಸಿದ್ಧಿಯನ್ನೂ ಪಡೆದನು. ಈಗಲೂ ಅವನು ಚಿರಜೀವಿಯಾಗಿ ಕಾಣುತ್ತಿರುವನು. ದ್ವಾಪರ ಯುಗದ ಕೊನೆಯಲ್ಲಿಯೂ ಪರೀಕ್ಷಿದ್ರಾಜನ ಮಗನಾದ ಜನಮೇಜಯನು ತಕ್ಷಕನ ವಿಷದಿಂದ ಸತ್ತುಹೋದ ತನ್ನ ತಂದೆಯನ್ನು ನೋಡಿ, ಸರ್ಪಯಾಗಮಾಡಿ ಆ ದೇವತಾಧಿಪತಿಯನ್ನು ಸಂತೋಷಪಡಿಸಿದನು. ॥೨೬-೨೭-೨೮॥

ಆಗ ಇಂದ್ರನ ಸಹಾಯದಿಂದ ತಕ್ಷಕನೊಬ್ಬನು ಯಾಗಕ್ಕೆ ಆಹುತಿಯಾಗದೇ ಜನಮೇಜಯನಿಂದ ರಕ್ಷಿಸಿ ಬಿಡಿಸಲ್ಪಟ್ಟನು. ದ್ವಾಪರ ಯುಗದಲ್ಲಿ ಪ್ರಜೆಗಳೆಲ್ಲರೂ ಧರ್ಮನಿಪುಣರಾಗಿ ಪುಣ್ಯವನ್ನೇ ಒಂದು ವ್ಯಾಪಾರವೆಂದು ಭಾವಿಸಿ ಅದರಿಂದ ಜೀವಿಸುತ್ತಿದ್ದರು. ಋಷಿಗಳು ಅಡವಿಗಳಲ್ಲಿ ವಿಶೇಷವಾಗಿ ತಪಸ್ಸು ಮಾಡುತ್ತಾ ತಮ್ಮ ದೇಹಗಳನ್ನು ಒಣಗಿಸುತ್ತಿದ್ದರು. ಈ ಋಷಿಗಳು ಕೃಷಿ, ವ್ಯಾಪಾರ, ಸುಳ್ಳುವಾದಮಾಡುವುದು ಇವುಗಳಲ್ಲಿ ಹಿಂಜರಿಯುತ್ತಿದ್ದರು. ॥೨೯-೩೦॥

ಸುಮುಖಾಶ್ಚ ತಥಾ ಲೇಖಾ ದ್ವಾಪರೇ ಪಾರದರ್ಶಿನಃ ।
ಸಜ್ಜಮಾನಾ ಯಥಾ ಜೋಷಂ ಯಜಮಾನಾ ಮಖೇಷ್ವಪಿ ॥೩೦॥

ವಿಷಯೇಷ್ವಪಿ ಕಾಷಾಯವಸನಾ ಕಾಮವಾಸನಾಃ ।
ಭವಂತಿ ದ್ವಾಪರಜನಾಃ ದ್ವಿಪಾದ್ಧರ್ಮೋಽತ್ರ ತತ್ರ ಹಿ ॥೩೧॥

ದ್ವಾಪರೇ ಧರ್ಮರೂಪಾತ್ಮಾ ಮಹಾನ್ಧರ್ಮವೃಷೋಽಂಬಿಕೇ ।
ಪ್ರಭವತ್ಯೇವ ಸಹಸಾ ಕಾಲಚಕ್ರಪ್ರವರ್ತಕಃ ॥೩೩॥

ಯುಗಸಂಧಿಷು ವರ್ಷಾಣಾಂ ಸಹಸ್ರಂ ತದ್ಯುಗಾನುಗಂ ।
ಪೌರ್ವಿಕಂ ಸಂಪ್ರವರ್ತೇತ ತತ್ತದ್ಯುಗಭವಂ ಗುಣಂ ॥೩೪॥

ದಶಲಕ್ಷಂ ಕೃತೇ ಸಂಖ್ಯಾ ತ್ರೇತಾಯಾಂ ಪಂಚಲಕ್ಷಕಂ ।
ದ್ವಾಪರಂ ತು ತ್ರಿಲಕ್ಷಂ ಸ್ಯಾತ್ಕಲಿಃ ಪ್ರೋಕ್ತೋ ದ್ವಿಲಕ್ಷಕಃ ॥೩೫॥

ದ್ವಾಪರೋ ವೈಶ್ಯಯುಗಕಃ ತಸ್ಮಿನ್ನೇವಂ ಪ್ರವರ್ತತೇ ॥೩೬॥

---

ದೇವತೆಗಳು ಹಸನ್ಮುಖರಾಗಿ ಈ ದ್ವಾಪರ ಯುಗದಲ್ಲಿ ತೃಪ್ತಿಯ ಪಾರವನ್ನು ಕಾಣುತ್ತಾ ಸಿದ್ಧರಾಗಿ ಯಾಗದಲ್ಲಿ ಬ್ರಾಹ್ಮಣಾದಿಗಳಿಂದ ಸೇವಿಸಲ್ಪಡುತ್ತಿರುವರು. ವಿಷಯಸುಖಗಳಲ್ಲಿಯೂ ವಿಶೇಷವಾಗಿ ಜನಗಳು ಕಾಮವಾಸನಾರಹಿತರಾಗಿ ಕಾಷಾಯವಸ್ತ್ರಗಳನ್ನು ಧರಿಸಿ, ಯತಿಗಳಂತೆ ವ್ಯವಹರಿಸುತ್ತಿದ್ದರು. ದ್ವಾಪರ ಯುಗದ ಜನಗಳ ಧರ್ಮವು ಧರ್ಮವೃಷಭನ ಎರಡು ಪಾದ ಧರ್ಮವುಳ್ಳದ್ದಾಗಿರುತ್ತದೆ. (ಅಂದರೆ ಅರ್ಧಭಾಗ ಧರ್ಮಕಾರ್ಯಶ್ರದ್ಧೆಯು ಅವರಿಗಿರುತ್ತದೆ.) ||೩೦-೩೧||

ಎಲೌ ಅಂಬಿಕೇ, ದ್ವಾಪರಯುಗದಲ್ಲಿ ಈ ದೊಡ್ಡ ವೃಷಭವು ಧರ್ಮರೂಪವಾದ ಶರೀರವುಳ್ಳದ್ದಾಗಿದ್ದು, ಈ ರೀತಿಯಿಂದ ಕಾಲಚಕ್ರವನ್ನು ಜಾಗ್ರತೆಯಾಗಿ ನಡೆಸಿಕೊಂಡು ಹೋಗಲು ಶಕ್ಯವಾಗುತ್ತದೆ. ಆ ದ್ವಾಪರಯುಗದ ಸಂಧಿಗಳಲ್ಲಿ ಸಾವಿರವರ್ಷಗಳು ಆ ಯುಗಧರ್ಮಕ್ಕೆ ಸಂಬಂಧಿಸಿಕೊಂಡಿರುತ್ತವೆ. ಇದೇ ರೀತಿ ಹಿಂದಿನ ಕೃತ ತ್ರೇತಾಯುಗಗಳಿಗೂ ಈ ಯುಗಸಂಧಿಗಳು ಆಯಾ ಯುಗಗಳ ಹಿಂದಿನ ಗುಣಗಳಿಗೆ ಅನುಗುಣವಾಗಿ ನಡೆದಿರುತ್ತವೆ. ||೩೩-೩೪||

ಕೃತಯುಗದಲ್ಲಿ ಹತ್ತುಲಕ್ಷವರ್ಷಸಂಖ್ಯೆಯೂ, ತ್ರೇತಾಯುಗದಲ್ಲಿ ಐದುಲಕ್ಷವೂ, ದ್ವಾಪರದಲ್ಲಿ ಮೂರುಲಕ್ಷವೂ, ಕಲಿಯುಗದಲ್ಲಿ ಎರಡು ಲಕ್ಷವರ್ಷ ಸಂಖ್ಯೆಯೂ

ಏವಂ ಯುಗಾನಾಂ ಪರಿವರ್ತನಮಾನ್ಯೈಃ
ಶತೈಶ್ಚ ಕಲ್ಪೋ ಭವಿತಾಂಬಿಕೇ ತದಾ ।
ಕಲ್ಪೈಃ ಶತೈಸ್ತತ್ರ ವಿಧೇರಥಾಯುಃ
ತಸ್ಯಾಯುಷೋಽಂತೇ ಹರಿಣೋಽಹ್ನಮಾನಂ ॥೩೭॥

ಏವಂ ಹರೇಸ್ತತ್ಪ್ರತಿಮೈಶ್ಚ ಕಲ್ಪೈಃ
ರುದ್ರಸ್ಯ ಚೈವಾಯುರಿತಿ ಸ್ಮರಾಂಬಿಕೇ ।
ಏವಂ ಮನೂನಾಮಥ ಭೂತಭವ್ಯ
ಮಾನಂ ಋಷೀಣಾಮಥ ವರ್ಷಸಂಖ್ಯಾ ॥೩೮॥

ಪ್ರೋಕ್ತಾ ಪುರಾಣೇಷು ವಿಶೇಷತೋಽಂಬಿಕೇ
ತಸ್ಮಾತ್ತ್ವಯಾಹಂ ಕಿಲ ಕಾಲಹೀನಃ । ॥೩೯॥

ಮದುನ್ಮೇಷೋನ್ಮೇಷೋ ಯುಗಶತಗತೀನಾಂ ಪ್ರವಿಲಯೇ
ಹರಿಬ್ರಹ್ಮೇಶಾನಾಂ ಶತಮುಖಮನೂನಾಂ ದಿವಿಷದಾಂ ।

---

ಹೇಳಲ್ಪಟ್ಟಿರುವುದು. ಈ ದ್ವಾಪರಯುಗವು ವೈಶ್ಯಯುಗವೆಂದು ಹೇಳಲ್ಪಡುವುದು. ಆ ಯುಗದಲ್ಲಿ ವೈಶ್ಯ ಧರ್ಮವೇ ಹೆಚ್ಚಾಗಿ ನಡೆಯುವುದು. ॥೩೫-೩೬॥

ಅಂಬಿಕೇ, ಹೀಗೆ ಹೇಳಿದ ಯುಗಗಳು ನೂರು ಬಾರಿ ಸುತ್ತಿಬರುತ್ತಿರಲು, ಆದು ಒಂದು ಕಲ್ಪವೆನಿಸುವುದು. ಇಂತಹ ಕಲ್ಪಗಳು ನೂರುಬಾರಿ ಬಂದರೆ ಅದು ಬ್ರಹ್ಮನ ಆಯುಃಪ್ರಮಾಣವಾಗುವುದು. ಬ್ರಹ್ಮನ ಆಯುಃಪ್ರಮಾಣದ ಕೊನೆಯ ಕಾಲವು ವಿಷ್ಣುವಿಗೆ ಒಂದು ಹಗಲಿನ ಪ್ರಮಾಣವೆನಿಸುವುದು. ॥೩೭॥

ಹೀಗೆಯೇ ಆ ವಿಷ್ಣುವಿನ ನೂರು ಕಲ್ಪಗಳು ರುದ್ರನ ಆಯುಃಪ್ರಮಾಣವೆಂದು ತಿಳಿಯುವಳಾಗು; ಎಲೌ ಅಂಬಿಕೇ, ಇದೇ ರೀತಿಯಿಂದಲೇ ಕಳೆದುಹೋದ ಮನುಗಳು, ಋಷಿಗಳು ಮತ್ತು ಇಂದ್ರ ಇವರ ಆಯುಃಪ್ರಮಾಣವೇರ್ಪಟ್ಟಿರುವುದು. ಪುರಾಣಗಳಲ್ಲಿ ಇದನ್ನೆಲ್ಲಾ ವಿಶೇಷವಾಗಿ ವಿಸ್ತರಿಸಿ ಹೇಳಿದೆ. ಎಲೌ ಅಂಬಿಕೇ, ನಿನ್ನೊಡಗೂಡಿದ ನಾನೊಬ್ಬನು ಮಾತ್ರ ಈ ಕಾಲಪರಿಮಿತಿಗೆ ಸಿಕ್ಕುವನಲ್ಲ. ॥೩೮-೩೯॥

ಎಲೌ ದೇವಿ, ನನ್ನ ರೆಪ್ಪೆಯಾಡಿಸುವಷ್ಟು ಕಾಲದಲ್ಲಿ ನೂರಾರು ಯುಗಗಳ ಪರಿವರ್ತನವಾಗುವುದು. ವಿಷ್ಣು, ಬ್ರಹ್ಮ, ರುದ್ರ, ಇಂದ್ರ, ಮನುಗಳು, ದೇವತೆ

ಋಷೀಣಾಂ ಸಪ್ತಾನಾಂ ಭವತಿ ಪರಿಮಾಣಂ ಕಿಲ ಶಿವೇ
ಮತಾ ಕಾಲಸ್ಯೇಯಂ ಗತಿರಪಿ ಜಗನ್ನಶ್ವರಮಿದಂ ॥೪೦॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ
ದ್ವಾಪರಯುಗಧರ್ಮವರ್ಣನಂ ನಾಮ ಸಪ್ತಮೋಽಧ್ಯಾಯಃ

---

ಗಳು, ಸಪ್ತಋಷಿಗಳು ಇವರ ಆಯುಃಪ್ರಮಾಣವೆಲ್ಲವೂ ವಿಧಾಯಕವಾಗಿ ಇಷ್ಟಿಷ್ಟೆ ಎಂದು ಗುರುತಿಸಲ್ಪಟ್ಟಿದೆ. ಈ ಪ್ರಪಂಚವು ಹೀಗೆ ಕಾಲನಿಯಮಕ್ಕೊಳಗಾಗಿರುವುದರಿಂದಲೇ ನಶ್ವರವೆಂದು ಹೇಳಲ್ಪಡುವುದು. ॥೪೦॥

ಇಲ್ಲಿಗೆ ಶ್ರೀ ಶಿವರಹಸ್ಯದ ಸದಾಶಿವಸಂಜ್ಞಕವಾದ
ಒಂಬತ್ತನೆಯ ಅಂಶದಲ್ಲಿ ದ್ವಾಪರಯುಗಧರ್ಮದ ವರ್ಣನೆಯೆಂಬ
ಏಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಅಷ್ಟಮೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

ಕಲೇಃ ಸ್ವರೂಪಂ ವಕ್ಷ್ಯಾಮಿ ತ್ವಂ ದೇವಿ ಶೃಣು ಹರ್ಷದಂ ।
ಯೋ ಧರ್ಮರೂಪೋ ವೃಷಭಃ ಕೈಲಾಸೇ ತ್ವೇಕಪಾದ್ಭವೇತ್ ॥೧॥

ತೇನ ಧರ್ಮೋ ಹ್ರಸತ್ಯೇವ ಕಲೌ ತಾಮಸಜೋ ಗುಣಃ ।
ಸಂಪಾಂತಾಃ ಕ್ಷತ್ರಿಯಾಸ್ತಸ್ಮಿನ್ವಿಕ್ರಮಾದ್ಯಾಸ್ತತಃ ಪರಂ ॥೨॥

ಶಾಲಿವಾಹನಸಂಜ್ಞಶ್ಚ ಕುಲಾಲೇಷು ನೃಪೋ ಭವೇತ್ ।
ಮುಂಜಭೋಜೌ ಭವೇತಾಂ ದ್ವೌ ತತಶ್ಚೋಲಾಶ್ಚ ಷೋಡಶ ॥೩॥

---

## ಎಂಟನೆಯ ಅಧ್ಯಾಯ

ಎಲೌ ದೇವಿ! ಈಗ ಕಲಿಸ್ವರೂಪವನ್ನರುಹುವೆನು ; ಹರ್ಷವನ್ನುಂಟು ಮಾಡುವ ಇದನ್ನು ಕೇಳು ; ಕಲಿಯುಗದಲ್ಲಿ ಧರ್ಮರೂಪವಾದ ವೃಷಭವು ಒಂದುಪಾದವುಳ್ಳದ್ದಾಗುವುದು. ಇದರಿಂದ ಧರ್ಮವು ಕುಗ್ಗುವುದು. ಈ ಕಲಿಯುಗದಲ್ಲಿ ತಮೋಗುಣಜನ್ಯವಾದ ಗುಣಗಳು ಅಧಿಕವಾಗುವುವು. ವಿಕ್ರಮನಿಂದ ಪ್ರಾರಂಭವಾಗಿ ನವನಂದರೆ ಕಲಿಯುಗದಲ್ಲಿ ಕೊನೆಯ ಕ್ಷತ್ರಿಯರೆನಿಸುವರು. ಅವರ ನಂತರ, ॥೧-೨॥

ಕುಂಬಾರರಲ್ಲಿ ಶಾಲಿವಾಹನನೆಂಬುವನು ರಾಜನಾಗುವನು. ಮುಂಜ, ಭೋಜರೆಂಬಿಬ್ಬರೂ, ಬೇಗನೇ ಚೋಳರಲ್ಲಿ ಹದಿನಾರುಮಂದಿಯೂ, ಭಸ್ಮರುದ್ರಾಕ್ಷಭೂಷಿತ

ಭಸ್ಮರುದ್ರಾಕ್ಷಸಂಪನ್ನಾಃ ಶಿವಭಕ್ತಾ ಮಹೌಜಸಃ ।
ಶಿವಾಲಯಕರಾಸ್ಸರ್ವೇ ದೇಶೇ ರಾಷ್ಟ್ರೇ ಚ ಚೋಲಕೇ ॥೪॥

ಸಹ್ಯಜಾತೀರನಿಲಯಾ ರಾಜಾನೋ ದ್ರವಿಡಾಧಿಪಾಃ ।
ಚೇರಾಃ ಪಂಚಶತಂ ದೇವಿ ರಾಜಾನಃ ಪಾಂಡ್ಯವಂಶಜಾಃ ॥೫॥

ಮಲಯಧ್ವಜಸಂಭೂತಾ ಯತ್ರ ಜಾತಾ ತ್ವಮೇವ ಹಿ ।
ಹಾಲಾಸ್ಯನಿಲಯಾ ದೇವಿ ಮೀನಾಕ್ಷೀ ಸುಂದರೇಶ್ವರಃ ॥೬॥

ಅಹಮೇವ ಮಹಾಲಿಂಗೇ ನಿವಸಾಮಿ ಕಲೌ ಶಿವೇ ।
ಭವಿಷ್ಯಂತಿ ಮಹೀಪಾಲಾ ಚೇರೇ ಚೋಲೇ ಚ ಪಾಂಡ್ಯಕೇ ॥೭॥

ಶಿವಭಕ್ತಾ ನರಾಸ್ಸರ್ವೇ ತೇಷು ಶಾಸತ್ಸು ಶಂಕರಿ ।
ಸಹಸ್ರವತ್ಸರೇ ಸರ್ವೇ ಶಾಲಿವಾಹನವಿಕ್ರಮೌ ॥೮॥

---

ರಾಗಿ ಮಹಾಪರಾಕ್ರಮಿಗಳಾದ ಶೈವರಾಜರಾಗುವರು. ಈ ರಾಜರೆಲ್ಲರೂ ತಮ್ಮ ತಮ್ಮ ದೇಶಗಳಲ್ಲಿಯೂ ರಾಷ್ಟ್ರಗಳಲ್ಲಿಯೂ ಶಿವದೇವಾಲಯಗಳನ್ನು ರಚಿಸುತ್ತಾರೆ. ಚೋಲದೇಶದಲ್ಲಿಯೂ, ಚೇರದೇಶದಲ್ಲಿಯೂ, ಕಾವೇರಿಯ ನದಿಯ ದಡದಲ್ಲಿಯೂ ದ್ರವಿಡರಾಜರನೇಕರು ಶಿವಾಲಯಗಳನ್ನು ನಿರ್ಮಿಸುವರು. ಆ ಚೇರದೇಶದ ಪಾಂಡ್ಯ ವಂಶೋತ್ಪನ್ನರಾದ ಐವತ್ತು ಮಂದಿ ರಾಜರು ದೇವಾಲಯಗಳನ್ನು ಕಟ್ಟಿಸುವರು. ||೩-೪-೫||

ದೇವಿ! ನೀನೇ ಮಲಯಧ್ವಜಕುಮಾರಿಯಾಗಿ ಹುಟ್ಟಿ, ಹಾಲಾಸ್ಯಕ್ಷೇತ್ರ ದಲ್ಲಿ ನೆಲಸಿ, ಮೀನಾಕ್ಷಿಯೆಂಬ ನಾಮದಿಂದ ಪ್ರಸಿದ್ಧಿಪಡೆಯುವೆ. ಸುಂದರೇಶ್ವರನೆಂಬ ಹೆಸರಿನಿಂದ ನಾನು ಆ ಮಹಾ ಲಿಂಗದಲ್ಲಿ ಈ ಕಲಿಯುಗದಲ್ಲಿಮಾತ್ರ ವಾಸಮಾಡು ವೆನು. ಎಲೌ ಮಂಗಳಾಂಗಿಯೇ! ಚೇರ ಮತ್ತು ಚೋಲ ದೇಶದಲ್ಲಿಯೂ ಮತ್ತು ಪಾಂಡ್ಯದೇಶಗಳಲ್ಲಿಯೂ ರಾಜರು ಶಿವಭಕ್ತಿಯುಕ್ತರಾಗಿರುತ್ತಾರೆ. ಇವರ ರಾಜ್ಯಭಾರ ದಲ್ಲಿ ಮಾನವರೆಲ್ಲರೂ, ಶಿವನಲ್ಲಿ ಭಕ್ತಿಹೊಂದಿರುತ್ತಾರೆ. ಇವರಿಗೆ ಸಾವಿರ ವರ್ಷಗಳ ಆಯುಃಪ್ರಮಾಣವಿರುತ್ತದೆ. ಶಾಲಿವಾಹನ ಮತ್ತು ವಿಕ್ರಮರಿಬ್ಬರು, ರಾಜ್ಯಭಾರ ಮಾಡುವಾಗ ಜನಗಳ ಆಯುಸ್ಸು ಸಹಸ್ರಾಬ್ದವೆನಿಸಿರುತ್ತದೆ. ||೬-೭-೮||

ತತಶ್ಚೋಲಾ ಕಲೌ ಪಾಂಡ್ಯಾಃ ಸಹಸ್ರದ್ವಿತಯಂ ಶಿವೇ ।
ಭವಿಷ್ಯಂತಿ ಮಹೀಪಾಲಾಸ್ತತಃ ಶೂದ್ರಾಶ್ಚ ಸಂಕರಾಃ ॥೯॥

ಆಂಧ್ರಾಣಾಂ ನೃಪಷಟ್ಕಂ ವೈ ನೃಪಾಣಾಂ ವೈ ಭವಿಷ್ಯತಿ ।
ಆರ್ಯಾವರ್ತಾವಿಮುಕ್ತೇ ಚ ಕುರುಕ್ಷೇತ್ರೇ ವಿಶೇಷತಃ ॥೧೦॥

ಮ್ಲೇಚ್ಛಾ ಭೂಮಿಭುಜಃ ಸ್ವೈರಂ ಭವಿಷ್ಯಂತ್ಯಲ್ಪಮೇಧಸಃ ।
ಪಂಚಾಶತಂ ವತ್ಸರಾಣಾಂ ಶೂದ್ರಮಾಂಡಲಿಕಾ ನೃಪಾಃ ॥೧೧॥

ದಸ್ಯುಪ್ರಾಯಾ ಭವಿಷ್ಯಂತಿ ಧರ್ಮೋಚ್ಛೇದಕರಾಃ ಕಲೌ ।
ಮ್ಲೇಂಛಾಚಾರಪರಾಸ್ಸರ್ವೇ ದರಿದ್ರಾಶ್ಚ ದ್ವಿಜಾತಯಃ ॥೧೨॥

ಭವಿಷ್ಯಂತ್ಯಲ್ಪಮತಯೋ ಯತಿಸ್ತತ್ರ ಭವಿಷ್ಯತಿ ।
ಶಿವೇ ಮದಂಶಸಂಭೂತಃ ಶಂಕರಃ ಶಾಂಕರೋತ್ತಮಃ ॥೧೩॥

ಚತುರ್ಭಿಃ ಸಹ ಶಿಷ್ಯೈಶ್ಚ ಕಲಾವವತರಿಷ್ಯತಿ ।
ತಸ್ಮೈ ಚೋಪನಿಷದ್ವಿದ್ಯಾ ಮಯಾ ದತ್ತಾ ಮಹೇಶ್ವರಿ ॥೧೪॥

---

ಎಲೌ ಮಂಗಳಾಂಗಿಯೇ, ಇವರಾದ ಮೇಲೆ, ಕಲಿಯುಗದಲ್ಲಿಯೇ ಚೋಲ ಮತ್ತು ಪಾಂಡ್ಯವಂಶದ ಎರಡುಸಾವಿರ ರಾಜರುದ್ಭವಿಸುವರು. ಅವರಾದ ನಂತರ ಶೂದ್ರರೂ ಮತ್ತು ಸಂಕರಜಾತಿಯವರೂ, ಆರುಮಂದಿ ಆಂಧ್ರರಾಜರೂ ರಾಜರಾಗುವರು. ಆರ್ಯಾವರ್ತ, ಅವಿಮುಕ್ತಕ್ಷೇತ್ರ ಮತ್ತು ಕುರುಕ್ಷೇತ್ರದಲ್ಲಿ ವಿಶೇಷವಾಗಿ ಮ್ಲೇಚ್ಛಧರ್ಮದ ರಾಜರು ಆಳುವರು. ॥೯-೧೦॥

ಸ್ವಲ್ಪಬುದ್ಧಿಯುಳ್ಳ ಮ್ಲೇಚ್ಛರು ಸ್ವೇಚ್ಛೆಯಾಗಿ ಭೂಮಿಪತಿಗಳಾಗುವರು. ಅನಂತರ ಐವತ್ತುವರ್ಷಗಳ ಕಾಲ ಶೂದ್ರಮಾಂಡಲಿಕರೇ ರಾಜರಾಗಿರುವರು. ಇವರು ಲೂಟಿ, ಕೊಳ್ಳೆ ಹೊಡೆಯುವವರಿಗೆ ಸಮಾನರಾಗಿ ಕಲಿಯುಗದಲ್ಲಿ ಧರ್ಮನಾಶಮಾಡುತ್ತಾರೆ. ಬ್ರಾಹ್ಮಣರೆಲ್ಲಾ ಮ್ಲೇಚ್ಛರ ಆಚಾರವನ್ನು ನಡೆಸುತ್ತಾ ಬಡವರಾಗಿ ಬಾಳುವರು. ॥೧೧-೧೨॥

ದೇವಿ, ಈ ಕಲಿಯುಗದಲ್ಲಿ ಜನಗಳು ಅಲ್ಪಬುದ್ಧಿಯುಳ್ಳವರಾಗುವರು. ಮುಂದೆ ಇದೇ ಕಲಿಯುಗದಲ್ಲಿ ನನ್ನ ಅಂಶದಿಂದ ಹುಟ್ಟಿದವನೂ, ಶಾಂಕರರಲ್ಲಿ ಉತ್ತಮನೂ ಆದ ಶಂಕರಯತಿಯು ಪ್ರಾದುರ್ಭವಿಸುವನು. ಎಲೌ ಮಹೇಶ್ವರಿ,

ಭೂಮೌ ಪಾಖಂಡಷಂಡಾನಾಂ ಖಂಡನಂ ಸ ಕರಿಷ್ಯತಿ ।
ಕಲಾವಪಿ ಮಹಾದೇವಿ ಹರದತ್ತಾಭಿಧೋ ದ್ವಿಜಃ ॥೧೫॥

ಅಶೈವದಂಡನಾರ್ಥಾಯ ಭವಿಷ್ಯತಿ ಮಹೀತಲೇ ।
ದೀಕ್ಷಿತೋಽಪಿ ಭವೇತ್ಕಶ್ಚಿನ್ಮದಂಶೋ ಭೂಸುರೋಽಂಬಿಕೇ ॥೧೬॥

ಭೂಸುರಾಚಾರನಿರತಃ ಶೈವಶ್ಛಂದೋಗವಂಶಜಃ ।
ಶೈವಶಾಸ್ತ್ರಂ ತಥಾ ಭೂಮೌ ಲುಪ್ತಂ ವಿಸ್ತಾರಯಿಷ್ಯತಿ ॥೧೭॥

ಅನ್ಯೇಽಪಿ ಭಕ್ತಾ ದೇವೇಶಿ ಚೇರೇ ಚೋಲೇ ಚ ಪಾಂಡ್ಯಕೇ ।
ಭವಿಷ್ಯಂತಿ ಮಹಾಭಕ್ತಾ ಮಯಿ ಸರ್ವಾಸು ಜಾತಿಷು ॥೧೮॥

ತ್ರಿಷಷ್ಟಿಪರಿಮಾಣಾಸ್ತೇ ಪ್ರಮಾಣಾ ಭಕ್ತಿಹೇತವೇ ।
ಸುಂದರೋ ಜ್ಞಾನಸಂಬಂಧಸ್ತಥಾ ಮಾಣಿಕ್ಯವಾಚಕಃ ॥೧೯॥

---

ಆ ಶಂಕರಯತಿಯು ನಾಲ್ಕುಮಂದಿ ಶಿಷ್ಯರೊಡನೆ ಕಲಿಯುಗದಲ್ಲಿ ಅವತಾರಮಾಡುವನು. ಅವನಿಗೆ ಉಪನಿಷದ್ವಿದ್ಯೆಯನ್ನು ನಾನು ಕರುಣಿಸುವೆನು. ॥೧೩-೧೪॥

ಎಲೌ ಮಹಾದೇವಿ, ಆ ಬ್ರಾಹ್ಮಣನು ಭೂಮಿಯಲ್ಲಿ ನಾಸ್ತಿಕರಾದ ಪಾಖಂಡಿಗಳನ್ನು ಖಂಡನೆಮಾಡುತ್ತಾನೆ. ಅಂಬಿಕೇ, ಅಲ್ಲದೇ ಇದೇ ಕಲಿಯುಗದಲ್ಲಿ ಶಿವಭಕ್ತರಲ್ಲದವರನ್ನು ಶಿಕ್ಷಿಸುವುದಕ್ಕೋಸ್ಕರ ಹರದತ್ತನೆಂಬ ಬ್ರಾಹ್ಮಣನೊಬ್ಬನು ಹುಟ್ಟುವನು. ಇವನೂ ಅಲ್ಲದೇ ನನ್ನ ಅಂಶಸಂಭೂತನಾದ ಒಬ್ಬ ದೀಕ್ಷಿತನೂ ಅವತಾರ ಮಾಡುತ್ತಾನೆ. ॥೧೫-೧೬॥

ಛಂದೋಗವಂಶಸಂಭೂತನಾದ ಆ ಶೈವನು ತೇಜಸ್ವಿಯಾಗಿ ಸದಾಚಾರ ಸಂಪನ್ನನಾಗುತ್ತಾನೆ. ಈತನು ಭೂಮಿಯಲ್ಲಿ ನಷ್ಟವಾಗಿರುವ ಶೈವಶಾಸ್ತ್ರವನ್ನು ವಿಶೇಷವಾಗಿ ವಿಸ್ತಾರಮಾಡುತ್ತಾನೆ. ಎಲೌ ದೇವತೋತ್ತಮಳೇ, ಇವರಲ್ಲದೇ ಇತರ ಭಕ್ತರೂ ಚೇರೆ ಚೋಲ ಮತ್ತು ಪಾಂಡ್ಯವಂಶದಲ್ಲಿ ಜನಿಸುವರು. ಎಲ್ಲಾ ಜಾತಿಗಳಲ್ಲಿಯೂ ಮಹಾಶಿವಭಕ್ತರನೇಕರು ಈ ಕಲಿಯುಗದಲ್ಲಿ ಅಲ್ಲಲ್ಲಿ ಅವತರಿಸುವರು. ॥೧೭-೧೮॥

ನನ್ನ ಭಕ್ತಿಯು ಕಲಿಯುಗದಲ್ಲಿ ಪ್ರಸರಿಸಲು ಕಾರಣಭೂತರೂ ಪ್ರಮಾಣರೂ ಆದವರು ಅರುವತ್ತುಮೂರು ಮಂದಿಗಳು. ಅವರಲ್ಲಿಯೂ, ಸುಂದರ, ಜ್ಞಾನ

ತೇಷು ಮುಖ್ಯಾಸ್ತ್ರಯೋऽಪೀಮೇ ತಚ್ಚರಿತ್ರಂ ವದಾಮಿ ತೇ ।
ಅಗಸ್ತ್ಯೋ ಮಮ ಭಕ್ತೋ ಹಿ ತಥಾನ್ಯೇ ಬ್ರಾಹ್ಮಣರ್ಷಭಾಃ ॥೨೦॥

ಭವಭಕ್ತಾ ಭವಿಷ್ಯಂತಿ ಕಲಾವಪಿ ತಪೋಬಲಾತ್ ।
ಸಹ್ಯಜಾತೀರಲಿಂಗಾನಾಂ ಮಹಿಮಾನಂ ಶಿವೇऽದ್ಭುತಂ ॥೨೧॥

ವರ್ಣಯಂತ್ಯೇವ ತೇ ದೇವಿ ಅಗಸ್ತ್ಯೋಕ್ತೇನ ಭಾಷಯಾ ।
ದ್ರಾವಿಡೇನೈವ ದೇವೇಶಿ ಮಯಿ ತತ್ಪ್ರೀತಿದಾಯಕಂ ॥೨೨॥

ರಾಜಾನಃ ಕಿಲ ದಸ್ಯುವಂಶಜನಿತಾಃ ಪಾಪಾಸ್ತಥಾ ಮಾಂಡಲಾಃ
ವಿಪ್ರದ್ರೋಹಪರಾಯಣಾಃ ಶಿವಮಹಾಲಿಂಗಾಲಯೋಚ್ಛೇದಕಾಃ ।

ರುದ್ರಾಕ್ಷಾಮಲಭಸ್ಮಧಾರಣಮಹಾಲಿಂಗಾರ್ಚನಾವರ್ಜಿತಾಃ
ಲೋಕೇ ಕೇವಲತಾಮಸಾಃ ಪ್ರತಿಕಲೌ ಜಾಯಂತ ಏವಾಂಬಿಕೇ ॥೨೩॥

---

ಸಂಬಂಧ ಮತ್ತು ಮಾಣಿಕ್ಯವಾಚಕರೆಂಬ ಈ ಮೂರುಮಂದಿಯೂ ಮುಖ್ಯರಾದ ವರು. ದೇವಿ, ಅವರ ಚರಿತ್ರೆಯನ್ನು ನಿನಗೆ ಹೇಳುವೆನು, ಕೇಳು; ಅಗಸ್ತ್ಯ ಮುನಿಯೂ ಇತರ ಅನೇಕ ಮಂದಿ ಬ್ರಾಹ್ಮಣೋತ್ತಮರೂ ನನ್ನ ಭಕ್ತರೆಂಬುದು ನಿನಗೆ ತಿಳಿದೇ ಇದೆಯಲ್ಲವೆ? ||೧೯-೨೦||

ದೇವೇಶಿ! ಕಲಿಯುಗದಲ್ಲಿಯೂ ತಪಶ್ಶಕ್ತಿಯಿಂದ ಅನೇಕಮಂದಿ ನನ್ನ ಭಕ್ತರಾಗಿ ಹುಟ್ಟುವರು. ಆ ಭಕ್ತರೆಲ್ಲರೂ ಕಾವೇರೀನದಿಯ ದಡದಲ್ಲಿರುವ ಶಿವ ಲಿಂಗಗಳ ಅದ್ಭುತವಾದ ಪ್ರಭಾವವನ್ನು, ಅಗಸ್ತ್ಯಮುನಿಯಿಂದ ಕಲ್ಪಿತವಾದ ದ್ರವಿಡ ಭಾಷೆಯಿಂದ (ತಮಿಳು ಭಾಷೆಯಿಂದ) ವರ್ಣನೆಮಾಡುತ್ತಾರೆ. ದೇವಿ! ಇದು ನನಗೆ ತುಂಬಾ ಪ್ರೀತಿಯನ್ನುಂಟುಮಾಡುವುದು. ||೨೧-೨೨||

ಅಂಬಿಕೆಯೆ! ಕಿರಾತ, ಬೇಡ ಮುಂತಾದ ದರೋಡೆಗಾರರ ವಂಶದಲ್ಲಿ ಜನಿಸಿದ ರಾಜರು ಪಾಪಿಗಳೂ ಮಾಂಡಲಿಕರೂ ಆಗಿ, ಬ್ರಾಹ್ಮಣದ್ರೋಹಮಾಡು ವುದರಲ್ಲಿಯೇ ನಿರತರಾಗಿ, ಶಿವನ ದೊಡ್ಡ ದೊಡ್ಡ ಲಿಂಗಗಳುಳ್ಳ ದೇವಾಲಯ ಗಳನ್ನೇ ಬುಡಸಹಿತ ಕೆಡವಿಹಾಕುವರು. ರುದ್ರಾಕ್ಷ, ನಿರ್ಮಲವಾದ ಭಸ್ಮ, ಇವು ಗಳನ್ನು ಧರಿಸದೇ, ಪರಶಿವನ ಮಹಾಲಿಂಗವನ್ನೂ ಪೂಜೆಮಾಡದೇ ಕೇವಲ ತಮೋಗುಣಭೂಯಿಷ್ಠರಾದವರೇ ಪ್ರತಿ ಕಲಿಯುಗಗಳಲ್ಲಿಯೂ ಹುಟ್ಟುತ್ತಾರೆ. ||೨೩||

ಮನ್ನೈವೇದ್ಯವಿವರ್ಜಿತಾಃ ಪ್ರತಿಕಲೌ ಸದ್ವಿದ್ಯಯಾ ವರ್ಜಿತಾಃ
ದುಷ್ಟಾಃ ಶಿಷ್ಟಸಮಾ ಇವ ಮಹಾಕಷ್ಟೈಕನಿಷ್ಠಾಃ ಶಿವೇ ।
ಸಂತುಷ್ಟಾಃ ಶಿವನಿಂದಯಾ ಹರಮಹಾಶ್ರೀಲಿಂಗಸಾಮ್ಯಾರ್ಚಯಾ
ತೇ ಚಕ್ರೋಪಲತಪ್ತಚಕ್ರಸುಮಹಾಫಾಲೋರ್ಧ್ವಪುಂಡ್ರಾ ಜಡಾಃ ॥೨೪॥

ಕರ್ಮಂದಿನೋಽಪಿ ವಿಮಲಾ ಹರಪಾದಪದ್ಮ
ಸಂಪೂಜಕಾ ಭಸಿತಫಾಲಸಿತತ್ರಿಪುಂಡ್ರಾಃ ।
ವೇದಾಂತಶಾಂತಿಗುರುಪೂಜನಸಕ್ತಚಿತ್ತಾ
ಮತ್ತಾ ಇವ ಪ್ರತಿಗೃಹೇಷು ಚ ಭಿಕ್ಷಿತಾನ್ನಾಃ ॥೨೫॥

ಉರ್ವೀ ನಿರ್ವೀರ್ಯಕಾಂತಾ ಕಲಿಮಲಜಜಲಾನಿಷ್ಟನಿಷ್ಠಾನಯುಕ್ತಾ
ಶಿಷ್ಟಾಚಾರೈಕನಿಷ್ಠ ಕ್ಷುಭಿತ ನೃಪಶತೈರ್ನಿರ್ಜಿತ ತುಚ್ಛಪ್ರತಿಷ್ಠಾಃ

---

ಪ್ರತಿ ಕಲಿಯುಗದಲ್ಲಿಯೂ ಜನಗಳು ನನಗೆ ನೈವೇದ್ಯಮಾಡಿದ ಪ್ರಸಾದವನ್ನು ಭಕ್ಷಿಸದೆ ಶೈವಜ್ಞಾನರಹಿತರಾಗಿ, ನಾವೂ ಸತ್ಪುರುಷರಂತೆಯೇ ನಡೆಯುವೆವೆಂದು ತಿಳಿದು ತುಂಬಾ ಕಷ್ಟಕ್ಕೊಳಗಾಗುವರು. ಎಲೌ ದೇವಿಯೇ, ಅಂತಹವರು ಯಾವಾಗಲೂ ನನ್ನನ್ನು ನಿಂದಿಸುವುದರಲ್ಲಿಯೇ ಸಂತೋಷಭರಿತರಾಗಿ, ಶಿವನ ಮಹಾಲಿಂಗಪೂಜೆಯು ಅವೈದಿಕವೆಂದು ತಿಳಿದು ಪೂಜೆಮಾಡದೇ, ತಪ್ತಚಕ್ರ ಚಿಹ್ನಿತರಾಗಿ, ಹಣೆ ಮುಂತಾದ ಅವಯವಗಳಲ್ಲಿ ಊರ್ಧ್ವಪುಂಡ್ರಗಳನ್ನು ಧರಿಸಿ ಮೂರ್ಖರಾಗುವರು. ॥೨೪॥

ಈ ಕಲಿಯುಗದಲ್ಲಿ ಪರಿಶುದ್ಧರಾದ ಸಂನ್ಯಾಸಿಗಳೂ (ಭಿಕ್ಷಾವೃತ್ತಿಯಿಂದ ಜೀವಿಸುವ ಯತಿಗಳು) ಬಹು ವಿರಳ. ಏಕೆಂದರೆ ಶಂಕರನೆನಿಸಿದ ನನ್ನ ಅಡಿದಾವರೆಗಳನ್ನು ಪೂಜಿಸುತ್ತಾ ಶುಭ್ರವಾದ ಭಸ್ಮತ್ರಿಪುಂಡ್ರಗಳಿಂದ ಶೋಭಿಸುವ ಹಣೆಯುಳ್ಳವರಾಗಿ, ವೇದಾಂತಾಧ್ಯಯನ, ಶಾಂತಿಪಾಠ, ಗುರುಗಳ ಪೂಜೆ ಇವುಗಳಲ್ಲಿ ನೆಲಸಿದ ಮನಸ್ಸುಳ್ಳ ಇವರು, ಕೊಬ್ಬಿದವರಂತೆ ಪ್ರತಿಯೊಂದು ಮನೆಯಲ್ಲಿಯೂ ಭಿಕ್ಷೆ ಬೇಡಿ, ಅದನ್ನು ತಿಂದು ಮತ್ತರಾಗುವರು. ಇಂತಹವರೇ ಈ ಯುಗದಲ್ಲಿ ಹೆಚ್ಚು. ॥೨೫॥

ಭೂಮಿಯು ಬಲಹೀನರಾದ ಅರಸುಗಳಿಂದ ವಿಶೇಷವಾಗಿ ದುರ್ಬಲವಾಗುವುದು. ಮಾಲಿನ್ಯಯುಕ್ತವಾದ ಮತ್ತು ಕಲ್ಮಷವಿಶಿಷ್ಟವಾದ ಜಲರಾಶಿಯಿಂದ ವ್ಯಾಪ್ತವಾಗುವುದು. ಶಿಷ್ಟಾಚಾರ (ಸದಾಚಾರ) ದಲ್ಲಿ ನಿರತರಾದ ಜನಗಳನ್ನು ಕ್ಷೋಭೆಗೊಳಿಸುವ

**ಸತ್ಯೇ ನಿಃಸತ್ವತಾಧೀರ್ಜನಜನುರಫಲಂ ಷಂಡಸಾಷಂಡಧರ್ಮೋ**
**ನೋ ಕಶ್ಚಿತ್ಪ್ರಭವೇತ ಶಂಕರಪದಧ್ಯಾನಾನುರಕ್ತಃ ಕಲೌ ॥೨೬॥**

**ಹೂಣಾಃ ಸ್ಥೂಣಕರಾಶ್ಚ ಶೋಣಿತಮುಖಾಃ ಭ್ರೂಣಪ್ರಭಾಭಾವಿತಾಃ**
**ಗೀರ್ವಾಣಾನಪಿ ಜೇತೃಶಕ್ತಿನಿವಹೈಃ ಪಾಷಾಣಸಾಣೀಗಣಾಃ ।**
**ಘೋಣಾಘರ್ಘರಸಾಮ್ಯವಾದ್ಯಜಮುಹಾನಿಃಸಾಣವಿಶ್ರಾಣಿನೋ**
**ಕ್ಷೋಭಾಯಾಬ್ಧಿಷು ಸಂಚರಂತಿ ಹಿ ಕಲೌ ನೀಲಾಜಿನೀಭೂಷಣಾಃ ॥೨೭॥**

**ನಿತ್ಯಾನುಷ್ಠಾನತುಷ್ಟೋ ನ ಭವತಿ ಹಿ ಜನಸ್ತುಷ್ಟಿಪುಷ್ಟ್ಯಾ ವಿಯುಕ್ತೋ**
**ಭ್ರಷ್ಟಃ ಶಿಷ್ಟವಿನಿಂದಕಃ ಕಲಿಯುಗೇ ಜ್ಯೇಷ್ಠಾರ್ಚನಾವರ್ಜಿತಃ ।**

---

ನೂರಾರು ತುಚ್ಛರಾದ ಮ್ಲೇಚ್ಛರಾಜರು ಪ್ರಖ್ಯಾತರಾಗುತ್ತಾರೆ. ಜನಗಳಿಗೆ ಸತ್ಯದಲ್ಲಿ ಶ್ರದ್ಧೆಯೇ ಉಂಟಾಗುವುದಿಲ್ಲ ಮತ್ತು ಸತ್ಯದಲ್ಲಿ ತಿರುಳಿಲ್ಲವೆಂಬ ಬುದ್ಧಿಯು ಬೇರೆ ಉಂಟಾಗುತ್ತದೆ. ಮಾನವಜನ್ಮವೆತ್ತಿದವರು ತಮ್ಮ ಜನ್ಮವನ್ನು ಸಾರ್ಥಕಪಡಿಸಿ ಕೊಳ್ಳದೇ ನಿಷ್ಪ್ರಯೋಜಕರಾಗುವರು. ಕೇವಲ ಷಂಡರು (ನಪುಂಸಕರು) ಮತ್ತು ನಾಸ್ತಿಕರ ಧರ್ಮವೇ ಪ್ರಬಲವಾಗಿ ಹರಡುವುದು. ಈ ಕಲಿಯುಗದಲ್ಲಿ ನಿಜವಾಗಿ ಶಂಕರನ ಪಾದಧ್ಯಾನದಲ್ಲಿ ಆಸಕ್ತನಾದವನೊಬ್ಬನೂ ಹುಟ್ಟುವುದಿಲ್ಲ. ॥೨೬॥

ದಪ್ಪವಾದ ಕೈಗಳಿಂದಲೂ, ಕೆಂಪುಮುಖಗಳಿಂದಲೂ, ಮಾಂಸದ ಉಂಡೆ ಯಂತಿರುವ ದೇಹದಿಂದಲೂ ಕೂಡಿದ ಹೂಣರು (ಪಾಶ್ಚಾತ್ಯರು) ಪಿರಂಗಿ, ಬಂದೂಕ ಮೊದಲಾದ ವಿಷಮಿಶ್ರಿತವಾದ ಆಯುಧಗಳನ್ನು ಹಿಡಿದ ಸೈನಿಕರ ತಂಡಗಳುಳ್ಳವ ರಾಗಿ, ತಮ್ಮ ಪಾಶವೀಶಕ್ತಿ ಸಮೂಹದಿಂದ ದೇವತೆಗಳನ್ನು ಬೇಕಾದರೂ ಜಯಿಸು ವಷ್ಟು ಸಿದ್ಧತೆಯುಳ್ಳವರಾಗುವರು. ಇಂತಹ ಹೂಣರು ಝುಲ್ಲರೀ, ಬ್ಯಾಂಡು ಮೊದಲಾದ ವಾದ್ಯಗಳನ್ನು ಬಾರಿಸುತ್ತಾ ಮಹಾಧ್ವನಿಯನ್ನುಂಟುಮಾಡುವರಾಗಿ ಕರಿಯ ಚರ್ಮದ ಉಡುಪುಗಳನ್ನಲಂಕರಿಸಿಕೊಂಡು, ಸಮುದ್ರಗಳಲ್ಲಿ ನೌಕೆಗಳ ಮೇಲೆ ಸಂಚರಿಸುತ್ತಾ ಈ ಕಲಿಯುಗದಲ್ಲಿ ದೇಶಕ್ಕೆ ಕ್ಷೋಭೆಯನ್ನುಂಟುಮಾಡು ವರು. ॥೨೭॥

ನಿತ್ಯಕರ್ಮಾನುಷ್ಠಾನ ಮಾಡುವುದರಲ್ಲಿ ಸಂತುಷ್ಟರಾಗದೇ, ಜನಗಳು ಯಾವಾಗಲೂ ತುಷ್ಟಿ, (ತೃಪ್ತಿ) ಪುಷ್ಟಿ (ಶರೀರದಾರ್ಢ್ಯ) ಗಳಿಲ್ಲದವರಾಗುವರು. ಈ ಕಲಿಯುಗದಲ್ಲಿ ಜನರು ಕರ್ಮಭ್ರಷ್ಟರಾಗಿ, ಸಾಧುಸಜ್ಜನರನ್ನು ದೂಷಿಸುತ್ತಾ,

ದಾರಿದ್ರ್ಯಾರ್ಣವಮಧ್ಯಗಸ್ತ್ವನುದಿನಂ ಪ್ರಾಪಿ ಪ್ರಭಾವರ್ಜಿತೋ
ದ್ರವ್ಯಾದ್ರಾವಿತ ಮುದ್ರಿತಾಖಿಲತನುಂ ಭ್ರಾಂತೋಽತ್ರ ಸಂಮುಹ್ಯತಿ ॥೨೮॥

ಕಲಿಕುಲಕಲನಾ ಕಲಾಕುಲೋದ್ಯ
ಪ್ರಭವಾ ಕೀಲಿತಕಾಲಕೋಲಿಮೂಲೇ ।
ಮೃಗಬಾಲಧರಂ ಜನೋ ಭಜೇತ್ಕಿಂ
ಜಿತಕಾಲಂ ವರಹಸ್ತಮೂಲಜಾಲಂ ॥೨೯॥

ಪಾಪಾನುತಾಪಮತಿಭಾಕ್ಸುಕರೋ ನರಃ ಕಿಂ
ದುಷ್ಟೋರುಸೂಕರಸಮಃ ಸ ತು ರಾಸಭೋಽಪಿ ।
ಭೂಭಾರ ಏವ ಕುನರಃ ಕಲಿಕಾಲಜಾತೋ
ಮಾರಾರಿಪಾದಕಮಲೋಪರದೂರಭೃಂಗಃ ॥೩೦॥

---

ಶ್ರೇಷ್ಠನಾದ ಪರಶಿವನ ಪೂಜಾವಿಮುಖರಾಗುತ್ತಾರೆ. ಇದರಿಂದ ದಾರಿದ್ರ್ಯವೆಂಬ ಸಮುದ್ರದ ಮಧ್ಯದಲ್ಲಿಯೇ ಪ್ರತಿದಿನವೂ ಬಿದ್ದು ಸಾಯುತ್ತಾ, ಶಿವತೇಜೋಹೀನ ರಾಗಿ, ದ್ರವ್ಯಸಂಪಾದನೆಗೋಸ್ಕರವೇ ಉದ್ಯುಕ್ತವಾದ ಸಕಲ ದೇಹವುಳ್ಳವರಾಗಿ, ಮೂರ್ಛೆ ಹೊಂದಿದವರಂತೆ ಕಾಣುವರು. ||೨೮||

ಪಾಪರಾಶಿಯನ್ನೇ ಸಂಪಾದಿಸುವುದರಲ್ಲಿ ನಿರತವಾದ ಉದ್ಯಮವುಳ್ಳ ಈ ಕಲಿಯುಗದ ಜನವು, ಘೋರಸಂಸಾರದಿಂದ ಬಿಗಿಯಾಗಿ ಕಟ್ಟಲ್ಪಟ್ಟಿರುವ ಕಾಲ ಪುರುಷನೆಂಬ ಹಂದಿಗೆ, ಮೂಲಸ್ಥಾನವಾದ ಈ ಕಲಿಯುಗದಲ್ಲಿ ಬಾಲಚಂದ್ರಶೇಖರ ನಾಗಿ, ಯಮನನ್ನು ಜಯಿಸಿ, ವರಪ್ರದನಾಗುವ ಪರಮೇಶ್ವರನನ್ನು ಎಂದಿಗೂ ಧ್ಯಾನಿಸಲಾರದು. ಅಂತಹ ಕಲಿಯುಗದ ಮಾನವರಿಗೆ ತಮ್ಮನ್ನು ತಾವು ಉದ್ಧರಿಸಿ ಕೊಳ್ಳುವ ಮಾರ್ಗವೇ ತಿಳಿಯದು. ||೨೯||

ಪಾಪಕಾರ್ಯಮಾಡುವುದರಲ್ಲಿಯೇ ಸದಾ ಆಸಕ್ತರಾಗಿ ಪಾಪನಿವಾರಕವಾದ ಬುದ್ಧಿಯನ್ನುಪಯೋಗಿಸುವ ಕಲಿಯುಗದ ಮಾನವರು, ದುಷ್ಟವಾದ ದೊಡ್ಡ ಹಂದಿಗೆ ಸಮರೆನ್ನಬಹುದು. ಅಥವಾ ಅವನು ಕತ್ತೆಯಂತೆ ವ್ಯರ್ಥಜೀವಿಯಾಗು ವನು. ಕಲಿಯುಗದಲ್ಲಿ ಹುಟ್ಟಿ, ಮನ್ಮಥಾಂತಕನಾದ ಶಿವನ ಪಾದಕಮಲದ ಒಳಗೆ ಪ್ರವೇಶಿಸದೆ ದೂರವಾಗಿರುವ ಕೆಟ್ಟ ಜನರು ಕೇವಲ ಭೂಮಿಗೆ ಭಾರಭೂತರೇ ಸರಿ. ||೩೦||

**ಸಂತಪ್ತಕ್ರಕಚೋಪಮಾನಸುಮಹಾಚಕ್ರಾಂಕಮುದ್ರಾನ್ವಿತೋ**
**ನಕ್ರಾಕಾರಕುಚಕ್ರಫಾಲತಿಲಕೋ ಭೂಯಾಜ್ಜನೋ ವೈ ಕಲೌ ।**
**ತೇನಾಕ್ರಾಂತಜನೇನ ದುರ್ಜಗದಿದಂ ಶಕ್ರೋಽಪಿ ವಿತ್ರಾಸಕಂ**
**ಉತ್ಕ್ರಾಂತ್ಯುತ್ತರಗರ್ಜನೋದ್ಯಮಗತೋ ತಕ್ರಾಂಬುರಕ್ರೋಽಶಕಂ (?)**
**॥೩೧॥**

**ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ**
**ಕಲಿಯುಗಧರ್ಮವರ್ಣನಂ ನಾಮ ಅಷ್ಟಮೋಽಧ್ಯಾಯಃ**

---

ಕಲಿಯುಗದಲ್ಲಿ ಚೆನ್ನಾಗಿ ಕಾಯಿಸಿದ ಗರಗಸಸಮಾನವಾದ ದೊಡ್ಡ ಚಕ್ರದ ಮುದ್ರೆಯಿಂದ ಅಂಕಿತರಾಗಿ ಮೊಸಳೆಯ ಆಕಾರದ ಕೆಟ್ಟ ಚಕ್ರರೇಖೆಯನ್ನೇ ಹಣೆಯಲ್ಲಿ ತಿಲಕವನ್ನಾಗಿ ಧರಿಸಿ, ಜನಗಳು ಮೆರೆಯುವರು. ಆ ಚಕ್ರಚಿಹ್ನೆಯಿಂದ ಕೂಡಿದ ಭೂಯಿಷ್ಠವಾದ ಈ ಜಗತ್ತನ್ನು ಇಂದ್ರನು ಸರಿಯಾಗಿ ನೋಡಲಾರನು. ಕೇವಲ ಗರ್ಜನೆಯಿಂದಲೇ ಈ ಭೂಮಿಯನ್ನು ಹೆದರಿಸಿ ನಡುಗಿಸುವನೇ ಹೊರತು ಕಾಲಕಾಲಕ್ಕೆ ವೃಷ್ಟ್ಯಾದಿಗಳನ್ನು ಕೊಟ್ಟು ಭೂಲೋಕವನ್ನು ಬೆಳೆಸಲಾರನು.॥೩೧॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವನಾಮಕವಾದ ಒಂಬತ್ತನೆಯ ಅಂಶದಲ್ಲಿ ಕಲಿಯುಗದ ಧರ್ಮವರ್ಣನೆಯೆಂಬ ಎಂಟನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ನವಮೋಽಧ್ಯಾಯಃ

|| ಶ್ರೀ ಈಶ್ವರ ಉವಾಚ ||

**ಪುನಃ ಕಲಿಭವಂ ದೇವಿ ಗುಣಂ ತೇ ಕಥಯಾಮ್ಯಹಂ ।**
**ನಾನಾದುರಾಚಾರರತಾಃ ಅಭಕ್ಷ್ಯಾನ್ನೈಕಭಕ್ಷಕಾಃ ॥೧॥**

**ಸುರಾಸವರತಾಃ ಪಾಪಾ ಭವಿಷ್ಯಂತಿ ಕಲೌ ನರಾಃ ।**
**ಭಸ್ಮತ್ರಿಪುಂಡ್ರಹೀನಾಂಗಾ ರುದ್ರಾಕ್ಷಾಭರಣೋಜ್ಝಿತಾಃ ॥೨॥**

**ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ।**
**ಲಿಂಗಾರ್ಚಾವಿಮುಖಾಃ ಸರ್ವೇ ಸುಮುಖಾ ವಿಷ್ಣುಪೂಜನೇ ॥೩॥**

---

## ಒಂಬತ್ತನೆಯ ಅಧ್ಯಾಯ

ದೇವಿ, ಪುನಃ ನಿನಗೆ, ಕಲಿಯುಗದಲ್ಲಿ ಸಂಭವಿಸುವ ಅನಾಹುತಗಳನ್ನು ನಾನು ವಿಸ್ತಾರವಾಗಿ ಹೇಳುತ್ತೇನೆ ಕೇಳು : ಅನೇಕ ದುರಾಚಾರಗಳಲ್ಲಿ ನಿರತರಾಗಿ ಜನಗಳು ತಿನ್ನಲಯೋಗ್ಯವಾದ ಆಹಾರವನ್ನು ಭಕ್ಷಣಮಾಡುವರು. ಅಲ್ಲದೆ ಈ ಕಲಿಯುಗದಲ್ಲಿ ಹೆಂಡ, ಸಾರಾಯಿ ಮುಂತಾದ ಮದ್ಯಪಾನಗಳಲ್ಲಿ ಆಸಕ್ತರಾಗಿ ಭಸ್ಮತ್ರಿಪುಂಡ್ರವನ್ನು ಶರೀರದಲ್ಲಿ ಧರಿಸದೇ ರುದ್ರಾಕ್ಷಗಳನ್ನು ತಿರಸ್ಕರಿಸಿ ನಾಚಿಕೆ ಯಿಲ್ಲದೆ ಯಾವಾಗಲೂ ಪಾಪಕರ್ಮನಿರತರಾಗುವರು. ||೧-೨||

ಎಲ್ಲರೂ ಶಿವಲಿಂಗಪೂಜಾಪರಾಙ್ಮುಖರಾಗಿ ವಿಷ್ಣುಪೂಜೆಯಲ್ಲಿ ಆಸಕ್ತರಾಗು ತ್ತಾರೆ. ಶಿವಪೂಜೆಯನ್ನು ಸಾಲಗ್ರಾಮಶಿಲೆಯ ಪೂಜೆಗೆ ಸಮಾನವೆಂದೇ ಭಾವಿಸು

ಸಾಲಗ್ರಾಮಶಿಲಾಸಾಮ್ಯಂ ಶಿವಪೂಜಾಂ ಪ್ರಕುರ್ವತೇ ।
ಊರ್ಧ್ವಪುಂಡ್ರಧರಾಃ ಸರ್ವೇ ಮೃದಾಫಾಲೋದರೇ ಗಲೇ ॥೪॥

ತಪ್ತಚಕ್ರಾಂಕಿತಾಃ ಕೇಚಿದ್ವ್ರತ್ಯಾ ವ್ರತವಿವರ್ಜಿತಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೫॥

ವೈಷ್ಣವಾ ವಿಷ್ಣುಪಾಷಂಡಾಃ ಶಿವೋತ್ಕರ್ಷಾಸಹಿಷ್ಣವಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೬॥

ಮದಾಲಯಭ್ರಂಶಕರಾಃ ಮನ್ನಿಂದಾನಿರತಾಃ ಸದಾ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೭॥

ವರ್ಣಾಶ್ರಮಪರಿಭ್ರಷ್ಟಾ ವಿಷ್ಟಾಕ್ರಿಮಿಸಮಾಕುಲಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೮॥

ವೇದಾಧ್ಯಯನಹೀನಾಶ್ಚ ತ್ರೇತಾಗ್ನಿಪರಿವರ್ಜಿತಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೯॥

ದುಷ್ಟಾಃ ಕಷ್ಟೈಕಮತಯಃ ಶಿಷ್ಟವದ್ಭ್ರಷ್ಟಧರ್ಮಿಣಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೧೦॥

---

ತ್ತಾರೆ. ಹಣೆ, ಹೊಟ್ಟೆ, ಕೊರಳು ಈ ಜಾಗಗಳಲ್ಲಿ ಎಲ್ಲರೂ ಮೃತ್ತಿಕೆಯಿಂದ ಊರ್ಧ್ವಪುಂಡ್ರಗಳನ್ನು ಧರಿಸುತ್ತಾರೆ. ಕೆಲವರು ವ್ರತಗಳನ್ನು ಬಿಟ್ಟು, ಕಾದ ಚಕ್ರಗಳಿಂದ ಮುದ್ರಾಂಕನ ಮಾಡಿಸಿಕೊಳ್ಳುತ್ತಾರೆ. ಹೀಗೆ ಕಲಿಯುಗದಲ್ಲಿ ಪಾಪಿಗಳನೇಕರು ನಾಚಿಗೆಗೆಟ್ಟವರಾಗಿ ಜೀವನವನ್ನು ನಡೆಸುವರು. ॥೩-೪-೫॥

ಕಲಿಯುಗದಲ್ಲಿ ಪಾಪಿಗಳು ಅನೇಕ ಮಂದಿ ನಾನಾರೀತಿ ಹುಟ್ಟುವರು. ವಿಷ್ಣುಪಾಷಂಡರೆನಿಸಿದ ವೈಷ್ಣವರು ಶಿವನ ಉತ್ಕರ್ಷವನ್ನು ಸಹಿಸದವರಾಗುವರು ; (ನನ್ನ) ಶಿವದೇವಾಲಯಗಳನ್ನು ನಾಶಮಾಡಿ ಸದಾ ನನ್ನ ನಿಂದನೆಯಲ್ಲಿ ನಿರತರಾಗುವರು ; ವರ್ಣಾಶ್ರಮಧರ್ಮಚ್ಯುತರಾಗಿ, ಅಮೇಧ್ಯದ ಕ್ರಿಮಿಗಳಿಂದ ಆಕ್ರಾಂತರಾಗುವರು ; ವೇದಾಧ್ಯಯನದಿಂದಲೂ, ದಕ್ಷಿಣಾಗ್ನಿ, ಗಾರ್ಹಪತ್ಯ ಆಹವನೀಯಗಳೆಂಬ ಮೂರು ಅಗ್ನಿಗಳಿಂದಲೂ ದೂರರಾಗುವರು ; ಜಾತ್ಯಾದಿಗಳಿಂದ ದುಷ್ಟರಾಗಿ

ಶಿಪಿವಿಷ್ಟಾರ್ಚನಾಹೀನಾ ದುರದೃಷ್ಟೇನ ಶಂಕರಿ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೧೧॥

ಜಾರಾ ಚೋರಾಸ್ತಥಾ ಘೋರಾ ದುಷ್ಪೂರಾಃ ಸ್ವೋದರಂಭರಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೧೨॥

ಧರ್ಮಧ್ವಜಾಃ ದ್ವಿಜಾಃ ಸರ್ವೇ ವೃಜಿನೇನ ವಿಮೋಹಿತಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೧೩॥

ಪಂಚಾಕ್ಷರವಿಹೀನಾಶ್ಚ ರುದ್ರಾಧ್ಯಾಯಜಪೋಜ್ಝಿತಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೧೪॥

ಮತ್ಕ್ಷೇತ್ರವಾಸರಹಿತಾ ಅನ್ಯಕ್ಷೇತ್ರೈಕವಾಸಿನಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೧೫॥

ಸೋಮವಾರೇ ದಿವಾ ಸ್ವೇಚ್ಛಂ ಭೋಜನಾಚ್ಛಾದನೇ ರತಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೧೬॥

ಪ್ರದೋಷಪೂಜಾರಹಿತಾಃ ಸರ್ವದೈವ ನಿಶಾಮುಖೇ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೧೭॥

ಕಾಲಾಷ್ಟಮ್ಯಾಮಿಂದುಚೂಡಪೂಜಾಧ್ಯಾನಪರಾಙ್ಮುಖಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೧೮॥

---

ಶಿಷ್ಟರಂತೆ ಧರ್ಮಾಚರಣೆ ಮಾಡಬೇಕೆಂದು, ಕಷ್ಟಪಟ್ಟು ಬುದ್ಧಿಯನ್ನುಪಯೋಗಿಸಿ ಕೊನೆಗೆ ಧರ್ಮಭ್ರಷ್ಟರಾಗುವರು; ಎಲೌ ಶಂಕರಿ, ದುರದೃಷ್ಟವಶದಿಂದ ಅವರು ಶಂಕರನ ಪೂಜಾತ್ಯಾಗಮಾಡುವರು; ವಿಟರೂ, ಕಳ್ಳರೂ, ಭಯಂಕರಕೃತ್ಯವನ್ನೆಸಗುವರೂ, ದುಷ್ಟವಸ್ತುಗಳಿಂದ ತಮ್ಮ ಹೊಟ್ಟೆ ತುಂಬಿಕೊಳ್ಳುವರೂ ಹೆಚ್ಚಾಗುವರು. ಧರ್ಮವೇ ನಮ್ಮ ಧ್ವಜವೆಂದು ಭಾವಿಸಿದ್ದ ಬ್ರಾಹ್ಮಣರು ಸಹ ಪಾಪಕಾರ್ಯದಿಂದ ಮೋಹಗೊಳ್ಳುವರು; ಅವರು ಪಂಚಾಕ್ಷರಮಂತ್ರ ಮತ್ತು ರುದ್ರಾಧ್ಯಾಯಜಪಗಳನ್ನು ಬಿಡುವರಾಗುವರು; ನನ್ನ ಕ್ಷೇತ್ರಗಳಲ್ಲಿ ವಾಸಮಾಡುವುದನ್ನು ಬಿಟ್ಟು, ಇತರ ಕ್ಷೇತ್ರಗಳಲ್ಲಿ ನೆಲಸಲು ಇಚ್ಛಿಸುವರು; ಸೋಮವಾರದ ದಿನ ಹಗಲು ಸ್ವೇಚ್ಛೆಯಾಗಿ

ಭೂತಾಸು ಭೂತನಾಥಾರ್ಚಾವಿಹೀನಮನಸೋ ನರಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೧೯॥

ಮತ್ಕ್ಷೇತ್ರಮನ್ಯಕ್ಷೇತ್ರೇಣ ಅವಿಮುಕ್ತಂ ವದಂತಿ ಚ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೨೦॥

ಮನ್ನಾಮಚಾನ್ಯನಾಮ್ನೈವ ಸಮಂ ತೇ ಹಿ ವದಂತಿ ಚ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೨೧॥

ಗೋಘ್ನಾ ಬ್ರಹ್ಮಹಣೋ ಘೋರಾಃ ಪರಸ್ವಾದಾಃ ಶಿವದ್ರುಹಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೨೨॥

ಪರಾಪವಾದಕುಶಲಾಃ ಅತಿವೃದ್ಧ್ಯುಪಜೀವಿನಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೨೩॥

ರಾಜಾನೋಽರ್ಥಪರಾಃ ಸರ್ವೇ ಪರಾನ್ನಾದಾ ದ್ವಿಜಾಃ ಸದಾ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೨೪॥

---

ಭೋಜನಮಾಡಿ, ಶಯನಾದಿಗಳಲ್ಲಿ ಸುಖಿಸುವರು ; ಪರ್ವಕಾಲದ ಸಾಯಂಕಾಲದಲ್ಲಿ ಪ್ರದೋಷಪೂಜೆ ಮಾಡುವುದನ್ನು ತ್ಯಾಗಮಾಡುವರು ; ಕೃಷ್ಣಾಷ್ಟಮೀ ದಿನ ಚಂದ್ರಚೂಡನಾದ ಶಂಕರನ ಪೂಜೆ ಮತ್ತು ಧ್ಯಾನಾದಿಗಳನ್ನು ಮಾಡದೇ ಹಿಂದೆಗೆಯುವರು ; ಚತುರ್ದಶೀ ತಿಥಿಗಳಲ್ಲಿ ಭೂತಗಳಿಗೊಡೆಯನಾದ ಮಹಾದೇವನ ಪೂಜೆಯಲ್ಲಿ ಆಸಕ್ತವಾಗದ ಮನವುಳ್ಳವರಾಗುವರು ; ನನ್ನ ಅವಿಮುಕ್ತಕ್ಷೇತ್ರವನ್ನು ಇತರ ಕ್ಷೇತ್ರಗಳಿಗೆ ಸಮವೆಂದು ಹೇಳುವರು ; ನನ್ನ ನಾಮಗಳನ್ನು ಇತರ ವಿಷ್ಣ್ವಾದಿನಾಮಗಳಿಗೆ ಸಮಾನವೆಂದೇ ಹೇಳಲುಪಕ್ರಮಿಸುವರು ; ಗೋಹತ್ಯೆ, ಬ್ರಹ್ಮಹತ್ಯೆ, ಇತರ ಭಯಂಕರ ಕಾರ್ಯಗಳು, ಪರಸ್ವತ್ತನ್ನಪಹರಿಸುವುದು ; ಶಿವದ್ರೋಹಮಾಡುವುದು, ಇವೇ ಮೊದಲಾದವುಗಳನ್ನು ಹಿಂಜರಿಯದೆ ಆಚರಿಸುವರು ; ಮತ್ತೊಬ್ಬರಿಗೆ ಅಪವಾದವುಂಟುಮಾಡುವುದರಲ್ಲಿಯೇ ನಿಪುಣರೂ, ವಿಪರೀತವಾದ ಬಡ್ಡಿಯಿಂದ ಜೀವಿಸುವವರೂ ಆಗುವರು ; ರಾಜರು ಯಾವಾಗಲೂ ಧನಲೋಲುಪರಾಗಿಯೂ, ಬ್ರಾಹ್ಮಣರು ಪರಾನ್ನಭೋಜನಮಾಡುವರಾಗಿಯೂ ಆಗುವರು ; ರಾಜರು ಸರಿಯಾಗಿ ರಾಜ್ಯಪರಿಪಾಲನೇ ಮಾಡದೆ, ಕೊಳ್ಳೆ, ಲೂಟಿ ಇವುಗಳಿಂದ

ಅರಕ್ಷಿತಾರೋ ಹರ್ತಾರಃ ಸಂಗ್ರಾಮವಿಮುಖಾಃ ಸದಾ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೨೫॥

ವೈಶ್ಯಾ ವೇಶ್ಯಾಪರಾಃ ಸರ್ವೇ ತುಲಾಚೌರ್ಯೇಣ ಜೀವಿನಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೨೬॥

ಗೋರಸಾನಾಂ ಕ್ರಯಪರಾಃ ದ್ವಿಜಾಸ್ತಂಡುಲವಿಕ್ರಯಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೨೭॥

ಅಫಲಾಶ್ಚ ಮಹೀಪಾಲಾಃ ಪಲಾಶಭ್ರಾಂತಿಲಾಲಸಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೨೮॥

ಪರದಾರಪರಾಃ ಸರ್ವೇ ಸ್ವದಾರರತಿವರ್ಜಿತಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೨೯॥

ಗ್ರಾಮ್ಯಾಹಾರವಿಹಾರಾಶ್ಚ ಜಗತ್ಸಂಹಾರಕಾರಕಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೩೦॥

ವೃಕ್ಷೋಚ್ಛೇದಪರಾಃ ಸರ್ವೇ ಸರೋವರವಿಭೇದಕಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೩೧॥

---

ಧರ್ಮಯುದ್ಧ ವಿಮುಖರಾಗಿ ಯಾವಾಗಲೂ ವರ್ತಿಸುವರು; ವೈಶ್ಯರೆಲ್ಲರೂ ವೇಶ್ಯಾಸಕ್ತರಾಗಿಯೂ, ಕಳ್ಳ ತೂಕ, ಮೋಸದ ವ್ಯಾಪಾರ ಮುಂತಾದವುಗಳಿಂದ ಜೀವಿಸುವವರಾಗುವರು. ||೬-೭-೮-೯-೧೦-೧೧-೧೨-೧೩-೧೪-೧೫-೧೬-೧೭-೧೮-೧೯-೨೦-೨೧-೨೨-೨೩-೨೪-೨೫-೨೬||

ಬ್ರಾಹ್ಮಣರು ಹಾಲು ಮತ್ತು ಅಕ್ಕಿಗಳನ್ನು ಮಾರುವವರಾಗುವರು; ನಿಷ್ಪ್ರಯೋಜಕರಾದ ರಾಜರು ಕೇವಲ ಮಾಂಸಗಳ ಭ್ರಾಂತಿಯಿಂದ ಕಾಮಪರವಶರಾಗಿ ಚಪಲಪಡುವರು; ಎಲ್ಲರೂ ಪರಸ್ತ್ರೀಸಂಭೋಗನಿರತರಾಗಿ ತಮ್ಮ ಧರ್ಮಪತ್ನಿಯಲ್ಲಿ ಭೋಗವನ್ನು ತ್ಯಜಿಸುವರು; ಗ್ರಾಮ್ಯವಾದ ಆಹಾರ ಮತ್ತು ವಿಹಾರಗಳಲ್ಲಿ ನಿರತರಾಗಿ ಪ್ರಪಂಚವನ್ನೇ ಸಂಹಾರಮಾಡುವರಾಗುವರು; ಎಲ್ಲರೂ, ಮರಗಳನ್ನು ಕಡಿಯುವುದು, ಸರೋವರಗಳನ್ನೊಡೆಯುವುದು ಮುಂತಾದ ಅಧರ್ಮ

ನದೀಕೂಪೈಕಭೇತ್ತಾರಸ್ತೇ ಶಿವಾಲಯಭೇದಕಾಃ
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೩೨॥

ಪಾಪಸಂತಾಪಬಹುಲಾ ಬಹ್ವಾಶಾ ಬಹುಯಾಚಕಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೩೩॥

ದರಿದ್ರಾ ವ್ಯಾಧಿತಾ ಮೂರ್ಖಾ ಅಪ್ರಜಾಸ್ಸಪ್ರಜಾಸ್ತಥಾ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೩೪॥

ಅಲ್ಪಾಯುಷೋ ನರಾಃ ಸರ್ವೇ ಸ್ತ್ರಿಯೋ ಬಾಲಾಬಲಾ ದ್ವಿಜಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೩೫॥

ವರ್ಧಂತಿ ಶೂದ್ರಾ ಭೂಯಿಷ್ಠಂ ಶ್ರಿಯಾ ಪರಮಯಾ ಯುತಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೩೬॥

ಬ್ರಾಹ್ಮಣಾಸ್ತಾನ್ಧನಪರಾನ್ಸೇವಂತೇ ನಿರಪತ್ರಪಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೩೭॥

ಸ್ವೈರಿಣ್ಯಶ್ಚ ಸ್ತ್ರಿಯಃ ಸರ್ವಾಃ ವಿಧವಾಶ್ಚಾಪ್ಯನೇಕಶಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೩೮॥

---

ಕಾರ್ಯಗಳಲ್ಲಿ ತೊಡಗುತ್ತಾರೆ; ಹೊಳೆ ಬಾವಿಗಳನ್ನೂ ಶಿವದೇವಾಲಯಗಳನ್ನೂ ಒಡೆದು ಹಾಕುತ್ತಾರೆ; ಪಾಪ ಕಾರ್ಯಾಚರಣೆಯಿಂದ ದುಃಖಪಡುತ್ತಾ ಹೆಚ್ಚು ತಿನ್ನುವವರಾಗಿಯೂ, ಮಿತಿಮೀರಿ ದೈನ್ಯವನ್ನು ತೋರಿಸುವವರಾಗಿಯೂ ಆಗುವರು ; ಬಡವರಾಗಿಯೂ ರೋಗಿಗಳಾಗಿಯೂ ಮೂರ್ಖರಾಗಿಯೂ ಸಂತಾನವಿಲ್ಲದವ ರಾಗಿಯೂ ಅಥವಾ ಅತಿ ಸಂತಾನವುಳ್ಳವರಾಗಿಯೂ ಜನರು ಕಷ್ಟಪಡುವರು. ಗಂಡಸರು, ಹೆಂಗಸರು, ಹುಡುಗರು ಮತ್ತು ಬ್ರಾಹ್ಮಣರು ಅಲ್ಪಾಯುಗಳಾಗಿ, ಬಲಹೀನರಾಗುವರು ; ಶೂದ್ರರು ತುಂಬಾ ಐಶ್ವರ್ಯಸಂಪನ್ನರಾಗಿ ಅಭಿವೃದ್ಧಿ ಹೊಂದುವರು ; ಬ್ರಾಹ್ಮಣರೂ ನಾಚಿಕೆಯಿಲ್ಲದೆ ಹಣವಂತರಾದ ಆ ಶೂದ್ರರನ್ನು ಸೇವೆಮಾಡುವರು ; ಅನೇಕ ಹೆಂಗಸರು ಅದರಲ್ಲಿಯೂ ಅನೇಕ ವಿಧವೆಯರು ಸೂಳೆಯರಂತಾಗುವರು ; ಸಾವಿರಾರು ಮಂದಿ ಸಂನ್ಯಾಸಿಗಳು, ಅಲ್ಪಬುದ್ಧಿಯುಳ್ಳವ

ಯತಯೋ ಮಂಪಮತಯೋ ಭವಿಷ್ಯಂತಿ ಸಹಸ್ರಶಃ ।
ಶ್ರವಣಾಶ್ರಮಭೂಯಿಷ್ಠಾ ಕಾಷಾಯಾಲಂಕೃತಾಂಗಕಾಃ ॥
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೩೯॥

ಶೂದ್ರಾ ಧರ್ಮಪ್ರವಕ್ತಾರೋ ಬ್ರಾಹ್ಮಣಾ ಶ್ರವಣೇ ರತಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೪೦॥

ತ್ಯಕ್ತವರ್ಣಾಶ್ರಮಾಚಾರಾಃ ನಿಸ್ಸಾರಾಸ್ತಾಃ ಪ್ರಜಾಃ ಕಲೌ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೪೧॥

ಭಂಡವೇತಂಡಕುಶಲಾಃ ಪಾಷಂಡಾ ಗಾನತತ್ಪರಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೪೨॥

ಗಣಿಕಾಪರಿಹಾಸ್ಯಾಶ್ಚ ಗಣಕಾ ಗುಣವರ್ಜಿತಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೪೩॥

ಕುತರ್ಕಾಭ್ಯಾಸಕುಶಲಾಃ ಕವ್ಯಹವ್ಯಾಶಿನೋ ದ್ವಿಜಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೪೪॥

ಯಂತ್ರಮಂತ್ರಪರಾಃ ಸರ್ವೇ ರಸವಾದವಿಚಕ್ಷಣಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೪೫॥

---

ರಾಗಿ, ಕೇವಲ ವರ್ಣಾಶ್ರಮಪ್ರಧಾನವಾದ ಕಾವೀ ಶಾಟಿಗಳನ್ನು ದೇಹಕ್ಕೆ ಅಲಂಕರಿಸಿಕೊಂಡು, ಕಾಲಯಾಪನೆ ಮಾಡುವರು; ಶೂದ್ರರು ಧರ್ಮೋಪದೇಶಕರಾಗಿಯೂ, ಬ್ರಾಹ್ಮಣರು, ಕಲಿಯುಗದಲ್ಲಿ ವರ್ಣಾಶ್ರಮಧರ್ಮಬಾಹಿರರಾಗಿಯೂ, ನಿಶ್ಶಕ್ತರಾಗುವರು ; ಭಂಡನ್ಯಾಯದಲ್ಲಿ ನಿಪುಣರಾಗಿಯೂ, ಪಾಷಂಡರಾಗಿಯೂ, ಸದಾ ಗಾನಲೋಲುಪರಾಗಿಯೂ ಆಗುವರು ; ಜ್ಯೋತಿಷ್ಕರು ವೇಶ್ಯೆಯರೇ ಮೊದಲಾದವರ ಹಾಸ್ಯಕ್ಕೆಪಾತ್ರರಾಗಿ ಗುಣಹೀನರಾಗುವರು ; ಬ್ರಾಹ್ಮಣರು ಯಾವಾಗಲೂ ಕುತರ್ಕಗಳನ್ನು ಅಭ್ಯಾಸಮಾಡುವುದರಲ್ಲಿ ನಿಪುಣರಾಗಿಯೂ, ಕವ್ಯ, ಹವ್ಯಗಳನ್ನೇ ವಿಶೇಷವಾಗಿತಿಂದು ಜೀವಿಸುವರಾಗುವವರು. ಎಲ್ಲರೂ ಯಂತ್ರ ಮಂತ್ರಗಳಲ್ಲಿ ನಿರತರಾಗಿ ರಸವಾದದಲ್ಲಿ ಜಾಣರಾಗುವರು ; ವೈದ್ಯವಿದ್ಯೆಯಲ್ಲಿ ನಿಪುಣರೆನಿಸಿ ದುಷ್ಟಚಿಕಿತ್ಸೆಗಳನ್ನು

ವೈದ್ಯವಿದ್ಯಾಸು ನಿಪುಣಾಃ ಕುತ್ಸಿತಾಶ್ಚ ಚಿಕಿತ್ಸಕಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೪೬॥

ಜ್ಯೋತಿರ್ಜ್ಞಾನವಿದಃ ಸರ್ವೇ ದ್ಯೂತವಿದ್ಯಾವಿದೋ ನಟಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೪೭॥

ಸ್ವೈರಿಣ್ಯಃ ಕಿಲ ಸಂಚರಂತಿ ವಿಧವಾ ಬಾಲಾಬಲಾಃ ಕೇವಲಂ
ತೀರ್ಥೋದ್ಯಾನಗಿರಿವ್ರಜೋತ್ಸವಮಿಷಾ ಯೂನಾಂ ಮನೋಹಾರಕಾಃ ।
ಯೂನಶ್ಚಾಪ್ಯನುಸಂಚರಂತಿ ಹಿ ತತೋ ತತ್ಸಂಗನಿಷ್ಠಾಃ ಕಲಾ
ವೃಂದಂ ಶೂಲನಿಭಂ ಶುಭಾ ಜನಪದೇ ಕೇಶೈಕಶೂಲಾಃ ಸ್ತ್ರಿಯಃ ॥೪೮॥

ತೀರ್ಥಾನ್ಯಪ್ಯತಿಪಂಕಿಲಾನಿ ಹಿ ಕಲೌ ಶೈವಾಲಜಾಲಾವೃತಾ
ನ್ಯಪ್ಯಕ್ಷೇತ್ರಗಣಂ ಚ ಲಿಂಗರಹಿತಂ ಚೋಚ್ಛಿದ್ಯ ಮ್ಲೇಚ್ಛಾಧಮಾಃ ।

ಮಾಡಲುದ್ಯೋಗಿಸುವರು ; ಎಲ್ಲರೂ ಜ್ಯೋತಿಃಶಾಸ್ತ್ರವನ್ನರಿತವರೂ, ಜೂಜಿನ ವಿದ್ಯೆಯಲ್ಲಿ ಪಾರಂಗತರೂ ಆಗುವರು ; ಈ ರೀತಿಯಾಗಿ ಕಲಿಯುಗದಲ್ಲಿ ಜನಗಳು ಪಾಪಿಗಳಾಗಿ ಲಜ್ಜಾಶೂನ್ಯರಾಗಿ ವಿಶೇಷ ದುಷ್ಕರ್ಮಪ್ರವೃತ್ತರಾಗಿಯೂ ಹುಟ್ಟುತ್ತಾರೆ. ॥೨೭-೨೮-೨೯-೩೦-೩೧-೩೨-೩೩-೩೪-೩೫- ೩೬-೩೭-೩೮ -೩೯- ೪೦-೪೧-೪೨-೪೩-೪೪-೪೫-೪೬-೪೭॥

ಬಲಹೀನರೂ ಚಿಕ್ಕ ವಯಸ್ಸಿನವರೂ ಆದ ವಿಧವೆಯರು, ಕೇವಲ ಸೂಳೆಯ ರಂತೆ ತೀರ್ಥ, ಉದ್ಯಾನ, ಬೆಟ್ಟ, ಜಾತ್ರೆ, ಉತ್ಸವ ಮುಂತಾದವುಗಳ ನೆಪದಿಂದ ಯುವಕರ ಮನಸ್ಸನ್ನು ಆಪಕರ್ಷಿಸುತ್ತಾ ಸಂಚರಿಸುವರು. ಯುವಕರೂ ಸಹ ಅವರ ಸಹವಾಸಮಾಡಲು ಕಾತರರಾಗಿ ಅವರನ್ನೇ ಹಿಂಬಾಲಿಸಿ ಹೋಗುವರು ; ಈ ಕಲಿಯುಗದಲ್ಲಿ ಕಲೆಗಳ ಸಮೂಹವೇ ಜನಗಳಿಗೆ ಶೂಲಪ್ರಾಯವಾಗುತ್ತದೆ. ದೇಶಗಳಲ್ಲಿ ಮಂಗಳಾಂಗಿಯರಾದ ನಾರಿಯರು ಅನೇಕ ಯುವಕರಿಗೆ ಶೂಲಪ್ರಾಯ ರಾಗಿ ಅವರನ್ನು ಅಧೋಮಾರ್ಗಕ್ಕೆ ದೂಡುವರು. ॥೪೮॥

ದೇವಿಯೇ ಕೇಳು, ಈ ಕಲಿಯುಗದಲ್ಲಿ ಸಕಲ ತೀರ್ಥಗಳೂ ತುಂಬಾ ಕೆಸರುಳ್ಳವುಗಳಾಗಿ, ಪಾಚಿಗಳಿಂದ ಅಸಹ್ಯಗಳಾಗಿ ಕಾಣುವುವು. ಶಿವಕ್ಷೇತ್ರಗಳಲ್ಲಿರುವ ಲಿಂಗಗಳನ್ನು ಅಧಮರಾದ ಮ್ಲೇಚ್ಛರು ಒಡೆದುಹಾಕುವರು. ಹಾಗೆ ಶಿವಲಿಂಗ ಶೂನ್ಯವಾದ ಶಿವಕ್ಷೇತ್ರಗಳು ಇಲ್ಲಿ ಬಹಳವಾಗಿ ಕಾಣುವುವು ನೋಡು ; ದುಷ್ಟರಾದ

ಸ್ವಸ್ಯಾಂತರ್ಗತಕೀಕಸಾನಿ ತನುತೇ ಕಾಲಸ್ಯ ಲೀಲಾಗತೈಃ
ಕ್ಷುದ್ರಾ ಏವ ಭವಂತಿ ಭೋಗಭರಿತಾ ವಿಪ್ರಾಃ ಕ್ಷುಧಾರ್ತಾಂಗತಾಃ ॥೪೯॥

ಕಲಿಜಾ ಕುಲಜಾದಿಮಾನಹೀನಾ
ಧನಗರ್ವೇಣ ಪರಿಭ್ರಮಂತಿ ನಿತ್ಯಂ ।
ತನುಪೋಷಣಯೋಷಿತೋರುಸಂಗೇ
ನಿರತಾ ಏವ ಭವಂತಿ ಕೇವಲಾಘಾಃ ॥೫೦॥

ಯೋ ಧರ್ಮಶ್ರಾವಕಶ್ಚೇತ್ಕಲಿಕಲುಷನರಾನ್ಮರ್ಮವಕ್ತಾ ಸ ಏವ
ನರ್ಮೋಕ್ತ್ಯಾ ಸುಖಿನೋ ಭವಂತಿ ಕುನರಾ ಗ್ರಾಮ್ಯೈಕಭೋಗಸ್ಪೃಹಾಃ ।
ವರ್ಮಂ ಶರ್ಮಮಯಂ ದಧಂತಿ ಭುವನೇ ಚರ್ಮಾವೃತಾ ತಾಃ ಪ್ರಜಾಃ
ಕರ್ಮಾಣ್ಯಪ್ರತಿಮಾನಿ ದುಷ್ಕೃತಿಪರಾಣ್ಯಾತನ್ವತೇ ಕೇವಲಂ ॥೫೧॥

---

ಈ ಜನಗಳನ್ನು ನೋಡಿ ಆ ಕ್ಷೇತ್ರಗಳಲ್ಲಿ ಯಮನು ಅವರ ಮೂಳೆಗಳಿಂದ ವ್ಯಾಪ್ತವಾದದ್ದನ್ನಾಗಿ ಮಾಡುತ್ತಿರುವನು. ಅಂತಹ ಕ್ಷೇತ್ರಗಳಲ್ಲಿ ವಿಪ್ರರು ಯಾವಾಗಲೂ ಕ್ಷುದ್ರಸ್ವಭಾವವುಳ್ಳವರಾಗಿ, ಭೋಗ (ಸುಖ) ವಿಲ್ಲದೇ ಹಸಿವಿನಿಂದ ಪೀಡಿಸಲ್ಪಡುವರು. ॥೪೯॥

ಕಲಿಯುಗದಲ್ಲಿ ಜನಿಸುವ ಮಾನವರು, ಕುಲ, ಜಾತಿ, ಮಾನ ಇವುಗಳಿಂದ ಹೀನರಾಗಿ, ಐಶ್ವರ್ಯಮದದಿಂದ ನಿತ್ಯವೂ ಅಲೆಯುತ್ತಾರೆ. ಕೇವಲ ಪಾಪಿಗಳು, ಪಾಪಭೂಯಿಷ್ಠರಾಗಿ ತಮ್ಮ ಶರೀರಪೋಷಣೆಯಲ್ಲಿಯೇ ಆಸಕ್ತರಾಗಿ ಯಾವಾಗಲೂ ಸ್ತ್ರೀಯರ ತೊಡೆಯ ಮೇಲೆ, ಕ್ರೀಡಾಸಕ್ತರಾಗಿ ಸ್ತ್ರೀಲೋಲುಪರಾಗಿಯೇ ಕಾಲಕಳೆಯುವರು. ॥೫೦॥

ಕಲಿಯುಗದಲ್ಲಿ ಯಾವನಾದರೊಬ್ಬ ಧರ್ಮಶ್ರವಣಮಾಡುವವನಿದ್ದರೆ, ಕಲಿದೋಷದೂಷಕರಿಗೆ ಅವನೆ ಬ್ರಹ್ಮಜ್ಞಾನವನ್ನು ತಿಳಿಸುವನಾಗುವನು. ನೀಚಮಾನವರು ಅವನ ಕೃತ್ರಿಮಮಾತಿನಂತೆ ಕೇವಲ ಗ್ರಾಮ್ಯಸುಖದಲ್ಲಿ ಮಾತ್ರ ಇಚ್ಛೆಯುಳ್ಳವರಾಗಿ ಆ ನರ್ಮವಚನಗಳಿಂದಲೇ ಸುಖವನ್ನೈದುವರು. ಚರ್ಮಸುಖವನ್ನೇ ಹೆಚ್ಚಾಗಿ ಬಯಸುವ ಮಾನವರು, ಕೇವಲ ಐಹಿಕಸುಖರೂಪವಾದ ಸ್ತ್ರೀಯರ ಸಹವಾಸ ಮುಂತಾದವುಗಳಿಂದಲೇ ಸುಖಪಡಲು ಬಯಸುತ್ತಾರೆ. ಅಲ್ಲದೆ ಅಸದೃಶವಾದ ಅನೇಕ ದುಷ್ಟಕೃತ್ಯಗಳನ್ನು ತಪ್ಪದೇ ಎಸಗುವರು. ॥೫೧॥

ನೈವಾಯುರ್ದೇಶಕಾಲೌ ಕಲಿಕಲುಷನರಾ ನಾಯುಸ್ಸೈಸ್ತೀಕ್ಷ್ಣಶಕ್ತ್ಯಾ
ಯುಕ್ತ್ಯಾ ಭುಕ್ತ್ಯಾನುಸೂಕ್ತ್ಯಾ ಕಲಯತಿ ನಿಯತಂ ಚಾಂತಕೋಂತಾಯ
ಮುತ್ರ್ಯಾನ್ ।
ಮುತ್ರ್ಯಾ ಅಪ್ಯತಿಸರ್ವಶಿಲ್ಪಕುಶಲಾ ಕೌಶಲ್ಯಮಾತ್ರಾದರಾ
ಮಾರಾಪಾರಶರಾಭಿಘಾತ ಸುಮಹಾಧೀರ್ಯೈಕಸಾರಾಃ ಕಲೌ ॥೫೨॥

ಮ್ಲೇಚ್ಛಾಚಾರಸುಚಂಚುರಾಃ ಕಲಿನರಾಸ್ತೇ ವಾನರಾಃ ಕೇವಲಂ
ನಂದಂತ್ಯೇವ ಸದೈವ ಹೃಷ್ಟಮನಸಾ ತೇ ಪಾಮರಾಶ್ಚಾಂಬಿಕೇ ।
ಉದ್ಬುದ್ಧಪ್ರತಿಭಾಸಭಾಸಿಕಹೃದಾ ಕುರ್ವಂತಿ ಸರ್ವಾಃ ಕ್ರಿಯಾಃ
ಸ್ವಲ್ಪೇನಾಢ್ಯಮುದಾ ಭವಂತಿ ಚ ಸದಾ ಸತ್ಪಾತ್ರದಾನೋಜ್ಝಿತಾಃ ॥೫೩॥

---

ಕಲಿಯುಗದ ಮಾನವರಿಗೆ ಆಯುಃಪ್ರಮಾಣವಾಗಲಿ ದೇಶಕಾಲಗಳ ನಿಯಮವಾಗಲಿ ಇರುವುದಿಲ್ಲ. ಕಲಿದೋಷದಿಂದ ಕಲುಷಿತಾಂತರಂಗರಾದ ಈ ಮಾನವರನ್ನು ಯಮನು ಕಬ್ಬಿಣದ ತೀಕ್ಷ್ಣವಾದ ಶಕ್ತ್ಯಾಯುಧದಿಂದ ಹಿಂಸಿಸಿ, ಯಾವ ಯುಕ್ತಿ, ಭುಕ್ತಿ, ಅನುಸರಣಾದಿಗಳಿಂದಲೂ ಬಗ್ಗದೆ ನಿರ್ದಯವಾಗಿ ತನ್ನ ಸಮೀಪಕ್ಕೆ ಒಯ್ಯುವನು. ಮನುಜರೂ ಸಹ ವಿಜ್ಞಾನಶಾಸ್ತ್ರದಲ್ಲಿ ನಿಪುಣರಾಗಿ, ಕೇವಲ ತಮ್ಮ ನೈಪುಣ್ಯವನ್ನು ಮಾತ್ರ ತೋರಿಸುವುದರಲ್ಲಿ ಆದರವುಳ್ಳವರಾಗುವರು. ಈ ಕಲಿಯುಗದಲ್ಲಿ ಆ ಮನ್ಮಥನ ಅಪರಿಮಿತವಾದ ಬಾಣಗಳ ಆಹುತಿಗೆ ತುತ್ತಾಗಿ, ನಾವೇ ಧೀರರು, ಶೂರರು ಎಂದು ಹೇಳುತ್ತಾ ಕಾಮಮಾತ್ರಸಾರವುಳ್ಳರಾಗಿರುವವರೇ ಹೆಚ್ಚು. ॥೫೨॥

ಕಲಿಯುಗದ ಮಾನವರು ಕೇವಲ ಮ್ಲೇಚ್ಛರ ಆಚಾರದಲ್ಲಿಯೇ ವಿಶೇಷವಾಗಿ ನಿರತರಾಗಿರುತ್ತಾರೆ. ಎಲೌ ಅಂಬಿಕೆಯೇ, ಅವರೆಲ್ಲರೂ ಕೇವಲ ಕಪಿಗಳಂತೆಯೇ ಚಂಚಲಚಿತ್ತರೇ ಆಗುವರು. ಪಾಮರರಾದ ಅವರು ಯಾವಾಗಲೂ ಅಜ್ಞಾನದಿಂದ ಸಂತೋಷಭರಿತರಾಗಿ ಆನಂದಪಡುತ್ತಲೇ ಇರುವರು. ಹೊಸ ಹೊಸದಾಗಿ ತಮಗೆ ಹೊಳೆಯುವ ಪ್ರತಿಭೆಗನುಸಾರವಾಗಿ, ಸಕಲ ಕಾರ್ಯಗಳನ್ನೂ ನಡೆಸುತ್ತಾ ಹಿಂದಿನವರನ್ನು ಗೌರವಿಸದೆ ಸ್ವತಂತ್ರರಾಗಿ ಆಚರಿಸುವರು. ಯಾವಾಗಲೂ ಸತ್ಪಾತ್ರದಲ್ಲಿ ದಾನಮಾಡುವುದನ್ನು ಬಿಟ್ಟು ಎಲ್ಲೋ ತಮಗೆ ದೊರೆತ ಕೊಂಚ ಹಣದಿಂದಲೇ ಅವರು ಧನಿಕರೆಂದು ಮೆರೆಯುತ್ತಾರೆ. ॥೫೩॥

ಯವನಾಃ ಸವನೇಷು ವಿಪ್ರವೃಂದವ್ಯಸನಾನ್ಯಸವಿಾಕ್ಷ್ಯ ಲುಂಠಯಂತಿ
ಪಿಶುನಾನ್ನಿಶಿತಾಂಘುನಾಮಿವ ದೂತವಿಾಶೇ ಲಶುನಾಶಿನೋಗ್ರದಂತೈಃ॥೫೪

ಕಲೌ ಕಲುಷಿತಾಶಯಾ ಭುವಿ ಭವಂತಿ ಬಾಲಾಃ ಬಲಾ
ವಿತರ್ಕಕುಶಲಾಯುಸಾಸಲವಿದಗ್ಧಫಾಲಾಶಯಾಃ ।
ಪತಂತಿ ನರಕೇ ಖಲಾ ಮಲಜಲಾವಿಲೇ ಕೇವಲಂ
ಶಿಲಾಸು ಬಹುಲಾ ಸಮಾಃ ಕ್ವಥಿತತೈಲದುಃಖಾಂಗಕಾಃ ॥೫೫॥

ದೃಢಂ ಮೃಡವಿನಿಂದಯಾ ಪರಿಮೃಡೋರುದಂಡಾಹತಾಃ
ವಿಮೂಢಮತಯಃ ಕಲೌ ಪರಿವಿಶಂತಿ ಗಾಢಂ ತಮಃ ।
ಅನರ್ಗಲ ನಿರರ್ಗಲಾರ್ಗಲಗಲಾದಿಪಾದಾಂಘ್ರಯೋ
ಲುಠಂತಿ ಕಮಠಾ ಇವಾರ್ಭಟೀಭಟಕಠೋರಶಸ್ತ್ರಾಹತಾಃ ॥೫೬॥

---

ಯವನರು, ಯಜ್ಞಯಾಗಾದಿಗಳಲ್ಲಿ ನಿರತರಾಗಿ ವ್ಯಸನಭರಿತರಾಗಿರುವ ಬ್ರಾಹ್ಮಣರನ್ನು ನೋಡಿ, ಅವರ ಕ್ಲೇಶಗಳನ್ನೂ ವಿಚಾರಿಸದೆ, ಕೊಳ್ಳೆಹೊಡೆದು ಹಿಂಸೆಪಡಿಸುತ್ತಾರೆ. ಕ್ರೂರರಾದ ಮೂರ್ಖರನ್ನು ನಾಯಿಗಳಂತೆ, ಬೆಳ್ಳುಳ್ಳಿಯನ್ನು ಭಕ್ಷಿಸುವ ಭಯಂಕರವಾದ ಹಲ್ಲುಗಳುಳ್ಳವರಾಗಿ ಹಣವಂತನ ಮೇಲೆ ಲೂಟಿ ಮಾಡಲು ಪ್ರೇರಿಸುತ್ತಾರೆ. ॥೫೪॥

ಕಲಿಯುಗದಲ್ಲಿ ಹುಡುಗರು, ಮಕ್ಕಳು ಮತ್ತು ಹೆಂಗಸರು ಮೊದಲುಗೊಂಡು ಎಲ್ಲರೂ ಭೂಮಂಡಲದಲ್ಲಿ ಕಲ್ಮಷಚಿತ್ತರೇ ಆಗುವರು. ಕುತರ್ಕವಾದದಲ್ಲಿ ನಿಪುಣರಾಗಿ, ಆ ವಾದದಿಂದ ಹುಟ್ಟಿದ ಬೆಂಕಿಯಿಂದ ಸುಟ್ಟ ಹಣೆ ಮತ್ತು ಕೆಟ್ಟ ಅಭಿಪ್ರಾಯವುಳ್ಳವರಾಗಿ, ನರಕವನ್ನೈದಿ ಮಲಮೂತ್ರಗಳಿಂದ ವ್ಯಾಪ್ತವಾದ ಕುಂಡಗಳಲ್ಲಿಯೇ ಬಿದ್ದು ಸಾಯುವರು. ಅಲ್ಲದೆ ಕಾದ ಬಂಡೆಗಳ ಮೇಲೆಯೂ ಕುದಿಯುವ ಎಣ್ಣೆಯ ಕುಂಡಗಳಲ್ಲಿಯೂ ಬಿದ್ದು ಅನೇಕ ವರ್ಷಗಳ ಕಾಲ ಹೀಗೆಯೇ ದುಃಖಹೊಂದುತ್ತಾ ನರಳುವರು. ॥೫೫॥

ಕಲಿಯುಗದಲ್ಲಿ ವಿಶೇಷವಾಗಿ ಸುಖಪ್ರದನಾದ ನನ್ನನ್ನು ನಿಂದಿಸಿ ಆ ಯಮನ ತೀವ್ರವಾದ ದಂಡನೆಗೆ ಗುರಿಯಾಗುವರು. ಮಂದಮತಿಗಳಾದ ಈ ಕಲಿಮಾನವರು ಕೊನೆಗೆ ಅಗಾಧವಾದ ಅಂಧಕಾರವನ್ನು ಪ್ರವೇಶಿಸುವರು. (ಕೇವಲ ಅಜ್ಞಾನಿಗಳಾಗುವರು) ತಡೆಬಡೆಯಿಲ್ಲದ ಕಂಠ, ಪಾದ ಮತ್ತು ಕಾಲುಗಳುಳ್ಳವರಾಗಿ

ಮೃತ್ಫಾಲಾ ಭಸಿತತ್ರಿಪುಂಡ್ರರಹಿತಾ ರುದ್ರಾಕ್ಷಮಾಲೋಜ್ಝಿತಾ
ಕದ್ರುಪ್ರಾರ್ಚನ ರುದ್ರಜಾಪ್ಯರಹಿತಾಃ ಪಂಚಾಕ್ಷರೇಣೋಜ್ಝಿತಾಃ ।
ಕುರ್ವಂತ್ಯೇವ ಕಲೌ ಕಲುಷಯಾ ಬುದ್ಧ್ಯೈವ ಕರ್ಮಾಣಿ ತೇ
ಭ್ರಾಮ್ಯಂತ್ಯೇವ ಸ ದೈವತೇ ಯಮಗೃಹೇ ಸಂತಪ್ತಚಕ್ರೋತ್ಕೃತಾಃ ॥೫೭॥

ಭ್ರಷ್ಟಾಸ್ತೇ ದುರದೃಷ್ಟತಃ ಪ್ರತಿಕಲೌ ವಿಷ್ಟಾನುಲಿಪ್ತಾಂಗಕಾಃ
ಶಿಷ್ಟಾಚಾರವಿವರ್ಜಿತಾಷ್ಟಕರುಣಾಮೂರ್ತೇಃ ಪದಾರ್ಚೋಜ್ಝಿತಾಃ ।
ತೇ ವೈ ಸಂಕರಸೂಕರೀಖರಖರೀಯೋನೀಷು ಭೂತ್ವಾ ಚಿರಂ
ದುಷ್ಟಾಃ ಕಷ್ಟಶರೀರಿಣಃ ಪ್ರತಿಗೃಹಂ ಹಿಂಡಂತಿ ಕಷ್ಟೋತ್ತರಾಃ ॥೫೮॥

ಆಧಿವ್ಯಾಧಿಉಪಾಧಿಭಿರ್ವಿಧಿವಶಾದಾಶಾಸು ಸಂತಾಶಯಾ
ಸೇವಂತೇ ಪ್ರಸಭಂ ಕುಭಾಂಡಕನೃಪಾನ್ದುಷ್ಪೂರವಿಷ್ಟೋದರಾಃ ।

ಆಮೆಗಳಂತೆ ಕೃತ್ರಿಮದವರಾಗಿ ಕ್ರೂರರಾದ ಯಮಭಟರ ಶಸ್ತ್ರಾಹತಿಗಳಿಗೆ ಸಿಕ್ಕಿ ನಾಶಹೊಂದುವರು. ॥೫೬॥

ಅನೇಕರು ಮೃತ್ತಿಕೆಯನ್ನು ಹಣೆಯಲ್ಲಿ ಧರಿಸಿ, ಶುಭ್ರವಾದ ಭಸ್ಮತ್ರಿಪುಂಡ್ರ ರುದ್ರಾಕ್ಷಮಾಲೆಗಳನ್ನು ಧಾರಣೆಮಾಡದೇ, ಶಿವಪೂಜಾ, ರುದ್ರಜಪ ಮತ್ತು ಪಂಚಾಕ್ಷರ ಜಪಗಳನ್ನೂ ತೊರೆದು, ಈ ಕಲಿಯುಗದಲ್ಲಿ ಯಾವಾಗಲೂ ಕಲುಷಿತ ಚಿತ್ತದಿಂದಲೇ ಸಕಲ ಕರ್ಮಗಳನ್ನೂ ಮಾಡುತ್ತಾರೆ. ಭ್ರಾಂತಿಯಿಂದ ಯಾವಾಗಲೂ ಅವರು ಅಲೆಯುತ್ತಿರುತ್ತಾರೆ. ಎಲೌ ದೇವಿ, ಇದರಿಂದ ಇವರು ಯಮಲೋಕದಲ್ಲಿ ಕಾದ ಚಕ್ರಗಳಿಂದ ಕತ್ತರಿಸಲ್ಪಡುತ್ತಾ ನರಳುವರು. ॥೫೭॥

ಸದಾಚಾರಗಳನ್ನೂ ಬಿಟ್ಟು, ಅಷ್ಟಮೂರ್ತಿಯಾದ ಶಿವನ ಪಾದಪೂಜಾ ತ್ಯಾಗವನ್ನೂ ಮಾಡಿ ಅಪವಿತ್ರವಸ್ತುವಿನಿಂದ ಲೇಪಿಸಲ್ಪಟ್ಟ ಅವಯವವುಳ್ಳ ಅವರು, ಕಲಿಯುಗದಲ್ಲಿ ದುರದೃಷ್ಟವಶದಿಂದ ಭ್ರಷ್ಟರಾಗಿ ಸಂಕರಜಾತಿಯಲ್ಲಿಯೂ, ಹಂದಿ, ಕಳ್ಳ, ಕತ್ತೆ ಮುಂತಾದ ದುರ್ಯೋನಿಗಳಲ್ಲಿಯೂ ಜನಿಸಿ ಬಹಳಕಾಲ ದುಷ್ಟರೂ ಕಷ್ಟವನ್ನನುಭವಿಸುವ ದೇಹವುಳ್ಳವರೂ ಆಗಿ ಕ್ಲೇಶದಿಂದ ಪ್ರತಿಯೊಂದು ಮನೆಯವರನ್ನೂ ಹಿಂಸಿಸುತ್ತಿರುವರು. ॥೫೮॥

ಮನೋವ್ಯಥೆ, ರೋಗ ಮತ್ತು ಇನ್ನಿತರ ಉಪಾಧಿಗಳಿಂದ ವಿಧಿವಶರಾಗಿ ಕೇವಲ ಪ್ರತ್ಯಾಶೆಯಿಂದ ಕಷ್ಟಪಡುವರು. ಹೊಟ್ಟೆಯಪಾಡಿಗಾಗಿ ಎಲ್ಲವನ್ನೂ

ಯೇ ವಾರಾಂನಿಧಿಜಾವಿಲಾಸಲಸಿತೈರಾಲಸ್ಯತಸ್ತ್ಯಜ್ಯ ವೈ
ಕೈಲಾಸಾಚಲವಾಸಿನಂ ಕಲಿಯುಗೇ ನಾರಾಧಯಂತಿ ಕ್ಷಣಂ ॥೫೯॥

ವಿಶ್ವಸ್ತಾಶ್ವಾಸಹೀನಾಃ ಸ್ವಜನಪರಿಜನೇ ಶ್ವಾನವದ್ಯೋಷಮಾಣಾ
ಯೋಷಾ ಭೂಷಾಪಹಾರಾಃ ಸತತಮ್ಯೃಷವಚಸ್ತಿಪ್ಪಜಾತಾ(?) ಮನುಷ್ಯಾಃ ।
ಮಾತಾಪಿತ್ರೋರ್ಗುರೋರ್ವಾ ದ್ವಿಜಗವಿ ಸ್ವಜನೇ ಪೂಜಯೋಷಾದಿಹೀನಾ
ಆಯುಃ ಶೇಷಂ ಕ್ಷಪಂತೋ ವಿಷವಿಷಯಪರಾ ಮೇಷವನ್ಮ್ಲಾಷವರ್ಣಾಃ
॥೬೦॥

ಬಾಲಾಬಲಾಸು ಬಲವದ್ಧನಹಾರಿಣಸ್ತೇ
ತೇ ವಾನರಾ ಭುವಿ ಭವಂತಿ ಕಲಿಪ್ರತಿಷ್ಠಾಃ ।
ಉದ್ವೇಜಕಾಶ್ಚ ನೃಷು ಗೋಷು ಚಮೂಷು ಪಾಪಾ
ಸ್ತೇ ದಸ್ಯವೋಸುವಸುಹಾರಿಣ ಏವ ಪಶ್ಯ ॥೬೧॥

---

ಅತಿಯಾಗಿ ಬಯಸಿ ಏನನ್ನೂ ಹೊಂದಲಾರದೇ ದೈನ್ಯದಿಂದ ಕೇವಲ ಕ್ಷುದ್ರ ರಾಜರನ್ನೇ ಸೇವಿಸುವರು. ದುಷ್ಟಪದಾರ್ಥಗಳ ಸೇವನೆಯಿಂದ ಪೂರ್ಣವಾದ ಹೊಟ್ಟೆ ಯುಳ್ಳವರಾಗಿ ಕಷ್ಟಪಡುತ್ತಿರುವರು. ಕೆಲವರು ಸಮುದ್ರ ಕುವರಿಯಾದ ಲಕ್ಷ್ಮಿಯ ವಿಲಾಸದಿಂದ ಮತ್ತರಾಗಿ, ಸಾಧಿಸಬೇಕಾದ ಕಾರ್ಯಗಳನ್ನು ಬಿಟ್ಟು, ಕ್ಷಣಕಾಲ ವಾದರೂ ಕೈಲಾಸಪರ್ವತವಾಸಿಯಾದ ಪರಶಿವನನ್ನು ಪೂಜೆಮಾಡುವುದಿಲ್ಲ. ॥೫೯॥

ತನ್ನ ಬಂಧುಬಳಗ ಮತ್ತು ಸೇವಕರಲ್ಲಿ ವಿಶ್ವಾಸವಿಲ್ಲದವರಾಗಿ, ನಾಯಿಗಳಂತೆ ಹೆಂಗಸರನ್ನರಸುತ್ತಾ, ಸ್ತ್ರೀಯರ ಒಡವೆಗಳನ್ನು ಅಪಹಾರಮಾಡಿಕೊಂಡು ಯಾವಾಗಲೂ ಸುಳ್ಳುಮಾತುಗಳನ್ನೇ ಆಡುತ್ತಾ, ಕಾರ್ಪಣ್ಯದಿಂದ ಜೀವಿಸುವ ಮನುಷ್ಯರು, ತಂದೆತಾಯಿಗಳು, ಗುರುಗಳು, ಗೋವು ಮತ್ತು ಬ್ರಾಹ್ಮಣರನ್ನು ಸೇವೆಮಾಡದೇ ಕೇವಲ ವಿಷಪ್ರಾಯವಾದ ವಿಷಯಸುಖದಲ್ಲಿಯೇ ನಿರತರಾಗಿ, ತಮ್ಮ ಆಯುಶ್ಶೇಷವನ್ನೆಲ್ಲಾ ಕಳೆಯುತ್ತಾ ಆಡಿನಂತೆ ಕಲ್ಮಷವರ್ಣವುಳ್ಳವರಾಗಿರುವರು. ॥೬೦॥

ಹುಡುಗರು, ಹೆಂಗಸರು ಇವರಲ್ಲಿ ಬಲಾತ್ಕಾರವಾಗಿ ಧನಾಪಹಾರಮಾಡುತ್ತಾ ಹೀನಬುದ್ಧಿಯುಳ್ಳ ಕಲಿಜನಗಳು ಭೂಮಿಯಲ್ಲಿ ಪ್ರಖ್ಯಾತರಾಗುತ್ತಾರೆ. ಅಲ್ಲದೆ ಮಾನವರು, ಹಸುಗಳು ಮತ್ತು ಸೈನ್ಯಗಳಲ್ಲಿ ಉದ್ವೇಗವನ್ನುಂಟುಮಾಡುತ್ತಾ ಪಾಪಿಗಳಾಗಿ, ಲೂಟಿಗಾರರೆನಿಸಿ ಉತ್ತಮವಾದ ದ್ರವ್ಯಗಳನ್ನು ಅಪಹರಿಸುತ್ತಿರುವರು; ದೇವಿ, ಕಲಿಯುಗದ ಜನರ ಸ್ವಭಾವವನ್ನು ನೋಡು. ॥೬೧॥

ದುರೋದರದರೀಭರಾಃ ಪರಸುತಲ್ಪಭೋಗಾಪರಾ
ಸುರಾಸವಗರಾದನಾ ಭುವಿ ಭವಂತಿ ನಾರ್ಯೋ ನರಾಃ ।
ಕಲೌ ಪರಮತಸ್ಕರಾಃ ಶಿವಮಯಸ್ಕರಾನರ್ಚಕಾ
ಅಹಸ್ಕರವಿನಿಂದಕಾಃ ಪರಮದುಷ್ಕರಾಸ್ತೇ ನರಾಃ ॥೬೨॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ
ಕಲಿಜಮನುಷ್ಯಧರ್ಮವರ್ಣನಂ ನಾಮ ನವಮೋಽಧ್ಯಾಯಃ

---

ಕೆಟ್ಟ ಪದಾರ್ಥಗಳನ್ನೇ ತಿಂದು ಹೊಟ್ಟೆತುಂಬಿಸಿಕೊಳ್ಳುವರಾಗಿಯೂ, ಪರಸ್ತ್ರೀ ಭೋಗಲಾಲಸರಾಗಿಯೂ, ಮದ್ಯಗಳೆಂಬ ವಿಷವನ್ನೇ ಪಾನಮಾಡುವವರಾಗಿಯೂ ಜೀವಿಸುವರು. ಗಂಡಸರು, ಹೆಂಗಸರೆಲ್ಲರೂ ಇದೇ ಜೀವನವನ್ನೇ ನಡೆಸುತ್ತಾ ಭೂಮಿಯಲ್ಲಿ ವಾಸಿಸುವರು. ಕೇವಲ ಕಳ್ಳತನದಿಂದ ಜೀವಿಸುತ್ತಾ, ಸುಖಪ್ರದನಾದ ಶಿವನನ್ನು ಪೂಜೆಮಾಡದೇ, ಸೂರ್ಯನನ್ನೇ ದೂಷಣೆಮಾಡುತ್ತಾ ಅಥವಾ ತೇಜಃ ಕಾರಕನಾದ ಶಂಕರನನ್ನೇ ನಿಂದಿಸುತ್ತಾ ಕಲಿಮಾನವರು ದುಷ್ಟಕಾರ್ಯಗಳನ್ನು ಆಸಕ್ತಿಯಿಂದ ನಿರ್ವಹಿಸುವರು ಎಂದು ಶಿವನು ಪಾರ್ವತಿಗೆ ಹೇಳಿದನು. ॥೬೨॥

ಇಲ್ಲಿಗೆ ಶ್ರೀ ಶಿವರಹಸ್ಯದ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಕಲಿಯುಗದ ಮನುಜರ ಧರ್ಮವರ್ಣನೆಯೆಂಬ ಒಂಬತ್ತನೆಯ
ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ದಶಮೋಽಧ್ಯಾಯಃ

|| ಈಶ್ವರ ಉವಾಚ ||

**ಪುನಃ ಕಲಿಯುಗೇ ಘೋರೇ ವಾತವರ್ಷೋಪಸರ್ಗಕಾಃ ।**
**ಭವಂತಿ ಚ ಪ್ರಜಾನಾಂ ಹಿ ಆಧಿವ್ಯಾಧಿಸಮುದ್ಭವಾಃ ॥೧॥**

**ಅಕಾಲಮರಣಂ ದೇವಿ ಪುತ್ರಾಣಾಂ ಪಿತುರಗ್ರತಃ ।**
**ಉಗ್ರಾ ಉಗ್ರಾರ್ಚಕಾಃ ಸರ್ವೇ ದುರ್ಗಾ ವೈನಾಯಕಾರ್ಚಕಾಃ ॥೨॥**

**ವರಾಟಿಕಾಧರಾಃ ಶಾಕ್ತಾ ಢಕ್ಕಾನಾದ್ಯೈಕಜೀವನಾಃ ।**
**ಚಕ್ರಾಂಕಾಶ್ಚ ತಥಾ ಪಾಪಾ ಸರ್ವೇ ವೈ ಲಿಂಗವಕ್ಷಸಃ ॥೩॥**

---

## ಹತ್ತನೆಯ ಅಧ್ಯಾಯ

ಪುನಃ ಈಶ್ವರನು ಕಲಿಮಹಿಮೆಯನ್ನು ದೇವಿಗೆ ಮುಂದುವರಿಸುತ್ತಾ ಹೀಗೆಂದನು:— ದೇವಿ! ಈ ಭಯಂಕರವಾದ ಕಲಿಯುಗದಲ್ಲಿ ವಾಯು, ಮಳೆ, ಕ್ಷಾಮ ಮುಂತಾದ ದೈವಿಕಬಾಧೆ, ರೋಗಗಳಿಂದುಂಟಾಗುವ ಉಪದ್ರವಗಳು ಪ್ರಜೆಗಳಿಗೆ ಆಗಾಗ ಉಂಟಾಗುವುವು ತಂದೆತಾಯಿಗಳ ಮುಂದೆಯೇ ಮಕ್ಕಳ ಅಕಾಲಮರಣವೂ ತೋರುವುದು. ಎಲ್ಲರೂ ಭಯಂಕರರೂಪತಾಳಿ ಉಗ್ರದೇವತೆ, ದುರ್ಗಾ, ಮತ್ತು ವಿನಾಯಕರನ್ನು ಪೂಜಿಸತೊಡಗುವರು. ಶಾಕ್ತರನೇಕರು ಕವಡೆ ಗಳನ್ನು ಧರಿಸಿ, ಢಕ್ಕಾವಾದ್ಯವನ್ನು ಬಾರಿಸುತ್ತಾ ಅದರಿಂದಲೇ ಜೀವಿಕೆ ನಡೆಸು ತ್ತಾರೆ. ಹಾಗೆಯೇ, ಪಾಪಿಗಳಾದ ಕೆಲವರು ಚಕ್ರಚಿಹ್ನಿತರಾಗಿ, ಹಲವರು ಲಿಂಗ

ಭವಿಷ್ಯಂತಿ ಕಲೌ ದೇವಿ ಧರ್ಮವಿಕ್ರಯಿಣೋ ಜನಾಃ ।
ದುಷ್ಟಾಭಕ್ಷಪ್ರಿಯಾಃ ಸರ್ವೇ ಪಲಾಂಡುಲಶುನಾಶನಾಃ ॥೪॥

ಶೂಲಪಾಷಂಡವೇತಂಡಭಂಡೈಃ ಸಹ ವಸಂತ್ಯಪಿ ।
ಗಣಕಾ ಗಣಿಕಾವೇಶ್ಯಾ ಜ್ಯೋತಿರ್ವೈದ್ಯಾನ್ನಜೀವಿನಃ ॥೫॥

ಭಗೋಪಜೀವನಾಃ ಸರ್ವೇ ಸ್ತ್ರಿಯಃ ಕಾಮಪರಾಹತಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೬॥

ಅತಿದಂಡಾಶ್ಚ ರಾಜಾನೋ ನಿರ್ದಂಡಾಶ್ಚ ಮಹತ್ಸ್ವಪಿ ।
ಅಪರಾಧೇಽಪ್ಯತಿಸ್ವಲ್ಪೇ ವಿಪ್ರಾ ಉಂಛೋಪಜೀವಿನಃ ॥೭॥

ಮಠಾಧಿಪತಯಃ ಸರ್ವೇ ಯತಯೋ ಧನತತ್ಪರಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೮॥

---

ಗಳನ್ನು ಎದೆಯಲ್ಲಿ ಧರಿಸಿಕೊಂಡು, ಜೀವಿಸುವರು. ಎಲೌ ದೇವಿ, ಒಟ್ಟಿನಲ್ಲಿ ಈ ಕಲಿಯುಗದಲ್ಲಿ ಜನಗಳು ದುಡ್ಡಿಗಾಗಿ ಧರ್ಮವನ್ನು ಮಾರುತ್ತಾ ಆದರಿಂದ ಬದುಕುವರು. ॥೧-೨-೩॥

ಎಲ್ಲರೂ ದುಷ್ಟವಾದ ಆಹಾರವನ್ನು ತಿನ್ನುವವರಾಗಿ, ಈರುಳ್ಳಿ, ಬೆಳ್ಳುಳ್ಳಿಗಳನ್ನು ತಿಂದು ಜೀವಿಸುವರು. ಶೂಲ, ಪಾಷಂಡ, ವೇತಂಡ ಭಂಡ ಎಂಬ ಶೈವ ವೇಷಗಳೊಡನೆ ವಾಸಮಾಡುತ್ತಾರೆ. ಜೋಯಿಸರು, ಸೂಳೆಯರು, ನರ್ತಕಿಯರು ವೈದ್ಯ ಮತ್ತು ಅನ್ನವಿಕ್ರಯಗಳಿಂದ ಜೀವಿಸುತ್ತಾರೆ. ಹೆಂಗಸರೆಲ್ಲರೂ ಕಾಮಪೀಡಿತರಾಗಿ ಕೇವಲ ಶರೀರವಿಕ್ರಯಮಾಡಿಕೊಂಡು ವೇಶ್ಯಾವೃತ್ತಿಯಿಂದ ಜೀವನ ಮಾಡುವರು. ದೇವಿ, ಈ ರೀತಿಯಾಗಿ ಪಾಪಿಷ್ಠರಾದ ಅನೇಕರು ಈ ಕಲಿಯುಗದಲ್ಲಿ ಲಜ್ಜೆಯಿಲ್ಲದವರಾಗಿ ಕರ್ಮಭ್ರಷ್ಟರಾಗುವರು. ॥೪-೫-೬॥

ಕಲಿಯುಗದ ರಾಜರು ನಿರಪರಾಧಿಗಳಾದ ಮಹಾತ್ಮರನ್ನು ಅತಿ ತೀವ್ರವಾಗಿ ದಂಡಿಸುತ್ತಾ, ಹೆಚ್ಚುತಪ್ಪಿದ್ದರೂ, ಐಶ್ವರ್ಯವಂತರನ್ನು ಶಿಕ್ಷೆಮಾಡದೇ ಬಿಡುತ್ತಾರೆ. ಬ್ರಾಹ್ಮಣರು, ನಿತ್ಯಯಾತ್ರೆ (ಉಂಛಾವೃತ್ತಿ)ಯಿಂದ ಜೀವನಮಾಡುತ್ತಾರೆ. ಮಠಾಧಿಪತಿಗಳಾದ ಸಂನ್ಯಾಸಿಗಳೆಲ್ಲರೂ, ಕೇವಲ ದ್ರವ್ಯಾರ್ಜನತತ್ಪರರಾಗಿ ಪಾಪಿಗಳೆನಿಸಿ ಲಜ್ಜಾಹೀನರಾಗುವರು. ॥೭-೮॥

ಗಾಂ ವಾಹಯಂತಿ ದುಷ್ಟಾಸ್ತೇ ಹಲೇಷು ನಿಯುತಂ ಕಲೌ ।
ಶೃಣ್ವತ್ಸು ವೃಷಲೇಷ್ವೇವ ವೇದಾನುಚ್ಚೈರ್ವದಂತಿ ಚ ॥೯॥

ಶಿಷ್ಯಾಃ ಸರ್ವೇಽಪಿ ಗುರವೋ ಗುರವಃ ಶಿಷ್ಯತಾಂ ಗತಾಃ ।
ಮಾತಾಪಿತ್ರೋರಪೋಷ್ಟಾರೋ ಭಾರ್ಯಾಬಾಂಧವಹರ್ಷದಾಃ ॥೧೦॥

ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ।
ಬಾಲವತ್ಸಾಂ ತಥಾ ಗಾಂ ವೈ ದುಹಂತಿ ಕ್ಷೀರವಾಂಛಯಾ ॥೧೧॥

ಶ್ರಾದ್ಧೇ ಶ್ವಶುರಜಾಮಾತ್ಯಾನ್ಭೋಜಯಂತಿ ಶಿವೇಽಧಮಾಃ ।
ಅನ್ಯಧರ್ಮಾನ್ನಾಶಯಂತಿ ಸ್ವಧರ್ಮಖ್ಯಾಪನಾಯ ಹಿ ॥೧೨॥

ಸಮಾಜೋತ್ಸೇವಕಾ ದೇವಿ ದೇವಾನಾಂ ಪೂಜಕಾ ನರಾಃ ।
ಶೂದ್ರಾ ಧರ್ಮಂ ವದಿಷ್ಯಂತಿ ಶ್ರಮಣಾ ಏವ ಶಾಂಕರಾಃ ॥೧೩॥

ಗೃಹಸ್ಥಾ ಯಾಚಕಾ ಏವ ನಾನ್ನದಾಶ್ಚಾತಿಥೌ ಶಿವೇ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೧೪॥

---

ದುಷ್ಟರಾದ ಅನೇಕ ಜನಗಳು ಕಲಿಯುಗದಲ್ಲಿ ನೇಗಿಲಿಗೆ ಹಸುಗಳನ್ನು ಕಟ್ಟಿ ಉಳುತ್ತಾರೆ. ಶೂದ್ರರು ಕೇಳುತ್ತಿರುವಂತೆಯೇ ಬ್ರಾಹ್ಮಣರು ಗಟ್ಟಿಯಾಗಿ ವೇದಗಳನ್ನು ಉಚ್ಚಾರಮಾಡುತ್ತಾರೆ. ಶಿಷ್ಯರೆಲ್ಲರೂ ಗುರುಗಳಂತೆಯೂ, ಗುರುಗಳೇ ಶಿಷ್ಯರಂತೆಯೂ ಆಗುತ್ತಾರೆ. ಹೆತ್ತ ತಂದೆ ತಾಯಿಗಳನ್ನು ಪೋಷಣೆ ಮಾಡದೆ, ಕೇವಲ ಹೆಂಡತಿ ಮತ್ತು ಬಂಧುಗಳಿಗೆ ಸಂತೋಷವನ್ನುಂಟುಮಾಡುವರಾಗುತ್ತಾರೆ. ಇಂತಹ ಲಜ್ಜಾಹೀನರಾದ ಪಾಪಿಗಳು ಕಲಿಯುಗದಲ್ಲಿ ಹುಟ್ಟುತ್ತಾರೆ. ॥೯-೧೦॥

ಎಳೆಯ ಕರುವಿದ್ದರೂ ಹಸುವಿನ ಹಾಲನ್ನು ಕೊಂಚವೂ ಅದಕ್ಕೆ ಬಿಡದೆ ಹಾಲಿನ ಆಸೆಯಿಂದ ಎಲ್ಲವನ್ನೂ ಕರೆದುಕೊಳ್ಳುತ್ತಾರೆ. ಎಲೌ ಪಾರ್ವತಿ, ಶ್ರಾದ್ಧದಲ್ಲಿ ಮಾವ, ಅಳಿಯ ಮುಂತಾದವರನ್ನು ಅಧಮರಾದ ಬ್ರಾಹ್ಮಣರು ನಿಮಂತ್ರಣಕ್ಕೆ ಕೂರಿಸುತ್ತಾರೆ. ತಮ್ಮ ಧರ್ಮವನ್ನು ಪ್ರತಿಷ್ಠೆಗೊಳಿಸುವುದಕ್ಕೋಸ್ಕರ ಇತರ ಧರ್ಮಗಳನ್ನೆಲ್ಲಾ ನಾಶಮಾಡುತ್ತಾರೆ. ದೇವಿ, ದೇವರನ್ನು ಪೂಜೆಮಾಡುತ್ತಿದ್ದ ಮಾನವರೆಲ್ಲರೂ ಅದನ್ನು ಬಿಟ್ಟು ಸಮಾಜದ ಉತ್ಸವಗಳೇ ಮುಂತಾದುವುಗಳಲ್ಲಿ ಭಾಗವಹಿಸಿ ಪ್ರೋತ್ಸಾಹಿಸುತ್ತಾರೆ. ಶೂದ್ರರು, ಧರ್ಮವನ್ನು ಇತರರಿಗೆ ಉಪದೇಶಿಸ

ವರ್ಣಿನಃ ಕಾಮುಸಂಸಕ್ತಾಃ ಸ್ರಗ್ಗಂಧಾಭರಣಪ್ರಿಯಾಃ ।
ವನಸ್ಥಾ ಗ್ರಾಮನಿರತಾ ವಿರತಾಃ ಸರ್ವಕರ್ಮಣಿ ॥೧೫॥

ಶೂದ್ರಾಸ್ತಪಸ್ವಿನಃ ಸರ್ವೇ ನಖಲೋಮಜಟಾಧರಾಃ ।
ತೀರ್ಥಾನ್ಯನುಚರಿಷ್ಯಂತಿ ಪಾಷಂಡಾಸ್ತು ಕಲೌ ಶಿವೇ ॥೧೬॥

ಪಂಚಯಜ್ಞೋಜ್ಝಿತಾಃ ಸರ್ವೇ ಪಂಚಪಾಪೋಪಜೀವಿನಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೧೭॥

ಉನ್ಮತ್ತಾ ವಿಕಟಾಮುಂಡಾ ವಿರೂಪಾ ಪಾಣಿವರ್ಜಿತಾಃ ।
ಅಂಧಾಶ್ಚ ಬಧಿರಾಸ್ತಬ್ಧಾಃ ಕುಬ್ಜಾಃ ಪಂಗವ ಏವ ಹಿ ॥೧೮॥

---

ತ್ತಾರೆ. ಶಂಕರಭಕ್ತರೆಲ್ಲರೂ ಜೈನಸಂನ್ಯಾಸಿಗಳಂತಾಗುತ್ತಾರೆ. ಗೃಹಸ್ಥರೆಲ್ಲರೂ ಯಾಚಕರಾಗಿರುವರೇ ಅಲ್ಲದೇ ಅತಿಥಿಗಳಿಗೆ ಅನ್ನದಾನಾದಿಗಳನ್ನು ಕೊಂಚವೂ ಮಾಡುವುದಿಲ್ಲ. ದೇವಿ, ಕಲಿಯುಗದಲ್ಲಿ ಈರೀತಿ ಲಜ್ಜಾಶೂನ್ಯರಾದ ಪಾಪಿಗಳು ಅನವರತವೂ ಜೀವಿಸುತ್ತಾರೆ. ॥೧೧-೧೨-೧೩-೧೪॥

ಬ್ರಹ್ಮಚಾರಿಗಳು ಹಾರ, ಗಂಧ, ಆಭರಣಗಳಲ್ಲಿ ಪ್ರೀತಿಯುಳ್ಳವರಾಗಿ ಕಾಮಾಸಕ್ತರಾಗುವರು. ಕಾಡಿನಲ್ಲಿ ಸರ್ವಸಂಗಪರಿತ್ಯಾಗಮಾಡಿದ್ದ ಸಂನ್ಯಾಸಿಗಳೇ ಮುಂತಾದ ಆಶ್ರಮಿಗಳೆಲ್ಲರೂ ಗ್ರಾಮಗಳಲ್ಲಿಯೇ ನೆಲಸುತ್ತಾರೆ, ಶೂದ್ರರೆಲ್ಲರೂ ಉಗುರು, ಗಡ್ಡ ಮತ್ತು ಜಡೆಗಳನ್ನು ಧರಿಸಿ ತಪಸ್ವಿಗಳಾಗಿ, ಪಾಷಂಡಿಗಳಾದ ಅವರೆಲ್ಲರೂ ಈ ಕಲಿಯುಗದಲ್ಲಿ ಕ್ಷೇತ್ರಗಳಲ್ಲಿ ಸಂಚರಿಸುತ್ತಾರೆ. ಬ್ರಹ್ಮಯಜ್ಞ, ದೇವಯಜ್ಞ, ಪಿತೃಯಜ್ಞ, ಋಷಿಯಜ್ಞ ಮತ್ತು ಭೂತಯಜ್ಞಗಳೆಂಬ ಐದು ಯಜ್ಞಗಳನ್ನೂ ಬಿಟ್ಟು ಬ್ರಹ್ಮಹತ್ಯೆ, ಸುರಾಪಾನ, ಚಿನ್ನ ಕದಿಯುವುದು, ಗುರುಪತ್ನೀ ಸಂಭೋಗ ಮತ್ತು ಈ ನಾಲ್ವರೊಡನೆ ಸಹವಾಸ, ಈ ಐದು ಪಾಪಗಳನ್ನಾಚರಿಸುತ್ತಾ ಅದರಿಂದಲೇ ಜೀವನಮಾಡುವವರಾಗಿ, ಪಾಪಿಷ್ಠರಾದ ಆ ಜನಗಳು ಕೊಂಚವೂ ನಾಚಿಕೆಯೇ ಇಲ್ಲದೇ ಕಲಿಯುಗದಲ್ಲಿ ಜೀವಿಸುತ್ತಾರೆ. ॥೧೫-೧೬-೧೭॥

ಹುಚ್ಚರೂ, ವಿಕಾರವುಳ್ಳವರೂ, ಕೇವಲ ಮುಂಡಾಕೃತಿಯುಳ್ಳವರೂ, ಕುರೂಪಿಗಳೂ, ಕೈಯಿಲ್ಲದವರೂ, ಕುರುಡರೂ, ಕಿವುಡರೂ, ಮೂಕರೂ, ಕುಳ್ಳರೂ, ಕಾಲಿಲ್ಲದವರೂ, ಅಂಗಹೀನರೂ, ಕೇವಲ ಬಡಶರೀರಿಗಳೂ, ಕೃಶಾಂಗವುಳ್ಳವರೂ,

ಹೀನಾಂಗಾ ಅತಿರಿಕ್ತಾಂಗಾಃ ಕೃಶಾಃ ಸ್ಥೂಲಾಃ ಪಿಚಂಡಿಲಾಃ ।
ಭವಿಷ್ಯಂತಿ ಕಲೌ ಪಾಪಾಃ ಸತತಂ ನಿರಪತ್ರಪಾಃ ॥೧೯॥

ಸ್ತ್ರಿಯೋ ಬಹ್ವ್ಯಃ ಕಲಿಯುಗೇ ಪುರುಷಾನ್ಪೀಡಯಂತಿ ಚ ।
ಗಾವೋ ದ್ವಿಜಾಶ್ಚ ನಶ್ಯಂತಿ ಶೂದ್ರಹರ್ಷಪ್ರದೋ ಯುಗಃ ॥೨೦॥

ಸರಾಂಸಿ ಚಾಪ್ರಸನ್ನಾನಿ ನಿಷ್ಫಲಾ ವನರಾಜಯಃ ।
ನಿಃಸಾರೌಷಧಿಧಾನ್ಯಾನಿ ದ್ರವ್ಯಕಾರ್ಶ್ಯಂ ಸದಾ ಕಲೌ ॥೨೧॥

ದರಿದ್ರಾ ಬಹವೋ ದೇವಿ ದಾತಾರೋ ವಿರಲಾ ಭುವಿ ।
ಅನ್ನತೋಯಪ್ರದೋ ಯಃ ಸ್ಯಾತ್ಸ ಮಹಾದಾನಕೃದ್ಭವೇತ್ ॥೨೨॥

ತಿಲತೈಲಕ್ರಯಪರಾ ಫಲಾನಾಂ ಚ ರಸಸ್ಯ ಚ ।
ಕಂಬಲಕ್ರಯಿಣಃ ಸರ್ವೇ ದ್ವಿಜಾ ವಾರ್ಧುಷಿಕಾ ಅಪಿ ॥೨೩॥

---

ದಪ್ಪ ಶರೀರವುಳ್ಳವರೂ ಮತ್ತು ಬೊಜ್ಜುಮೈಯುಳ್ಳವರೂ ಆದ ಅನೇಕ ಮಂದಿ ನಿರ್ಲಜ್ಜರಾದ ಪಾಪಿಗಳು ಈ ಕಲಿಯುಗದಲ್ಲಿ ಯಾವಾಗಲೂ ಕಂಡುಬರುತ್ತಾರೆ. ॥೧೮-೧೯॥

ದೇವಿ, ಕಲಿಯುಗದಲ್ಲಿ ಸ್ತ್ರೀಯರೇ ಬಹುಸಂಖ್ಯಾತರಾಗಿ ಯಾವಾಗಲೂ ಪುರುಷರನ್ನು ಪೀಡಿಸುತ್ತಾರೆ. ಗೋವುಗಳೂ, ಬ್ರಾಹ್ಮಣರೂ ನಾನಾರೀತಿ ನಾಶ ಹೊಂದುತ್ತಾರೆ. ಕೇವಲ ಶೂದ್ರರಿಗೆ ಮಾತ್ರ ಈ ಕಲಿಯುಗವು ಸಂತೋಷವನ್ನುಂಟುಮಾಡುತ್ತದೆ. ಸರೋವರಗಳೆಲ್ಲಾ ಕೊಳಕಾಗಿರುವುವು. ವೃಕ್ಷಸಮೂಹಗಳೆಲ್ಲವೂ ಹಣ್ಣುಹಂಪಲುಗಳಿಂದ ಶೂನ್ಯವಾಗಿರುವುವು. ಔಷಧಿಗಳೂ ಮತ್ತು ಧಾನ್ಯಗಳೂ ಸಾರರಹಿತವಾಗುವುವು. ಯಾವಾಗಲೂ ಕಲಿಯುಗದಲ್ಲಿ ಹಣವು ಬಹಳ ಕ್ಷೀಣಸ್ಥಿತಿಯನ್ನೈದುವುದು. ಬಡವರೇ ಬಹಳ ಮಂದಿ ಹುಟ್ಟುವರು. ದಾನಶೀಲರು ಭೂಮಿಯಲ್ಲಿ ಬಹಳ ವಿರಳರಾಗುವರು. ಅನ್ನ, ನೀರುಗಳನ್ನು ಕೊಡುವವನೇ ಮಹಾದಾನಮಾಡಿದವನೆಂದು ವ್ಯವಹರಿಸಲ್ಪಡುವನು. ॥೨೦-೨೧-೨೨॥

ಬ್ರಾಹ್ಮಣರೆಲ್ಲರೂ ಎಳ್ಳೆಣ್ಣೆ, ಹಣ್ಣುಗಳು, ಹಣ್ಣುಗಳ ರಸ, ಕಂಬಲ, ಇವುಗಳನ್ನು ಮಾರುವವರಾಗುತ್ತಾರೆ. ಬಡ್ಡಿಯಿಂದ ಜೀವಿಸುವವರಾಗುತ್ತಾರೆ. ದ್ವಿಜರು ಅಗ್ನಿಹೋತ್ರವಿಲ್ಲದವರಾಗಿ, ಪತ್ನಿಯಿಲ್ಲದ ವಿಧುರರೂ, ಸಂಸ್ಕಾರಹೀನರೂ, ಪಾಪ

ನಿರಗ್ನಯೋಽಥ ವಿಧುರಾ ವ್ರಾತ್ಯಾಃ ಪಾಪಪರಾಯಣಾಃ ।
ದಾತಾರಮೇವ ಮನ್ಯಂತೇ ತಥಾ ಧರ್ಮಪರಾಯಣಂ ॥೨೪॥

ಕ್ವಚಿತ್ಕ್ವಚಿದ್ಭವಿಷ್ಯಂತಿ ಶೈವಾಃ ಪರಿಮಿತಾಃ ಕಲೌ ।
ಅಶೈವಾಸ್ತಾನ್ಹನಿಷ್ಯಂತಿ ಮದ್ಯಪಾ ಇವ ಕೇವಲಂ ॥೨೫॥

ವೃಷಲೀಪತಯಃ ಸರ್ವೇ ನರಾನಾರ್ಯಶ್ಚ ಸಂಕರಾಃ ।
ಶಾಂಕರಃ ಕೋಽಪಿ ನ ಭವೇತ್ಸರ್ವದೇವಾರ್ಚಕಃ ಕಲೌ ॥೨೬॥

ರುದ್ರಾಕ್ಷಭಸ್ಮಪುಂಡ್ರಾಂಕಂ ದೃಷ್ಟ್ವಾಸೂಯಾಪರಾ ನರಾಃ ।
ಊರ್ಧ್ವಪುಂಡ್ರಕರಾಃ ಸರ್ವೇ ಮೃದಾಚಂದನತೋಽಪಿ ಚ ॥೨೭॥

ವೈಷ್ಣವಾಶ್ಚ ತಥಾ ಶಾಕ್ತಾಃ ಮದ್ಯಮಾಂಸಾಶನಪ್ರಿಯಾಃ ।
ಬಹವಸ್ತೇ ಭವಿಷ್ಯಂತಿ ಶಬರಾಶ್ಚ ಕಲೌ ನರಾಃ ॥೨೮॥

ಕನ್ಯಾಶುಲ್ಕಾಭಿವೃದ್ಧ್ಯೈವ ಜೀವಂತ್ಯೇವ ಕಲೌ ನರಾಃ ।
ಸಂವಾಹನಕರಾ ಘೋರಾ ಕೀಲಾಲೇ ಕರ್ಕಟಾ ಇವ ॥೨೯॥

---

ಕಾರ್ಯಪರಾಯಣರೂ ಎನಿಸಿ ದಾನಮಾಡುವವನನ್ನೇ ಧರ್ಮಪರಾಯಣನೆಂದು ನಂಬುತ್ತಾರೆ. ಕಲಿಯುಗದಲ್ಲಿ ಎಲ್ಲೋ ಕೆಲವೆಡೆಗಳಲ್ಲಿ ಶೈವಶ್ರೇಷ್ಠರು ಪರಿಮಿತ ಸಂಖ್ಯೆಯಿಂದ ಹುಟ್ಟುತ್ತಾರೆ. ಆದರೆ ಶಿವದ್ರೋಹಿಗಳು ಕೇವಲ ಹೆಂಡಕುಡಿದವರಂತೆ ಅವರನ್ನು ಹಿಂಸಿಸುತ್ತಾರೆ. ॥೨೩-೨೪-೨೫॥

ಅನೇಕ ವಿಪ್ರರು ಶೂದ್ರಸ್ತ್ರೀಪತಿಗಳಾಗುತ್ತಾರೆ. ಗಂಡಸರು, ಹೆಂಗಸರೆಲ್ಲರೂ ಸಂಕರಜಾತಿಯುಳ್ಳವರಾಗುತ್ತಾರೆ. ಈ ಕಲಿಯುಗದಲ್ಲಿ ಸಕಲ ದೇವತಾರೂಪಿಯಾದ ಶಿವನನ್ನು ಪೂಜೆಮಾಡುವ ಶಾಂಕರನು ಒಬ್ಬನೂ ಹುಟ್ಟುವುದೇ ಇಲ್ಲ. ರುದ್ರಾಕ್ಷ, ಭಸ್ಮತ್ರಿಪುಂಡ್ರಗಳನ್ನು ಧರಿಸಿರುವವನನ್ನು ನೋಡಿ ಮಾನವರು ಅಸೂಯಾಪರರಾಗುತ್ತಾರೆ. ಎಲ್ಲರೂ, ಮೃತ್ತಿಕೆ, ಅಥವಾ ಚಂದನಗಳಿಂದ ಊರ್ಧ್ವಪುಂಡ್ರಗಳನ್ನೇ ಧರಿಸುತ್ತಾರೆ. ॥೨೬-೨೭॥

ವೈಷ್ಣವರೂ, ಶಾಕ್ತರೂ, ಮದ್ಯಮಾಂಸಗಳನ್ನು ತಿನ್ನುವುದರಲ್ಲಿ ಪ್ರೀತಿಯುಳ್ಳ ಅನೇಕ ಮಂದಿ ಬೇಡರೂ ಈ ಕಲಿಯುಗದ ಮಾನವರಾಗುವರು. ಅಲ್ಲದೇ ಈ ಕಲಿಯುಗದಲ್ಲಿ ಅನೇಕರು ಕನ್ಯೆಯ ಶುಲ್ಕವನ್ನು ಪಡೆಯುತ್ತಾ ಅದರ ಬಡ್ಡಿದುಡ್ಡಿನ

ವಸಂತಿ ಮಧುಮತ್ತಾಸ್ಸದಾ ದ್ವಿಜಾ ಅಪಿ ಕಲೌ ಶಿವೇ ।
ಏವಂ ವರ್ಣತ್ರಯೋಽಪೀಮೇ ಸಂಕರಾಶೂದ್ರಭೂಯಸಃ ॥೩೦॥

ವಾಯಸಾ ಇವ ತಿಷ್ಠಂತಿ ಕಾರ್ಪಾಸಕ್ರಯಣಾ ನರಾಃ ।
ದಂಭಾಹಂಕಾರನಿರತಾಃ ಕ್ರೋಧಾಸೂಯಾಪರಾಯಣಾಃ ॥೩೧॥

ದಯಾದಾಕ್ಷಿಣ್ಯರಹಿತಾಃ ಶೌಚಾಚಾರವಿವರ್ಜಿತಾಃ ।
ಸರ್ವೇ ಪಶುಸಧರ್ಮಾಣೋ ಭವಿಷ್ಯಂತಿ ಶಿವೇ ಕಲೌ ॥೩೨॥

ಕಿಂ ಪುನರ್ಬಹುನೋಕ್ತೇನ ಸರ್ವಧರ್ಮೋಜ್ಝಿತಾಃ ಕಲೌ ॥೩೩॥

ನಕ್ಷತ್ರಕ್ಷಾತ್ರಗೋತ್ರಗಣಕಗದಗುಣಾ ಜ್ಞಾನಿನೋ ವೈಶ್ಯವೇಶ್ಯಾ
ವಶ್ಯಾಕರ್ಷಾನುತರ್ಷಾ ಗಜಹಯಖರಗೋಪಣ್ಯಪಿಣ್ಯಾಕಭಕ್ಷ್ಯಾಃ ।
ಹೀನಾ ಹೀನೇಷು ದೀಕ್ಷಾ ಕ್ಷಪಿತಧನಧಿಯೋ ದೀಕ್ಷಿತಾಲುಕ್ಷಚಿತ್ತಾ
ತ್ರ್ಯಕ್ಷಾರ್ಚಾಹೀನಚಿತ್ತಾಃ ಕಲಿಮಲಜಜುಷೋ ಅದ್ವಿಜಾಸ್ತೇ ದ್ವಿಜಾಶ್ಚ ॥೩೪

---

ಲಾಭದಿಂದಲೇ ಜೀವನಮಾಡುತ್ತಾರೆ ಭಯಂಕರರಾದ ಈ ಕಲಿಮಾನವರು ನೀರಿನಲ್ಲಿನ ಏಡಿಗಳಂತೆ ಯಾವಾಗಲೂ ಮತ್ತೊಬ್ಬರ ಸೇವೆ, ಆಶ್ರಯಣಗಳಿಂದಲೇ ಜೀವಿಸುವರು. ಎಲೌ ಪಾರ್ವತಿಯೇ, ಈ ಕಲಿಯುಗದಲ್ಲಿ ಬ್ರಾಹ್ಮಣರೂ ಕೂಡ ಮದ್ಯ ಮಾಂಸಗಳನ್ನು ತಿನ್ನುವರಾಗುತ್ತಾರೆ. ಹೀಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಈ ಮೂರು ವರ್ಣದವರೂ ಶೂದ್ರರೊಡಗೂಡಿ ಸಂಕರ ಜಾತಿಯವರೇ ಆಗುವರು. ||೨೮-೨೯-೩೦||

ಕಲಿಯುಗದ ಮಾನವರು ಹತ್ತಿಯನ್ನು ಮಾರುತ್ತಾ ಕಾಗೆಗಳಂತಿರುವರು. ಯಾವಾಗಲೂ ಜಂಭ, ಅಹಂಕಾರಗಳಲ್ಲಿ ನಿರತರಾಗಿ, ಕೋಪ ಮತ್ತು ಅಸೂಯಾ ಪರಾಯಣರಾಗುತ್ತಾರೆ. ದಯೆ, ದಾಕ್ಷಿಣ್ಯಗಳನ್ನು ಬಿಡುತ್ತಾರೆ. ಶುಚಿಕರವಾದ ಆಚಾರಗಳನ್ನು ತ್ಯಾಗಮಾಡುತ್ತಾರೆ. ಎಲೌ ದೇವಿಯೇ, ಎಲ್ಲರೂ ಈ ಕಲಿಯುಗದಲ್ಲಿ ಕೇವಲ ಪಶುಗಳಿಗೆ ಸಮಾನರಾಗಿ ವರ್ತಿಸುವರು. ಹೆಚ್ಚು ಹೇಳುವುದರಿಂದೇನು ಪ್ರಯೋಜನ? ಕಲಿಯುಗದಲ್ಲಿ ಸರ್ವಧರ್ಮಗಳನ್ನೂ ತ್ಯಾಗಮಾಡಿದವರೇ ಜನಿಸುವುದು ಹೆಚ್ಚು. ||೩೧-೩೨-೩೩||

ಶಾಶ್ವತವಾದ ಕೀರ್ತಿಗಳಿಸುವ ಕ್ಷತ್ರಿಯರು, ಜ್ಯೋತಿಷಿಕರು, ಚಿಕಿತ್ಸಕರು, ಜ್ಞಾನಿಗಳು ಮತ್ತು ವೈಶ್ಯರೂ ಸಹ ಈ ಕಲಿಯುಗದಲ್ಲಿ ವೇಶ್ಯೆಯರಿಗೆ ಅಧೀನರಾಗಿ

ಸೀದತ್ಕುಸೀದಮುಖವೇದಪದಾರ್ಥಬೋಧ
ಬಾಧಾದ್ಯದಾಯುಧಕುತರ್ಕಸುಕರ್ಕಶಾಸ್ತ್ರೇ ।
ನಾನಾಮತಾನನುಗತೀ ಪ್ರಭವೋರುಗರ್ವಾ
ಸ್ವರ್ಗಾರ್ಗಲಾದಿಕುಪಥಾಃ ಪ್ರಭವಂತಿ ತಿಷ್ಯೇ ॥೩೫॥

ಸ್ವಚ್ಛಂದಾಚ್ಛಂದವಾಕ್ಯೋತ್ಪಥಕಥನ ಧಿಯಶ್ಛಂದಸಾಶ್ಛನ್ನಪಾಪಾ
ದುಸ್ಥಾಃ ಸ್ವಸ್ಥಾ ಇವೇಚ್ಛಾ ಹೃದುದರಭರಣಾಃ ಛಿನ್ನಪುಣ್ಯೈಕಪಣ್ಯಾಃ ।
ಪಿಣ್ಯಾಕಂಚಾರ್ಥಯಂತೋ ಭುವಿ ಕಲಿಜನರಾಃ ಸತ್ರಸಚ್ಛನ್ನದೇಹಾ
ಛಾಯಾಸತ್ರನಿವಾಸಿನೋ ದ್ವಿಜಗತೌ ಛಿಂದೀತಿ ವಾದೇರತಾಃ ॥೩೬॥

---

ಅವರ ಸಂಪರ್ಕದಿಂದ ಸಂತೋಷಪಡುವರು. ಇವರು ತಮ್ಮ ಕಾಮವಾಸನೆಗೋಸ್ಕರ ಆನೆ, ಕುದುರೆ, ಕತ್ತೆ, ಗೋವುಗಳು ಮುಂತಾದುವುಗಳನ್ನು ಪಣವಾಗಿ ಒಡ್ಡಿ, ಅವಕ್ಕೆ ಮಾರುವ ಎಳ್ಳಿನ ಹಿಂಡಿಯನ್ನು ತಿನ್ನುವರು. ಯಾವಾಗಲೂ ಹೀನಕರ್ಮಗಳನ್ನಾಚರಿಸುತ್ತಾ ಹೀನಕುಲಸಂಜಾತರಲ್ಲಿಯೇ ಕಂಕಣಬದ್ಧರಾಗಿ, ಹಣವನ್ನು ಖರ್ಚು ಮಾಡುವ ಮನಸ್ಸುಳ್ಳವರಾಗಿ ಯಾವಾಗಲೂ ಹಣವನ್ನು ದುರ್ವಿನಿಯೋಗ ಮಾಡುತ್ತಿರುವರು. ಕ್ಷುದ್ರಮನಸ್ಸಿನಿಂದ ದೀಕ್ಷೆಯನ್ನು ವಹಿಸಿದವರಾಗಿ, ಆ ಮುಕ್ಕಣ್ಣನ ಪೂಜೆಯನ್ನು ಮರೆತುಬಿಡುವರು. ದೇವಿ, ಕಲಿಯುಗದೋಷದಿಂದ ಜನ್ಮತಾಳಿರುವ ಇವರುಬ್ರಾಹ್ಮಣರೇ ಆಗಿದ್ದರೂ ನಿಶ್ಚಯವಾಗಿಯೂ ಬ್ರಾಹ್ಮಣರೆನಿಸಲಾರರು. (ಅಂದರೆ ಬ್ರಾಹ್ಮಣರು ಆಚರಿಸಬೇಕಾದ ಕರ್ಮಾಚರಣೆಯನ್ನು ಬಿಡುವುದರಿಂದ ಇವರು ಜಾತ್ಯಾ ಬ್ರಾಹ್ಮಣರಾದರೂ ಆಚಾರದಿಂದ ಬ್ರಾಹ್ಮಣರೆನಿಸುವುದಿಲ್ಲ.) ॥೩೪॥

ಮಿತಿಮೀರಿದ ಬಡ್ಡಿಯನ್ನು ಸೆಳೆದು ಕ್ಲೇಶದಿಂದ ಜೀವನ ಮಾಡುತ್ತಾ, ಯಜ್ಞ, ವೇದಾರ್ಥಜ್ಞಾನ ಇವುಗಳಿಗೆ ವಿರುದ್ಧಾರ್ಥವನ್ನುಂಟುಮಾಡುವ ನೀಚವಾದ ಕುತರ್ಕವಾದಗಳಿಂದ ನೀಚರಾಗಿ ತೋರುವ ಕಲಿಯುಗದ ಜನಗಳು ಅನೇಕ ಮತಗಳನ್ನು ಅನುಸರಿಸುವವರಾಗಿ ಅಹಂಕಾರಪಡುತ್ತಾ ಸ್ವರ್ಗಪ್ರಾಪ್ತಿಗೆ ಅಡ್ಡಿಯನ್ನುಂಟುಮಾಡುವ ಮಾರ್ಗವನ್ನಾಶ್ರಯಿಸಿದವರಾಗಿ ಈ ಕಲಿಯುಗದಲ್ಲಿ ಜನ್ಮತಾಳುತ್ತಾರೆ. ॥೩೫॥

ಸ್ವತಂತ್ರವಾಗಿ ತಮ್ಮ ಮನಬಂದಂತೆ ವಾಕ್ಯಪ್ರಯೋಗಮಾಡುವ ಬುದ್ಧಿಯುಳ್ಳವರಾಗಿ, ವೈದಿಕರು ಒಳಗೆ ಇರುವ ತಮ್ಮ ಪಾಪಗಳನ್ನು ಮುಚ್ಚಿಕೊಳ್ಳುತ್ತಾರೆ. ದುರ್ಮಾರ್ಗಪ್ರವರ್ತಕರಾದ ಇವರು ಸಜ್ಜನರಂತೆಯೇ ಅಪೇಕ್ಷೆಯುಳ್ಳವ

ಕೃತ್ಯಾಕೃತ್ಯವಿವರ್ಜಿತಾಃ ಕಲಿನರಾಃ ಸುಪ್ತಾ ದಿವಾಜಾಗರೋಜ್ಝಿತಾ
ವ್ರಾತ್ಯಾ ಸತ್ಯವಿವರ್ಜಿತಾಃ ಪ್ರತಿಗೃಹೇ ವಾತ್ಯಾ ಇವಭ್ರಾಮುಕಾಃ ।
ಗರ್ಹಂತಃ ಸತತಂ ಧನವ್ರತಪರಾ ನಿರ್ಗತ್ಯ ಗೇಹಾದ್ಬಹಿಃ
ವುತ್ತ್ಯಾ ಹೀನಾಶ್ಚ ಭೃತ್ಯಾಃ ಭುವಿ ಕಲಿಜಮಲಾಸಕ್ತಮನಸಃ ಶಿವೇ ತೇ ॥೩೭॥

ಕಲಿಮಿತ್ರಾ ನಿರಪತ್ರಪಾ ನರಾ ಯೇ
ಅಸಿಪತ್ರೇಷು ವಿದಗ್ಧಸರ್ವಗಾತ್ರಾಃ ।
ಗತಪುತ್ರಕಳತ್ರಮಿತ್ರಖೇದೈಃ
ಅಭಿಭೂತಾಶ್ಚ ತ್ರಿನೇತ್ರಭಾವವರ್ಜ್ಯಾಃ ॥೩೮॥

---

ರಾಗಿ ತಮ್ಮ ಮನಸ್ಸು, ಹೊಟ್ಟೆ ಇವುಗಳನ್ನು ತುಂಬಿಸಿಕೊಳ್ಳುವುದರಲ್ಲಿ ನಿರತರಾಗಿ ಪುಣ್ಯಗಳನ್ನೇ ಪಣವಾಗಿಟ್ಟು ಕಳೆದುಕೊಳ್ಳುತ್ತಾರೆ. ಎಳ್ಳುಚಿಗಳಿಯನ್ನು (ಪಿಣ್ಯಾಕ?) ಅಪೇಕ್ಷಿಸುತ್ತಾ ಈ ಭೂಮಿಯಲ್ಲಿ ಕಲಿಯುಗದ ಜನಗಳು, ಛತ್ರಗಳಲ್ಲಿ ಕದ್ದ ಆಹಾರ ದಿಂದ ಬೆಳೆಸಿದ ದೇಹವುಳ್ಳವರಾಗಿ, ನೆರಳಿಗೋಸ್ಕರ ಛತ್ರಗಳಲ್ಲಿ ವಾಸಮಾಡುತ್ತಾ, ಬ್ರಾಹ್ಮಣರು ಬರುವ ದಾರಿಯಲ್ಲಿ ನಿಂತು ಬರುವವರನ್ನು ಕೊಲ್ಲಿರಿ ಎಂದು ಹೇಳುತ್ತಾ ಬ್ರಹ್ಮಹತ್ಯೆಯಲ್ಲಿಯೂ ನಿರತರಾಗುವರು. ||೩೬||

ಕಲಿಯುಗದ ಜನಗಳಲ್ಲಿ ಕೆಲವರು ಯಾವುದನ್ನು ಮಾಡಬೇಕು, ಯಾವುದನ್ನು ಬಿಡಬೇಕು ಎಂಬುದನ್ನು ತಿಳಿಯದೇ, ನಾನು ಮಲಗಿದ್ದೇನೆಯೇ ಎಚ್ಚರವಾಗಿದ್ದೇನೆಯೇ ಎಂಬುದನ್ನೂ ಅರಿಯದೇ, ಸಂಸ್ಕಾರಹೀನರಾಗಿ ಸತ್ಯವನ್ನು ತ್ಯಜಿಸಿ, ಪ್ರತಿಯೊಂದು ಮನೆಯಲ್ಲಿಯೂ, ಗಾಳಿಯಂತೆ ಅಲೆಯುತ್ತಿರುವರು. ಯಾವಾಗಲೂ ಇತರರನ್ನು ನಿಂದಿಸುತ್ತಾ, ಕೇವಲ ದ್ರವ್ಯಾರ್ಜನೆಯೇ ಮುಖ್ಯವೆಂದು ಅದರಲ್ಲಿ ನಿರತರಾಗಿ, ಮನೆಯಿಂದ ಹೊರಗೆ ಬಂದು, ಹೀನವಾದ ಭೃತ್ಯಪದವಿಯನ್ನಾಶ್ರಯಿಸಿ ಕೇವಲ ಪಾಪಮಾಲಿನ್ಯದಿಂದ ವ್ಯಾಪ್ತವಾದ ಮನವುಳ್ಳವರಾಗುವರು. ದೇವಿ, ಈ ರೀತಿಯಾಗಿ ಆ ಕಲಿಯುಗ ಜನರ ಆಚರಣೆಯಿರುವುದು. ||೩೭||

ಕಲಿಸ್ನೇಹಿತರೂ (ಪಾಪಿಗಳೂ) ಲಜ್ಜಾಹೀನರೂ ಆದ ಈ ಮಾನವರು ಕೇವಲ ಪಾಪಕಾರ್ಯಗಳಲ್ಲಿ ತಮ್ಮ ಸಕಲ ಶರೀರಪಾಂಡಿತ್ಯವನ್ನೂ ಪ್ರಕಟಿಸುವುದರಲ್ಲಿ ನಿಪುಣರಾಗುವರು. ಇದರಿಂದ ಮಕ್ಕಳು, ಹೆಂಡಿರು, ಸ್ನೇಹಿತರುಗಳನ್ನು ಕಳೆದು ಕೊಂಡು, ದುಃಖದಿಂದ ಕೊರಗಿ ಮತ್ತೊಬ್ಬರಿಂದ ತಿರಸ್ಕಾರಹೊಂದುತ್ತಾ ಶಿವಭಕ್ತಿ

ಕಲಿಜಾಃ ಕುಲಜಾತಿವರ್ಣಧರ್ಮೈಃ
ದ್ವಿಜಕರ್ಮಸ್ವಪಿ ನಾರ್ಹತೇಽರ್ಹಣಾಯ ।
ಅಕುಲಾ ನಕುಲಾ ಇವಾಕುಲಾಸ್ತೇ
ಅಹಿಕರ್ಮಣ್ಯಪರಾ ಹಿ ವರ್ಣಿನಃ ॥೩೯॥

ಉನ್ಮತ್ತಾ ಭುವನೇ ವಸಂತಿ ಕಲಿಜಾ ವಿತ್ತಾರ್ಥಿನಃ ಕೇವಲಂ
ಹೃತ್ತಾಪೇನ ದಿವಾನಿಶಂ ಸ್ಮರಶರವ್ಯಾವೃತ್ತಚಿತ್ತಾ ನರಾಃ ।
ಚಿಂತಾಶೋಕಶತೈರ್ವಿದಗ್ಧಮನಸೋ ವಿಪ್ರಾವಮಾನೋದ್ಯತಾಃ
ಕ್ಷಿಪ್ರಂ ತೇ ನರಕಾರ್ಣವೇ ಪ್ರಪತಿತಾ ಮಜ್ಜಂತಿ ದುರ್ಬೀಜಜಾಃ ॥೪೦॥

ಭೂಪಾಃ ಕೂಪನಿವಾಸಿನೋ ಯಮಗೃಹೇ ಸಂಬದ್ಧಯೂಪಾ ಜನಾತ್
ಪಾಪಾಃ ಕಂಪಿತಸರ್ವಗಾತ್ರಹೃದಯಾಃ ಕಿಂಪಾಕತುಲ್ಯಾಃ ಕಲೌ ।

---

ಯಿಲ್ಲದವರಾಗಿ ಕಾಲಯಾಪನೆ ಮಾಡಿ ಅಸಿಪತ್ರವನವೆಂಬ ನರಕದಲ್ಲಿ ಬಿದ್ದು ನರಳುವರು. ॥೩೮॥

ಸದ್ವಂಶ, ಜಾತಿ, ವರ್ಣ, ಧರ್ಮ ಇವುಗಳಿಂದ ಕಲಿಯುಗದಲ್ಲಿ ಹುಟ್ಟಿದ ಬ್ರಾಹ್ಮಣರು, ಬ್ರಾಹ್ಮಣಕರ್ಮಗಳೆನಿಸಿದ ಶ್ರಾದ್ಧ, ಯಜ್ಞ, ಯಜನಾದಿಗಳಿಗೂ ಅರ್ಹರಾಗಲಾರರು. ಕುಲಹೀನರಾದ ಅವರು ಮುಂಗುಸಿಗಳಂತೆ ಕುಟಿಲರಾಗಿ, ಸರ್ಪವಧಕಾರ್ಯದಂತೆ ಇತರ ವರ್ಣಾಶ್ರಮಿಗಳನ್ನು ನಾಶಮಾಡುವುದರಲ್ಲಿಯೇ ನಿರತರಾಗುವರು. ॥೩೯॥

ಕಲಿಯುಗಜನ್ಯರಾದ ಮಾನವರು ಕೇವಲ ಹುಚ್ಚರಂತೆ ಪ್ರಪಂಚದಲ್ಲಿ ದ್ರವ್ಯಾರ್ಜನಾಪೇಕ್ಷೆಯುಳ್ಳವರಾಗಿ ವಾಸಮಾಡುತ್ತಾರೆ. ಇವರಿಗೆ ಯಾವಾಗಲೂ ಮನೋವ್ಯಥೆಯಿರುವುದು. ಹಗಳಿರುಳೂ ಮನ್ಮಥಬಾಣಪೀಡೆಯಿಂದ ಚಂಚಲಚಿತ್ತರಾಗುವರು. ನೂರಾರು ಯೋಚನೆ, ಶೋಕಗಳು ಇವುಗಳಿಂದ ವ್ಯಾಪ್ತವಾದ ಮನವುಳ್ಳವರಾಗಿ, ಬ್ರಾಹ್ಮಣರನ್ನು ಅವಮಾನವಾಡುವುದರಲ್ಲಿಯೇ ಉದ್ಯುಕ್ತರಾಗುತ್ತಾರೆ. ಇದರಿಂದ ನೀಚಬೀಜಜನ್ಯರಾದ ಈ ಕಲಿಮಾನವರು ಬಹು ಶೀಘ್ರವಾಗಿ ನರಕವೆಂಬ ಸಮುದ್ರದಲ್ಲಿ ಬಿದ್ದು ಯಾವಾಗಲೂ ಅಲ್ಲಿಯೇ ಮುಳುಗೇಳುತ್ತಿರುವರು. ॥೪೦॥

ಕಲಿಯುಗದಲ್ಲಿ ಎಲ್ಲರ ದೇಹ ಮತ್ತು ಮನಸ್ಸುಗಳನ್ನೂ ನಡುಗಿಸಿ, ಹಿಂಸಿಸುವ ಪಾಪಿಗಳಾದ ಈ ರಾಜರು, ಕಿಂಪಾಕರಿಗೆ (ಮಾಂಸಭಕ್ಷಕರಿಗೆ) ಸಮಾನ

ಶಂಪಾವೇಗಸಮಾನಚಾರುಕಶಯಾ ಸಂಪಾತತಾಪಾರ್ದಿತಾಃ
ತೇ ಸರ್ವೇ ನಿರಪತ್ರಪಾ ಮಮ ಮಹಾಲಿಂಗಾರ್ಚನಾವರ್ಜಿತಾಃ ॥೪೧॥

ರುದ್ರಾಕ್ಷಾಲಂಕೃತವೇದಜಾಲಮಗಜಾಕಾಂತೋರುನಿಶ್ವಾಸಕಂ
ವಿಶ್ವಾಸಾಯ ನ ವೈ ಭವೇತ್ಕಲಿಯುಗೇ ದುಸ್ತರ್ಕಕಾವ್ಯೇ ರತಾಃ ।
ಸರ್ಗಂ ಚಾಪಿ ನಿಸರ್ಗತಃ ಪ್ರತಿಭವಂ ಸಾಂಗಾರಯೋನಿಂ ಗತಾಃ
ಗರ್ವೇಣೈವ ಸದೇಶಿ ಪಾಪನಿರತಾಸ್ತೇ ರಾಸಭಾ ಭೂಸುರಾಃ ॥೪೨॥

ಮಲಾವಿಲಜಲೋದರೀಭರಕುಯೋನಿದುಸ್ಸೂಕರೀ
ವಿಯೋನಿಭವಜಾರಜಾ ಭುವಿ ಭವಂತಿ ತಿಷ್ಯೇ ಜನಾಃ ।

---

ರಾಗಿ ನಡೆದು, ಕೊನೆಗೆ ಯಮಲೋಕದಲ್ಲಿ ಭಯಂಕರವಾದ ಮಲಮೂತ್ರಾದಿ ಭಾವಿಗಳಲ್ಲಿ ವಾಸಮಾಡುತ್ತಾ, ಕೆಲವುವೇಳೆ ಯೂಪಗಳಿಗೆ (ಕಂಬಗಳಿಗೆ) ಕಟ್ಟಲ್ಪಟ್ಟು, ವೇಗವಾಗಿ ಮಿಂಚಿನವೇಗಕ್ಕೆ ಸಮಾನವಾದ ಚಾವಟಿಗಳ ಏಟಿನಿಂದ ಹೊಡೆಯಲ್ಪಡುತ್ತಾ ಪೀಡಿತರಾಗುವರು. ದೇವಿ, ನಾಚಿಕೆಯಿಲ್ಲದ ಆ ರಾಜರೆಲ್ಲರೂ ನನ್ನ ಮಹಾಲಿಂಗಪೂಜೆಯನ್ನು ತ್ಯಾಗಮಾಡುವರು. ಅದರಿಂದಲೇ ಅವರಿಗೆ ಅಂತಹ ದುರ್ಗತಿಯುಂಟಾಗುತ್ತದೆ. ॥೪೧॥

ರುದ್ರಾಧ್ಯಾಯದಿಂದ ಅಲಂಕರಿಸಲ್ಪಟ್ಟ ಈ ವೇದರಾಶಿಯು ಪರ್ವತರಾಜ ಕುವರಿಯ ಪತಿಯಾದ ಪರಶಿವನ ನಿಶ್ವಾಸರೂಪವಾಗಿರುವುದು. ಈ ಕಲಿಯುಗದಲ್ಲಿ ಕುತರ್ಕ ಮತ್ತು ಕುಕಾವ್ಯಗಳಲ್ಲಿ ನಿರತರಾಗಿ ಬ್ರಾಹ್ಮಣರು ಇಂತಹ ವೇದಗಳಲ್ಲಿಯೂ ವಿಶ್ವಾಸವನ್ನಿಡುವುದಿಲ್ಲ. ಮುಂದೆ ತಮ್ಮ ಕರ್ಮಾನುಗುಣವಾದ ಪುನರ್ಜನ್ಮವೂ ಸ್ವಭಾವವಾಗಿ ಉಂಟಾಗುವುದೆಂದರಿಯದೆ, ಕೆಂಡದಿಂದ ವ್ಯಾಪ್ತವಾದ ಅಗ್ನಿಯೆಂದು ಐಹಿಕ ಸುಖಭಾವವನ್ನು ತಿಳಿಯದವರಾಗಿ, ಯಾವಾಗಲೂ ಅಹಂಕಾರದಿಂದಲೇ ಮೆರೆಯುತ್ತಾ, ಸದಾ ಪಾಪಕರ್ಮತತ್ಪರರಾಗಿ ಬ್ರಾಹ್ಮಣರೆನಿಸಿದವರು ಕತ್ತೆಗಳಂತೆ ಜೀವಿಸುವರು. ಅಂದರೆ ಕತ್ತೆಗಳಂತೆ ಮಂದಬುದ್ಧಿ, ಒರಟುಸ್ವಭಾವ ಮುಂತಾದವು ಗಳಲ್ಲಿಯೇ ನಿರತರಾಗಿ ವರ್ಣಾಶ್ರಮಧರ್ಮಗಳನ್ನು ತ್ಯಜಿಸುವರು. ॥೪೨॥

ಕಲ್ಮಷಾವಿಷ್ಟವಾದ ನೀರನ್ನು ಕುಡಿಯುವುದರಿಂದಲೇ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಾ, ನೀಚಜನ್ಮದಲ್ಲಿ ಹುಟ್ಟಿದ ಜನರು, ಶಿವಾರಾಧನೆಮಾಡದೆ ದುಷ್ಟವಾದ ಹಂದಿಯ ಜನ್ಮದಲ್ಲಿ ಜನಿಸುತ್ತಾರೆ. ಪ್ರಾಯಿಕವಾಗಿ ಕಲಿಯುಗದಲ್ಲಿ

**ದ್ವಿಜಾ ಅಪಿ ನಿಜವ್ರತಂ ಖಲು ತ್ಯಜಂತಿ ಲಿಂಗಾರ್ಚನಂ**
**ವ್ರಜಂತಿ ನರಕಂ ಶಿವೇ ನ ಭಜತೇ ಹಿ ಶಂಭುಂ ಜನಃ ॥೪೩॥**

**ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ**
**ಕಲಿಯುಗಜನಧರ್ಮನಿರೂಪಣಂ ನಾಮ ದಶಮೋಽಧ್ಯಾಯಃ**

---

ಜನ್ಮತಾಳುವ ಮಾನವರು ವ್ಯಭಿಚಾರದಿಂದಲೇ ಜನಿಸುವರಾಗುವರು. ಬ್ರಾಹ್ಮಣರೂ ಸಹ ತಮ್ಮ ನಿಜವ್ರತವೆನಿಸಿದ ಶಿವಲಿಂಗಪೂಜೆಯುನ್ನು ಬಿಟ್ಟು ನರಕವನ್ನೈದುವರು. ಎಲೌ ಪಾರ್ವತಿಯೇ, ಹೀಗೆ ಈ ಕಲಿಯುಗದಲ್ಲಿ ಸುಖಪ್ರದನಾದ ಆ ಶಂಕರನನ್ನು ಜನಗಳು ನಿಜವಾಗಿಯೂ ಭಜಿಸುವುದೇ ಇಲ್ಲ. ॥೪೩॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ಕಲಿಯುಗದ ಜನಗಳ ಧರ್ಮನಿರೂಪಣೆಯೆಂಬ ಹತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಏಕಾದಶೋಽಧ್ಯಾಯಃ

|| ಶ್ರೀ ದೇವ್ಯುವಾಚ ||

ಹಾ ಹಾ ಶಂಭೋ ಮಹಾದೇವ ಶ್ರುತೋ ಹಿ ಕಲಿವಿಸ್ತರಃ ।
ಕೃತತ್ರೇತಾದ್ವಾಪರೇಽಪಿ ತ್ವಯಿ ಭಕ್ತಿಃ ಸುದುರ್ಲಭಾ ||೧||

ಅಜ್ಞಪ್ರಾಯಪ್ರಜಾನಾಂ ವೈ ಕಲಿಜಾನಾಂ ಮಹೇಶ್ವರ ।
ದ್ವಿಜಾನಾಂ ಬಾಹುಜಾನಾಂ ಚ ಸ್ತ್ರೀಶೂದ್ರಾಣಾಂ ವಿಶೇಷತಃ ||೨||

ಕಲಿಜಾನಾಂ ವಿಶೇಷೇಣ ನಿಸ್ತಾರಂ ವಿಸ್ತರಾದ್ವದ ||೩||

---

## ಹನ್ನೊಂದನೆಯ ಅಧ್ಯಾಯ

ಶಂಭುವೇ, ಮಹಾದೇವನೇ, ಕಲಿಯುಗಧರ್ಮವು ವಿಸ್ತಾರವಾಗಿ ನಿನ್ನಿಂದ ಹೇಳಲ್ಪಟ್ಟಿತು. ದೇವದೇವನೇ, ಕೃತ, ತ್ರೇತ ಮತ್ತು ದ್ವಾಪರಯುಗಗಳಲ್ಲಿ ಸಹ ಜನರಿಗೆ ನಿನ್ನಲ್ಲಿ ಭಕ್ತಿಯುಂಟಾಗುವುದು ತುಂಬಾ ದುರ್ಲಭವೆಂದೇ ಭಾವಿಸುತ್ತೇನೆ. ಎಲೈ ಮಹೇಶ್ವರನೇ, ಹಾಗಿರುವಾಗ ಅಲ್ಪಬುದ್ಧಿಯುಳ್ಳ ಈ ಕಲಿಯುಗದ ಪ್ರಜೆಗಳಿಗೆ ನಿನ್ನಲ್ಲಿ ಭಕ್ತಿಯುಂಟಾಗುವುದು ಸುಲಭವೇ? ಬ್ರಾಹ್ಮಣರು, ಕ್ಷತ್ರಿಯರು ಮತ್ತು ಸ್ತ್ರೀಶೂದ್ರರು ಇವರೆಲ್ಲರೂ ವಿಶೇಷವಾಗಿ ಈ ಕಲಿಯುಗದಲ್ಲಿ ಜನ್ಮ ತಾಳುವುವುದರಿಂದ ಅವರು ಕಲಿಕಲ್ಮಷದಿಂದ ಉದ್ಧಾರವಾಗುವ ಬಗೆ ಹೇಗೆ? ದೇವದೇವನೇ, ಆ ವಿಷಯವನ್ನು ವಿಸ್ತಾರವಾಗಿ ನಿರೂಪಿಸಬೇಕು ಎಂದು ಪಾರ್ವತಿಯು ಶಂಕರನನ್ನು ಪುನಃ ಪ್ರಾರ್ಥಿಸಿದಳು ||೧-೨-೩||

॥ ಶ್ರೀಸ್ಕಂದ ಉವಾಚ ॥

ಇತ್ಥಂ ದೇವ್ಯಾ ತದಾ ಪೃಷ್ಟೋ ಸ್ಮಯಮಾನಃ ಸ್ಮರಾಂತಕಃ ।
ಪ್ರಾಹ ದೇವೀಂ ತದಾ ವಿಪ್ರ ಮಹಾಕೈಲಾಸಸೌಧಗಃ ॥೪॥

॥ ಈಶ್ವರ ಉವಾಚ ॥

ಮಾ ಭೈಷೀರ್ದೇವಿ ಭದ್ರಂ ತೇ ಭಿಷಗ್ವರ್ಯೋಽಸ್ಮ್ಯಹಂ ಶಿವೇ ।
ಕಲಾವಪಿ ಭವೇದ್ಭಕ್ತಿಃ ಕೇಷಾಂಚಿತ್ಪುಣ್ಯಗೌರವೈಃ ॥೫॥

ತೇ ಭಾವ್ಯೈಃ ಪೂಜಯಂತ್ಯೇವ ಭವೋದ್ಭವಮತಂದ್ರಿತಾಃ ।
ತೇ ತರಂತ್ಯೇವ ದೇವೇಶಿ ಕಲಾವಪಿ ಭವಾರ್ಣವಂ ॥೬॥

ದೇವಾಶ್ಚ ಮುನಯಶ್ಚೈವ ಮನುಷ್ಯಾಃ ಸ್ಥಾವರಾ ಅಪಿ ।
ಕೃತತ್ರೇತಾದ್ವಾಪರೇಷು ತಪಃಕ್ಲಿಷ್ಟಾಃ ಸದಾಂಬಿಕೇ ॥೭॥

---

ಈ ರೀತಿಯಾಗಿ ಪಾರ್ವತೀದೇವಿಯಿಂದ ಪ್ರಶ್ನಿಸಲ್ಪಟ್ಟ, ಮನ್ಮಥಾಂತಕನಾದ ಮಹಾದೇವನು ಮಹಾಕೈಲಾಸಪರ್ವತದ ಉಪ್ಪರಿಗೆಯಲ್ಲಿರುತ್ತಾ, ಮುಗುಳುನಗೆಯುಳ್ಳವನಾಗಿ ಇಂತೆಂದನೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ತಿಳಿಸಿದನು. ॥೪॥

ಎಲೌ ಮಂಗಳಾಂಗಿಯಾದ ದೇವಿಯೇ, ಭಯಪಡಬೇಡ, ನಿನಗೆ ಮಂಗಳವಾಗಲಿ. ನಾನು ಭವರೋಗವೈದ್ಯಶ್ರೇಷ್ಠನೆಂದು ನಿನಗೆ ಗೊತ್ತಿಲ್ಲವೇ? ದೇವಿ, ಈ ಕಲಿಯುಗದಲ್ಲಿಯೂ ಕೆಲವು ಜನಗಳಿಗೆ ಪೂರ್ವಪುಣ್ಯವಿಶೇಷದಿಂದ ನನ್ನ ವಿಷಯದಲ್ಲಿ ಭಕ್ತಿಯುಂಟಾಗುತ್ತದೆ. ಅವರು ತಮ್ಮ ಭಕ್ತಿಭಾವನೆಯಿಂದ ಆಲಸ್ಯರಹಿತರಾಗಿ, ಜಗದುತ್ಪತ್ತಿಕಾರಣಭೂತನಾದ ನನ್ನನ್ನು ಪೂಜೆಮಾಡುವರೆಂಬುದರಲ್ಲಿ ಸಂದೇಹವೇ ಇಲ್ಲ. ಎಲೌ ದೇವತಾಸಾರ್ವಭೌಮನ ರಾಣಿಯೇ, ಆ ನನ್ನ ಭಕ್ತರು ಈ ಕಲಿಯುಗದಲ್ಲಿಯೂ ಶೈವಧರ್ಮಾನುಸರಣೆಯಿಂದ ಸಂಸಾರಸಾಗರವನ್ನು ದಾಟಿಯೇ ನಿಲ್ಲುತ್ತಾರೆ. ॥೫-೬॥

ಕೃತ, ತ್ರೇತಾ, ದ್ವಾಪರಯುಗಗಳಲ್ಲಿಯೂ ದೇವತೆಗಳು, ಮುನಿಗಳು, ಮನುಜರು ಮತ್ತು ಜಂಗಮವಾದ ಇತರ ಪ್ರಾಣಿಗಳೂ, ಯಾವಾಗಲೂ ತಪಶ್ಚರ್ಯೆಯಿಂದ

ಕ್ಷಣಸಿದ್ಧೌ ಕಲೌ ಜನ್ಮ ವಾಂಛಂತ್ಯೇವ ಹಿ ನಾದ್ಭುತಂ ।
ಕಲೇರ್ಗುಣಾನ್ಪ್ರವಕ್ಷ್ಯಾಮಿ ಯದಿ ಸ್ಯಾನ್ಮಯಿ ಭಕ್ತಿಮಾನ್ ॥೮॥

ಸಾ ಭಕ್ತಿರ್ದುರ್ಲಭಾ ದೇವಿ ಬ್ರಹ್ಮಾದೀನಾಮಪಿ ಧ್ರುವಂ ।
ಪ್ರಸಾದಾದೇವ ಸಾ ಭಕ್ತಿರ್ಮಮ ಸರ್ವಯುಗೇಷ್ವಪಿ ॥೯॥

ವಿಶೇಷತಃ ಕಲಿಯುಗೇ ಭವಿತ್ರೀ ಕ್ವಚಿದೇವ ಹಿ ।
ಜನ್ಮಹಂತ್ರೀ ಪುಣ್ಯದಾತ್ರೀ ಪ್ರದಾತ್ರೀ ಸರ್ವಕರ್ಮಣಾಂ ॥೧೦॥

ಫಲಂ ಮೋಕ್ಷಂ ಚ ಭುಕ್ತಿಂ ಚ ರಾಜ್ಯಂ ಪುತ್ರಾಸ್ಸ್ತ್ರಿಯೋ ಧನಂ ।
ಪಶವೋ ಧಾನ್ಯನಿಚಯಮಾಯುರಾರೋಗ್ಯಮೇವ ಚ ॥೧೧॥

ಕಲೇರ್ಗುಣಾನ್ಪ್ರವಕ್ಷ್ಯಾಮಿ ಶೃಣು ತ್ವಂ ಸಾವಧಾನತಃ ॥೧೨॥

---

ದ್ದರೂ ಕಷ್ಟವನ್ನನುಭವಿಸುತ್ತಿದ್ದರು. ಈ ಕಲಿಯುಗದಲ್ಲಿಯಾದರೋ ಕ್ಷಣಕಾಲ ತಪಸ್ಸಿನಿಂದಲೇ ತಪಸ್ಸಿದ್ಧಿಯಾಗುವುದರಿಂದ ಅವರು ಮತ್ತೆ ಜನ್ಮವನ್ನು ಅಪೇಕ್ಷಿಸುತ್ತಲೇ ಇರುವರೆಂಬುದರಲ್ಲಿ ಆಶ್ಚರ್ಯವೇನೂ ಇಲ್ಲ. ಎಲೌ ದೇವಿ, ನನ್ನಲ್ಲಿ ವಿಶೇಷವಾದ ಭಕ್ತಿಯಿರುವುದಾದರೆ, ನಿನಗೆ ಈ ಕಲಿಯುಗದ ಗುಣಗಳನ್ನು ಹೇಳುವೆನು ಕೇಳು. ||೭-೮||

ದೇವಿ, ಆ ಭಕ್ತಿಯು ಬ್ರಹ್ಮನೇ ಮೊದಲಾದ ದೇವತೆಗಳಿಗೂ ನಿಶ್ಚಯವಾಗಿ ದುರ್ಲಭವೇ ಆಗಿರುವುದು. ಆದರೂ ಎಲ್ಲಾ ಯುಗಗಳಲ್ಲಿಯೂ ಆ ಭಕ್ತಿಯು ನನ್ನ ಅನುಗ್ರಹದಿಂದಲೇ ಉಂಟಾಗಬೇಕು. ಈ ಕಲಿಯುಗದಲ್ಲಿಯಾದರೋ ಎಲ್ಲೋ ಕೆಲವರಿಗೆ ಮಾತ್ರ ವಿಶೇಷವಾಗಿ ನನ್ನಲ್ಲಿ ಭಕ್ತಿಯುಂಟಾಗುತ್ತದೆ. ಇದರಿಂದ ಅವರಿಗೆ ಪುನರ್ಜನ್ಮವಿಲ್ಲದಂತಾಗಿ, ಸಕಲ ಕರ್ಮಗಳ ಪುಣ್ಯಫಲವೂ ದೊರೆಯುತ್ತದೆ. ಮೋಕ್ಷ, ಇಹದಲ್ಲಿ ಸಕಲ ಭೋಗಗಳು, ರಾಜ್ಯಪ್ರಾಪ್ತಿ, ಪತ್ನಿಯರು, ವಿಶೇಷವಾಗಿ ಧನಸಂಪತ್ತು, ಹಸುಕರುಗಳು, ಧಾನ್ಯರಾಶಿ, ಆಯುರಾರೋಗ್ಯಗಳು ಇವೆಲ್ಲವೂ ಅದರಿಂದಲೇ ಉಂಟಾಗುವುವು. ದೇವಿ, ಈ ಕಲಿಯುಗದ ಗುಣಗಳನ್ನು ನಿನಗೆ ಹೇಳುತ್ತೇನೆ, ಸಾವಧಾನವಾಗಿ ನೀನು ಕೇಳುವಳಾಗೆಂದು ಶಿವನು ಪಾರ್ವತಿಗೆ ನುಡಿದನು. ||೧೦-೧೧-೧೨||

ಶಿಷ್ಟಾನಿಷ್ಟಕರೇಽಪಿಸನ್ಪ್ರತಿಕಲೇರೇಕೋ ವಿಶಿಷ್ಟೋ ಗುಣಃ
ಕೃತ್ಯಾಕೃತ್ಯಗುಣಾಗುಣೇಷು ಸುಮಹಾವೃದ್ಧಿರ್ಭವಿತ್ರೀ ಕಲೌ ।
ನೈವಾನ್ಯೇಷು ಯುಗೇಷು ತತ್ತ್ರಿಗುಣಿತಂ ಧ್ಯಾನಾರ್ಚನಾ ವಾ ಜಪೋ
ಭೂಯಾತ್ಸತ್ಯಮಿದಂ ವಿಶಿಷ್ಟ ಇತಿ ತಂ ಜಾನಾಮ್ಯಹಂ ತಂ ಯುಗಂ ॥೧೩॥

ಏಕಂ ನಂದಾಮಿ ನಿಂದಾಶತಮಪಿ ಕುಧಿಯಾಂ ವಿಪ್ರವೃಂದೇಷು ಮಂದ
ಜ್ಞಾನಾನಂದಮಹೋ ದದಾತಿ ಸುಕಲಿಃ ನಾಮ್ನೈವ ಮೇ ಸರ್ವದಾ ।
ಕಿಂ ವಕ್ಷ್ಯಾಮ್ಯಗಕನ್ಯಕೇ ಕಲಿಯುಗೇ ಯೋ ವಾ ಕ್ಷಣಾರ್ಧಂ ಮುಹುಃ
ಮನ್ನಾಮಾಮೃತಪಾನಪೀನಸುಮನಾಃ ಶ್ರೀ ಮುಕ್ತಿಕಾಂತಾಪತಿಃ ॥೧೪॥

ಕಲಿಶಕಲಗುಣೋಽಯಂ ಸಾಧುರೇವಾಽಮಿಶೇ
ಕ್ಷಣಮಪಿ ಮಮ ಪೂಜಾ ಧ್ಯಾನನಾಮ್ನೈಕನಿಷ್ಠಃ ।

---

ಸಾಧುಗಳಿಗೆ ಅನಿಷ್ಟವನ್ನುಂಟುಮಾಡುವುದಾಗಿದ್ದರೂ ಈ ಕಲಿಯುಗದಲ್ಲಿ ಒಂದು ವಿಶೇಷಗುಣವಿರುವುದು. ಕರ್ತವ್ಯ, ಅಕರ್ತವ್ಯರೂಪವಾದ ಗುಣದೋಷ ಗಳೆರಡೂ ವಿಶೇಷವಾಗಿ ಅಭಿವೃದ್ಧಿಪಡೆಯುತ್ತದೆ. ಇತರ ಯುಗಗಳಲ್ಲಿ ಈ ರೀತಿ ಯಾಗುವುದಿಲ್ಲ. ಕೃತ, ತ್ರೇತಾ, ದ್ವಾಪರಯುಗಗಳಲ್ಲಿ ಇದಕ್ಕೆ (ಕಲಿಯುಗಧರ್ಮಕ್ಕೆ) ಮೂರರಷ್ಟು ಧ್ಯಾನ, ಪೂಜಾ, ಜಪಾದಿಗಳು ನಡೆಯುತ್ತವೆ. ಆದರೂ ಫಲವೊಂದೇ. ದೇವಿ, ಆ ಕಲಿಯುಗದ ಸ್ವರೂಪವನ್ನು ನಾನು ಹೀಗೆಂದು ಅರಿತಿರುವೆನು. ||೧೩||

ಬುದ್ಧಿಹೀನರಾದ ಕಲಿಯುಗದ ಮಾನವರಲ್ಲಿ ನೂರಾರು ದೋಷಗಳಿದ್ದರೂ ವಿಪ್ರರಾದವರು ಒಂದುಸಾರಿ ನನ್ನ ದಿವ್ಯನಾಮಸ್ಮರಣೆಮಾಡುವುದರಿಂದಲೇ ಮುಕ್ತ ರಾಗುವರು. ನನ್ನ ದಿವ್ಯನಾಮಸ್ಮರಣೆಯು ಅಷ್ಟುಫಲ ಕೊಡುತ್ತಿರುವುದೆಂಬುದನ್ನು ನೋಡಿ ನನಗೆ ಆನಂದವಾಗಿರುವುದು. ಎಲೌಪರ್ವತರಾಜಕುಮಾರಿಯೇ, ಈ ಕಲಿ ಯುಗದಲ್ಲಿ ಅರ್ಧಕ್ಷಣಕಾಲವಾದರೂ ಪದೇ-ಪದೇ ನನ್ನ ನಾಮಾಮೃತಪಾನಮಾಡು ವುದರಿಂದಲೇ ತೃಪ್ತಿಪಡೆಯುವ ಮನಸ್ಸುಳ್ಳವರು ಶ್ರೀಮುಕ್ತಿಕಾಂತೆಯಪತಿಗಳಾಗು ವರು. ಇಂತಹ ಕಲಿಯುಗದ ಮಹಿಮೆಯನ್ನು ನಾನು ಎಷ್ಟೆಂದು ವರ್ಣಿಸಲಿ.||೧೪||

ದೇವಿ, ಈ ಕಲಿಯುಗದಲ್ಲಿ ಒಂದು ಸಣ್ಣ ಧರ್ಮಕಾರ್ಯಮಾಡಿದರೂ ಅದು ಮಹಾಕಾರ್ಯವೇ ಸರಿ; ಒಂದು ಕ್ಷಣಕಾಲಮಾತ್ರವಾದರೂ ಈಶ್ವರನಾದ ನನ್ನಲ್ಲಿ ಪೂಜಾ, ಧ್ಯಾನ ಮತ್ತು ನಾಮಜಪಾದಿಗಳಲ್ಲಿ ನಿರತನಾದವನೆ ಅವನಿಗೆ ಉಂಟಾಗುವ

ಸ ಹಿ ಕೃತಯುಗತ್ರೇತಾದ್ವಾಪರೇ ವಾ ಸಹಸ್ರಾ
ಣ್ಯಯುತತಪಸ್ಸಮೃದ್ಧ್ಯಾ ತತ್ಫಲಂ ನೋ ಲಭೇತ ॥೧೫॥

ಕ್ವಚಿತ್ಕಲಿಭವೋ ನರೋ ಭುವಿ ಭವೇತ ಭಾಗ್ಯೋದಯೈಃ
ಶಿವಾರ್ಚನಪರಾಯಣಃ ಪ್ರಥಿತಭಸ್ಮಸಂಧಾರಣಃ ।
ಸ ಏವ ಶರಣಾಯ ವೈ ಕಲಿಜನೇಷು ಸಂತಾರಣಃ
ಶಿವೇ ಸ ಸುಖಕಾರಣೋ ಬಹುಲಪಾಪಸಂಹಾರಣಃ ॥೧೬॥

ಸತ್ಯಂ ಸತ್ಯಂ ಭವಾನಿ ಕ್ಷಣಮಪಿ ಕರುಣಾರಾಶಿವಾರಾಶಿಕನ್ಯಾ
ಪತಿನಯನಪದಾಬ್ಜಧ್ಯಾನಧಾರಾನುರಕ್ತಃ ।
ಕಲಿಮಲಕುಲಶೈಲಾಕಾರಪಾಪೇಷು ಸಕ್ತೋಽ
ಪ್ಯಥ ಯದಿ ಶಿವಭಕ್ತಃ ಸತ್ಯಮೇವೇಹ ಮುಕ್ತಃ ॥೧೭॥

ಅಲಂ ಕಲಿಯುಗೇಽಂಬಿಕೇ ಸಕಲತೀರ್ಥಸಂಸೇವನೈಃ
ಅಲಂ ಮಖಮುಖಕ್ರಿಯಾಸಕಲದಾನವಿಶ್ರಾಣನೈಃ ।

---

ಫಲವನ್ನು ಕೃತ, ತ್ರೇತ ಮತ್ತು ದ್ವಾಪರಯುಗಗಳಲ್ಲಿ ಸಾವಿರ ಅಥವಾ ಹತ್ತುಸಾವಿರ ವರ್ಷಗಳ ಕಾಲದ ತಪಸ್ಸಮೃದ್ಧಿಯಿಂದಲೂ ಜನಗಳು ಪಡೆಯಲಾರರು. ॥೧೫॥

ಎಲೌ ದೇವಿ, ಅಷ್ಟಾದರೂ ಈ ಕಲಿಯುಗದ ಜನರು ಎಲ್ಲೋ ಭಾಗ್ಯೋದಯದಿಂದ ಮಾತ್ರ ಕೆಲವರು ಶಿವಪೂಜಾಪರಾಯಣನಾಗಿ, ಪ್ರಸಿದ್ಧವಾದ ಭಸ್ಮಧಾರಣೆಮಾಡುವರು. ಅವರೇ ಕಲಿಜನರಿಗೆ ಶರಣಾಗತರಕ್ಷಕರಾಗಿ ಅವರ ದುಃಖವನ್ನೆಲ್ಲಾ ಪರಿಹಾರಮಾಡುತ್ತಾರೆ. ಪಾರ್ವತಿ, ಅನೇಕ ಪಾಪಗಳನ್ನು ನಾಶಮಾಡುವ ಅವರೇ ಸಕಲ ಸುಖಗಳಿಗೂ ಕಾರಣಭೂತರಾಗುತ್ತಾರೆ. ॥೧೬॥

ಈಶ್ವರಿಯೇ, ಒಂದುಕ್ಷಣವಾದರೂ ಸುಧಾಸಮುದ್ರರಾಜಕನ್ಯೆಯಾದ ಲಕ್ಷ್ಮಿಯ ರಮಣನೆನಿಸಿದ, ವಿಷ್ಣುವಿನ ನೇತ್ರದಿಂದ ಪೂಜಿತವಾದ ಪಾದಕಮಲವುಳ್ಳ ಪರಮೇಶ್ವರನ, ಧ್ಯಾನರೂಪವಾದ ಧಾರೆಯಲ್ಲಿ ಅನುರಕ್ತನಾಗುವವನು, ಈ ಕಲಿಯುಗದ ಮಾಲಿನ್ಯರೂಪವಾದ ಕುಲಪರ್ವತದಷ್ಟು ಹೆಚ್ಚುರೂಪಿನ ಪಾಪಕಾರ್ಯಗಳಲ್ಲಿ ತೊಡಗಿದ್ದರೂ, ಅವನು ಶಿವಭಕ್ತಿಯ ಮಹಿಮೆಯಿಂದ ಸತ್ಯವಾಗಿಯೂ ಮುಕ್ತಿಹೊಂದುವುದರಲ್ಲಿ ಯಾವ ಸಂದೇಹವೂ ಇಲ್ಲ. ॥೧೭॥

ಅಂಬಿಕೇ, ಈ ಕಲಿಯುಗದಲ್ಲಿ ಸಮಸ್ತ ತೀರ್ಥಸೇವೆಮಾಡುವುದು, ಯಜ್ಞ

ಅಲಂ ವಿವಿಧಭೂಸುರಾಶ್ರಮವಿಚಾರಸಂವರ್ತನೈಃ
ಅಲಂ ಚ ಸುಖಸತ್ಕ್ರಿಯಾವ್ರತಭವಾದಿಕಾರ್ಯೈರಪಿ ಕಿಂ ॥೧೮॥

ನಾಲಂ ಕಿಂ ಶಶಿಶೇಖರಾಂಬುಜಪದಧ್ಯಾನೈಕಸಂತೋಷದಂ ಮನಃ
ಮಲ್ಲಿಂಗಾರ್ಚನಯಾಪಿ ಚೋತ್ತಮದಿನೋ ನಾಮೈವ ನಾಲಂ ಕಿಮು ।
ಯಂ ಕಾಲಾಂತಕಪೂಜನೋತ್ಸವಮತಿಂ ಕ್ವಾಯಂ ಸ್ಪೃಶೇದ್ವಾ ಕಲಿಃ
ಸಂಸಾರಾಂಬುಧಿತಾರಕಾರಣಮುಮೇ ಭಕ್ತಿಃ ಪರಾ ಮೇ ಕಲೌ ॥೧೯॥

ಶಿವೇ ಸುಕೃತಸಾಧನಂ ಕಲಿಯುಗೇಷು ಲಿಂಗಾರ್ಚನಂ
ವದಂತಿ ನಿಗಮಾಃ ಸದಾ ಗಮನಮಾರ್ಗಸಂದರ್ಶನಂ ।
ಅಘೌಘಬಲತರ್ಜನಂ ಕಲಿಮಲಾದಿಸಂತರ್ಜನಂ
ಭವೇತ ಸುಖಚೋದನಂ ಅಖಿಲದುಃಖಸಂದೀಪನಂ ॥೨೦॥

---

ಯಾಗಾದಿ ಕರ್ಮಗಳನ್ನು ನಡೆಸುವುದು, ದಾನಮಾಡುವುದು, ನಾನಾವಿಧವಾದ ಬ್ರಾಹ್ಮಣರ ಆಶ್ರಮವಿಚಾರವನ್ನು ಆಚರಿಸುವುದು ಇವುಗಳಿಂದ ಏನೂ ಪ್ರಯೋಜನ ವಿಲ್ಲ. ಸುಖಪ್ರಾಪ್ತಿಹೇತುವೆನಿಸಿದ ಸದಾಚಾರ, ದೇವವ್ರತ ಮುಂತಾದ ಕಾರ್ಯಗಳಿಂದ ತಾನೇ ಏನು ಪ್ರಯೋಜನ? ॥೧೮॥

ದೇವಿ, ಚಂದ್ರಶೇಖರನಾದ ನನ್ನ ಪಾದಕಮಲಧ್ಯಾನಮಾತ್ರದಿಂದಲೇ ಸಂತೋಷಪಡುವ ಮನಸ್ಸೊಂದೇ ಸಾಲದೇ! ನನ್ನ ಲಿಂಗಪೂಜೆಯಿಂದ ಕಳೆಯುವ ಉತ್ತಮವಾದ ದಿನವೂ ನನ್ನ ದಿವ್ಯನಾಮವೂ ಸಾಲದೇ! ಯಮಾಂತಕನಾದ ನನ್ನ ಪೂಜೆಯ ಉತ್ಸವದಲ್ಲಿ ಮನಸ್ಸುಳ್ಳ ಭಕ್ತನನ್ನು ಆ ಕಲಿಯೇ ಆದರೂ ಹೇಗೆ ಬಂದು ಮುಟ್ಟುತ್ತಾನೆ? ಉಮೆ, ಈ ನನ್ನ ಪೂಜಾಧ್ಯಾನಾದಿಗಳು ಸಂಸಾರವೆಂಬ ಸಮುದ್ರದಿಂದ ಉದ್ಧಾರಮಾಡುವುದಕ್ಕೆ ಕಾರಣಭೂತವಾಗಿರುವುದು. ದೇವಿ, ಕಲಿಯುಗವಲ್ಲಿ ನನ್ನಲ್ಲಿ ಭಕ್ತಿಯುಂಟಾಗುವುದು ಮೋಕ್ಷಸಾಧಕವೇ ಸರಿ. ॥೧೯॥

ಈ ಕಲಿಯುಗದಲ್ಲಿ ಶಿವಲಿಂಗಪೂಜೆಯು ಪುಣ್ಯಸಾಧಕವಾಗಿರುವುದೆಂದು ಯಾವಾಗಲೂ ವೇದಗಳು ಹೇಳುತ್ತಿರುವುವು. ಈ ಶಿವಲಿಂಗಪೂಜೆಯೇ ಮುಂದೆ ಪರಲೋಕಪ್ರಯಾಣಮಾಡುವಾಗ ಮುಕ್ತಿ ದಾರಿಯನ್ನು ತೋರಿಸುವ ಸಾಧಕವಾಗುವುದು. ಇದೇ ಬಲಿಷ್ಠವಾದ ಪಾಪರಾಶಿಗಳನ್ನೆಲ್ಲಾ ಬೆದರಿಸುವುದು, ಕಲಿದೋಷಗಳ

ಕಲಾವಪಿ ತಪೋಬಲ್ಯೈರಮಿತಪುಣ್ಯಜಾಲೋದಯೈಃ
ಭವಂತಿ ಭುವಿ ತೇ ನರಾ ಹರಮಹೇಶಪಾದಾದರಾಃ ।
ತ ಏವ ಖಲು ವಿಸ್ತರಂ ಭವಮಹಾಬ್ಧಿಜಂ ದುಸ್ತರಂ
ತರಂತಿ ವಿಷಯೋರ್ಮಿಮಜ್ಜನವಿನಾಶದುಃಖಂ ಮಹತ್ ॥೨೧॥

ಸುರಾ ಅಪಿ ಮುನೀಶ್ವರಾಃ ಕೃತಯುಗಾದಿಷೂದ್ಯತ್ತಪಾಃ
ತಪಃ ಪರಮದುಷ್ಕರಂ ಚಿರಫಲಂ ಚ ಕಾಲೇನ ತತ್ ।
ಅಯಂ ಕಲಿರಹೋ ಶಿವೇ ಕ್ಷಣಿಕಚಿತ್ತಸಂವೇಶನಾತ್
ಪದಾಂಬುಜಯುಗೇ ಮಮ ಪ್ರಸಭಮುಕ್ತಿಲಾಭಪ್ರದಃ ॥೨೨॥

ಕಲಾವಪಿ ಸುರಾ ನರಾ ಜನನನಾಶಮವ್ಯಾಹತಂ
ವಿನಿಂದ್ಯಮಭಿತೋಽಂಬಿಕೇ ಅಭಿವದಂತಿ ವಾಂಛಂತ್ಯಪಿ ।

---

ನ್ನೆಲ್ಲಾ ಹೋಗಲಾಡಿಸುವುದು. ಸರ್ವ ಸುಖವನ್ನು ಪ್ರೇರಣೆಗೊಳಿಸಿ, ದುಃಖಗಳನ್ನೆಲ್ಲಾ ಉರಿಸುವುದು. ॥೨೦॥

ಅಪಾರವಾದ ತಪೋಬಲಗಳಿಂದಲೂ, ಪುಣ್ಯರಾಶಿಪ್ರಾದುರ್ಭಾವದಿಂದಲೂ, ಈ ಕಲಿಯುಗದಲ್ಲಿ ಮಾನವರಿಗೆ ಪಾಪನಾಶಕವಾದ ಮಹೇಶ್ವರನ ಪಾದಧ್ಯಾನದಲ್ಲಿ ಆಸಕ್ತಿ ಹುಟ್ಟುತ್ತದೆ. ಓ ದೇವಿ, ಇಂತಹ ಮಾನವರೇ, ಅತಿ ವಿಸ್ತಾರವೂ, ಕ್ಲೇಶದಿಂದ ದಾಟಲು ಶಕ್ಯವೂ, ವಿಷಯಸುಖಗಳೆಂಬ ಅಲೆಗಳಿಂದ ಯುಕ್ತವಾಗಿ, ಅಲ್ಲಿ ಸ್ನಾನ ಮಾಡುವುದರಿಂದ ಪುನರ್ಜನ್ಮರೂಪವಾದ ಮಹಾದುಃಖಪ್ರದವಾದುದೂ ಆಗಿರುವ ಈ ಸಂಸಾರವೆಂಬ ದೊಡ್ಡಸಾಗರವನ್ನು ಸುಲಭವಾಗಿ ದಾಟುತ್ತಾರೆ. ॥೨೧॥

ದೇವತೆಗಳೂ ಮತ್ತು ಮುನಿಪುಂಗವರೂ ಕೃತಯುಗವೇ ಮುಂತಾದ ಯುಗಗಳಲ್ಲಿ ತಪೋನಿರತರಾಗಿ, ಘೋರ ತಪಸ್ಸನ್ನಾಚರಿಸಿ ಅನೇಕ ಕಾಲಗಳ ಮೇಲೆ ಅದರ ಫಲವನ್ನೈದುತ್ತಿದ್ದರು. ಪಾರ್ವತಿ, ಈ ಕಲಿಯುಗವಾದರೋ ಕ್ಷಣಕಾಲ ನನ್ನ ಪಾದಕಮಲಯುಗ್ಮಗಳಲ್ಲಿ ಮನಸ್ಸನ್ನು ನಿಲ್ಲಿಸಿದ ಮಾತ್ರದಿಂದಲೇ, ಹಠಾತ್ತಾಗಿ ಮೋಕ್ಷಲಾಭವನ್ನುಂಟುಮಾಡುವುದಾಗಿದೆ. ಅಯ್ಯೋ ! ಈ ಕಲಿಮಹಿಮೆಯ ಅದ್ಭುತವನ್ನು ಏನೆಂದು ಹೇಳಲಿ. ॥೨೨॥

ಎಲೌ ಅಂಬಿಕೆ, ದೇವತೆಗಳೂ, ಮಾನವರೂ, ಜನನಮರಣರೂಪವಾದ ಬಂಧನಕ್ಕೊಳಗಾಗಿಸುತ್ತಾ ನಿಂದಾರ್ಹವಾಗಿರುವುದೆಂದು ಈ ಕಲಿಯುಗವನ್ನು

ಕದಾ ಖಲು ಭವೇದ್ಘನೋ ಜನನಮೇವ ತಿಷ್ಯೇ ಸದಾ
ಸದಾಶಿವಪದಾರ್ಚನೇ ತದಿಹ ಜನ್ಮನಃ ಸತ್ಫಲಂ ॥೨೩॥

ಯಃ ಕಶ್ಚಿತ್ಪ್ರಭವೇತ ವೈ ಕಲಿಯುಗೇ ಮಲ್ಲಿಂಗಪೂಜಾದರಃ
ಭಸ್ಮೋದ್ಯೋತಿತಪುಂಡ್ರಫಾಲತಿಲಕೋ ರುದ್ರಾಕ್ಷಕೋಟೀರಕಃ ।
ಶ್ರೀರುದ್ರಪ್ರಣವೋಽಪಿ ದೇವಿ ಸುಮಹಾಪಂಚಾಕ್ಷರಾವೃತ್ತಿಭಾಕ್
ಏವಂ ಯೋ ನಿಯತೋ ವಸೇತ ಸ ಮುನಿಸ್ತಸ್ಯೈವ ಮುಕ್ತಿಃ ಸ್ಥಿರಾ ॥೨೪॥

ಧೀರಸ್ತಿಷ್ಯೈಕದುಷ್ಕೃತ್ಕಪಥಜನಿಜರಾರೋಗನಾಶೈಕನಶ್ಯತ್
ಲೋಕಃ ಪುತ್ರಕಳತ್ರಮಿತ್ರಜಠರೀಪುಷ್ಯತ್ಕಿಲೈವಂ ಶಿವೇ ।
ತತ್ರೈವಂ ಯದಿ ಚಂದ್ರಚೂಡಚರಣಧ್ಯಾನೇಕ್ಷಣಂ ವಾ ಮನಃ
ಕೃತ್ವಾ ಮೃತ್ಯುಕೃತಾಂ ತಥಾ ಕಲಿಕೃತಾಮಾರ್ತಿಂ ನ ವಿಂದೇನ್ನರಃ ॥೨೫॥

---

ದೂಷಿಸುತ್ತಿದ್ದರೂ ಪುನಃ ಅದನ್ನೇ ಅಪೇಕ್ಷಿಸುತ್ತಾರೆ. ಯಾವಾಗ ನಮಗೆ ಘನವಾದ ಮಾನವಜನ್ಮವು ಕಲಿಯುಗದಲ್ಲುಂಟಾಗುತ್ತದೆಯೋ ಎಂದಿಗೆ ಆ ಸದಾಶಿವನ ಪಾದ ಪೂಜೆಮಾಡಿ, ನಮ್ಮ ಜನ್ಮಸಾರ್ಥಕಪಡಿಸಿಕೊಳ್ಳುವೆವೋ ಎಂದು ಅವರು ತವಕ ಪಡುತ್ತಿರುವರು. ॥೨೩॥

ದೇವಿ, ಈ ಕಲಿಯುಗದಲ್ಲಿ ಯಾವನು ನನ್ನ ಲಿಂಗಪೂಜಾಸಕ್ತಿಯುಳ್ಳವನೂ, ಭಸ್ಮಧಾರಣೆಯಿಂದ ಶೋಭಿಸುವ ಹಣೆಯ ತಿಲಕವುಳ್ಳವನೂ, ರುದ್ರಾಕ್ಷ ಸಮೂಹವನ್ನೂ ಧರಿಸಿರುವವನೂ, ಶ್ರೀರುದ್ರಮಂತ್ರ, ಶಿವಪಂಚಾಕ್ಷರಮಹಾಮಂತ್ರ ಇವುಗಳನ್ನು ಆವೃತ್ತಿಮಾಡುತ್ತಾ ವಾಸಮಾಡುತ್ತಿರುವನೋ ಅವನೇ ಮುನಿಯು ; ಅವನಿಗೆ ಶಾಶ್ವತವಾದ ಮೋಕ್ಷವೂ ಲಭಿಸುತ್ತದೆ. ॥೨೪॥

ಈ ಕಲಿಯುಗದಲ್ಲಿ ಪಾಪಕರ್ಮದಿಂದ ಲಭಿಸುವ ಜನನ, ಮುಪ್ಪು, ರೋಗ ಇವುಗಳಿಂದಲೇ ಲೋಕವೆಲ್ಲವೂ ನಾಶವಾಗುತ್ತಿರುವುದು. ಮಕ್ಕಳು, ಹೆಂಡಿರು, ಸ್ನೇಹಿತರು ಮುಂತಾದ ಕುಟುಂಬವನ್ನು ಪೋಷಿಸುವುದರಲ್ಲಿಯೇ ನಿರತರಾಗುವರು. ಇಂತಹ ಕಲಿಯುಗದಲ್ಲಿಯೂ ಚಂದ್ರಶೇಖರನ ಪಾದಧ್ಯಾನವೊಂದರಲ್ಲಿಯೇ ಕ್ಷಣಕಾಲ ನೆಮ್ಮದಿಯಿಂದ ಮನಸ್ಸಿಡುವುದಾದರೆ ಅವನು ಯಮನಿಂದುಂಟಾಗುವ ಮತ್ತು ಈ ಕಲಿದೋಷದಿಂದೊದಗುವ ಸಕಲ ಭೀತಿಗಳನ್ನು ನಿವಾರಿಸಿಕೊಳ್ಳಬಲ್ಲನು. ॥೨೫॥

ಕೃತೇ ತ್ರೇತಾಯಾಂ ವೈ ಯದಿ ಖಲು ತಥಾ ದ್ವಾಪರಭವೇ
ಸಹಸ್ರಂ ವಾ ಸಹ್ಯಾ ನ ತು ಕರ್ಷಣಮಾತ್ರಾತ್ಫಲಗಣಂ ।
ಶಿವೇ ಲಿಂಗಾರ್ಚಾಯಾಂ ತದಿಹ ದಿನಕೇ ವೈ ಕಲಿಯುಗೇ
ಕ್ಷಣಂ ತ್ರ್ಯಕ್ಷಧ್ಯಾನಾತ್ಪ್ರಭವತಿ ಸ ಮುಕ್ತೇಃ ಪ್ರಿಯತಮಃ ॥೨೬॥

ಸಿಕತ್ವಂ ಮಾಂ ದೇವಂ ನದಿಭವಸಿಕತ್ಯಾಸು ಚ ಯಜನ್
ರಜಸ್ಯಂ ಮೃಲ್ಲಿಂಗೇ ಕ್ಷಣಮಪಿ ಚ ಸ ಕ್ಷೀಣಕುಪಥಃ ।
ಉಮೇ ಧನ್ಯೋ ಮಾನ್ಯೋ ಭವತಿ ಕಲಿಜನ್ಯೇಽಪಿ ತಮಸಿ
ಅಹೋ ಮನ್ಯೇ ಮುಕ್ತಂ ಸ ಹಿ ಪರಮಮಾನ್ಯಃ ಪ್ರಿಯತಮಃ ॥೨೭॥

ತ್ರಿಯಾಯುಷಮನುಪ್ರಭಾಭಸಿತಭೂಷಪೂತಾಂಗಕೋ
ವಿಶೋಷಿಕಲುಷೋಚ್ಚಯೋ ಭವತಿ ಭಾಗ್ಯಪೂರ್ಣಃ ಕಲೌ ।

---

ದೇವಿ, ಕೃತ, ತ್ರೇತ, ದ್ವಾಪರಯುಗಗಳಲ್ಲಿ ಸಾವಿರಾರು ದಿನ ಕಷ್ಟಪಟ್ಟು ತಪವೇ ಮುಂತಾದವುಗಳನ್ನೆಸಗಿ ಪಡೆಯುಬಹುದಾದ ಫಲರಾಶಿಗಳನ್ನು ಈ ಕಲಿ ಯುಗದಲ್ಲಿ ಶಿವಲಿಂಗಪೂಜೆಮಾಡುತ್ತಾ ಒಂದೇ ದಿನದಲ್ಲಿ ಪಡೆಯುಬಹುದು. ಪಾರ್ವತಿಯೇ, ಒಂದು ಕ್ಷಣಕಾಲ ಆ ಮುಕ್ಕಣ್ಣನ ಧ್ಯಾನಮಾಡುವುದರಿಂದಲೇ ಅವನು ಮೋಕ್ಷಾಂಗನೆಯ ಪತಿಯಾಗುವುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ॥೨೬॥

ಮರಳಸ್ವರೂಪನಾಗಿರುವ ನನ್ನನ್ನು ನದಿಗಳ ಮರಳಿನಿಂದಲೇ ಲಿಂಗರೂಪಿ ಯನ್ನಾಗಿ ಮಾಡಿ, ಆ ಮೃಲ್ಲಿಂಗದಲ್ಲಿ ಒಂದು ಕ್ಷಣಕಾಲವಾದರೂ ಸ್ಥಿರಬುದ್ಧಿಯಿಂದ ಪೂಜೆಮಾಡುವವನು ನೀಚಮಾರ್ಗದಿಂದ ಉದ್ಧೃತನಾಗುವನು. ಎಲೌ ಉಮೆಯೇ, ಅವನೇ ಧನ್ಯನೂ, ಮಾನ್ಯನೂ ಆಗುತ್ತಾನೆ. ಈ ಕಲಿಯುಗದಲ್ಲಿ ಉಂಟಾಗುವ ಅಂಧಕಾರದಲ್ಲಿ ಅವನೇ ಮಾನ್ಯನೂ, ನನಗೆ ಪ್ರೀತಿಪಾತ್ರನೂ ಆಗಿ ಅವನನ್ನೇ ಮುಕ್ತನೆಂದು ನಾನು ತಿಳಿಯುವೆನು. ॥೨೭॥

ಈ ಕಲಿಯುಗದಲ್ಲಿ 'ತ್ರಿಯಾಯುಷವೆಂಬ' ಮಂತ್ರಪೂರ್ವಕವಾಗಿ ಶುಭ್ರವಾದ ಭಸ್ಮವನ್ನಲಂಕರಿಸಿಕೊಂಡು ಪವಿತ್ರದೇಹನಾಗುವ ಮಾನವನೇ ಸಕಲ ಭಾಗ್ಯ ಸಂಪೂರ್ಣನೆಂದು ತಿಳಿ. ಇವನ ಪಾಪಗಳೆಲ್ಲವೂ ಕ್ಷಣಕಾಲದಲ್ಲಿ ಒಣಗಿ ಹೋಗುವುವು. ಅವನೇ ಸ್ಥಾವರ ಜಂಗಮವಸ್ತುಗಳಿಗೆ ದೊರೆಯುವ ಪಾಪಗಳನ್ನು

ಅಶೇಷಸುರಸಂಸದಂ ಸ ಖಲು ಯಾತಿ ಪೂಷಪ್ರಭಾ
ವಿಮಾನವರಮಾಸ್ಥಿತಃ ಸ್ಥಿರಚರಾದಿಪಾಪಾಪಹಃ ॥೨೮॥

ವ್ಯಪೋಹ್ಯಂತಿ ಮಲ್ಲಿಂಗಸಮರ್ಚನೇನ
ಕಲೌ ನರಾ ನಿಷ್ಕೃತಿದುಷ್ಕೃತಾನಿ ।
ತಾನ್ಯೇವ ಪುಣ್ಯಾನಿ ಭವಂತಿ ಸದ್ಯೋ
ಭವೋದ್ಭವಾರ್ಚಾಬಲತೋ ಭವಾನಿ ॥೨೯॥

ದರ್ಭಾಗ್ರತೋಗ್ರ್ಯಜನಿಮೋತ್ತಮಪೂಜಕಶ್ಚೇತ್
ಗರ್ಭೇ ನ ಜಾತು ಸ ಭವೇತ್ಕಲಿದುರ್ಭಗೋಽಪಿ ।
ದುರ್ಗಾಣಿ ಸಂತರತಿ ಮಾರ್ಗಮುಮೇ ವಿಮುಕ್ತೇಃ
ಸ್ವರ್ಗಸ್ಯ ವಾ ಮಮ ಕೃಪಾವಶತೋ ಲಭೇತ ॥೩೦॥

ಆಶೀವಿಷೋಪಮವಿಷೇ ವಿಷಯಾನುಧಾವಚಿತ್ತೇ
ಪ್ರಶೇಷಹೃದಯೋಜ್ಝಿತಕಾಲತಿಷ್ಯೇ ।

---

ನಾಶಮಾಡುತ್ತಾ ಸೂರ್ಯಕಾಂತಿಯಂತೆ ಶೋಭಿಸುತ್ತಿರುವ ಉತ್ತಮವಾದ ವಿಮಾನ ವನ್ನೇರಿ ಸಕಲ ದೇವತೆಗಳ ನಿಲಯವಾದ ಅಮರಾವತಿಯನ್ನೈದುವನು. ॥೨೮॥

ಎಲೌ ಪಾರ್ವತಿ, ಈ ಕಲಿಯುಗದಲ್ಲಿ ಮಾನವರು ನನ್ನ ಲಿಂಗಪೂಜೆಯಿಂದ ದುರ್ವ್ಯಾಪಾರಗಳಿಂದುಂಟಾದ ಸಕಲ ಪಾಪಗಳನ್ನು ಧ್ವಂಸಮಾಡಿಕೊಳ್ಳುತ್ತಾರೆ. ಆ ಜಗದುತ್ಪತ್ತಿಕಾರಣಭೂತನಾದ ನನ್ನ ಪೂಜಾಬಲದಿಂದ ಅವುಗಳೇ ಪುಣ್ಯರೂಪ ಗಳಾಗಿ ಪರಿಣಮಿಸುವುವು. ॥೨೯॥

ದರ್ಭೆಯ ಅಗ್ರಭಾಗಕ್ಕಿಂತಲೂ ಸೂಕ್ಷ್ಮನೆನಿಸಿ ನಾನಾರೀತಿ ಜನುಮವುಳ್ಳ ನನ್ನನ್ನು ಪೂಜೆಮಾಡುವುದಾದರೆ ಅವನಿಗೆ ಗರ್ಭದಲ್ಲಿಯೂ, ದುಷ್ಟನಾದ ಆ ಕಲಿಯು ಸಂಬಂಧಿಸಲಾರನು. ಎಲೌ ಉಮೇ, ಆ ನನ್ನ ಭಕ್ತನು ಮುಕ್ತಿಮಾರ್ಗಕ್ಕೆ ಪ್ರತಿಬಂಧಕವಾಗಿರುವ ಸಕಲ ದುರ್ಗಗಳನ್ನೂ ದಾಟುವನಲ್ಲದೇ ನನ್ನ ಕರುಣೆಯಿಂದ ಅನಾಯಾಸವಾಗಿ ಸ್ವರ್ಗವನ್ನು ಪಡೆಯುತ್ತಾನೆ. ॥೩೦॥

ಸರ್ಪದ ವಿಷಕ್ಕೆ ಸಮಾನವಾದ ವಿಷವುಳ್ಳದ್ದಾಗಿಯೂ, ಕೇವಲ ವಿಷಯ ಸುಖಗಳಲ್ಲಿಯೇ ಓಡಾಡುವ ಮನಸ್ಸನ್ನು ಕೊಡತಕ್ಕುದೂ, ಸಕಲರ ಮನಸ್ಸಿನಲ್ಲಿಯೂ

ಭೂಷಾವಿಶೇಷಕೃತಶೇಷಮಹೋರುಹಾರ
ಪೂಷಾಕ್ಷಮಿಷದಪಿ ಚಿಂತಯತೇ ಸ ಧನ್ಯಃ ॥೩೧॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ
ಕಲಿಯುಗಸದ್ಗುಣವರ್ಣನಂ ನಾಮ ಏಕಾದಶೋಽಧ್ಯಾಯಃ

---

ಕಾಲಮಹಿಮೆಯಿಂದ ಬದಲಾವಣೆಯನ್ನುಂಟುಮಾಡುವುದೂ ಆದ ಈ ಕಲಿಯುಗದಲ್ಲಿ ಆದಿಶೇಷನನ್ನೇ ಹಾರವನ್ನಾಗಿ ಆಭರಣವನ್ನಾಗಿ ಮಾಡಿಕೊಂಡು, ಸೂರ್ಯನೇತ್ರನಾದ ನನ್ನನ್ನು ಸ್ವಲ್ಪವಾದರೂ ಧ್ಯಾನಮಾಡುವವನೇ ಧನ್ಯನು, ಎಂದು ಶಿವನು ಪಾರ್ವತಿಗೆ ಹೇಳಿದನು. ॥೩೧॥

ಇಲ್ಲಿಗೆ ಶ್ರೀಶಿವರಹಸ್ಯದ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಕಲಿಯುಗದ ಉತ್ತಮಗುಣವರ್ಣನೆಯೆಂಬ ಹನ್ನೊಂದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ದ್ವಾದಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಸಾಶ್ಚರ್ಯಂ ಸಾ ತದಾ ಶ್ರುತ್ವಾ ಗುಣಾನ್ಕಲಿಯುಗಸ್ಯ ವೈ ।
ಪ್ರಣಮ್ಯ ದೇವೀ ವಿನಯಾತ್ಕಾಲಕಾಲಂ ಕೃಪಾಕರಂ ॥೧॥

ಕೈಲಾಸಹೀರಸೌಧಸ್ಥಂ ಪ್ರಾಂಜಲಿಃ ಪ್ರಾಹ ಶಂಕರಂ ॥೨॥

॥ ದೇವ್ಯುವಾಚ ॥

ದೇವದೇವ ಮಹಾದೇವ ಜಗತ್ಸೃಷ್ಟ್ಯಂತಪಾಲಕ ।
ಸ್ವಮೂರ್ತಿಭಿರ್ಬ್ರಹ್ಮವಿಷ್ಣುರುದ್ರೇಂದ್ರೈಃ ಶಶಿಶೇಖರ ॥೩॥

---

## ಹನ್ನೆರಡನೆಯ ಅಧ್ಯಾಯ

ಅಯ್ಯಾ ಜೈಗೀಷವ್ಯನೇ, ಪಾರ್ವತಿಯು ಆ ಕಲಿಯುಗದ ಗುಣಗಳನ್ನು ಕೇಳಿ ಆಶ್ಚರ್ಯಪಟ್ಟು, ಅನಂತರ ಕೈಲಾಸಪರ್ವತದ ಹೀರರತ್ನಖಚಿತವಾದ ಉಪ್ಪರಿಗೆಯಲ್ಲಿರುವ ಶಂಕರನನ್ನು ನೋಡಿ, ಯಮಾಂತಕನೂ, ದಯಾಸಾಗರನೂ ಆದ ಶಂಕರನಿಗೆ ಕೈಜೋಡಿಸಿ ನಮಸ್ಕಾರಮಾಡಿ, ವಿನಯದಿಂದ ಇಂತು ವಿಜ್ಞಾಪಿಸಿದಳು. ॥೧-೨॥

ದೇವಾದಿದೇವನೂ, ದೇವತೋತ್ತಮನೂ, ತನ್ನ ಮೂರ್ತಿಗಳಾದ ಬ್ರಹ್ಮ, ವಿಷ್ಣು, ರುದ್ರ ಮತ್ತು ಇಂದ್ರರಿಂದ ಪ್ರಪಂಚದ ಸೃಷ್ಟಿಸ್ಥಿತಿಸಂಹಾರಕಾರ್ಯಗಳನ್ನೆಸಗುತ್ತಿರುವವನೂ, ಆದ ಚಂದ್ರಶೇಖರನೇ, ಚಂದ್ರಕಲೆಗಳಿಂದ ಶೋಭಿಸುತ್ತಿರುವ

ಸೋಮಧಾಮಕಲಾಮೌಲೇ ಗಂಗಾಧರ ಮಹೇಶ್ವರ ।
ಪೃಚ್ಛಾಮಿ ತ್ವಾಂ ಮಹಾದೇವಂ ಕಂಚಿತ್ಪ್ರಶ್ನಂ ಮನೋಹರಂ ॥೪॥

ವಕ್ತುಮರ್ಹಸಿ ಭೂತೇಶ ಪಶುಪಾಶವಿನಾಶಕ ।
ಕಲ್ಪಾಂತೇ ವಾ ಮಹಾದೇವ ಕಥಂ ಪ್ರಳಯಕಾರಣಂ ॥೫॥

ಕಿಮಾಹಾರಾ ನರಾಶ್ಚೈವ ಕಿಮಾಚಾರವಿಹಾರಕಾಃ ।
ಭವಂತಿ ವೈ ಯುಗಾಂತೇ ತೇ ವರಾಕಾಃ ಶೋಕಮಾನಸಾಃ ॥೬॥

ತನ್ಮೇ ವದ ಮಹಾದೇವ ವಿಸ್ತರೇಣೈವ ಶಂಕರ । ॥೭॥

॥ ಸ್ಕಂದ ಉವಾಚ ॥

ಇತಿ ಪೃಷ್ಟೋ ಮಹಾದೇವೋ ಜಗಾದ ಜಗತಾಂ ಪತಿಃ ।
ವಿಶ್ವಾಧಿಕಃ ಪ್ರಸನ್ನಾಸ್ಯೋ ಮಹೇಶೋ ಭಕ್ತವತ್ಸಲಃ ॥೮॥

---

ಮೌಳಿಯುಳ್ಳವನೂ, ಗಂಗೆಯನ್ನು ಧರಿಸಿರುವವನೂ, ಆದ ಮಹೇಶ್ವರನೇ, ನಾನು ಮಹಾದೇವನೆನಿಸಿದ ನಿನ್ನನ್ನು ಒಂದು ಮನೋಹರವಾದ ಪ್ರಶ್ನೆಮಾಡಬೇಕೆಂದಿರುವೆನು. ॥೩-೪॥

ಭೂತಗಳಿಗೆ ಒಡೆಯನೆನಿಸಿ, ಪಶುಗಳೆನಿಸಿದ ಅಜ್ಞಾನಿಗಳ ಬಂಧನರೂಪವಾದ ಪಾಶವನ್ನು ನಾಶಮಾಡುವ ಸ್ವಾಮಿಯೇ, ಈ ನನ್ನ ಪ್ರಶ್ನೆಗೆ ಉತ್ತರಕೊಡಲು ನೀನೇ ಅರ್ಹನಾಗಿದ್ದೀಯೆ. ಎಲೈ ಮಹಾದೇವನೇ, ಕಲ್ಪದ ಕೊನೆಯಲ್ಲಿ ಪ್ರಳಯವಾಗಲು ಕಾರಣವೇನು? ಮಾನವರು ಆಗ ಯಾವ ಆಹಾರ ಸ್ವೀಕರಿಸುತ್ತಾರೆ? ಅವರ ಆಚಾರವ್ಯವಹಾರಗಳೂ ಕ್ರೀಡೆಗಳೂ ಆಗ ಎಂತಹವು? ಯುಗದ ಕೊನೆಯಲ್ಲಿ ನೀಚರಾದ ಅವರೆಲ್ಲರೂ ಖಿನ್ನಮನಸ್ಕರಾಗುತ್ತಾರಲ್ಲವೆ? ಮಂಗಳಕರನಾದ ಮಹಾದೇವನೇ, ಅವೆಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳುವನಾಗೆಂದು ಪಾರ್ವತಿಯು ಶಿವನನ್ನು ಪ್ರಾರ್ಥಿಸಿದಳು. ॥೫-೬-೭॥

ಆಗ ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳುತ್ತಾನೆ:--ಅಯ್ಯ ಜೈಗೀಷವ್ಯನೇ, ಆ ಪಾರ್ವತೀದೇವಿಯಿಂದ ಈ ರೀತಿ ಪ್ರಶ್ನೆಮಾಡಲ್ಪಟ್ಟವನಾಗಿ, ಮಹಾದೇವನೂ, ಲೋಕನಾಥನೂ, ಜಗಚ್ಛ್ರೇಷ್ಠನೂ, ನಿರ್ಮಲಮುಖವುಳ್ಳವನೂ, ಪೂರ್ಣೈಶ್ವರ್ಯ ಸಂಪನ್ನನೂ, ಭಕ್ತರಲ್ಲಿ ಪ್ರೀತಿಯುಳ್ಳವನೂ ಆದ ಶಿವನು ಆ ದೇವಿಗೆ

ಉವಾಚ ಚ ಕಲೇರಂತೇ ಪ್ರಜಾನಾಂ ವರ್ತನಂ ಮುನೇ ।
ಪ್ರಳಯೇ ಲಕ್ಷಣಂ ಚೈವ ಕಲ್ಕೇಃ ಪ್ರಾದುರ್ಭವಂ ಮುನೇ ॥೯॥

ತತ್ತೇಽಹಂ ಸಂಪ್ರವಕ್ಷ್ಯಾಮಿ ಯಥಾ ದೇವ್ಯೈ ಮಹೇಶ್ವರಃ ।
ಪ್ರೋಕ್ತವಾನದ್ಭುತತರಂ ಶೃಣು ತ್ವಂ ಸಾವಧಾನತಃ ॥೧೦॥

ಸಹೈಭಿರ್ಮುನಿಮುಖ್ಯೈಶ್ಚ ಗಣೈಶ್ಚ ಸುರಸತ್ತಮೈಃ ।
ಶಿವಪ್ರೋಕ್ತಂ ಸಮಾಸೇನ ಕಲ್ಪಾಂತೇ ಪ್ರಲಯಂ ತಥಾ ॥೧೧॥

॥ ಶ್ರೀ ಶಿವ ಉವಾಚ ॥

ಲೀಲಾಂ ಲೋಕೇಸುಲೋಕೇ ಕಲಿಭವಸುಮಹಾಪಾಪ್ಮನಾಂ ಶೈಲಕನ್ಯೇ
ಮಲ್ಲಿಂಗಾಲಯಭೇದಕಾಃ ಪ್ರತಿಕಲೌ ವಿಪ್ರಸ್ವಹಾರಾದರಾಃ ।
ತದ್ದಾರಾನ್ಕುಸುಮಾಯುಧೋತ್ತಮಶರಾಸಾರೈಶ್ಚ ಭಿನ್ನಾಂಗಕಾಃ
ತೇ ತಾಸು ಪ್ರಸಭಂ ರಮಂತಿ ನರಕೇ ತಾನೇವ ಸಂಪಾತಯೇ ॥೧೨॥

---

ಕಲಿಯುಗದ ಕೊನೆಯಲ್ಲಿ ಕಂಡುಬರುವ ಪ್ರಜೆಗಳ ನಡತೆಯನ್ನೂ, ಪ್ರಳಯದ ಲಕ್ಷಣವನ್ನೂ ಮತ್ತು ಕಲ್ಕಿಯ ಅವತಾರವನ್ನೂ ಹೇಳಿದನು. ಎಲೈ ಮುನಿಪುಂಗವನೇ, ಅತ್ಯದ್ಭುತವಾದ ಆ ವಿಷಯವನ್ನು ದೇವಿಗೆ ಮಹೇಶ್ವರನು ನಿರೂಪಿಸಿದಂತೆಯೇ ನಿನಗೆ ಸಂಗ್ರಹವಾಗಿ ಹೇಳುತ್ತೇನೆ, ಕೇಳು. ನೀನು ಈ ಮುನಿಗಳಿಂದಲೂ, ಗಣಗಳಿಂದಲೂ ಮತ್ತು ದೇವತೋತ್ತಮರೊಡನೆಯೂ ಕೂಡಿ ಶಿವನಿಂದ ಹೇಳಲ್ಪಟ್ಟ ಕಲ್ಪಾಂತಸಂಗತಿಯನ್ನೂ ಹಾಗೆಯೇ ಪ್ರಳಯವೃತ್ತಾಂತವನ್ನೂ ಸಾವಧಾನವಾಗಿ ಕೇಳುವನಾಗೆಂದು ಕುಮಾರನು ಜೈಗೀಷವ್ಯನಿಗೆ ಹೇಳಿದನು. ॥೮-೯-೧೦-೧೧॥

ಎಲೌ ಪರ್ವತರಾಜಕುವರಿಯೆ, ಈ ಕಲಿಯುಗದಲ್ಲಿ ಉತ್ಪನ್ನರಾಗುವ ಮಹಾಪಾಪಿಗಳ ಲೀಲೆಯನ್ನು ಹೇಳುವೆನು, ಕೇಳು ; ಪ್ರತಿ ಕಲಿಯುಗದಲ್ಲಿಯೂ ಜನರು ನನ್ನ ಲಿಂಗವಿರುವ ಶಿವಾಲಯಗಳನ್ನು ಕೆಡಹುತ್ತಾ, ಬ್ರಾಹ್ಮಣ ಧನವನ್ನಪಹಾರಮಾಡುವುದರಲ್ಲಿ ಆದರವುಳ್ಳವರಾಗಿ, ಬ್ರಾಹ್ಮಣಪತ್ನಿಯರನ್ನು ಮನ್ಮಥಬಾಣಪೀಡಿತದೇಹರಾಗಿ ಅವರು ಜಾಗ್ರತೆಯಾಗಿ ರಮಿಸಲು ಪ್ರಯತ್ನಿಸುತ್ತಾರೆ. ದೇವಿ, ಅವರನ್ನೆಲ್ಲಾ ನಾನು ಘೋರನರಕಗಳಲ್ಲಿ ತಳ್ಳುತ್ತೇನೆ. ॥೧೨॥

ಪ್ರತಿಕಲಿನರನಾರ್ಯೋ ಜಾರಜಾ ಘೋರರೂಪಾ
ಕಾಮಾರಾತಿಪದಾಬ್ಜಭಕ್ತಿರಹಿತಾಃ ಸಂತಪ್ತಚಕ್ರಾಂಗಕಾಃ ।
ಮೃತ್ಫಾಲಾ ಭಸಿತತ್ರಿಪುಂಡ್ರರಹಿತಾ ರುದ್ರಾಕ್ಷಮಾಲೋಜ್ಝಿತಾಃ
ಲಿಂಗಾರ್ಚಾಸು ಪರಾಙ್ಮುಖಾಃ ಕಿಲ ಶಿವೇ ಕಲ್ಪಾಂತಿಮೇ ತಾಃ ಪ್ರಜಾಃ॥೧೩॥

ಕಲ್ಪಾಂತರೇ ಕುನೃಪತಿಪ್ರಭವೋರುಪೀಡಾ
ಸಂಕ್ಷುಬ್ಧಲೋಕಮಖಿಲಂ ಧನಧಾನ್ಯಹೀನಂ ।
ದಾರಾ ಕುಮಾರಮುಪಹಾಯ ಗೃಹಾದಿಕಂ ತೇ
ಭ್ರಾಂತಾ ಭ್ರಮಂತಿ ಸಕಲಾಸು ದಿಶಾಸು ಗೌರಿ ॥೧೪॥

ಕ್ಷುದ್ರಾಃ ಕ್ಷೌದ್ರರಸಾಲತಾಲಲಿಕುಚಾಹಾರಾ ಹರದ್ರೋಹಿಣೋ
ತೇ ಕಾಲಾನಲತಾಪತಪ್ತಹೃದಯಾಃ ಪಾಪೈಃ ಶುಚಾ ವ್ಯಾಕುಲಾಃ ।
ಕಾಲಸ್ಯೋರುಗತಾಗತಿಪ್ರಶಿಥಿಲವ್ಯಾಲೋಪಮಾನಾನನೇ
ಭೇಕಾಭೋಗ ಇವಾವಿಶಂತಿ ನಿತರಾಂ ಕಲ್ಪಾಂತಿಮೇ ತಾಃ ಪ್ರಜಾಃ ॥೧೫॥

---

ಪ್ರತಿಯೊಂದು ಕಲಿಯುಗದಲ್ಲಿಯೂ ಗಂಡಸರೂ ಮತ್ತು ಹೆಂಗಸರೂ ವ್ಯಭಿಚಾರಜನ್ಯರೂ ಭಯಂಕರ ರೂಪವುಳ್ಳವರೂ ಆಗಿ ಮನ್ಮಥಶತ್ರುವಾದ ಆ ಶಂಕರನಲ್ಲಿ ಭಕ್ತಿಯಿಲ್ಲದವರಾಗಿ, ಕಾದ ಚಕ್ರ ಚಿಹ್ನಿತ ದೇಹಗಳಿಂದ ಮೃತ್ತಿಕೆಯನ್ನು ಹಣೆಯಲ್ಲಿ ಧರಿಸಿಕೊಂಡು, ಭಸ್ಮತ್ರಿಪುಂಡ್ರಧಾರಣಮಾಡದೇ ರುದ್ರಾಕ್ಷಮಾಲೆಗಳನ್ನು ಹಾಕಿಕೊಳ್ಳದೇ ಇರುವರು. ದೇವಿ, ಈ ಕಲ್ಪದ ಕೊನೆಯಲ್ಲಿ ಸಕಲ ಪ್ರಜೆಗಳೂ ಶಿವಪೂಜೆಯಲ್ಲಿ ಪರಾಙ್ಮುಖರಾಗಿರುತ್ತಾರೆ. ॥೧೩॥

ಕಲ್ಪದ ಕೊನೆಯಲ್ಲಿ ಹೀನರಾಜರಿಂದ ವಿಶೇಷ ಪೀಡೆಯುಂಟಾಗುವುದು. ಇದರಿಂದ ಸಕಲ ಲೋಕಗಳೂ ಕ್ಷೋಭೆಹೊಂದಿ, ಧನಧಾನ್ಯಶೂನ್ಯವಾಗುವುವು. ಹೆಂಡತಿಯರು, ಮಕ್ಕಳು, ಮನೆ ಮುಂತಾದುವುಗಳನ್ನು ತ್ಯಜಿಸಿ, ದಿಕ್ಕುದಿಕ್ಕುಗಳಲ್ಲಿಯೂ ಭ್ರಾಂತಿಯಿಂದ ಹುಚ್ಚರಂತೆ ಅಲೆಯುತ್ತಾರೆ. ॥೧೪॥

ಈ ಕಲಿಯುಗದ ಕೊನೆಯಲ್ಲಿ ನೀಚಜನಗಳು ಜೇನುತುಪ್ಪ, ಸಿಹಿಮಾವು, ತಾಳೆಹಣ್ಣು, ಚಕ್ಕೋತದ ಹಣ್ಣುಗಳು ಇವುಗಳನ್ನೇ ಆಹಾರ ಮಾಡಿಕೊಂಡು, ಶಿವದ್ರೋಹಿಗಳಾಗುವರು. ಅವರು ಕಾಲಾಗ್ನಿಯ ಬೇಗೆಯಿಂದ ಬೆಂದ ಹೃದಯವುಳ್ಳವರಾಗಿ ಪಾಪಗಳಿಂದಲೂ, ದುಃಖದಿಂದಲೂ ವ್ಯಾಕುಲರಾಗಿ, ಕಾಲಪುರುಷನ

ಮದ್ಭಸ್ಮಾಂಗಾನುಷಂಗಸ್ಥಿತಿರತಿವಿಮುಖಾಲಿಂಗಸಂಗೋಜ್ಝಿತಾಂಗಾ
ರುದ್ರಾಕ್ಷಾಧೃತಿರೀಶನಾಮಕಲನೇ ಸಂಕೀಲಿತಾಃ ಸ್ಯುಃ ಪ್ರಜಾಃ ।
ಮತ್ಪಂಚಾಕ್ಷರರುದ್ರಸೂಕ್ತಕಲನೇ ಮತ್ಕ್ಷೇತ್ರವಾಸೇನ ಹಿ
ಭೂಭಾರಾಃ ಕಲಿಕಾಲದುರ್ಜನಜನಾ ವರ್ತಂತಿ ಪಾಪಾಲಯಾಃ ॥೧೬॥

ಮದಾಲಯಪರಿಭ್ರಮದ್ದ್ರವಿಣದೀಪತೈಲಾಪಹಾಃ
ಮದುತ್ಸವವಿರೋಧಿನೋ ಮಮ ಸುಭಕ್ತನಿಂದಾಪರಾಃ ।
ಪತಂತಿ ಶಲಭಾ ಇವಾನಲಸುದೀಪ್ತತೈಲೇಽಂಬಿಕೇ
ಕಲೌ ಕಲುಷಬುದ್ಧಯೋ ನರಕವಾಸಕೋಲಾಹಲಾಃ ॥೧೭॥

ಕಾಷಾಯಾಶ್ರಯಿಣೋ ಶ್ರಮೇಷು ನಿರತಾ ವಿಪ್ರದ್ರುಹೋ ವಾಕ್ಯತಾ
ಲಿಂಗಾಂಕಾಶ್ಚ ಕುಚಕ್ರತಪ್ತವಪುಷೋ ಶ್ರೌತದ್ವಿಷಸ್ತೇ ಕಲೌ ।

---

(ಯಮನ) ತೊಡೆಯಮೇಲೆ ಹೋಗಿ ಬರುತ್ತಾ ಆ ಕಾಲಪುರುಷನ ದುಷ್ಟಸರ್ಪ ಸಮಾನವಾದ ಬಾಯಲ್ಲಿ ಕಪ್ಪೆಗಳಂತೆ ಆ ಪಾಪಿಗಳು ಪ್ರವೇಶಮಾಡುತ್ತಾರೆ. ॥೧೫॥

ನನ್ನ ಭಸ್ಮವನ್ನು ಅಂಗಗಳಿಗೆ ಲೇಪನೆಮಾಡಿಕೊಳ್ಳುವುದರಲ್ಲಿ ಆಸಕ್ತಿಯಿಲ್ಲದವರಾಗಿಯೂ, ನನ್ನ ಲಿಂಗಪೂಜಾಸಂಬಂಧವನ್ನು ಬಿಟ್ಟವರಾಗಿಯೂ, ರುದ್ರಾಕ್ಷಮಾಲಾಧಾರಣೆ, ಈಶ್ವರನಾಮ ಧ್ಯಾನಗಳನ್ನು ತ್ಯಜಿಸಿದವರಾಗಿಯೂ, ಪ್ರಜೆಗಳು ಆಗ ಜೀವಿಸುತ್ತಾರೆ. ಶಿವಪಂಚಾಕ್ಷರ, ರುದ್ರಸೂಕ್ತ ಇವನ್ನು ಜಪಮಾಡದೇ ನನ್ನ ಕ್ಷೇತ್ರಗಳಲ್ಲಿ ವಾಸವನ್ನೂ ಮಾಡದೇ ಕಲಿಕಾಲದ ದುಷ್ಟಜನಗಳು ಕೇವಲ ಪಾಪಕಾರ್ಯಗಳಿಗೆ ಆಶ್ರಯರಾಗಿ ಭೂಮಿಗೆ ಭಾರಭೂತರೇ ಆಗಿರುತ್ತಾರೆ. ॥೧೬॥

ಕಲಿಜನಗಳು ನನ್ನ ದೇವಾಲಯಗಳಲ್ಲಿ ನುಗ್ಗಿ ದುಡ್ಡು, ದೀಪ, ಎಣ್ಣೆ ಮುಂತಾದವುಗಳನ್ನು ಕದಿಯುತ್ತಾ, ನನ್ನ ಸಂಬಂಧವಾದ ಉತ್ಸವಗಳಿಗೆ ಅಡ್ಡಿ ಮಾಡುತ್ತಾ, ನನ್ನ ಉತ್ತಮ ಭಕ್ತರ ನಿಂದೆಯಲ್ಲಿ ನಿರತರಾಗುವರು. ಎಲೌ ಅಂಬಿಕೇ, ಕಷ್ಮಲಚಿತ್ತರಾದ ಇವರು, ಅಗ್ನಿಯಿಂದ ಚೆನ್ನಾಗಿ ಕುದಿಯುತ್ತಿರುವ ಎಣ್ಣೆಯಲ್ಲಿ ಪತಂಗಗಳಂತೆ ಯಾವಾಗಲೂ ನರಕದಲ್ಲಿ ಬಿದ್ದು ಕೋಲಾಹಲಮಾಡುತ್ತಿರುವರು. ॥೧೭॥

ಕಾವೀಬಟ್ಟೆಗಳನ್ನು ಧರಿಸಿ, ಆಶ್ರಮಗಳಲ್ಲಿ ಆಸಕ್ತರಾಗಿ, ಯಾವಾಗಲೂ ಬ್ರಾಹ್ಮಣದ್ರೋಹವನ್ನೆಸಗುತ್ತಾ, ವಾಕ್ಯಗಳಲ್ಲಿ ಮೂರ್ಖರಂತೆ ನಡೆದುಕೊಳ್ಳುತ್ತಾ,

ಪಾಪಾಸ್ತೇ ಶ್ರಮಣಾ ಭವಂತಿ ಬಹವಃ ಶ್ರುತ್ಯುಕ್ತಮಂತ್ರಾದರಾ
ಸ್ತೇ ದೂರಾತ್ಪರಿಹಾರಕಾಶ್ಚ ನರಕಾ ಘೋರಾ ಹರದ್ರೋಹಿಣಃ ॥೧೮॥

ನಿತ್ಯಂ ಯಾಚಕಪಾಚಕಾನ್ನನಿರತಾಃ ಸಂಕೋಚವಾರ್ತೋಜ್ಝಿತಾ
ನಿರ್ಮುಚ್ಯಾಖಿಲಪುಣ್ಯಪಾಪಜನಿತಂ ಚಿಂಚಾರಸಾನ್ನಾದರಾಃ ।
ತಿಷ್ಯೇ ಪುಷ್ಪಪರಿಭ್ರಮನ್ಮಧುಕರಭ್ರಾಂತ್ಯೇವ ತೇ ಭಿಕ್ಷವಃ
ಕಕ್ಷಾಸಕ್ತದುರನ್ನಪೇಟಕಧರಾ ವೇದಾಂತವಾರ್ತೋಜ್ಝಿತಾಃ ॥೧೯॥

ವರ್ಣೀ ಸ್ವರ್ಣಾನುರಕ್ತೋ ಭವತಿ ಯತಿವರೋ ವನ್ಯವಾಸೀ ಚ ಗ್ರಾಮ್ಯೋ
ನೋ ಕಶ್ಚಿನ್ಮಮ ಪೂಜನೋದ್ಯತಮತಿಃ ಕಾಮಾದಿಮಾತ್ರಾದರಃ ।

---

ಲಿಂಗಚಿಹ್ನಿತರಾಗಿಯೂ, ದುಂಡಾದ ಚಕ್ರಗಳನ್ನು ಕಾಸಿ, ಅದರಿಂದ ಚಿಹ್ನೆಮಾಡ ಲ್ಪಟ್ಟ ದೇಹವುಳ್ಳವರಾಗಿಯೂ, ಈ ಕಲಿಯುಗದಲ್ಲಿ ಆ ಜನಗಳು ಶ್ರೌತಧರ್ಮವನ್ನು ದ್ವೇಷಮಾಡುತ್ತಾರೆ. ಪಾಪಿಗಳಾದ ಅವರಲ್ಲನೇಕರು ವೇದದಲ್ಲಿ ಹೇಳಿದ ಮಂತ್ರ ಗಳಲ್ಲಿ ಆದರವಿದ್ದರೂ ಜೈನಸಂನ್ಯಾಸಿಗಳಾಗುತ್ತಾರೆ. ನರಕಪ್ರಾಪ್ತಿಯೋಗ್ಯರೂ, ಭಯಂಕರರೂ, ಶಿವದ್ರೋಹಿಗಳೂ ಆದ ಅವರನ್ನು ದೂರದಿಂದಲೇ ಪರಿಹರಿಸಿ ಕೊಳ್ಳಬೇಕು. (ಅಂತಹ ದುರ್ಜನರನ್ನು ದೂರದಿಂದಲೇ ತ್ಯಾಗಮಾಡಬೇಕು.) ॥೧೮॥

ಪ್ರತಿದಿನವೂ ಯಾಚಕವೃತ್ತಿಯಿಂದ ಅಥವಾ ಅಡಿಗೆಮಾಡುವುದರಿಂದ ಲಭಿಸುವ ಅನ್ನಭೋಜನದಲ್ಲಿ ನಿರತರಾಗಿ, ಸ್ವಲ್ಪವೂ ಸಂಕೋಚ ದಾಕ್ಷಿಣ್ಯವೇ ಇಲ್ಲದೇ ನಾವು ಮಾಡುವ ಕರ್ಮಗಳಿಂದ ಪುಣ್ಯಪಾಪಗಳುಂಟಾಗುವುದೆಂಬುದನ್ನು ಬಿಟ್ಟು, ಕೇವಲ ಹುಳಿಯನ್ನದ ಭಕ್ಷಣೆಯಲ್ಲಿಯೇ ಆದರವುಳ್ಳವರಾಗಿರುವರು. ದೇವಿ, ಈ ಕಲಿಯುಗದಲ್ಲಿ ಜನಗಳು ಭ್ರಮರಗಳಂತೆ ಎಲ್ಲಿ ಮಕರಂದವಿರುವುದು, ಎಲ್ಲಿಲ್ಲ ವೆಂಬುದನ್ನು ಹುಡುಕುವಂತೆ, ಎಲ್ಲ ಮನೆಗಳಲ್ಲಿಯೂ ಭೋಜನಸೌಕರ್ಯಗಳನ್ನೇ ಹುಡುಕುತ್ತಾ ಭ್ರಾಂತಿಯಿಂದ ಭಿಕ್ಷುಕರಾಗಿ ಅಲೆಯುತ್ತಿರುವರು. ಇವರು ವೇದಾಂತ ಸಮಾಚಾರಗಳನ್ನೇ ಬಿಟ್ಟು, ಕಂಕುಳಲ್ಲಿ ನೀಚವಾದ ಅನ್ನದ ಗಂಟನ್ನು ಹೊತ್ತು ಕೊಂಡು ಅದರಿಂದ ಜೀವಿಸುವರು. ॥೧೯॥

ಬ್ರಹ್ಮಚಾರಿಯು ಚಿನ್ನದಲ್ಲಿ ಆಸಕ್ತನಾಗುವನು. ಕಾಡಿನಲ್ಲಿ ವಾಸಮಾಡುವ ಯತಿಪುಂಗವನು, ಗ್ರಾಮವಾಸಿಯಾಗುತ್ತಾನೆ. ಯಾರೊಬ್ಬನೂ, ನನ್ನನ್ನು

ಅಕ್ಷೇಷೂದ್ಯತಚಿತ್ತವೃತ್ತಿರಸಕೃದ್ಧ್ಯೂತೇ ಚ ಪಾನೇ ತಥಾ
ಸ್ತ್ರೈಣಾ ನಿರ್ಘೃಣಚೇತಸಃ ಕಲಿಭವಾ ವರ್ತಂತಿ ತೇ ಸಂಘಶಃ ॥೨೦॥

ಸ್ವಸ್ಥೋ ಯಃ ಸ ಗೃಹಸ್ಥ ಏವ ಗೃಹಿಣೀ ಪಾಕಾದರಾ ಯಾ ವಟುಃ
ಶುಶ್ರೂಷುಃ ಸ ಪಟುಃ ಕುಟೀರಕಪಟವ್ಯಾಪಾರಮಾತ್ರೋತ್ಸವಾಃ ।
ಭೂಮ್ಯುತ್ಕರ್ಷಸುಕರ್ಷಣಶ್ರಮಪರಾ ಭ್ರಾಂತಾಶ್ರಮೋಕ್ತಾಃ ಕ್ರಿಯಾ
ಕ್ರಾಂತಾ ಏವ ಕಲೌ ಭವಂತಿ ಬಹವೋ ನಿರ್ದ್ರವ್ಯಭೋಗೋತ್ಸವಾಃ ॥೨೧॥

ಶಕ್ರೋಽಪ್ಯಾಕ್ರೋಶಯುಕ್ತೋ ಭುವಿ ಕಲಿಜನರಾಃ ಶುಕ್ಲವರ್ಣಂ ಚ ತಕ್ರಂ
ವಿಕ್ರೇತಾರಃ ಕ್ರಿಯಾಣಾಂ ಗುಡಲಗುಡಕರಾ ನಕ್ರವೃತ್ತ್ಯಾಕ್ರಮಂತಿ ।
ನೈವಾನುಕ್ರೋಶಯುಕ್ತಾ ಭರವರವಹನಾ ಭೂಸುರಾ ರಾಸಭಾಭಾ
ಹಾಲೇಯಾ ಚಾಲವೃತ್ತ್ಯಾ ಪ್ರತಿಕಲಿಜನಿತಾ ಭಕ್ತಭುಕ್ತ್ಯೈಕಭಾವಾಃ ॥೨೨॥

---

ಪೂಜಿಸುವುದರಲ್ಲಿ ಉದ್ಯುಕ್ತಮನವುಳ್ಳವನಾಗದೇ, ಕೇವಲ ಭೋಗವೇ ಮೊದಲಾದವುಗಳಲ್ಲಿ ಆದರವುಳ್ಳವನಾಗುತ್ತಾನೆ ಪಗಡೆಯಾಟ, ಅನೇಕಬಾರಿ ಜೂಜು, ಸುರಾಪಾನ, ಮುಂತಾದವುಗಳಲ್ಲಿ ಕಠಿಣಮನಸ್ಕರಾದ ಸ್ತ್ರೀಸಮೂಹದೊಡನೆ ನಿರತರಾಗಿ, ಗುಂಪುಗುಂಪಾಗಿ, ಈ ಕಲಿಯುಗದ ನರನಾರಿಯರು ವ್ಯವಹರಿಸುತ್ತಾರೆ. ॥೨೦॥

ಉದಾಸೀನನಾಗಿರುವವನೇ ಈ ಕಲಿಯುಗದಲ್ಲಿ ಗೃಹಸ್ಥನೆನಿಸುವನು. ಅಡಿಗೆ ಮಾಡುವ ಕಾರ್ಯದಲ್ಲಿ ಅದರವುಳ್ಳವಳೇ ಸರಿಯಾದ ಗೃಹಿಣಿಯೆನಿಸುವಳು. ಸೇವೆಮಾಡಲು ಇಚ್ಛಿಸುವ ಬ್ರಹ್ಮಚಾರಿಯೇ ಪಟುವಾದ ವಟುವೆನಿಸುವನು. ಪರ್ಣಶಾಲೆ ಮುಂತಾದ ಕಪಟವ್ಯಾಪಾರ, ಉತ್ಸವ ಮುಂತಾದವುಗಳಲ್ಲಿಯೇ ಜನಗಳು ಆದರವುಳ್ಳವರಾಗುವರು. ಭೂಮಿಯಲ್ಲಿ ಉತ್ಕರ್ಷಪಡೆಯಬೇಕೆಂದು ಜನಗಳನ್ನೆಲ್ಲಾ ತಮ್ಮ ಕಡೆ ಆಕರ್ಷಣೆ ಮಾಡಿಕೊಳ್ಳುವ ಶ್ರಮದಲ್ಲಿಯೇ ಜನಗಳು ನಿರತರಾಗುವರು. ಆಶ್ರಮಗಳಿಗೆ ಹೇಳಿರುವ ಕ್ರಿಯೆಗಳೆಲ್ಲವೂ ಭ್ರಾಂತಿಮೂಲಕವೆನಿಸುವುವು. ಇಂತಹ ಭ್ರಾಂತಿಯಿಂದ ಆಕ್ರಾಂತರಾಗಿ ಈ ಕಲಿಯುಗದಲ್ಲಿ ಅನೇಕ ಪ್ರಜೆಗಳು ಹಣವಿಲ್ಲದೇ ಭೋಗಪಡಬೇಕೆಂಬ ಅಭಿಲಾಷೆಯಿಂದ ಮೆರೆಯುವರಾಗುತ್ತಾರೆ. ॥೨೧॥

ಈ ಕಲಿಯುಗದ ಜನರು ಇಂದ್ರಾದಿದೇವತೆಗಳಿಂದಲೂ ಆಕ್ರೋಶ ಹೊಂದಿದವರಾಗಿ ಬಿಳಿಯಬಣ್ಣದ ಮಜ್ಜಿಗೆಯನ್ನು ಮಾರುತ್ತಾರೆ. ಅಲ್ಲದೆ ಕೋಲಿಗೆ

**ಉನ್ನಿದ್ರಾರುಣಪದ್ಮಸದ್ಮ ಜನಿತಾನಂದೇನ ತೇ ನಿರ್ವೃತಾ**
**ಭೂಪಾ ದ್ರವ್ಯೋಪಘಾತ್ಯೈರ್ದ್ವಿಜಸುರನಿವಹಂ ಮರ್ದಯಂತ್ಯೇವ ಘೋರಂ।**
**ನಿರ್ದ್ರವ್ಯಾ ದಿಶಿ ತೇ ಮೃಗಾ ಇವ ಮಹಾವ್ಯಾಧೋರುಬಾಣಾಹತಾಃ**
**ಪ್ರಾಣಾನಪ್ಯಸಮೀಕ್ಷ್ಯ ಹಂತು ಕುಧಿಯೋ ಧಾವಂತ್ಯಜಾ ಸಂಘವತ್ ॥೨೩॥**

**ಹಾಹಾ ಘೋಷಾನುಭೂಷಾಮುಖಮುಖರಹಿತಾ ದ್ರೋಹಿಣೋ ಘೋರರೂಪಾ**
**ನಾನಾಕಾರವಿಕಾರಕೇಶಜಟಿಲಾ ನಿಸ್ಸಾರಭೂತಾ ನರಾಃ ।**
**ದುರ್ದಾಂತದ್ರುಹಿಣೇನ ತಾ ಹತಧಿಯೋ ದುಃಖಕ್ಷುಧಾರ್ತಿಂ ಗತಾಃ**
**ಕಾಲಾಪಾರವಿಲಾಸಕೀಲಿತಕಲಾವಂತೋ ಪ್ರಪಶ್ಯಾಂಬಿಕೇ ॥೨೪॥**

---

ಬೆಲ್ಲವನ್ನು ಪಾಕಮಾಡಿ ಮಿಠಾಯಿನಂತೆ ಮಾಡಿಕೊಂಡು ಕೂಗುತ್ತಾ ಎಲ್ಲೆಲ್ಲಿಯೂ ಮೊಸಳೆಗಳಂತೆ ಸಂಚಾರಮಾಡುತ್ತಾರೆ. ಯಾವಾಗಲೂ ಕೂಗಾಡುತ್ತಾ ಯಾಚಕರಾಗಿ ಭಾರವನ್ನು ಹೊರುತ್ತಾ ಬ್ರಾಹ್ಮಣರು ಕತ್ತೆಗಳಂತೆ ಪ್ರಕಾಶಿಸುವರು. ಪ್ರತಿಯೊಂದು ಕಲಿಯುಗದಲ್ಲಿ ಹುಟ್ಟುವ ಜನರೆಲ್ಲರೂ ನೇಗಿಲಿನಿಂದ ಕೃಷಿಮಾಡುತ್ತಾ ಕೇವಲ ಅನ್ನಭೋಜನವೊಂದರಲ್ಲಿಯೇ ಭಾವನೆಯುಳ್ಳವರಾಗಿ ಮಕ್ಕಳಂತೆ ವ್ಯವಹರಿಸುತ್ತಾರೆ. ||೨೨||

ಕೆಂದಾವರೆ ಹೂಗಳ ಮನೆಯಲ್ಲಿ ಸ್ವೇಚ್ಛೆಯಾಗಿ ಮಲಗಿ ಕಲಿಯುಗದ ರಾಜರು ಆನಂದಭರಿತರಾಗಿ, ದುಡ್ಡಿಗೋಸ್ಕರ ಬ್ರಾಹ್ಮಣರು ದೇವತೆಗಳು ಇವರ ಸಮೂಹವನ್ನೇ ಭಯಂಕರವಾಗಿ ಹಿಂಸೆಪಡಿಸುತ್ತಾರೆ. ದುಡ್ಡಿಲ್ಲದ ಆ ರಾಜರು ದಿಕ್ಕುಗಳಲ್ಲಿ ಅಲೆಯುತ್ತಾ ದೊಡ್ಡ ಬೇಡನ ತೀಕ್ಷ್ಣಬಾಣಗಳಿಂದ ಹೊಡೆಯಲ್ಪಟ್ಟ ಜಿಂಕೆಗಳಂತೆ, ತಮ್ಮ ಪ್ರಾಣಗಳನ್ನೂ ಲೆಕ್ಕಿಸದೇ ನೀಚಬುದ್ಧಿಯುಳ್ಳವರಾಗಿ ಆಡುಗಳ ಗುಂಪಿನಂತೆ ಓಡಾಡುತ್ತಾರೆ. ||೨೩||

ಹಾಹಾಧ್ವನಿಯಿಂದಲೇ ಅಲಂಕೃತರಾಗಿ ಯಜ್ಞಯಾಗಾದಿಗಳನ್ನು ಮಾಡದೇ ಶಿವದ್ರೋಹಿಗಳೂ, ಭಯಂಕರಸ್ವರೂಪರೂ, ಅನೇಕಬಗೆಯ ಆಕಾರವಿಕಾರಗಳುಳ್ಳವರಾಗಿ ಗಡ್ಡ, ಜಡೆ ಮುಂತಾದುವುಗಳನ್ನು ಬೆಳೆಸಿದವರಾಗಿ, ಮಾನವರು ಸಾರರಹಿತರಾಗುತ್ತಾರೆ. ಬುದ್ಧಿಹೀನರಾದ ಅವರು ದುಷ್ಟಕರ್ಮಫಲದ ದುಃಖದಿಂದ ಪೀಡಿತರಾಗುತ್ತಾರೆ. ಯಮನ ಅಪಾರಲೀಲೆಗಳಿಂದ ಬಂಧಿತವಾಗಿರುವ ಈ ಕಲಿಯುಗದ ಕೊನೆಯಲ್ಲಿ ಆ ಮಾನವರ ಅವಸ್ಥೆಯನ್ನು ಎಲೌ ಅಂಬಿಕೆ, ನೀನೇ ನೋಡುವವಳಾಗು. ||೨೪||

ನಿರ್ಮರ್ಯಾದಾರ್ಯಹೀನೇ ಸತತಕಲುಷಿತಸ್ಯಾಂತರಾಯಾಸವೃದ್ಧ್ಯೈ
ಬುದ್ಧ್ಯೈಭಿಧಾಯ ಸೌಖ್ಯಂ ಕಲಿಕುಲಿಶಹತಾ ನಿರ್ದಯಂ ಮರ್ದಯಂತಿ ।
ರುದ್ರಾಕ್ಷಾಮಲಭೂತಿದೇಹಮಸಕೃತ್ಕದ್ರುದ್ರಪೂಜಾಪರಂ
ಶ್ರೀರುದ್ರಾರ್ಥವಿಚಾರಕಂ ಜಡಧಿಯಃ ಪಂಚಾಕ್ಷರೇ ಸಾದರಂ ॥೨೫॥

ಪ್ರಾರಬ್ಧಾರಬ್ಧಲಬ್ಧೈರುಪನತಜನುಭಿಃ ಕರ್ಮಭಿಃ ಶ್ರಾವ್ಯಮಾಣಾಂ
ಭ್ರಾಂತಾ ವಿಶ್ರಾಂತಿಹೀನಾಃ ಶ್ರಮವಿವಿಧವೃಷ್ಟೈರ್ದುಃಖಸೌಖ್ಯೈಕಯುಕ್ತಾಃ ।
ನಾನಾದೇಹೇಷ್ವವಸ್ಥಾತ್ರಿತಯಯುತತನುಭೃತೋ ಭೂಭರಾಸ್ತೇಽವ್ಯವಸ್ಥಾಃ
ಸ್ವಸ್ಥಾ ಇತ್ಯೇವ ತೇಷಾಂ ಮತಿರಪಿ ಗಿರಿಜೇ ತೇ ಕಲೌ ವರ್ತಯಂತಿ ॥೨೬॥

ರಾಸಭಾವಿಕಸೇರುಶೋಘಧಾರಾ
ಜನಿತಾಸ್ತೇ ಕಲಿನಾರಿಯೋನಿಜಾರಾಃ ।

---

ಮರ್ಯಾದೆಯಿಲ್ಲದೆ ಆರ್ಯಗುಣಶೂನ್ಯವಾಗಿರುವ ಈ ಕಲಿಯುಗದಲ್ಲಿ ಯಾವಾಗಲೂ ಕಲ್ಮಷವಿಶಿಷ್ಟವಾದ ಮನಸ್ಸಿಗೆ, ಆಯಾಸವನ್ನು ಹೆಚ್ಚಿಸುವ ಬುದ್ಧಿಯಿಂದಲೇ ಸೌಖ್ಯವೆಂದು ನಂಬಿರುವರು. ಕಲಿಕಲ್ಮಷದಿಂದ ಭರಿತರಾದ ಆ ಮಾನವರು, ಕೊಂಚವೂ ಕರುಣೆಯಿಲ್ಲದೇ ನಿರ್ಮಲವಾದ ರುದ್ರಾಕ್ಷಮಾಲಾಭರಣವುಳ್ಳವನೂ, ಭಸ್ಮಭೂಷಿತದೇಹನೂ, ಪದೇಪದೇ ರುದ್ರಜಪ ಮತ್ತು ಪೂಜೆಗಳಲ್ಲಿ ನಿರತನೂ, ರುದ್ರಮಂತ್ರಾರ್ಥವನ್ನೂ ವಿಚಾರಮಾಡುವವನೂ, ಮತ್ತು ಶಿವಪಂಚಾಕ್ಷರಮಂತ್ರದಲ್ಲಿ ಆದರವುಳ್ಳವನೂ ಆದ ನನ್ನ ಭಕ್ತನನ್ನು ಕೊಲ್ಲುವರು. ॥೨೫॥

ಗಿರಿಜೇ, ಪ್ರಾರಬ್ಧಕರ್ಮಗಳಿಗನುಗುಣವಾಗಿ ಪ್ರತಿ ಜನ್ಮಗಳಲ್ಲಿಯೂ, ಉಂಟಾಗಿರುವ ಕರ್ಮಗಳಿಂದ ಪುನಃ ಪಾಪಕರ್ಮಗಳನ್ನೇ ಎಸಗುತ್ತಾ ಭ್ರಾಂತಿಯುಕ್ತರೂ, ವಿಶ್ರಾಂತಿಯಿಲ್ಲದವರೂ, ನಾನಾವಿಧವಾದ ಶ್ರಮಮಿಶ್ರಿತರಾಗಿ ದುಃಖ, ಸೌಖ್ಯಗಳೆರಡನ್ನೂ ಹೊಂದುತ್ತಾ ಅನೇಕ ದೇಹಗಳನ್ನು ಪಡೆದು, ಬಾಲ್ಯ, ಯೌವ್ವನ ಮತ್ತು ವಾರ್ಧಕ್ಯವೆಂಬ ಮೂರು ಅವಸ್ಥೆಗಳನ್ನುಳ್ಳ ದೇಹಧಾರಿಗಳಾಗಿ ಕೇವಲ ಭೂಮಿಗೆ ಭಾರರಾಗುವರು. ಈ ಕಲಿಮಾನವರು, ಯಾವ ವಿಧವಾದ ವ್ಯವಸ್ಥೆಯಿಲ್ಲದಿದ್ದರೂ ನಾವು ಸ್ವಸ್ಥರಾಗಿಯೇ ಇದ್ದೇವೆಂದು ಈ ಕಲಿಯುಗದಲ್ಲಿ ತಿಳಿಯುತ್ತಾರೆ. ॥೨೬॥

ಕಲಿಕಾಲದ ನಾರಿಯರಲ್ಲಿ ಯೋನಿನಿಮಿತ್ತವಾಗಿ ವ್ಯಭಿಚಾರಮಾಡುವ

ಕುಸುಮೇಷುಶರಾವಧೂತಸಾರಾ
ವರಕಾಕೋದರಹಾರಪಾದದೂರಾಃ ॥೨೭॥

ಅಂಗಾವಂಗಕಲಿಂಗತುಂಗಜಮಹಾರಾಷ್ಟ್ರೇಷು ಸೌರಾಷ್ಟ್ರಕೇ
ವಂಗಾಂಗಾದಿವಿದರ್ಭನಾರ್ಮದಮಹಾಕಾಲೇ ತಥಾ ಕೋಂಕಣೇ ।
ಭೃಂಗಾರಾದಿಷು ಚೀನಸಾಲಸುಮಹಾಗಂಗಾಪ್ರಯಾಗಾದಿಷು
ಮ್ಲೇಂಛಾ ಏವ ವಸಂತಿ ಸಂತತಕುರುಕ್ಷೇತ್ರೇ ತಥಾ ಪುಷ್ಕರೇ ॥೨೮॥

ಆರ್ಯಾವರ್ತಾನುವೃತ್ತಿಃ ಕ್ವಚಿದಪಿ ನ ಭವೇದಾರ್ಯಕಾಣಾಂ ಕಲೌ ವೈ
ಕಾಂಚೀಕೋಸಲಚೇರಚೋಲಜಮಹಾಪಾಂಡ್ಯೇ ದ್ವಿಜಾನಾಂ ಸ್ಥಿತಿಃ ।
ಸಹ್ಯಾದ್ರಿಪ್ರಭವೋರುತೀರಜಮಹಾಲಿಂಗೋತ್ತಮಾಂಗೇ ಕ್ಷಣಂ
ಕ್ಷೀಣಪ್ರಾಯ ಅಸಹ್ಯಭೂತಕುಕಲೌ ಸ್ಥಾನಂ ವರಂ ವೈ ಸತಾಂ ॥೨೯॥

---

ಕಲಿಮಾನವರು, ಮನ್ಮಥನ ಬಾಣಗಳಿಂದ ಆಚ್ಛಾದಿತರಾಗಿ ಕೊನೆಗೆ ಸಾರವಿಲ್ಲದವರೆನಿಸಿ, ಸರ್ಪಭೂಷಣನಾದ ಶಿವನ ಪಾದಭಜನೆಯಿಂದ ದೂರರಾಗುತ್ತಾರೆ. ॥೨೭॥

ಅಂಗ, ವಂಗ, ಕಲಿಂಗ, ಉನ್ನತವಾದ ಮಹಾರಾಷ್ಟ್ರ, ಸೌರಾಷ್ಟ್ರ, ವಂಗ, ಅಂಗ ಮೊದಲಾದ ದೇಶಗಳಲ್ಲಿಯೂ ವಿದರ್ಭ, ನಾರ್ಮದ, ಮಹಾಕಾಲ, ಹಾಗೆಯೇ ಕೊಂಕಣ, ಭೃಂಗಾರ, ಚೀನ, ಸಾಲ, ಮಹಾ ಗಂಗಾನದಿಯ ದಡ, ಪ್ರಯಾಗ, ಕುರುಕ್ಷೇತ್ರ ಮತ್ತು ಪುಷ್ಕರ ಈ ಉತ್ತಮ ತೀರ್ಥ ಮತ್ತು ಕ್ಷೇತ್ರಗಳಲ್ಲಿ ಯಾವಾಗಲೂ ಮ್ಲೇಚ್ಛವರ್ಗದವರೇ ಹೆಚ್ಚಾಗಿ ವಾಸಮಾಡುತ್ತಾರೆ. ॥೨೮॥

ದೇವಿ, ಈ ಕಲಿಯುಗದಲ್ಲಿ ಆರ್ಯರಿಗೆ ಎಲ್ಲಿಯೂ ಆರ್ಯಾವರ್ತವನ್ನು ಅನುಸರಿಸಬೇಕೆಂಬ ಅಭಿಲಾಷೆ ಉಂಟಾಗುವುದಿಲ್ಲ. ಕಾಂಚೀ, ಕೋಸಲ, ಚೇರ, ಚೋಲ ಮತ್ತು ಮಹಾಪಾಂಡ್ಯ ದೇಶಗಳಲ್ಲಿ ಎಲ್ಲೋ ಕೆಲವೆಡೆಗಳಲ್ಲಿ ಮಾತ್ರ ಬ್ರಾಹ್ಮಣರು ನೆಲಸುವರು. ಸಹ್ಯಪರ್ವತದಲ್ಲಿ ಹುಟ್ಟುವ ಕಾವೇರೀ ನದಿಯ ದೊಡ್ಡ ತೀರದ ಮೇಲೆ ಇರುವ ನನ್ನ ಉನ್ನತವಾದ ಲಿಂಗಪ್ರದೇಶದಲ್ಲಿ ಕೆಲವುಕಾಲ ಮಾತ್ರ ಈ ಬ್ರಾಹ್ಮಣರು ನೆಲಸುವರು. ನಷ್ಟಪ್ರಾಯವೂ ಅಸಹ್ಯವೂ ಆಗಿರುವ ಈ ಕಲಿಯುಗದಲ್ಲಿ ಸಾಧುಗಳಿಗೆ ಉತ್ತಮವಾದ ಸ್ಥಾನವೆಲ್ಲಿಂದ ಬಂದೀತು ? ॥೨೯॥

**ಪರ್ಣಾದಾ ಅಪಿ ಸಂವಿಶಂತಿ ಮುನಯಃ ಶ್ರೀ ತಾಮ್ರಪರ್ಣೀತಟೇ**
**ವರ್ಣಾದ್ಯಾಶ್ರಮತತ್ಪರಾಃ ಶಿವಮುನೇऽಪರ್ಣಾಪತಿಂ ಸಂಶ್ರಿತಾಃ ।**
**ವಾತಕ್ಷುಬ್ಧಾಬ್ಧಿಜಾತಪ್ರಬಲದುರುಮಹಾವೀಚಿವಾಚಾಲಿತಾಶಾ**
**ಔರ್ವಸ್ಯೋರ್ಧ್ವಶಿಖಾಭಿತಾಪಿತಮಹಾಮೇಘೋದಯಾ ನೋ ಘನಾಃ**
**॥೩೦॥**

**ವರ್ಷಂತ್ಯುದ್ಧತವಿದ್ಯುದಾರ್ಭಟಿರವೈಃ ಪ್ರಾತಃ ಪ್ರದಗ್ಧಾವನೀಂ**
**ಕುರ್ವಂತೋ ಮುದಿತಾ ಸದೈವ ತಿಮಿರಂ ಲೋಕೇऽನುಲೋಕೋಜ್ಝಿತಂ ।**
**ಮತ್ಪಾದಾರ್ಚನವಿಮುಖಹೃದಯೋ ಭಾರರೂಪೋ ಭುವೋऽಸೌ**
**ತಿಷ್ಯೇ ಪುಷ್ಯೇऽಪಿ ಮಧ್ಯಾರ್ಜುನಭುವಿ ಸರಿತಿ ಸ್ನಾನಹೀನೋऽತಿಹೀನಃ॥೩೧॥**

**ಡಿಂಭಃ ಕುಂಭೀಶಲಿಂಗೇ ಕ್ಷಣನತಿರಹಿತೋ ವೋಘಿತಾಯುರ್ಮಹಾಘೋ**
**ಮಾಘೇ ಮಾಘ್ಯಾಂ ಮಘರ್ಕ್ಷೇ ಶಿವಸರಸಿ ಮಹಾಸ್ನಾನಹೀನೋऽತಿಹೀನಃ।**

---

ಉಮೆ! ಎಲೆಗಳನ್ನು ತಿಂದು ತಪಸ್ಸುಮಾಡುವ ಮುನಿಗಳೂ ಕೂಡ ಶ್ರೀತಾಮ್ರಪರ್ಣೀ ನದಿಯ ದಡಕ್ಕೆ ಬಂದು ಸೇರುವರು. ಬ್ರಹ್ಮಚರ್ಯವೇ ಮೊದಲಾದ ಆಶ್ರಮವುಳ್ಳವರೂ ಕೂಡ ಅಪರ್ಣಾಪತಿಯೆನಿಸಿದ ನನ್ನನ್ನೇ ಆಶ್ರಯಿಸುತ್ತಾರೆ. ಸಮುದ್ರವು ಬಿರುಗಾಳಿಯ ಹೊಡೆತದಿಂದ ಕ್ಷೋಭೆಗೊಂಡು ಪ್ರಬಲವಾದ ದೊಡ್ಡ ದೊಡ್ಡ ಅಲೆಗಳನ್ನು ತಳ್ಳುತ್ತಾ ದಿಕ್ಕುಗಳನ್ನು ಮಾತಾಡಿಸುತ್ತಿರುವುದೋ ಎಂಬಂತೆ ಘೋರ್ಗರೆಯುವುವು. ಬಾಡಬಾಗ್ನಿಯ ಊರ್ಧ್ವಮುಖವಾದ ಜ್ವಾಲೆಯಿಂದ ದೊಡ್ಡ ದೊಡ್ಡ ಮೋಡಗಳು ಅಂತರಿಕ್ಷದಲ್ಲಿ ಕಟ್ಟಳೆಯನ್ನೇ ಸುರಿಸಲಾರವು. ॥೩೦॥

ಒಂದೊಂದುವೇಳೆ ಮೇಘಗಳು ಗುಡುಗು, ಮಿಂಚು, ಸಿಡಿಲುಗಳಿಂದ ಆರ್ಭಟಿಸುತ್ತಾ ಬೆಳಗಿನಿಂದ ಸುಟ್ಟುಹೋಗಿದ್ದ ಭೂಮಿಯನ್ನು ಅತಿಯಾಗಿ ಮಳೆಗರೆದು ಕಲಕಿಬಿಡುವುವು. ಆ ಮಳೆಗಾಲದಲ್ಲಿ ಪರಸ್ಪರ ದರ್ಶನಮಾಡಲೂ ಅಸಾಧ್ಯವಾಗುವಂತೆ ಗಾಢಾಂಧಕಾರವೇರ್ಪಡುವುದು. ನನ್ನ ಪಾದಪೂಜಾಪರಾಙ್ಮುಖಮನಸ್ಸುಳ್ಳ ಈ ಭೂಮಿಯು ಈ ಕಲಿಯುಗದ ಕೊನೆಯಲ್ಲಿ ಕೇವಲ ಭಾರಭೂತವಾಗಿಯೇ ತೋರುವುದು. ಮಧ್ಯಾರ್ಜುನಕ್ಷೇತ್ರದಲ್ಲಿ ಹರಿಯುವ ಪುಣ್ಯನದಿಗಳಲ್ಲಿ ಮಾನವರು ಆ ಕಾಲಗಳಲ್ಲಿ ಸ್ನಾನಾದಿಗಳನ್ನೂ ಮಾಡದೇ ತುಂಬಾ ಹೀನರಾಗುತ್ತಾರೆ ॥೩೧॥

ಅಜ್ಞನಾದ ಕಲಿಮಾನವನು ಕ್ಷಣಕಾಲವಾದರೂ ಆ ಕುಂಭೀಶನ ಲಿಂಗಕ್ಕೆ ನಮಸ್ಕಾರಮಾಡದೇ ತನ್ನ ಆಯುಸ್ಸನ್ನೆಲ್ಲಾ ವ್ಯರ್ಥಮಾಡಿಕೊಂಡು ವಿಶೇಷ

ತಿಷ್ಯೇ ಪುಷ್ಯೇಽನುಘುಷ್ಯದ್ವ್ರಜಿನಯುತಜನಾಃ ಸ್ವಾಗತಂ ಸಹ್ಯಜಾಯಾಂ
ಸ್ನಾತ್ವಾ ನತ್ವಾ ಮಹೇಶಂ ಸಕಲಜನಿಜರಾನಾಶಪಾಶೈಕನಾಶಂ ॥೩೨॥

ಸಂಸಾರಾರ್ಣವಮಧ್ಯತೋದ್ಧೃತಜನಾನಂದೈಕಮೋದಪ್ರದಂ
ಶ್ರೀ ಮಧ್ಯಾರ್ಜುನವೃಕ್ಷಮೂಲವಿಲಸಲ್ಲಿಂಗಂ ಶಿವೇ ಮುಕ್ತಿದಂ ।
ಕಲೌ ಮಾಘೇ ಗಂಗಾಯಮುನವರಸಂಗಾಪ್ಲುತಜನಾ
ಪ್ರಯಾಗೇ ವಾ ಯಾಗೈರ್ಗಮಯತಿ ಗತಿಸ್ತೇಷು ಸ ಶಿವಃ ॥೩೩॥

ಕಲೌ ಗಂಗಾಸಂಗಾಜ್ಜನಿಮೃತಿಜಭಂಗೋಽಪಿ ಹಿ ಭವೇತ್
ಮಹಾಲಿಂಗಾಸಂಗಾನ್ನೃಷು ಪರಮಮುಕ್ತಿರ್ಗಿರಿಭವೇ ।
ಭಾವಾನಾಂ ಭವತಾರಣಾಯ ಗಿರಿಜೇ ಮಂತ್ರಂ ಚ ಪಂಚಾಕ್ಷರಂ
ತಾರೇಣೋಪದಿಶಾಮಿ ತತ್ತ್ವಕಮಮೇ ಸಾಯುಜ್ಯಮುಕ್ತಿಪ್ರದಂ ॥೩೪॥

---

ಪಾಪಭರಿತನಾಗುತ್ತಾನೆ. ಶಿಶಿರಋತುವಿನ, ಮಾಘಮಾಸದ ಮಘಾನಕ್ಷತ್ರದ ದಿನ ಶಿವನಮಸ್ತಕದಲ್ಲಿ ಮಹಾಭಿಷೇಕಮಾಡದೇ ತುಂಬಾ ಹೀನನೆನಿಸುವನು. ಈ ಕಲಿಯುಗದಲ್ಲಿ ಪುಣ್ಯಕರವಾದ ಪುಷ್ಯನಕ್ಷತ್ರಯುತದಿನಗಳಲ್ಲಿ ಪಾಪವಿಶಿಷ್ಟರಾದ ಜನಗಳು ಗದ್ದಲಮಾಡುತ್ತಾ ಕಾವೇರೀನದಿಯಲ್ಲಿ ಸ್ವಾಗತಪಡೆದು ಸ್ನಾನಮಾಡಿ, ಸಕಲಪ್ರಾಣಿಗಳ ಜನನ ಮರಣರೂಪವಾದ ಪಾಶವನ್ನು ಮುಖ್ಯವಾಗಿ ನಾಶಮಾಡುವ ಆ ಮಹೇಶ್ವರನಿಗೆ ನಮಸ್ಕಾರವನ್ನೂ ಸಹ ಮಾಡದೇ ಕೇವಲ ತಮ್ಮ ಜನ್ಮವನ್ನೆಲ್ಲಾ ವ್ಯರ್ಥಮಾಡಿಕೊಳ್ಳುತ್ತಾರೆ. ॥೩೨॥

ಈ ಸಂಸಾರವೆಂಬ ಸಮುದ್ರದ ಮಧ್ಯದಲ್ಲಿ ಬಿದ್ದುನರಳುವ ಜನಗಳನ್ನುದ್ಧಾರ ಮಾಡಿ, ಅವರಿಗೆ ಆನಂದ, ಸಂತೋಷ, ಇವುಗಳನ್ನೇ ಮುಖ್ಯವಾಗಿ ಕೊಡುತ್ತಾ, ಶ್ರೀಮಧ್ಯಾರ್ಜುನವೃಕ್ಷದ ಬುಡದಲ್ಲಿ ಶೋಭಿಸುವ ಮುಕ್ತಿಪ್ರದವಾದ ಶಿವಲಿಂಗವನ್ನು ಪೂಜೆಮಾಡಿ, ಮಾಘಮಾಸದಲ್ಲಿ, ಗಂಗಾಯಮುನಾನದಿಗಳ ಸಂಗಮಕ್ಷೇತ್ರದಲ್ಲಿ ಸ್ನಾನಮಾಡುತ್ತಾ, ಪ್ರಯಾಗ ಕ್ಷೇತ್ರದಲ್ಲಿ ಸೇವೆಮಾಡುವ ಭಕ್ತರಿಗೆ ಆ ಶಿವನು ಉತ್ತಮಗತಿಯನ್ನು ಕೊಡುತ್ತಾನೆ. ॥೩೩॥

ಎಲೌ ಪಾರ್ವತಿ, ಈ ಕಲಿಯುಗದಲ್ಲಿ ಗಂಗಾನದಿಯ ಸ್ನಾನಾದಿ ಸಂಬಂಧದಿಂದ ಮುಂದಿನ ಜನ್ಮದಲ್ಲಿ ಅನುಭವಿಸಬೇಕಾದ ಜನನ ಮರಣರೂಪವಾದ ಬಂಧನವೂ ನಾಶವಾಗುತ್ತದೆ. ಆ ಮಹಾದೇವನ ಪರಮಪಾವನವಾದ ಲಿಂಗಪೂಜಾದಿ

ತಸ್ಮಾತ್ಕ್ಷೇತ್ರವರಂ ನ ಮುಕ್ತ್ಯನುಗಜೇ ಹಾರೇಷು ಮುಕ್ತಿಪ್ರದಂ ।
ಕೈಲಾಸೋಪಮಮೇತದದ್ಯ ಗಿರಿಜೇ ಪುಣ್ಯಾವಿಮುಕ್ತಂ ಮಯಾ ॥೩೫॥

ತನ್ನೈಮಿಷಂ ಸೇವ್ಯಮುಮೇ ಕೃತೇ ಯುಗೇ
ತ್ರೇತಾಸು ತತ್ಪುಷ್ಕರಮೇವ ಶಸ್ತಂ ।
ತದ್ದ್ವಾಪರಸ್ಥೈಃ ಕುರುಜಾಂಗಲಂ ಮಹತ್
ಗಂಗೈವ ಸೇವ್ಯಾ ಕಲಿಜೈರ್ವಿಮುಕ್ತಯೇ ॥೩೬॥

ದುಸ್ತರ್ಕೇಣ ದುರುಕ್ತಿಕರ್ಕಶಧಿಯಸ್ತೇ ಶರ್ಕರಾದಂತುರಾಃ
ಭೂಮೌ ಶಾಂಭವಸತ್ತಮಾನ್ಕಲಿಯುಗೇ ನಿಘ್ನಂತಿ ವಿಘ್ನೋದ್ಯತಾಃ।
ಕರಾಳಕರವಾಲಧೃಕ್ತ್ರಿಜಗತೀಷು ಬಿಭ್ರನ್ವಧಂ
ಶುಲ್ಕಂ ಧರ್ಮಮಯಂ ದಧಾತಿ ಭುವನೇ ಕಲ್ಯೋಜ್ಝಿತಾನ್ಪಾಮರಾನ್॥೩೭॥

---

ಗಳಿಂದ ಶ್ರೇಷ್ಠವಾದ ಮೋಕ್ಷವೇ ಉಂಟಾಗುತ್ತದೆಂದು ತಿಳಿ. ಗಿರಿಜೇ, ನನ್ನ ಭಕ್ತರನ್ನು ಈ ಸಂಸಾರದಿಂದ ಉದ್ಧಾರಮಾಡುವುದಕ್ಕೋಸ್ಕರವೇ ಸಾಯುಜ್ಯ ಮೋಕ್ಷವನ್ನುಂಟು ಮಾಡುವ ಈ ಶಿವಪಂಚಾಕ್ಷರ ಮಹಾಮಂತ್ರವನ್ನು ನಾನು ಗಟ್ಟಿಯಾಗಿ ಉಪದೇಶ ಮಾಡುತ್ತಿರುವೆನು. ॥೩೪॥

ಪಾರ್ವತಿ, ಆದ್ದರಿಂದಲೇ ಹರಭಕ್ತರಿಗೆ ಮೋಕ್ಷಪ್ರದವಾಗಿಯೂ ಕೈಲಾಸಕ್ಕೆ ಸಮಾನವಾಗಿ ಶ್ರೇಷ್ಠಕ್ಷೇತ್ರವೆನಿಸಿಯು ಪ್ರಖ್ಯಾತವಾಗಿರುವ ಪುಣ್ಯಕರವೆನಿಸಿದ ಈ ಅವಿಮುಕ್ತಕ್ಷೇತ್ರವನ್ನು ನಾನು ಬಿಡದೆ ಯಾವಾಗಲೂ ಅಲ್ಲಿಯೇ ನೆಲಸಿರುವೆನು. ॥೩೫॥

ದೇವಿ, ಕೃತಯುಗದಲ್ಲಿ ನೈಮಿಷಕ್ಷೇತ್ರವು ಮುಮುಕ್ಷುಗಳಿಗೆ ಸೇವಾರ್ಹವಾಗಿರುವುದು. ತ್ರೇತಾಯುಗದಲ್ಲಿ ಪುಷ್ಕರಕ್ಷೇತ್ರವು ಪ್ರಶಸ್ತವಾಗಿರುವುದು. ದ್ವಾಪರಯುಗದ ಜನಗಳು ಮಹಾಕುರುಜಾಂಗಲಕ್ಷೇತ್ರವನ್ನು ಸೇವೆಮಾಡಬೇಕು. ಕಲಿಮಾನವರಿಗಾದರೋ ಮೋಕ್ಷಪ್ರದವಾದ ಆ ಮಹಾ ಗಂಗಾನದಿಯೇ ಪೂಜ್ಯವಾಗಿರುವುದು. ॥೩೬॥

ದುಷ್ಟವಾದ ತರ್ಕದಿಂದ, ದುರ್ವಂಚನದಿಂದ ಕರ್ಕಶವಾದ ಬುದ್ಧಿಯುಳ್ಳ ಮಾನವರು, ಬೆಣಚುಗಲ್ಲುಗಳಂತೆ ತೀಕ್ಷ್ಣವಾದ ಉಬ್ಬು ಹಲ್ಲುಗಳುಳ್ಳವರಾಗಿ ಈ ಕಲಿಯುಗದಲ್ಲಿ ನನ್ನ ಭಕ್ತಶ್ರೇಷ್ಠರಿಗೆ ಅನೇಕ ವಿಘ್ನಗಳನ್ನುಂಟುಮಾಡುವುದರಲ್ಲಿ

ಶುಲ್ಕಾನ್ಯಾತನುತೇ ಸ ಪುಲ್ಕಸವರಾನ್ದುಃಖಪ್ಲವಾನ್ಸಂಬರಾನ್
ಹೂಣಾನ್ಘೋಣವಿಮರ್ದಿತಾಂಶ್ಚ ಕುರುತೇ ಕಲ್ಪಾಂತಿಮೋಽಸೌ ಹರಿಃ ।
ಆಜ್ಯಂ ರಾಜ್ಯಭೃತೋಽಪಿ ದುರ್ಲಭತರಂ ನ ಕ್ವಾಪಿ ಪಕ್ವಾನ್ನಧೀಃ
ದಗ್ಧಾ ದುಗ್ಧಕಥಾ ಮನೋ ನ ಲಭತೇ ದಧ್ಯಾದಿ ನ ಧ್ಯಾನತಃ ॥೩೮॥

ತಕ್ರಂ ಶಕ್ರಪದಂ ತಥಾಪಿ ಕಲಿಜಾ ಜೀವಂತಿ ಧೀವಂಚಿತಾಃ
ಇತ್ಥಂ ಕೇರಳನಾಮಕೋಽಸ್ತಿ ಗಿರಿಜೇ ದೇಶೋ ನದೇಶಾಂತಿಕೇ ।
ಖದ್ಯೋತದ್ಯುತಿಭಿಶ್ಚರಂತಿ ವಸುಧಾಂ ರಾತ್ರಾವದತ್ರಾಸಕಾಃ
ಕ್ಷುದ್ರಾ ದುಷ್ಟಕುಲುಬ್ಧತಸ್ಕರವರಾಸ್ತೇ ಮಸ್ಕರೀದೂಷಕಾಃ ॥೩೯॥

---

ಉದ್ಯುಕ್ತರಾಗಿ ಕೊಲೆಮಾಡುವರು. ಹರಿತವಾದ ಕತ್ತಿಯನ್ನು ಹಿಡಿದು ಮೂರು ಜಗತ್ತಿನಲ್ಲೂ ಅಲೆಯುತ್ತಾ, ಕೊಲೆಮಾಡುವವರಾಗಿ, ಕಲ್ಕಿಯಿಂದ ಬಿಡಲ್ಪಟ್ಟ ಪಾಮರರು ಧರ್ಮರೂಪವಾದ ಶುಲ್ಕವನ್ನು ಧರಿಸುತ್ತಾರೆ. (ಧರ್ಮದ ಹೆಸರಿನಿಂದ ಅನೇಕ ಹಿಂಸೆಗಳನ್ನು ಮಾಡುತ್ತಾರೆ.) ॥೩೭॥

ಕಲ್ಪದ ಕೊನೆಯಲ್ಲಿ ಆ ವಿಷ್ಣುವು (ಕಲ್ಕಿರೂಪಹೊಂದಿ) ನೀಚರಾದಚಂಡಾಲ ರನ್ನೂ ಮತ್ತು ದುಃಖವೆಂಬ ದೋಣಿಗಳುಳ್ಳ ಕೊಲೆಪಾತಕರನ್ನೂ ಧ್ವಂಸಮಾಡುತ್ತಾ ಶುಲ್ಕವನ್ನು ವಸೂಲು ಮಾಡುತ್ತಾ, ಹೂಣರನ್ನು ಕುದುರೆಗಳಿಂದಲೇ ಹಿಂಸಿಸಲ್ಪಟ್ಟವ ರನ್ನಾಗಿ ಮಾಡುತ್ತಾನೆ. ಆಗ ರಾಜನಿಗೂ ಸಹ ತುಪ್ಪವು ದುರ್ಲಭವೇ ಆಗುತ್ತದೆ. ಎಲ್ಲಿಯೂ ಪಕ್ವವಾದ ಅನ್ನಭಾವನೆಯೇ ಜನರಿಗಿರುವುದಿಲ್ಲ. ಹಾಲಿನ ವಿಷಯುಕವಾದ ಪರಿಚಯವೇ ಜನರಿಗೆ ಉಂಟಾಗುವುದಿಲ್ಲ. ಮೊಸರೇ ಮೊದಲಾದ ಪದಾರ್ಥಗಳು ಧ್ಯಾನಕ್ಕೆ ವಿಷಯುಗಳಾಗುತ್ತವೆ. ॥೩೮॥

ಎಲೌ ಗಿರಿಜೇ! ಮಜ್ಜಿಗೆ ಎಂಬುದು ಜನಸಾಮಾನ್ಯಕ್ಕೂ ಇಂದ್ರಲೋಕ ದಂತೆ ಅತಿ ದುರ್ಲಭವಾಗುವುದು. ಆದರೂ ಬುದ್ಧಿಯಿಂದ ವಂಚಿಸಲ್ಪಟ್ಟ ಈ ಕಲಿ ಮಾನವರು, ಹೇಗೋ ಜೀವಿಸುವರು. ಇಂತಹ ದುಸ್ಥಿತಿಯಲ್ಲೂ ಸಮುದ್ರದ ಹತ್ತಿರ ಕೇರಳದೇಶವೆಂಬುದೊಂದು ಮಾತ್ರ ಶಾಶ್ವತವಾಗಿ ಉಳಿಯುವದು. ಕ್ಷುದ್ರರೂ, ದುಷ್ಟರೂ, ಬೇಡರೂ, ಮತ್ತು ಕಳ್ಳರೂ ಆದ ಕಲಿಮಾನವರು, ಯತಿಗಳನ್ನು ದೂಷಣೆಮಾಡುತ್ತಾ ಆ ಭೂಮಿಯಲ್ಲಿ ಕೊಂಚವೂ ಭಯವೇ ಇಲ್ಲದಂತೆ ಮಿಣುಕ ಹುಳುವಿನಕಾಂತಿಯಂತೆ ಶೋಭಿಸುತ್ತಾ ಅಲೆಯುತ್ತಿರುವರು. ॥೩೯॥

ಅಸಹ್ಯಪಾಪೈರ್ಯದಿ ನಿಷ್ಕೃತೀಚ್ಛುಃ
ಸ ಸಹ್ಯಜಾಯಾಂ ಕಿಲ ತೌಲಿಭಾಸ್ಕರೇ ।
ಗೋದಾಂ ಮುದಾ ಸ್ನಾತಿ ಚ ಕೇಸರಿಸ್ಥೇ
ಬೃಹಸ್ಪತೌ ಪಾಪಗಣೈರ್ವಿಮುಕ್ತಃ ॥೪೦॥

ಯೋ ದಕ್ಷಿಣಾಂಭೋನಿಧಿತೀರಚಾಪ
ಕೋಣೇ ವಿಗಾಹ್ಯೈವ ವಿಮುಕ್ತಪಾಪಃ ।
ಕನ್ಯಾಬ್ಧಿತೀರ್ಥೇ ವರಗಾಂಗಸಂಗೇ
ಗೋಕರ್ಣಜೇ ಸಾಗರವಾರಿತಾಘಃ ॥೪೧॥

॥ ಶ್ರೀಸ್ಕಂದ ಉವಾಚ ॥

ಇತ್ಥಂ ಶಂಕರವಾಗ್ವಿಲಾಸಮಧುರೋದಾರಂ ವಚಃ ಸಾಂಬಿಕಾ
ಶ್ರುತ್ವಾ ತುಷ್ಟತನೂರುಹಾಶ್ರುಜಮಹಾಭಕ್ತ್ಯಾನುಲೋಕೇ ಹರಂ ।
ಕೈಲಾಸಾಮಲಮೌಲಿಪಾಲಿಸುಮಹಾರತ್ನೋರುಸೌಧಸ್ಥಿತಾ
ಪಾಟೀರಾಂಕಿತವಕ್ಷಸಂ ತ್ರಿಜಗತಾಮಧ್ಯಕ್ಷಮೇವೇಶ್ವರಂ ॥೪೨॥

---

ಸಹಿಸಲಸಾಧ್ಯವಾದಷ್ಟು ಪಾಪಹೊಂದಿ ಅದರಿಂದ ಬಿಡುಗಡೆಹೊಂದಲು ಬಯಸುವುದಾದರೆ ಮಾನವನು ಸೂರ್ಯನು ತುಲಾರಾಶಿಯಲ್ಲಿದ್ದಾಗ (ಅಂದರೆ ತುಲಾ ಮಾಸದಲ್ಲಿ) ಕಾವೇರೀಸ್ನಾನಮಾಡಬೇಕು. ಹಾಗೆಯೇ ಬೃಹಸ್ಪತಿಯು ಸಿಂಹರಾಶಿ ಯಲ್ಲಿದ್ದಾಗ ಗೊದಾವರೀನದಿಯಲ್ಲಿ ಸಂತೋಷದಿಂದ ಸ್ನಾನಮಾಡಿದರೂ ಸಕಲ ಪಾಪರಾಶಿಗಳಿಂದಲೂ ಬಿಡುಗಡೆಹೊಂದುತ್ತಾನೆ. ॥೪೦॥

ಧನುಷ್ಕೋಟಿ ಎಂದು ಪ್ರಸಿದ್ಧವಾಗಿರುವ ದಕ್ಷಿಣ ಸಮುದ್ರದ ದಡದ ನೀರಿನಲ್ಲಿ ಸ್ನಾನಮಾಡಿದರೆ ಪಾಪರಹಿತನಾಗುವನು. ಶ್ರೇಷ್ಠವಾದ ಗಂಗಾನದಿಯ ಸಂಗಮವುಳ್ಳ ಅಬ್ಧಿಯ ತೀರ್ಥದಲ್ಲಿಯೂ, ಕನ್ಯಾಕುಮಾರಿ ಮತ್ತು ಗೋಕರ್ಣಕ್ಷೇತ್ರದಲ್ಲಿನ ಸಮು ದ್ರದ ನೀರಿನಲ್ಲಿಯೂ ಸ್ನಾನಮಾಡಿದರೆ ಪಾಪಗಳಿಂದ ನಿವೃತ್ತನಾಗುವನು. ॥೪೧॥

ಈರೀತಿಯಾಗಿ ಆ ಶಂಕರನ ವಾಗ್ವಿಲಾಸದಿಂದ ಮಧುರವೂ ಉದಾರವೂ ಆಗಿರುವ ಮಹಾದೇವನ ಮಾತುಗಳನ್ನು ಕೇಳಿ, ಅಂಬಿಕೆಯು ಸಂತುಷ್ಟಳಾಗಿ ರೋಮಾಂಚಹೊಂದಿ, ಕಣ್ಣೀರು (ಆನಂದಬಾಷ್ಪ) ಸುರಿಸುತ್ತಾ ಭಯ ಭಕ್ತಿಯಿಂದ

ವೀಟೀಚಾರುಕರಾ ಬಭಾಣ ಹೃದಯಾನಂದಾನುಬದ್ಧಾಂಬಿಕಾ ॥೪೩॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ
ಕಲ್ಯಂತಿಮಪ್ರಭಾವವರ್ಣನಂ ನಾಮ ದ್ವಾದಶೋಽಧ್ಯಾಯಃ

---

ಶಿವನನ್ನು ಒಂದುಬಾರಿ ನೋಡಿ ಆನಂದಪಟ್ಟಳು. ಅನಂತರ ಕೈಲಾಸಪರ್ವತದ ನಿರ್ಮಲವಾದ ಶಿಖರದಲ್ಲಿರುವ ದೊಡ್ಡ ದೊಡ್ಡ ರತ್ನಗಳಿಂದ ಖಚಿತವಾದ ಮತ್ತು ಎತ್ತರವಾದ ಸೌಧದಲ್ಲಿರುತ್ತಾ ಪಾರ್ವತಿಯು, ಚಂದನದಿಂದ ಲೇಪಿಸಲ್ಪಟ್ಟಿರುವ ಎದೆಯುಳ್ಳವನೂ, ಮೂರುಲೋಕಗಳಿಗೂ ಅಧ್ಯಕ್ಷನೂ, ಆದ ಈಶ್ವರನಿಗೆ ಮನಸ್ಸಿನಲ್ಲಿ ಆನಂದವಾಗುವಂತೆ ಕೈಮುಗಿದುಕೊಂಡು, ವೀಳ್ಯದ ಪಟ್ಟಿಯಿಂದ ಶೋಭಿಸುತ್ತಿರುವ ಕೈಯುಳ್ಳವಳಾಗಿ ಕೆಲವು ಮಾತನಾಡಿದಳು. ॥೪೨॥

ಇಂತು ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಧ್ಯಾಯದಲ್ಲಿ
ಕಲಿಯುಗದ ಕೊನೆಯಭಾಗದ ಮಹಿಮಾವರ್ಣನೆಯೆಂಬ
ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ತ್ರಯೋದಶೋಽಧ್ಯಾಯಃ

॥ ದೇವ್ಯುವಾಚ ॥

ದೇವದೇವಾರವಿಂದಾಕ್ಷಸಂಪೂಜಿತಪದದ್ವಯ ।
ವಿಶ್ವೇಶ ಪ್ರಮಥಾಧೀಶ ಮನ್ಮಥಾಂತಕ ಶಂಕರ ॥೧॥

ಕಲ್ಪಾಂತೇ ಪ್ರಳಯಂ ಶಂಭೋ ವಿಸ್ತರಾದ್ವಕ್ತುಮರ್ಹಸಿ ।
ಬ್ರಾಹ್ಮೋಽಥ ಪ್ರಳಯಂ ಶಂಭೋ ಕಥಂ ವಾ ಜಗತಃ ಶಿವ ॥೨॥

---

## ಹದಿಮೂರನೆಯ ಅಧ್ಯಾಯ

ದೇವದೇವನೂ, (ಕಮಲನೇತ್ರನಾದ ವಿಷ್ಣುವಿನಿಂದ ಪೂಜೆಮಾಡಲ್ಪಟ್ಟ ಎರಡು ಕಾಲುಳ್ಳವನೂ) ವಿಷ್ಣುವಿನ ತಾವರೆಗಣ್ಣಿನಿಂದ ಪೂಜಿಸಲ್ಪಟ್ಟ ಪಾದವುಳ್ಳವನೂ, ಜಗದೊಡೆಯನೂ, ಪ್ರಮಥ ಗಣಗಳಿಗೆ ಸ್ವಾಮಿಯೂ, ಮನ್ಮಥಶತ್ರುವೂ ಶಂಕರನೂ, ಆದ ಶಂಭುವೇ, ಕಲ್ಪದ ಕೊನೆಯಲ್ಲಿ ಆಗುವ ಪ್ರಳಯಸ್ವರೂಪವನ್ನು ವಿಸ್ತಾರವಾಗಿ ನನಗೆ ನಿರೂಪಿಸಲು ನೀನೇ ಸಮರ್ಥನಾಗಿರುವೆ. ಶಿವನೇ, ಈ ಜಗತ್ತಿಗೆ ಬ್ರಾಹ್ಮಪ್ರಳಯವುಂಟಾಗುವುದು ಹೇಗೆ? ಆ ಕಾಲದಲ್ಲಿ ನಡೆಯುವ ವಿಶೇಷ ಕಾಲಗತಿಗಳಾವುವು? ಶಂಕರ! ನಿನ್ನ ಪಾದಕಮಲಗಳಿಗೆ ನಮಸ್ಕಾರಮಾಡುವೆನು. ಪ್ರೀತಿಯಿಂದ ನನಗೆ ಈ ವಿಷಯವನ್ನು ತಿಳಿಸುವನಾಗು; ಇದನ್ನು ತಿಳಿದವರಲ್ಲಿ ನೀನೇ ಸಮರ್ಥನೆಂದು ಪಾರ್ವತಿಯು ಶಿವನನ್ನು ಪುನಃ ಪ್ರಾರ್ಥಿಸಿದಳು. ॥೧-೨॥

॥ ಕುಮಾರ ಉವಾಚ ॥

ಕಾಲಸ್ಯಾಸ್ಯ ಗತಿಃ ಶಂಭೋ ತಸ್ಮಿನ್ಕಾಲೇ ವಿಶೇಷತಃ ।
ಪ್ರಣತಾಹಂ ತ್ವತ್ಪದಾಬ್ಜೇ ಪ್ರಣಯಾದ್ವಕ್ತುಮರ್ಹಸಿ ॥೩॥

ಇತಿ ದೇವ್ಯಾ ತದಾ ಪೃಷ್ಟಃ ಶಿಪಿವಿಷ್ಟೋಽಷ್ಟಮೂರ್ತಿಮಾನ್ ।
ಕಿಂಚಿದ್ಧ್ಯಾತ್ವಾ ಮಹಾದೇವಃ ಪ್ರಹಸನ್ವಾಕ್ಯಮಬ್ರವೀತ್ ॥೪॥

॥ ಈಶ್ವರ ಉವಾಚ ॥

ಶೃಣು ದೇವಿ ಪ್ರವಕ್ಷ್ಯಾಮಿ ಮಹಾಪ್ರಳಯಕಾರಣಂ ।
ಬ್ರಹ್ಮಣಃ ಪರಮಂ ಚಾಯುಃ ಶತಾರ್ಧಮಿತಿ ಕಥ್ಯತೇ ॥೫॥

ಕಲ್ಪಸಂಖ್ಯಾದಿನಂ ಚೈಕಂ ಬ್ರಹ್ಮಣಃ ಕಥ್ಯತೇ ಶಿವೇ ।
ಚತುರ್ಯುಗಸಹಸ್ರಾಣಾಂ ಪರಿವರ್ತೋ ಹಿ ಕಲ್ಪಕಃ ॥೬॥

ಬ್ರಹ್ಮಣೋ ಹ್ಯಾಯುಷೋಽಂತೇ ಚ ಮಹಾಪ್ರಳಯ ಉಚ್ಯತೇ ।
ವಿಷ್ಣೋರೇಕಮಹಃ ಪ್ರೋಕ್ತಂ ತಸ್ಯಾಂತೇ ರೌದ್ರಕಂ ದಿನಂ ॥೭॥

---

ಆ ಪಾರ್ವತೀದೇವಿಯಿಂದ ಈರೀತಿ ಪ್ರಶ್ನೆಮಾಡಲ್ಪಟ್ಟ ಅಷ್ಟಮೂರ್ತಿಯಾದ ಮಹಾದೇವನು, ಕೊಂಚಹೊತ್ತು ಧ್ಯಾನಮಾಡಿ, ನಗುತ್ತಾ ದೇವಿಗೆ ಇಂತೆಂದನೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೩-೪॥

ದೇವಿ, ಮಹಾಪ್ರಳಯಕ್ಕೆ ಕಾರಣವನ್ನು ಹೇಳುತ್ತೇನೆ ಕೇಳು ; ಕೃತ, ತ್ರೇತ, ದ್ವಾಪರ ಮತ್ತು ಕಲಿಯುಗಗಳೆಂಬ ಈ ನಾಲ್ಕು ಯುಗಗಳೂ ಸಾವಿರಬಾರಿ ಬಂದರೆ ಆಗ ಬ್ರಹ್ಮನಿಗೆ ಒಂದು ದಿನ. ಅದೇ ಕಲ್ಪವೆನಿಸುವುದು. ಇದೇ ಪ್ರಮಾಣದಿಂದ ಬ್ರಹ್ಮನ ಆಯುಸ್ಸು ನಿರ್ಧರಿಸಲ್ಪಡುವುದು. ಈ ಗಣನೆಯಂತೆ ಕ್ರಮವಾಗಿ ಮುನ್ನೂರರವತ್ತು (೩೬೦) ದಿನಗಳಿಗೆ ಒಂದು ವರ್ಷವೆಂದೂ ಇಂತಹ ಐವತ್ತು ವರ್ಷಗಳು ಬ್ರಹ್ಮದೇವನ ಪರಮಾಯುಸ್ಸೆಂದೂ ಹೇಳಲ್ಪಟ್ಟಿದೆ. ಅಂದರೆ ನಾಲ್ಕು ಯುಗಗಳೂ ನೂರೆಂಬತ್ತುಲಕ್ಷ ಸಾರಿ ಪರಿವರ್ತನೆಯಾಗುವುದೇ ಒಬ್ಬ ಬ್ರಹ್ಮನ ಆಯುಃಪ್ರಮಾಣವೆಂದು ತಿಳಿಯಬೇಕು. ॥೫-೬॥

ಈರೀತಿ ಬ್ರಹ್ಮನ ಆಯುಸ್ಸಿನ ಕೊನೆಯಭಾಗಕ್ಕೆ ಮಹಾಪ್ರಳಯವೆಂದು ಹೆಸರು ಬರುವುದು. ಇಂತಹ ಒಂದು ಪ್ರಳಯಕಾಲದವರೆಗಿನ ಕಾಲ ಅಥವಾ ಬ್ರಹ್ಮನ

**ತಸ್ಯಾಂತೇ ಈಶ್ವರಸ್ಯಾಹುಸ್ತಸ್ಯಾಂತೇ ಚ ಸದಾಶಿವಃ ।**
**ಸರ್ವೇ ಸೃಷ್ಟಿಸ್ಥಿತಿಪರಾಸ್ತಿರೋಧಾನಾಂ ಅನುಗ್ರಹಾಃ ॥೮॥**

**ಮನ್ಮೂರ್ತಯ ಇಮೇ ದೇವಿ ಮಯ್ಯೇವ ನಿಲಯಂ ಗತಾಃ ।**
**ತತ್ಪುರುಷಾಘೋರಸದ್ಯಾದಿವಾಮದೇವೇಶ ವಕ್ತ್ರಜಾಃ ॥೯॥**

**ಮೂರ್ತಯೋಽಮೀ ಬ್ರಹ್ಮವಿಷ್ಣುರುದ್ರೇಶ್ವರ ಸದಾಶಿವಾಃ ।**
**ಭವಿಷ್ಯಂತಿ ಮಹಾದೇವಿ ಮನ್ಮೂರ್ತಯ ಇಮೇ ಸದಾ ॥೧೦॥**

**ಕಾಲಾತೀತೋಽಹಮೀಶಾನಿ ಅಮೂರ್ತೋ ಮೂರ್ತಿಮಾಂಸ್ತ್ವಯಾ ।**
**ತ್ರಿನೇತ್ರೋ ನೀಲಕಂಠಶ್ಚ ತ್ವಯಾ ಕೈಲಾಸಮೌಲಿಗಃ ॥೧೧॥**

**ವಿಹರಾಮಿ ಗಣೈಃ ಸಾರ್ಧಮಸಂಗೋ ಲಿಂಗಸಂಸ್ಥಿತಃ ।**
**ಅಸಂಗಃ ಪುರುಷಶ್ಚಾಹಂ ಸರ್ವಭೂತಗುಹಾಶ್ರಯಃ ॥೧೨॥**

---

ಆಯುಃಪ್ರಮಾಣಕಾಲವು ವಿಷ್ಣುವಿಗೆ ಒಂದು ಅಹಸ್ಸೆಂದೂ, ಹಿಂದಿನಂತೆಯೇ ಇಂತಹ ಐವತ್ತುವರ್ಷಗಳು ವಿಷ್ಣುವಿನ ಪರಮಾಯುಸ್ಸು, ಹಾಗೆಯೇ, ಈ ವಿಷ್ಣುವಿನ ಪರಮಾಯುಃಪ್ರಮಾಣಾನುಸಾರವಾಗಿ ರುದ್ರನ ಒಂದು ಹಗಲು, ಅದರಂತೆಯೇ ಅವನಿಗೂ ಐವತ್ತುವರ್ಷ ಆಯುಸ್ಸು, ಮುಂದೆ ಈಶ್ವರ, ಮತ್ತು ಸದಾಶಿವರಿಗೆ ಕ್ರಮವಾಗಿ ಆಯುಃಪ್ರಮಾಣವು ಇದೇ ರೀತಿ ಹೆಚ್ಚುತ್ತಾಹೋಗುವುದು. ಅದರಕೊನೆಯಲ್ಲಿ, ಸೃಷ್ಟಿಸ್ಥಿತಿಸಂಹಾರಕಾರ್ಯನಿರತರಾಗಿದ್ದು, ಮರೆಯಾಗುತ್ತಲೂ, ಅನುಗ್ರಹ ಮಾಡುತ್ತಲೂ ಇದ್ದ ಈ ದೇವತೆಗಳೂ ನನ್ನ ಆಕೃತಿಗಳೇ ಆಗಿ ಕೊನೆಗೆ ನನ್ನಲ್ಲಿಯೇ ಐಕ್ಯಹೊಂದುತ್ತಾರೆ. ಈಶಾನ, ತತ್ಪುರುಷ, ಅಘೋರ, ಸದ್ಯೋಜಾತ, ವಾಮದೇವ, ಮುಂತಾದ ಪಂಚಮುಖಜನ್ಯರಾದ ಇವರೆಲ್ಲರೂ, ನನ್ನ ಮೂರ್ತಿಗಳೇ ಆಗಿರುವರು. ಇವರು ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಮತ್ತು ಸದಾಶಿವರೆಂಬ ರೂಪವನ್ನು ತಾಳುವವರಾಗುತ್ತಾರೆ. ಮಹಾದೇವಿ! ಯಾವಾಗಲೂ ಇವರು ನನ್ನ ಪಂಚ ಮೂರ್ತಿಗಳೇ ಆಗಿರುತ್ತಾರೆಂದು ತಿಳಿ; ||೭-೮-೯-೧೦||

ಎಲೌ ಈಶ್ವರಿ! ನಾನು ಈಕಾಲಸಿಯಮಕ್ಕೊಳಗಾಗದೇ ಅದನ್ನು ಅತಿಕ್ರಮಿಸಿರುವೆನು. ಮೂರ್ತಿರಹಿತನಾದ ನಾನು ನಿನ್ನಿಂದ ಮೂರ್ತಿವಂತನೆಂದು ಹೇಳಲ್ಪಡುವೆನು. ಉಪಾಧಿಗತನಾಗಿ ಮುಕ್ಕಣ್ಣನೂ, ವಿಷಭಕ್ಷಣೆಯಿಂದ ಕಪ್ಪಾದ ಕೊರಳುಳ್ಳವನೂ ಆಗಿರುವ ನಾನು ನಿನ್ನೊಡನೆ ಕೈಲಾಸಪರ್ವತಶಿಖರದಲ್ಲಿ ಗಣಗಳೊಡನೆ

ಸರ್ವವೇದಾಂತಸಾರಾರ್ಥಪ್ರತಿಪಾದ್ಯೋಽಹಮೀಶ್ವರಿ ।
ಭೂಮಾನಂದಘನಶ್ಚಾಹಂ ಋತಂ ಸತ್ಯಂ ಮಹೇಶ್ವರಃ ॥೧೩॥

ಬ್ರಹ್ಮಕೇವಲಮೇವಾಹಂ ಸತ್ಯಚಿದ್ಘನ ಏವ ಹಿ ।
ನಿತ್ಯಾನಂದೋಽಹಮಮಲಃ ಸರ್ವದಾ ದ್ವೈತ ಏವ ಹಿ ॥೧೪॥

ಮತ್ತೋ ನೇಹಾಸ್ತಿ ಯತ್ಕಿಂಚಿದೀಶಾವಾಸ್ಯಮಿದಂ ಮಯಾ ।
ರಸೋಽಹಂ ಪರಮಾನಂದಃ ಯೋಗಿಧ್ಯೇಯೋಽಹಮೀಶ್ವರಿ ॥೧೫॥

ಮಾಂ ನಜಾನಂತಿ ಸರ್ವೇಽಪಿ ಸರ್ವಭೂತೇಷು ಸಂಸ್ಥಿತಂ ।
ಯೋಗಸಾಂಖ್ಯಾ ವಿಮುಹ್ಯಂತಿ ಅನ್ಯೇಷಾಂ ತತ್ರ ಕಾ ಕಥಾ ॥೧೬॥

---

ವಿಹರಿಸುವೆನು. ಸಹವಾಸರಹಿತನಾದರೂ, ಲಿಂಗದಲ್ಲಿ ಸಂಬಂಧಹೊಂದಿರುವೆನು. ಸಕಲಪ್ರಾಣಿಗಳಿಗೂ ಗುಹೆಯಂತೆ ಆಶ್ರಯನಾದ ಸಂಗವಿಲ್ಲದ ಪುರುಷನೆಂದೂ ನಾನು ಹೇಳಿಸಿಕೊಳ್ಳುವೆನು. ॥೧೧-೧೨॥

ಈಶ್ವರಿ, ಸಕಲ ವೇದಾಂತಗಳ ಸಾರಭೂತವಾದ ಅರ್ಥಗಳಿಂದ ಪ್ರತಿಪಾದ್ಯನೂ ನಾನೇ ಆಗಿರುತ್ತೇನೆ. ಅತಿಶಯವಾದ ಆನಂದಸ್ವರೂಪನೂ, ಋತ, ಸತ್ಯಗಳ ರೂಪನೂ, ಮಹದೈಶ್ವರ್ಯಸಂಪನ್ನನೂ, ಕೇವಲ ಪರಬ್ರಹ್ಮವಸ್ತುವೂ ನಾನೇ ; ಸಚ್ಚಿದಾನಂದಸ್ವರೂಪನೆಂದೂ, ನಿತ್ಯಾನಂದನೆಂದೂ, ನಿರ್ಮಲನೆಂದೂ ನನ್ನನ್ನೇ ಕರೆಯುವರು. ದೇವಿ, ಯಾವಾಗಲೂ ನಾನು ಅದ್ವಿತೀಯನೇ ಆಗಿರುವೆನು. (ಋತ, ಸತ್ಯಗಳು ಕಾಯಿಕ ಮತ್ತು ಮಾನಸಿಕ ಸತ್ಯಗಳು.) ॥೧೩-೧೪॥

ಈಶ್ವರಿ, ನನ್ನಿಂದ ಬಿಡಲ್ಪಟ್ಟದು ಯಾವುದೂ ಇಲ್ಲ. ಎಲ್ಲ ಈ ಪ್ರಪಂಚವೂ ಈಶ್ವರನಾದ ನನಗೆ ಆಶ್ರಯವಾಗಿರುವುದು. (ನಾನು ಎಲ್ಲಾ ಕಡೆಯಲ್ಲಿಯೂ ಪ್ರತಿಫಲಿಸುತ್ತಿರುವೆನು.) ಯೋಗಿಗಳಿಂದ ಧ್ಯಾನಮಾಡಲು ಯೋಗ್ಯನಾಗಿರುವ ಪರಮಾನಂದ ಸ್ವರೂಪವಾದ ರಸವೇ ನಾನಾಗಿರುವೆನೆಂದು ತಿಳಿ. ಸಕಲ ಚರಾಚರಭೂತಗಳಲ್ಲಿಯೂ ನೆಲಸಿರುವ ನನ್ನನ್ನು ಎಲ್ಲರೂ ತಿಳಿಯಲಾರರು. ಯೋಗಿಗಳೂ, ಸಾಂಖ್ಯರೂ ನನ್ನನ್ನರಿಯಲಾರದೇ ಮೋಹಗೊಳ್ಳುತ್ತಿರುವರೆಂದ ಮೇಲೆ ಉಳಿದವರ ವಿಷಯದಲ್ಲಿ ಹೇಳತಕ್ಕದ್ದೇನಿರುವುದು. ॥೧೫-೧೬॥

ನನ್ನನ್ನು ಹುಡುಕಬೇಕೆಂದು ಮಾತುಗಳು ಮನಸ್ಸಿನೊಡನೆ ಹೊರಟು, ಸಾಧ್ಯವಾಗಲಾರದೇ ಹಿಂತಿರುಗುತ್ತಿರುವುವು. (ಅಂದರೆ ಮನಸ್ಸಿನಿಂದಲೂ ತಿಳಿಯ

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।
ಸರ್ವಧ್ಯಾನಾರ್ಥಮೇವೇಹ ನೀರೂಪೋ ರೂಪಭಾಗಹಂ ॥೧೭॥

ಮದ್ರೂಪಚಿಂತನಾನ್ಮರ್ತ್ಯೋ ಮುಕ್ತಿಭಾಗ್ಭವತೇ ಜನಃ ।
ಮಲ್ಲಿಂಗಪೂಜನಂ ದೇವಿ ನಿರ್ಗುಣಂ ಪರಿಕೀರ್ತಿತಂ ॥೧೮॥

ಸರ್ವೇಷಾಮೇವ ದೇವಾನಾಂ ಮೂರ್ತೌ ಪೂಜಾ ಪ್ರವರ್ತತೇ ।
ಸಕಲಾ ಮೇ ಪರಾ ಮೂರ್ತಿರ್ನೀಲಕಂಠಾ ತ್ರಿಯಂಬಕಾ ॥೧೯॥

ಉಮಾಸಹಾಯಂ ವಿಶ್ವೇಶಲಿಂಗಂ ಮೇ ನಿರ್ಗುಣಂ ಶಿವೇ ।
ಮದ್ಧ್ಯಾನಸಾಧನಂ ಪ್ರೋಕ್ತಂ ಭಸ್ಮರುದ್ರಾಕ್ಷಧಾರಣಂ ॥೨೦॥

ಪಂಚಾಕ್ಷರಜಪಶ್ಚೈವ ರುದ್ರಲಿಂಗಾರ್ಚನಂ ತಥಾ ।
ಮತ್ಕ್ಷೇತ್ರವಾಸೋ ನಾಮ್ನಾಂ ಮೇ ಅನುವೃತ್ತಿಃ ಸದೈವ ಹಿ॥೨೧ ॥

ಅವಿಮುಕ್ತೇ ಚ ಪರಮೋ ನಿವಾಸೋ ಭಕ್ತಪೂಜನಂ ।
ಪ್ರದೋಷೇ ಸೋಮವಾರೇ ಚ ನಿಶಿ ಪೂಜಾಪ್ರವರ್ತನಂ ॥೨೨॥

---

ಲಸಾಧ್ಯನಾಗಿರುವೆನೆಂದು ಭಾವವು.) ಲೋಕದಲ್ಲಿ ಎಲ್ಲರೂ ಧ್ಯಾನಮಾಡಲು ಉದ್ಯುಕ್ತರಾಗಲೆಂಬ ಭಾವನೆಯಿಂದಲೇ ರೂಪವಿಲ್ಲದವನಾದರೂ ಭಕ್ತರ ಸುಖಕ್ಕೋಸ್ಕರ ನಾನು ರೂಪಾಂತರವನ್ನು ಹೊಂದುವೆನು. ನನ್ನ ರೂಪವನ್ನು ಧ್ಯಾನಮಾಡುವುದರಿಂದ ಮಾನವನು ಮುಕ್ತಿಯನ್ನೈದುವನು. ದೇವಿ, ನನ್ನ ಲಿಂಗಪೂಜೆಯು ನಿಜವಾಗಿಯೂ ಗುಣರಹಿತವಾದದ್ದೆಂದು (ನಿರ್ಗುಣ) ಹೇಳಲ್ಪಟ್ಟಿದೆ. ॥೧೭-೧೮॥

ಎಲ್ಲಾ ದೇವತೆಗಳಿಗೂ ಮೂರ್ತಿಗಳಲ್ಲಿಯೇ ಪೂಜೆಯು ನಡೆಯುತ್ತದೆ. ನನ್ನ ಸಕಲ ಮೂರ್ತಿಯೂ ನೀಲಕಂಠರೂಪಿಯಾದ ತ್ರಿಯಂಬಕವೇ (ಮೂರು ಕಣ್ಣುಳ್ಳ ವಿಗ್ರಹವೇ) ಆಗಿರುವುದು. ಪಾರ್ವತಿ, ಉಮಾಸಮೇತವಾದ ವಿಶ್ವೇಶಲಿಂಗವು ನಿರ್ಗುಣವಾಗಿರುವುದೆಂದು ತಿಳಿ; ಭಸ್ಮ ಮತ್ತು ರುದ್ರಾಕ್ಷಗಳನ್ನು ಧರಿಸುವುದು, ಶಿವಪಂಚಾಕ್ಷರಜಪ, ರುದ್ರಲಿಂಗಪೂಜೆ, ನನ್ನ ಕ್ಷೇತ್ರಗಳಲ್ಲಿ ವಾಸಮಾಡುವುದು ಯಾವಾಗಲೂ ನನ್ನ ನಾಮ ಪಾರಾಯಣಮಾಡುವುದು, ಪರಮಶ್ರೇಷ್ಠವಾದ ಅವಿಮುಕ್ತಕ್ಷೇತ್ರವಾಸ, ಭಕ್ತರನ್ನು ಪೂಜಿಸುವುದು, ಪ್ರದೋಷಕಾಲಗಳು ಮತ್ತು ಸೋಮವಾರಗಳಲ್ಲಿ ವಿಶೇಷವಾಗಿ ನನ್ನ ಪೂಜೆಯಲ್ಲಿ ನಿರತನಾಗುವುದು, ಇವೆಲ್ಲಾ

ಇತ್ಯೇತತ್ಕಥಿತಂ ದೇವಿ ಪ್ರಳಯಂ ಶೃಣ್ವತಃ ಪರಂ ॥೨೩॥

ಕಲ್ಪಾಂತೇ ಕುಲಿಶಾಯುಧೇನ ಹರಿಣಾ ವಿದ್ರಾವಿತಾರ್ತಿಂ ಗತಾ
ಸ್ತುಚ್ಛಮ್ಲೇಚ್ಛಗಣಾ ನಿರುಚ್ಛ್ವಸತುಷಚ್ಛನ್ನಾಗ್ನಿಸಂಭರ್ದಿನಃ ।
ಛಾಗಪ್ರಾಯಮುಖಾಶ್ಚ ದೇಹನಿಕರೈಶ್ಛಿನ್ನಾ ಪ್ರಜಾತಾಸ್ತದಾ
ಛಿಂದೀತ್ಯಾರ್ತರವೇಣ ದೇವಿ ಕರವಾಲೇನಾಶು ಕೃಂತೇ ತದಾ ॥೨೪॥

ಉತ್ಫುಲ್ಲಾರುಣಪಂಕಜೋಪಮಮಹಾನೀಲೀತಮಾಲಪ್ರಭಾ
ಕಾಪೋತಾರುಣರಕ್ತಕಾಭ್ರಮನಿಚ್ಛೈರ್ವ್ಯಾಪ್ತಂ ಚ ಖಂ ತತ್ರ ಹಿ ।
ತಸ್ಮಿನ್ನಸ್ತಮಿತೇ ಪ್ರಪಂಚಮಿಹಿಕಾ ಜ್ಯೋತಿರ್ಗಣೇಷೂದ್ಯತೋ
ಕಾಂತ್ಯಾ ಸೋಮಕರೋತ್ತಮಾಂಗಯುತಯಾ ವಿಕಶ್ಚರಾಮ್ಯಂಬಿಕೇ॥೨೫॥

ವಾತಾಃ ಶರ್ಕರಕರ್ಕಶಾ ನದನದೀನಾಥೋರ್ಮಿಸಂವಾಹಿನೋ
ವಾಂತ್ಯೇವಾಶುಭಶಂಸಿನಃ ಪ್ರತಿಕಲೇರಂತೇ ಚ ಕಲ್ಪಾಂತಿನೋ ।

---

ನನ್ನ ಜ್ಞಾನಪ್ರಾಪ್ತಿಗೆ ಸಾಧನಗಳಾಗಿರುವುವು. ದೇವಿ, ಈ ರೀತಿ ನೀನು ಕೇಳಿದಂತೆ ಶ್ರೇಷ್ಠವಾದ ಪ್ರಳಯಸಂಗತಿಯನ್ನು ನಿನಗೆ ತಿಳಿಸಿರುವೆನು. ||೧೯-೨೦-೨೧-೨೨-೨೩||

ದೇವಿ, ಕಲ್ಪದ ಕೊನೆಯಲ್ಲಿ ವಜ್ರಾಯುಧಪಾಣಿಯಾದ ವಿಷ್ಣುವು ನೀಚರಾದ ಈ ಮ್ಲೇಚ್ಛರ ಗುಂಪನ್ನು ಓಡಿಸಿಕೊಂಡು ಹೋಗಿ, ಪೀಡಿಸುತ್ತಾ ಉಸಿರಾಡಲೂ ಅವಕಾಶಕೊಡದೇ ಹೊಟ್ಟಿನ ಮಧ್ಯದಲ್ಲಿರುವ ಬೆಂಕಿಯಂತೆ ಒಳಗೆ ಭಸ್ಮಮಾಡು ತ್ತಾನೆ. ಆಡಿನ ಹಾಗೆ ಮುಖವುಳ್ಳ ಈ ಮ್ಲೇಚ್ಛರು ಕಲ್ಕಿವೇಷದ ವಿಷ್ಣುವಿನಿಂದ ಕತ್ತರಿಸಲ್ಪಟ್ಟ ದೇಹವುಳ್ಳವರಾಗುತ್ತಾರೆ. ಆಗ ಅವರು ಕೊಲ್ಲಿರಿ, ಕೊಲ್ಲಿರಿ ಎಂದು ದೀನಧ್ವನಿ ಮಾಡುತ್ತಾ ಕತ್ತಿಗಳಿಂದ ಪರಸ್ಪರವಾಗಿ ಒಬ್ಬರನ್ನೊಬ್ಬರು ಕತ್ತರಿಸು ತ್ತಾರೆ. ||೨೪||

ಅರಳಿದ ಕೆಂದಾವರೆಗೆ ಸಮಾನವಾದ ಕಾಂತಿಯೂ, ತುಂಬಾ ಕಪ್ಪಾದ ಹೊಂಗೆಯಮರದ ಕಾಂತಿಯೂ, ಕಪೋತಪಕ್ಷಿಗಳಂತೆ ಕೆಂಪು ಬಣ್ಣವೂ ಆಗಿ ಅಂತ ರಿಕ್ಷದಲ್ಲಿರುವ ಮೋಡಗಳು ಆಗ ಕಾಣುವುವು. ಅವುಗಳೆಲ್ಲವೂ ಮರೆಯಾದ ಮೇಲೆ ಪ್ರಪಂಚದ ಮಂಜಿನ ರಾಶಿಯು ನಕ್ಷತ್ರಗಳ ಸಮೂಹದಲ್ಲಿ ಉದಯಿಸುತ್ತಾ ಗೋಚರವಾಗುವುದು. ದೇವಿ, ಆಗ ನಾನೊಬ್ಬನೇ ಚಂದ್ರಕಲಾಧಾರಿಯಾದ ಶಿರಸ್ಸುಳ್ಳವನಾಗಿ ಸಂಚಾರಮಾಡುತ್ತೇನೆ. ||೨೫||

ಕಲ್ಪದ ಕೊನೆಯಲ್ಲಿಯೂ ಪ್ರತಿ ಕಲಿಯುಗದ ಕೊನೆಯಲ್ಲಿಯೂ ವಾಯುವು

ತತ್ಪಶ್ಚಾದ್ವರುಣೇನ ಚೋದಿತಮಹಾಮೇಘವ್ರಜಾನಾಂ ಶತಾಃ
ವರ್ಷಂತ್ಯುದ್ಯತವಿದ್ಯುತೋ ಗಿರಿಸಮಾಃ ಸೂರ್ಯಾಸ್ತಪಂತ್ಯಂಭಸಿ ॥೨೬॥

ದಿಗ್ದಾಹಾಃ ಪ್ರಭವಂತಿ ಸಂತತಮುಮೇ ಕಲ್ಪಾಂತಿಮೇ ಭೂಗಜಾಃ
ಭೂಮಿಂ ಮೌಲಿಗತಾಂ ಚ ಪಾಪಜನಮಹಾಭಾರೇಣ ಕಂಪಾಯಿತಾಂ ।
ಕುರ್ವಂತ್ಯೇವ ಮಹಾಬ್ಧಯೋ ಗಿರಿಗಣಂ ವಾತ್ಯೈರಧೂತೋರ್ಮಿಭಿ
ರ್ಮೃದ್ನಂತ್ಯೇವ ತದಾಂಬಿಕೇ ಮಮ ಮಹಾಕೈಲಾಸವಾಸಂ ವಿನಾ ॥೨೭॥

ತನ್ಮೇಘಪ್ರಭವಾತುಲೋದ್ಯತಮಹಾವಿದ್ಯುತ್ಪ್ರಭಾತಾರ್ಭಟೀ
ಘೋರಾರಾವನಿದಗ್ಧಸರ್ವಜಗತೀಃನೃತ್ಯಾಮಿ ನೋದಾಧಿಕಃ ।
ಶುಂಡಾದಂಡೋರುಕಾಂಡೋಪಮಗಿರಿವರ ಶಿಖರಾಸ್ಫಾಲನೋಘೋತ್ಥ ಧಾರಾ
ಪಾರಾವಾರಾನುಘೋರಾರುಣತರುಣಜಟಾಜಾಲಮೌಲೌ ವಹಾಮಿ ॥೨೮॥

---

ನದ ಮತ್ತು ನದಿಗಳ ಪ್ರವಾಹವನ್ನು ಹೊತ್ತು ಬೀಸುವುವು. ಆಗ ಬೆಣಚು ಕಲ್ಲುಗಳನ್ನು ಹೊತ್ತು ಬೀಸುತ್ತಾ ಅಮಂಗಳವನ್ನು ಸೂಚನೆಮಾಡುವುವು. ಆಮೇಲೆ ವರುಣನಿಂದ ಪ್ರೇರಿತವಾದ ದೊಡ್ಡ ನೂರಾರು ಮೇಘಗಳು ಒಟ್ಟು ಸೇರಿ, ಬೆಟ್ಟಗಳಂತೆ, ಮಿಂಚುಗಳನ್ನು ತೋರ್ಪಡಿಸುತ್ತಾ ಭಯಂಕರವಾಗಿ ಮಳೆಗರೆಯುವುವು. ಸೂರ್ಯನು ನೀರನ್ನು ಚೆನ್ನಾಗಿ ಕಾಯಿಸುವನು. ||೨೬||

ಉಮೇ, ಅನವರತವೂ ಕಲ್ಪಾಂತದಲ್ಲಿ ದಿಕ್ಕುಗಳಿಗೆಲ್ಲಾ ದಾಹವುಂಟಾಗುತ್ತದೆ. (ಉರಿಯಲು ಪ್ರಾರಂಭಿಸುತ್ತವೆ) ಭೂಮಿಯನ್ನು ಹೊತ್ತಿದ್ದ ಅಷ್ಟದಿಗ್ಗಜಗಳು ತಮ್ಮ ತಲೆಯಮೇಲಿದ್ದ ಭೂಮಿಯು ಪಾಪದ ಮಹಾಭಾರದಿಂದ ಯುಕ್ತವಾಗಿರುವುದನ್ನು ನೋಡಿ, ಹೊರಲಾರದೆ ತಲೆಯಲ್ಲಾಡಿಸಿ, ಭೂಮಿಯೇ ನಡುಗುವಂತೆ ಮಾಡುವುವು. ಎಲೌ ಅಂಬಿಕೆ, ಮಹಾಸಮುದ್ರಗಳು ಬಿರುಗಾಳಿಯಿಂದ ಹೊಡೆಯಲ್ಪಟ್ಟು ತಮ್ಮ ಉನ್ನತವಾದ ಅಲೆಗಳಿಂದ ನನ್ನ ಕೈಲಾಸಪರ್ವತವನ್ನು ಬಿಟ್ಟು ಉಳಿದ ಬೆಟ್ಟಗಳ ಸಮೂಹವನ್ನೆಲ್ಲಾ ಮಣ್ಣಿನಂತೆ ಮಾಡಿಬಿಡುವುವು. (ಮರ್ದನಮಾಡಿಬಿಡುವುವು) ||೨೭||

ಆ ಮೇಘಗಳಿಂದುಂಟಾಗುವ ಅಪಾರವಾದ ದೊಡ್ಡ ದೊಡ್ಡ ಮಿಂಚಿನ ಕಾಂತಿಯಿಂದಲೂ, ಆರ್ಭಟಿಸುವ ಭಯಂಕರವಾದ ಗುಡುಗು, ಸಿಡಿಲುಗಳ ಧ್ವನಿಯಿಂದಲೂ ಸಕಲ ಜಗತ್ತೂ ಸುಟ್ಟುಹೋಗುತ್ತದೆ. ದೇವಿ, ಆ ಕಾಲದಲ್ಲಿ ತುಂಬಾ

ತದ್ವರ್ಷೋತ್ಕರ್ಷತರ್ಷಶ್ರುತಿವರವಚಸಾ ಮೇಘ್ಯವರ್ಷಾಸ್ಮಿ ವಿದ್ಯು
ದ್ಭವ ಇತಿ ಗದಿತೋಂಬೇ ವೇದಧಾಮೋರುಗೀತಃ ।
ತತ್ರಾಬ್ಧಿರ್ಜಾನುದಘ್ನೋ ಭವತಿ ಸುಮುಹಲೋಕಕಲ್ಲೋಲಜಾಲಃ ॥೨೯॥

ಅಮೋಘಮೇಘೋತ್ಥಿತವಾತಜಾತ
ಭೂಕಂಪಪಂಕಿಲಸಮುದ್ರಧಾರಾಧರೋರ್ವೀ ।
ನಿರ್ದಗ್ಧದಗ್ಧವಸುಧಾರಸಶೋಷಮೂಷಾ
ಭೂಷಾವಿಶೇಷಕಲಿಶೋಷಣಕಾಲಮೂಲೇ ॥೩೦॥

ತರಣಿ ಕಿರಣಜಾಲದಗ್ಧಶೈಲಾರುಣ
ಭಸ್ಮಾದ್ರಿಚರ್ಷೋರ್ಮಿನಾಂಸ್ತದಾ ।

---

ಸಂತೋಷದಿಂದ ನರ್ತನಮಾಡುತ್ತಾ ಆನೆಯ ಸೊಂಡಲಿನಂತೆ, ದೊಡ್ಡ ದೊಡ್ಡ ಮರದ ದಿಮ್ಮಿಗಳಿಗೆ ಸಮಾನವಾಗಿ ಬೆಟ್ಟಗಳ ಶಿಖರಗಳ ಮೇಲೆ ಹೊಡೆಯುತ್ತಿರುವ ಮಳೆಯ ಧಾರೆಗಳು ಅಪರಿಮಿತವಾಗಿ ಭಯಂಕರವೋ ಎನ್ನುವಂತೆ ಬೀಳುತ್ತಿರಲು, ಅವುಗಳನ್ನು ಕೆಂಬಣ್ಣವೂ ತರುಣವೂ ಆಗಿರುವ ನನ್ನ ಜಟಾಸಮೂಹದಲ್ಲಿ ಧರಿಸುತ್ತೇನೆ. ॥೨೮॥

ಎಲೌ ಅಂಬಿಕೇ, ಆ ಮಳೆಯ ಉತ್ಕರ್ಷವನ್ನು ಸಹಿಸುವುದರಿಂದಲೇ ನಾನು ವೇದವಚನಗಳಿಂದ 'ಮೇಘ್ಯವರ್ಷ' ಎಂಬುದಾಗಿ ಹೇಳಲ್ಪಡುವೆನು. 'ವಿದ್ಯುದ್ಭವ' ಎಂಬುದಾಗಿಯೂ, ವೇದಗಳಿಗೆ ಆಶ್ರಯನಾದ ನನ್ನನ್ನು ಈ ಕಾರಣದಿಂದಲೇ ಗಾನ ಮಾಡುವರು. ಆ ಪ್ರಳಯಕಾಲದಲ್ಲಿ ಜಗತ್ತನ್ನೇ ಉರುಳಿಸುತ್ತಿರುವ ಅಲೆಗಳ ಸಮೂಹವುಳ್ಳ ಸಮುದ್ರವು ನನಗೆ ಕೇವಲ ಮೊಳಕಾಲುದ್ದ ನೀರುಳ್ಳದ್ದಾಗುವುದು. ॥೨೯॥

ಎಲ್ಲಾ ಕಡೆಯಲ್ಲಿಯೂ ಕಾಣುವಂತೆ ಮೇಲೆ ಮೇಲೆ ಹುಟ್ಟುತ್ತಿರುವ ಮೇಘಗಳಿಂದಲೂ ಮತ್ತು ವಾಯುಸಮೂಹಗಳಿಂದಲೂ ಹೊಡೆಯಲ್ಪಟ್ಟು ಅನೇಕ ಭೂಕಂಪಗಳುಂಟಾಗುವುವು. ಅದರಿಂದ ಕೆಸರಾಗಿರುವ ಸಮುದ್ರದ ಧಾರೆಗಳನ್ನು ಈ ಭೂಮಿಯು ಧರಿಸುವುದು. ಭೂಮಿಯಲ್ಲಿನ ರಸಪದಾರ್ಥಗಳೆಲ್ಲವೂ ಒಣಗಿ ಬೆಂಡಾಗಿ ಹೋಗುವುದು. ಈ ಕಲಿಯುಗದ ಕೊನೆಯಲ್ಲಿ ಒಣಗಿಹೋದ ಭೂಮಂಡಲವೇ ಎಲ್ಲೆಲ್ಲಿಯೂ ಕಾಲಪುರುಷನ ಆಭರಣವಿಶೇಷವಾದಂತಾಗುವುದು. ॥೩೦॥

ದೇವಿ, ಚಂಡಕಿರಣನಾದ ಸೂರ್ಯನ ಕಿರಣಸಮೂಹಗಳಿಂದ ಸುಟ್ಟ ಬೆಟ್ಟಗಳು ಕೆಂಪೇರಿ ಚೂರುಚೂರಾಗಿ ಪುಡಿಪುಡಿಯಾಗಿ ಭೂಮಿಯಮೇಲೆ

ನ ಪುರಂ ನ ನರಾ ಮೃಗಾಂಡಜಾ
ಕಲಿಕಾಲಾಂತಿಮಕಾಲತೋ ಭವಾನಿ ॥೩೧॥

ವೇಲೋದ್ವೃತ್ತಾ ಸುಲೋಮಪ್ರತಿವಹವಿಹಿತಾ ಸಂವಹಾಘೋರವಾತಾ
ಜಾತಾ ವಿಸ್ತೀರ್ಣಪೃಥ್ವೀಂ ನಿಹತಗಿರಿಚಯಾಂ ದೋಧುವಂತೇ ಬಲೇನ ।
ತೇನೈವೋತ್ಥಿತಶಬ್ದಜಾಲಜಮಹಾಕಲ್ಲೋಲಲೋಲಾಬ್ಧಯೋ
ಆಸತ್ಯಾವಧಿವೀಚಯೋಽಮರತಲಾಂಸ್ತೇ ನಾಶಯಂತೋ ದ್ರುತಂ ॥೩೨॥

ತನ್ಮಧ್ಯಸಂಸ್ಥಬಡಬಾನಲಬಾಡವೋತ್ಥ
ಶಾಖಾವಿಧೂತವಿಧೂಮತತಿಪ್ರದಗ್ಧಾಃ ।
ತೇ ಸಾಗರಾರುಣಮಹಾದ್ರಿಚಯೋರುಭಸ್ಮ
ಪಂಕಾನ್ವಿತಾ ಭುವಿ ಭವಂತಿ ಸುರಾಸುರೈಶ್ಚ ॥೩೩॥

---

ಚೆಲ್ಲಾಡುವುವು. ಆಗ ಯಾವ ಪಟ್ಟಣವೂ, ಮನುಜರೂ, ಮೃಗ ಪಕ್ಷಿಗಳೂ ಸಹ ಆ ಕಲಿಯುಗದ ಪ್ರಳಯಕಾಲದಲ್ಲಿ ಇರುವುದಿಲ್ಲ. ॥೩೧॥

ಆ ಕಾಲದಲ್ಲಿ ಸಮುದ್ರಗಳೂ ನದೀನದಗಳೂ ಸಹ ಎಲ್ಲೆ ಮೀರಿ ವಿಪರೀತವಾಗಿ ಹರಿಯ ತೊಡಗುವುವು. ಭಯಂಕರಗಳಾದ ಬಿರುಗಾಳಿಗಳೇಳುವುವು. ವಿಶಾಲವಾದ ಭೂಮಿಯು ಬಿರುಗಾಳಿಯಿಂದಲೂ, ಸಮುದ್ರದ ಅಲೆಗಳ ಹೊಡೆತ ಮುಂತಾದುವುಗಳಿಂದಲೂ ತನ್ನ ಮೇಲೆ ಬೆಟ್ಟಗುಡ್ಡಗಳ ಸಮೂಹವೇ ಇಲ್ಲದಂತೆ ಬಲಾತ್ಕಾರವಾಗಿ ನಡುಗಲು ಆರಂಭಿಸುತ್ತದೆ. ಆ ಶಬ್ದಜನ್ಯಮಹಾಧ್ವನಿಭರಿತ ಅಲೆಗಳಿಂದ ತುಳುಕಾಡುತ್ತಿರುವ ಸಮುದ್ರಗಳು, ಸತ್ಯಲೋಕದ ವರೆಗೂ ವ್ಯಾಪಿಸಿದ ಅಲೆಗಳುಳ್ಳವಾಗಿ ದೇವಭೂಮಿಗಳನ್ನೂ ನಿಶ್ಚಯವಾಗಿ ನಾಶಮಾಡುವುವು. ॥೩೨॥

ಆ ಸಮುದ್ರಗಳ ಮಧ್ಯದಲ್ಲಿರುವ ಬಡಬಾಗ್ನಿಯಿಂದ ಹೊರಟ ಅಗ್ನಿಯಿಂದ ಅಲ್ಲೋಲಕಲ್ಲೋಲವಾಡಲ್ಪಟ್ಟು ಹೊಗೆಯಿಲ್ಲದ ಜ್ವಾಲೆಗಳಿಂದ ಸುಟ್ಟುಹೋದ ಆ ಸಾಗರಗಳು, ಕೆಂಪಗೆಕಾದು ಪುಡಿಪುಡಿಯಾಗಿ ಭಸ್ಮವಾದ ಮಹಾಬೆಟ್ಟಗಳುಳ್ಳವಾಗಿ, ದೇವದಾನವರೊಡನೆ ಭಸ್ಮವಾಗಿ, ಭೂಮಿಯಲ್ಲಿ ಕೆಸರಿನಿಂದ ಕೂಡಿದುದಾಗುತ್ತದೆ. ॥೩೩॥

ಕಾಲೇ ತಸ್ಮಿಂಶ್ಚರಾಮಿ ಕ್ಷುಭಿತಮಹೀತಲೇ ಶೈಲರಾಷ್ಟ್ರಾದಿಹೀನೇ
ಶೂಲಪ್ರೋತ ಕಪೋಲಕಂಕಣಮಹಾಶೇಷಾಂಗಭಸ್ಮಾಂಗಕಃ ।
ತದ್ವ್ರಹ್ಮಾಂತಿಮಕಾಲಮೂಲಜಮಹಾಕಲ್ಲೋಲಕೋಲಾಹಲೇ
ಕಾಲೇ ನೀಲತಮಾಲಸನ್ನಿಭಗಲೋ ನಿತ್ಯಂ ವಸಾಮ್ಯಂಬಿಕೇ ॥೩೪॥

ನಕ್ಷತ್ರಸೋಮಯಮಾರ್ಕದಿಶಾಧಿಪಾ ವಾ
ನೋ ವಾಂತರಿಕ್ಷಕಮಹೀ ಜಗತೀ ಪ್ರಣಷ್ಟಾ ।
ನ ಬ್ರಹ್ಮಾ ನ ಹರಿಃ ಸುರಾಸುರಗಣಾ ನೋ ವಾ ದಿಶೋ ವಾ ವಿದಿ-
ಶ್ಯೋ ಭೂತಾನಿ ಮಹಾಜಡಾಜಡ ಜಗಚ್ಛೇಷಂ ನ ಕಿಂಚಿಚ್ಛಿವೇ ॥೩೫॥

ತಸ್ಮಿನ್ನಿಸ್ತೀರ್ಣಲೋಕೇ ಕ್ಷುಭಿತಕಲುಷಿತೇ ಶೂಲಮೂಲೇ ವಿಮುಕ್ತಂ
ಪ್ರೋತಂ ಕೃತ್ಯಂ ವಸಾಮಿ ಸೋಮಶಕಲಾಲಂಕಾರಮೌಲಿಸ್ತದಾ ।

---

ಎಲೌ ಅಂಬಿಕೇ! ಕ್ಷೋಭೆಹೊಂದಿದ ಭೂಮಂಡಲವುಳ್ಳದ್ದಾಗಿ, ಬೆಟ್ಟ, ಗುಡ್ಡ, ದೇಶಾದಿಗಳಿಲ್ಲದೇ ಇರುವಂತಹ ಆಕಾಲದಲ್ಲಿ, ತ್ರಿಶೂಲಕ್ಕೆ ಪೋಣಿಸಿದ ಬ್ರಹ್ಮಕಪೋಲವುಳ್ಳವನಾಗಿ, ಆದಿಶೇಷನನ್ನೇ ಕಂಕಣಮಾಡಿಕೊಂಡು ದೇಹಕ್ಕೆಲ್ಲಾ ಭಸ್ಮಬಳಿದುಕೊಂಡು, ಬ್ರಹ್ಮ, ಯಮ, ಮುಂತಾದವರ ಕೊನೆಗಾಲವೆನಿಸಿದ ಆ ಸಾಗರ ಪ್ರವಾಹಗಳ ಧ್ವನಿಯಿಂದ ಕೋಲಾಹಲವನ್ನುಂಟುಮಾಡುವ ಪ್ರಳಯಕಾಲದಲ್ಲಿ ಕಪ್ಪುಹೊಂಗೆಯಮರಕ್ಕೆ ಸಮಾನವಾದ ಕಂಠವುಳ್ಳವನಾಗಿ, ನಿತ್ಯವೂ ನಾನು ಲೀಲೆಯಿಂದ ವಾಸಮಾಡುತ್ತಿರುವೆನು. ॥೩೪॥

ಶಿವೇ! ನಕ್ಷತ್ರಗಳು, ಚಂದ್ರಸೂರ್ಯರು, (ಯಮ) ಇಂದ್ರನೇ ಮೊದಲಾದ ದಿಕ್ಪಾಲಕರೂ, ಅಂತರಿಕ್ಷ, ಭೂಮಿ, ಇವೇಮೊದಲಾದ ವಸ್ತುವೆಲ್ಲವೂ ಆ ಪ್ರಳಯಕಾಲದಲ್ಲಿ ನಾಶವಾಗುತ್ತವೆ. ಬ್ರಹ್ಮ, ವಿಷ್ಣು, ದೇವದಾನವರಗುಂಪು, ದಿಕ್ಕುಗಳು (ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ) ವಿದಿಕ್ಕುಗಳು, (ಆಗ್ನೇಯ, ನೈರುತ್ಯ, ವಾಯುವ್ಯ, ಈಶಾನ್ಯ ಇವು) ಪ್ರಾಣಿಗಳೂ, ಪಂಚಮಹಾಭೂತವು, ಅಥವಾ ಜಾಗ್ರದ್ರೂಪವಾದ ಈ ಜಗತ್ತು ಕೊಂಚವೂ ಉಳಿಯುವುದೇ ಇಲ್ಲವೆಂದು ತಿಳಿ. ॥೩೫॥

ಹೀಗೆ ಪ್ರಳಯಕಾಲದಲ್ಲಿ ಪ್ರಪಂಚವೆಲ್ಲವೂ ಕ್ಷೋಭೆಗೊಂಡು ಲೋಕವೆಲ್ಲವೂ ಧ್ವಂಸವಾಗುತ್ತಿರಲು, ಚಂದ್ರಕಲಾಮೌಲಿಯಾದ ನಾನು ಆಗ ಅವಿಮುಕ್ತ ಕ್ಷೇತ್ರವನ್ನು ತ್ರಿಶೂಲದ ತುದಿಯಲ್ಲಿ ಸೇರಿಸಿಕೊಂಡು ನಿಲ್ಲುತ್ತೇನೆ. ಆ ಬ್ರಹ್ಮದೇವನ

ತದ್ಬ್ರಹ್ಮದೇಹದಹನೋತ್ಥನು ಭಸ್ಮಭೂಷಾ
ಪೂಷಾವಿಶೋಷಿತ ಮಹೋರುಶರೀರಕಾಂತ್ಯಾ ॥೩೬॥

ವಿಷ್ಣುಂ ಪ್ಲವಂತಮನಿಲಾಹತಿಬಾಲಲೀಲಾ-
ಲೋಲಂ ಗ್ರಸಾಮಿ ಭುವನೇಶ್ವರಿ ತತ್ರ ವಾರ್ಧೌ ।
ಗಾಯನ್ನುಚ್ಚೈಶ್ಚ ಸಾಮಾನ್ಯತುಲಿತ ಘನಜೈರುಚ್ಚಘೋಷೋಽಸ್ಮ್ಯಹಂ ವ-
ದ್ಬ್ರಹ್ಮಾಹಂ ನಿವಸಂಶ್ಚ ನೃತ್ಯಪರಮುಸ್ಕಂಧಾತ್ತಶೂಲಃ ಶಿವೇ ॥೩೭॥

ಇತಿ ಶ್ರೀಶಿವರಹಸ್ಯೇ ಷಡಾಶಿವಾಖ್ಯೇ ನವಮಾಂಶೇ ಮಹಾಪ್ರಳಯಕಾಲ
ನಾಮ ತ್ರಯೋದಶೋಽಧ್ಯಾಯಃ

---

ಶರೀರವು ಸುಟ್ಟುಹೋಗಲು ಉತ್ತಮವಾದ ಆ ಭಸ್ಮವನ್ನೇ ತನ್ನ ದೇಹಕ್ಕೆ ಅಲಂಕರಿಸಿಕೊಂಡು, ಸರ್ಪರಾಜನಾದ ಆದಿಶೇಷನ ದೇಹದಿಂದ ಅಲಂಕೃತವಾದ ಶರೀರವುಳ್ಳವನಾಗಿ ಆ ಕಲ್ಪದ ಕೊನೆಯಲ್ಲಿ ನಾನು ಒಬ್ಬನೇ ವಾಸಮಾಡುತ್ತೇನೆ. ॥೩೬॥

ಪಾರ್ವತಿ, ಗಾಳಿಯಿಂದ ಹೊಡೆಯಲ್ಪಟ್ಟು ಅಲ್ಲೋಲಕಲ್ಲೋಲವಾಗಿರುವ ಆ ಸಮುದ್ರದಲ್ಲಿ ಬಾಲಕ್ರೀಡೆಯಲ್ಲಿ ಲಾಲಸನಾಗಿರುವ ಆ ವಿಷ್ಣುವನ್ನು ನಾನು ನುಂಗುವೆನು. ಎಲೌ ಭುವನೇಶ್ವರಿ, ಗಟ್ಟಿಯಾಗಿ ಸಾಮಗಳನ್ನು ಹೇಳುತ್ತಾ ಸಾಮ್ಯವಿಲ್ಲದ ಮೇಘಗಳ ದೊಡ್ಡ ಧ್ವನಿಗಳಂತೆ ಶಬ್ದವುಳ್ಳವನಾಗಿ ಪರಬ್ರಹ್ಮನೆನಿಸಿದ ನಾನು ನರ್ತನ ಮಾಡುತ್ತಾ ಶ್ರೇಷ್ಠವಾದ ತ್ರಿಶೂಲವನ್ನು ಹಿಡಿದು ನಲಿಯುತ್ತಾ ಆ ಮಹಾಪ್ರಳಯ ಕಾಲದಲ್ಲಿ ವಾಸಮಾಡುತ್ತೇನೆಂದು ಶಿವನು ಪಾರ್ವತಿಗೆ ಮಹಾಪ್ರಳಯಕಾಲದ ವಿಷಯವನ್ನು ತಿಳಿಸಿದನು. ॥೩೭॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಶಿವನು ಗಿರಿಜೆಗೆ ಉಪದೇಶಿಸಿದ ಮಹಾಪ್ರಳಯಕಾಲವರ್ಣನೆಯೆಂಬ
ಹದಿಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಚತುರ್ದಶೋಽಧ್ಯಾಯಃ

|| ಶ್ರೀ ದೇವ್ಯುವಾಚ ||

ಏಕಾರ್ಣವೇ ಕಲೇರಂತೇ ಬ್ರಹ್ಮಣಃ ಪ್ರಳಯೇ ಶಿವ ।
ದಗ್ಧಬ್ರಹ್ಮಾಂಗಸಂಭೂತಭಸ್ಮನಾ ತ್ವಮಲಂಕೃತಃ ॥೧॥

ನಿಗೀರ್ಣೋ ಬಾಲರೂಪೋಽಸೌ ತ್ವಯಾ ವಿಷ್ಣುಃ ಸದಾಶಿವ ।
ಪ್ರತಿಸರ್ಗಪ್ರಸೂತಾನಾಂ ಬ್ರಹ್ಮವಿಷ್ಣುಹರಾತ್ಮನಾಂ ॥೨॥

ಉದ್ಭವಂ ಚ ಮಹಾದೇವ ವಕ್ತುಮರ್ಹಸಿ ಶಂಕರ ।
ಕಿಮನ್ಯೇ ಬ್ರಹ್ಮವಿಷ್ಣ್ವೀಶಾಃ ಪೌರ್ವಿಕಾ ವಾ ತ ಏವ ಹಿ ॥೩॥

ವದ ಮೇ ಸಂಶಯಂ ದೇವ ಕಾಲಕಾಲ ಜಗದ್ಗುರೋ ॥೪॥
ಇತಿ ದೇವ್ಯಾ ವಚಃ ಶ್ರುತ್ವಾ ಮಹಾದೇವೋಽಭ್ಯುವಾಚ ತಾಂ ।

---

## ಹದಿನಾಲ್ಕನೆಯ ಅಧ್ಯಾಯ

ಶಿವದೇವನೇ, ಮಹಾಪ್ರಳಯವಾದಮೇಲೆ ಆ ಕಲಿಯುಗದ ಕೊನೆಯಲ್ಲಿ ಕೇವಲ ಸಮುದ್ರವೊಂದೇ ಇರುವುದೆಂದು ಹೇಳಿದೆಯಲ್ಲವೆ ; ಸುಟ್ಟುಹೋದ ಬ್ರಹ್ಮನ ದೇಹದಭಸ್ಮದಿಂದ ನೀನು ಅಲಂಕೃತನಾಗಿರುತ್ತೀಯೆ, ಬಾಲಕರೂಪಿಯಾದ ಆ ವಿಷ್ಣುವನ್ನು ನೀನು ನುಂಗಿಬಿಡುವೆಯೆಂದು ಹೇಳಿದೆ. ಎಲೈ ಸದಾಶಿವಸ್ವಾಮಿಯೇ, ಪ್ರತಿಯಾಗಿ ಪ್ರಪಂಚದ ಸೃಷ್ಟಿ ಸ್ಥಿತಿ ಸಂಹಾರಕ್ಕೋಸ್ಕರ ನಿರ್ಮಿತರಾಗುವ ಆ ಬ್ರಹ್ಮ, ವಿಷ್ಣು, ರುದ್ರರ ಉತ್ಪತ್ತಿಯನ್ನು ನನಗೆ ಹೇಳಲು ನೀನು ಯೋಗ್ಯನಾಗಿದ್ದೀಯೆ.

॥ ಸ್ಕಂದ ಉವಾಚ ॥

ತತ್ತೇಽಹಂ ಸಂಪ್ರವಕ್ಷ್ಯಾಮಿ ಶಿವಪ್ರೋಕ್ತಂ ಸನಾತನಂ ॥೫॥
ಶೃಣು ತ್ವಂ ಸಾವಧಾನೇನ ರಹಸ್ಯಂ ಸರ್ವಪಾಪಭಿತ್ ॥೬॥

॥ ಶ್ರೀ ಈಶ್ವರ ಉವಾಚ ॥

ಶೃಣು ದೇವಿ ರಹಸ್ಯಂ ತೇ ಪ್ರವಕ್ಷ್ಯಾಮಿ ಸಮಾಸತಃ ।
ಗೋಪನೀಯಂ ಪ್ರಯತ್ನೇನ ನಾಖ್ಯೇಯಂ ಯಸ್ಯ ಕಸ್ಯಚಿತ್ ॥೭॥

ಬ್ರಹ್ಮಣಃ ಪ್ರಳಯೇ ಸರ್ವೇ ತತ್ಸೃಷ್ಟಾಃ ಸರ್ವ ಏವ ಹಿ ।
ತತ್ಪ್ರಜಾಪತಯೋ ದೇವಾ ಮನವೋ ಮುನಿಮಾನವಾಃ ॥೮॥

ಸುರಾಸುರಾಸ್ತಥಾ ಶಕ್ರಾ ದಿಕ್ಪಾಲಾ ಯಕ್ಷಪೂರುಷಾಃ ।
ಕಿನ್ನರಾ ನಾಗಗಂಧರ್ವಾಸ್ತಥೈವಾಪ್ಸರಸಾಂ ಗಣಾಃ ॥೯॥

---

ಮಹಾದೇವನೇ, ಜಗನ್ಮಂಗಳಕರನಾದ ನೀನು ಅದನ್ನು ನನಗೆ ತಿಳಿಸು. ಆ ಸೃಷ್ಟ್ಯಾದಿಕಾರ್ಯಗಳಿಗೆ ಹಿಂದಿನ ಬ್ರಹ್ಮವಿಷ್ಣ್ವೀಶ್ವರರೇ ಇರುತ್ತಾರೆಯೋ ಅಥವ ಬೇರೆಯುವರನ್ನು ನಿರ್ಮಾಣಮಾಡುತ್ತೀಯಾ ? ಜಗದ್ಗುರುವಾದ ದೇವನೇ, ದೇವದೇವನೆನಿಸಿದ ನೀನು ಈ ನನ್ನ ಸಂದೇಹವನ್ನು ಹೋಗಲಾಡಿಸಿ, ನನ್ನ ಪ್ರಶ್ನೆಗಳಿಗೆ ಉತ್ತರವನ್ನು ಹೇಳೆಂದು ಪಾರ್ವತಿಯು ಶಿವನನ್ನು ಪುನಃ ಪ್ರಾರ್ಥಿಸಿದಳು. ॥೧-೨-೩-೪॥

ಹೀಗೆ ಪಾರ್ವತೀದೇವಿಯ ವಾಕ್ಯಗಳನ್ನು ಕೇಳಿ ಆ ಮಹಾದೇವನು, ದೇವಿಗೆ ಉತ್ತರವಾಗಿ ಹೀಗೆಂದನು. ಎಲೈ ಜೈಗೀಷವ್ಯಮುನಿಯೇ, ಆ ಪರಶಿವನು ದೇವಿಗೆ ಹೇಳಿದ ಸಕಲ ಪಾಪಭೇದಕವಾದ ರಹಸ್ಯವನ್ನು ಈಗ ನಾನು ನಿನಗೆ ಹೇಳುವೆನು, ಸಾವಧಾನವಾಗಿ ಈ ಸನಾತನ ವೃತ್ತಾಂತವನ್ನು ಲಾಲಿಸೆಂದು ಷಣ್ಮುಖನು ಜೈಗೀಷವ್ಯನಿಗೆ ಹೇಳಿದನು. ॥೫-೬॥

ದೇವಿ, ನೀನು ಕೇಳಿದ ಪ್ರಶ್ನೆಗೆ ಉತ್ತರವು ತುಂಬಾ ರಹಸ್ಯವಾದುದು. ಅದನ್ನು ನಿನಗೆ ಹೇಳುತ್ತೇನೆ, ಕೇಳು; ದೇವಿ, ಇದನ್ನು ಸಿಕ್ಕಿದವರಿಗೆ ಹೇಳದೇ ಎಚ್ಚರಿಕೆಯಿಂದ ಕಾಪಾಡಿಕೊಂಡಿರು. ಉಮೇ, ಬ್ರಹ್ಮನ ಪ್ರಳಯಕಾಲದಲ್ಲಿ, ಅವನಿಂದ ಸೃಷ್ಟಿಮಾಡಲ್ಪಟ್ಟಿದ್ದ ಸಕಲ ಪ್ರಜಾಪತಿಗಳೂ, ದೇವತೆಗಳೂ

ಸುಪರ್ಣಾಸ್ಸಾಗರಾ ದ್ವೀಪಾ ನದೀನದವನಾನ್ಯುಮೇ ।
ಗಿರಯೋ ಪುರರಾಷ್ಟ್ರಾಣಿ ಲೋಕಾಶ್ಚೈವ ಚತುರ್ದಶ ॥೧೦॥

ಸರ್ವೇ ಬ್ರಹ್ಮೋದರೇ ದೇವಿ ಲೀನಾಸ್ಸಂಪ್ರತಿ ಶಂಕರಿ ।
ಕೃತ್ವಾ ಪಿತಾಮಹಃ ಸರ್ವಂ ಸ್ವೋದರಸ್ಥಂ ಚರಾಚರಂ ॥೧೧॥

ಸ ಪಿಧಾಯೇಂದ್ರಿಯಗ್ರಾಮಂ ಕಲ್ಪಮೇಕಂ ವಸಂಸ್ತದಾ ।
ನ ದಿವಾ ನ ತಮೋ ರಾತ್ರಿರ್ನೈವ ಭೂತಂ ಕಿಮಪ್ಯುಮೇ ॥೧೨॥

ಸ್ವಮೂರ್ಧ್ನಿ ಯೋಗಮಾಸ್ಥಾಯ ಮಮ ಯೋಗಂ ಯುನಕ್ತ್ಯಸೌ ।
ಯುಂಜನ್ನಾತ್ಮಾನಮೇವೇಶಿ ಮಯ್ಯೇವ ಪರಮಾತ್ಮನಿ ॥೧೩॥

ತದಂತಿಮಮಹಾಯೋಗಸಂಜಾತಾನಲಸಾತನುಂ ।
ಕೃತ್ವಾ ದಗ್ಧೋ ಭವೇದ್ಬ್ರಹ್ಮಾ ತದ್ಬ್ರಾಹ್ಮಂ ಭಸ್ಮಮುತ್ತಮಂ ॥೧೪॥

---

ಮನುಗಳೂ, ಮುನಿಶ್ರೇಷ್ಠರೂ, ದೇವದೈತ್ಯರೂ, ಇಂದ್ರಾದಿ ದಿಕ್ಪಾಲಕರೂ, ಯಕ್ಷರೂ, ಪುರುಷರೂ, ಕಿಂನರರೂ, ನಾಗರೂ, ಗಂಧರ್ವರೂ, ಅಪ್ಸರಸ್ತ್ರೀಯರ ಸಮೂಹವೂ, ಗರುಡರೂ, ಸಾಗರಗಳೂ, ಸಪ್ತದ್ವೀಪಗಳೂ, ನದೀ, ನದ, ಕಾಡುಗಳೂ ಬೆಟ್ಟಗಳೂ, ಪಟ್ಟಣ, ರಾಜ್ಯರೂಪವಾದ ಹದಿನಾಲ್ಕು ಲೋಕಗಳೂ ಆ ಬ್ರಹ್ಮನ ಹೊಟ್ಟೆಯಲ್ಲಿಯೇ ಲೀನವಾಗುವುವು. ॥೮-೯-೧೦॥

ಆ ಬ್ರಹ್ಮನು ತನ್ನ ಒಡಲೊಳಗಿರುವ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವನ್ನೆಲ್ಲಾ ಸೇರಿಸಿಕೊಂಡು ಇಂದ್ರಿಯಸಮೂಹಗಳನ್ನೆಲ್ಲಾ ಮುಚ್ಚಿ ಹಾಗೆಯೇ ಒಂದು ಕಲ್ಪದವರೆಗೆ ವಾಸಮಾಡುತ್ತಾನೆ. ಎಲೌ ಉಮೇ, ಆಗ ಹಗಲು, ಕತ್ತಲೆ, ರಾತ್ರಿ, ಭೂತಗಳು ಇವುಗಳಾವುವೂ ಅವನಿಗಿರುವುದಿಲ್ಲ. ಆ ಬ್ರಹ್ಮನು ಮುಕ್ತನಾಗುವಾಗ ತನ್ನ ಯೋಗದ ಬಲದಿಂದ ಬ್ರಹ್ಮರಂಧ್ರವನ್ನು ಭೇದಿಸಿಕೊಂಡು ನನ್ನ ಸಾರೂಪ್ಯವನ್ನು ಹೊಂದುವನು. ॥೧೧-೧೨॥

ಈಶ್ವರೀ, ಆ ಬ್ರಹ್ಮನು ಯೋಗವನ್ನು ಹೊಂದಿ ಪರಮಾತ್ಮನಾದ ನನ್ನಲ್ಲಿಯೇ ಐಕ್ಯವಾಗುತ್ತಾನೆ. ಯೋಗಾಗ್ನಿಯಿಂದ, ಅವನ ಕೊನೆಗಾಲದಲ್ಲಿ ಭಸ್ಮವಾದ ಅವನ ಶರೀರದ ಬೂದಿಯನ್ನು ನಾನು ಲೇಪನಮಾಡಿಕೊಂಡು ಆನಂದಭರಿತನಾಗಿ ನರ್ತನ ಮಾಡುತ್ತೇನೆ. ॥೧೩-೧೪॥

ಅವಗುಂಠ್ಯಾಹಮೀಶಾನಿ ನೃತ್ಯಾಮ್ಯಾನಂದನಿರ್ಭರಃ ।
ಮದ್ರೋಮಜಾಲಮೂಲೇಷು ತದ್ಬ್ರಹ್ಮಾಂಗಸಮುದ್ಭವಂ ॥೧೫॥

ಭಸ್ಮೈವ ಸಂಗತಂ ಯಾವತ್ತಾವತ್ತೇ ವಿಧಯೋಽಂಬಿಕೇ ।
ಭವಂತಿ ಪ್ರತಿಕಲ್ಪಾದೌ ಸ್ವೋದರಸ್ಥೈಶ್ಚರಾಚರೈಃ ॥೧೬॥

ಪ್ರತಿಕಲ್ಪಂ ವೇದಜಾಲಂ ಸರಹಸ್ಯಷಡಂಗಕಂ ।
ವಿಧಯೇ ಸಾಧಕಾಯಾಹಂ ಸೃಷ್ಟ್ಯಾದೌ ಪರಮೇಶ್ವರಿ ॥೧೭॥

ಯಥಾಪೂರ್ವಂ ನಿಯೋಗಾಯ ತಸ್ಮಾದುಪದಿಶಾಮ್ಯಹಂ ।
ಮಯೋಪದಿಷ್ಟಃ ಸೋಽಪ್ಯೇವಂ ವಿನಿಯುಕ್ತಂ ಚರಾಚರಂ ॥೧೮॥

ಲೋಕಾನ್ಲೋಕಾಂಶ್ಚ ಸ ತದಾ ಯಥಾಪೂರ್ವಂ ಪ್ರಜಾಪತಿಃ ।
ಭೂತಾ ಭಾವ್ಯಾಶ್ಚ ಮನವೋ ಋಷಯಶ್ಚ ಪುರಂದರಾಃ ॥೧೯॥

ಪ್ರಜಾಃ ಪ್ರಜಾನಾಂ ಪತಯೋ ನದೀನದಪುರಂ ವನಂ ।
ಗಿರಯಃ ಸಾಗರಾ ಘೋರಾ ಭೂತಾನಾಂ ವರ್ಣಧರ್ಮಕಂ ॥೨೦॥

---

ನನ್ನ ರೋಮರಾಜಿಗಳ ಬುಡದಲ್ಲಿ ಆ ಬ್ರಹ್ಮನ ದೇಹಜನ್ಯವಾದ ಭಸ್ಮವು ಎಷ್ಟೆಷ್ಟು ಸೇರುತ್ತದೆಯೋ, ಅಷ್ಟುಮಂದಿ ಬ್ರಹ್ಮರು ಪ್ರತಿಯೊಂದು ಕಲ್ಪಾರಂಭದಲ್ಲಿಯೂ ಸ್ವಶರೀರಾಂತರ್ಗತವಾದ ಚರಾಚರ ಪ್ರಾಣಿಗಳೊಡನೆ ಉದ್ಭವಿಸುವರು. ಪ್ರತಿಯೊಂದು ಕಲ್ಪದಲ್ಲಿಯೂ, ರಹಸ್ಯಸಹಿತವೂ, ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪಗಳೆಂಬ ಆರು ಅಂಗಸಮೇತವೂ ಆದ ವೇದರಾಶಿಯನ್ನು ಸೃಷ್ಟಿಯ ಆರಂಭದಲ್ಲಿ ಸಾಧಕನಾದ ಆ ಬ್ರಹ್ಮನಿಗೆ ಹಿಂದಿನಂತೆಯೇ ಪ್ರಪಂಚಸೃಷ್ಟಿಮಾಡುವುದಕ್ಕೋಸ್ಕರ ನಾನು ಉಪದೇಶಮಾಡುತ್ತೇನೆ. ॥೧೫-೧೬-೧೭॥

ಹೀಗೆ ನನ್ನಿಂದ ವೇದೋಪದೇಶ ಪಡೆದು ಆ ಬ್ರಹ್ಮನು ಚರಾಚರ ಪ್ರಪಂಚ ಸೃಷ್ಟಿಯಲ್ಲಿ ನಿಯುಕ್ತನಾಗಿ, ಊರ್ಧ್ವಲೋಕಗಳನ್ನೂ ಮತ್ತು ಅಧೋಲೋಕಗಳನ್ನೆಲ್ಲಾ ಹಿಂದಿನಂತೆಯೇ ಸೃಷ್ಟಿಮಾಡುತ್ತಾನೆ. ಭೂತ, ಭವಿಷ್ಯನ್ಮನುಗಳೂ, ಋಷಿಗಳೂ, ಇಂದ್ರರು, ಪ್ರಜೆಗಳು, ಪ್ರಜಾಪತಿಗಳು, ನದೀ, ನದ, ಪಟ್ಟಣ, ಕಾಡು, ಬೆಟ್ಟ, ಘೋರಸಾಗರಗಳು, ಪ್ರಾಣಿಗಳ ಧರ್ಮಸ್ಥಾಪನೆ (ಧರ್ಮನಿರ್ಣಯ) ಬ್ರಹ್ಮ

ಆಶ್ರಮಾಣಾಂ ಚ ವರ್ಣಾನಾಂ ಧರ್ಮಾಧರ್ಮಂ ಚ ಕೃತ್ಸ್ನಶಃ ।
ದೇವಾಸುರವಿಸೃಷ್ಟಿಂ ಚ ನೃಪಾಣಾಂ ಚ ಪರಂಪರಾಃ ॥೨೧॥

ಯಾನ್ಯೇವ ಪ್ರಾಕ್ತನಯುಗೇ ತಾನ್ಯೇವಾಗಾಮಿತೇಽಪಿ ಚ ।
ಭವಂತಿ ಮನ್ನಿಯೋಗೇನ ಧಾತುರ್ಬುದ್ಧಿಪ್ರಧಾನತಾ ॥೨೨॥

ಸೋಽಪಿ ಸೃಷ್ಟ್ಯಭಿವೃದ್ಧ್ಯರ್ಥಂ ರುದ್ರಂ ಧ್ಯಾಯತಿ ತತ್ರ ಹಿ ।
ತನ್ಮೌಲಿಪದ್ಮಂ ನಿರ್ಭಿದ್ಯ ರುದ್ರಃ ಕಾಲಾಗ್ನಿಸಂಭವಃ ॥೨೩॥

ನಾನರ್ತಿ ಜಾಗ್ರತಸ್ತಸ್ಯ ಶೂಲಹಸ್ತೋ ದಿಗಂಬರಃ ।
ಜಟಾಲಮೌಲಿಜಾಲೇಂದ್ರೋ ಮಹಾಶೂಲ ವಿಭೂಷಣಃ ॥೨೪॥

ಭಸ್ಮದಿವ್ಯತ್ರಿಪುಂಡ್ರಾಂಕಃ ಕರಟಿತ್ವಕ್ಕೃತಾಂಬರಃ ।
ತಂ ದೃಷ್ಟ್ವಾ ಜಾಗ್ರತೋ ರುದ್ರಂ ನೃತ್ಯಂತಂ ಶೂಲಪಾಣಿನಂ ॥೨೫॥

---

ಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸಗಳೆಂಬ ನಾಲ್ಕು ಆಶ್ರಮಗಳೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕುವರ್ಣಗಳೂ, ಸಕಲ ಧರ್ಮಾಧರ್ಮ ನಿರ್ಣಯಗಳೂ, ದೇವರಾಕ್ಷಸರ ಸೃಷ್ಟಿ, ರಾಜಪರಂಪರೆಯ ನಿರ್ಮಾಣ, ಮುಂತಾದ ಹಿಂದಿನ ಯುಗದಲ್ಲಿದ್ದ ಸೃಷ್ಟಿಕ್ರಮವನ್ನೇ ಮುಂದಿನ ಆ ಯುಗಗಳಲ್ಲಿಯೂ ಬ್ರಹ್ಮನು ನನ್ನ ಅಪ್ಪಣೆಯಿಂದ ಮೇಧಾಶಾಲಿಯೆನಿಸಿ ಸೃಷ್ಟಿಮಾಡುತ್ತಾನೆ. ||೧೮-೧೯-೨೦-೨೧-೨೨||

ಅವನೂ ಸಹ ತಾನು ಮಾಡುವ ಸೃಷ್ಟಿಕಾರ್ಯವು ಹೆಚ್ಚುವುದಕ್ಕೋಸ್ಕರ ರುದ್ರನನ್ನು ಅಲ್ಲಿ ಧ್ಯಾನಮಾಡುತ್ತಾನೆ. ಕಾಲಾಗ್ನಿಸಂಭವನಾದ ರುದ್ರನು ಆ ಬ್ರಹ್ಮನ ಕಮಲಸಮನಾದ ಮಸ್ತಕವನ್ನು ಕಿತ್ತು ಅವನ ಮುಂದೇ, ಶಂಖಪಾಣಿಯೂ, ದಿಗಂಬರನೂ, ಜಡೆಗಳ ಸಮೂಹದಿಂದ ಶೋಭಿಸುವವನೂ, ದೊಡ್ಡ ತ್ರಿಶೂಲದಿಂದಲಂಕೃತನೂ, ಭಸ್ಮದಿಂದ ದಿವ್ಯವಾಗಿ ತ್ರಿಪುಂಡ್ರಗಳನ್ನಲಂಕರಿಸಿಕೊಂಡಿರುವವನೂ, ಆನೆಯ ಚರ್ಮವನ್ನು ಹೊದೆದಿರುವವನೂ ಆಗಿ ನರ್ತನಮಾಡುತ್ತಾನೆ. ||೨೩-೨೪||

ಹೀಗೆ ತನ್ನ ಮುಂದೆ ಶೂಲಪಾಣಿಯಾಗಿ ನರ್ತನಮಾಡುತ್ತಿರುವ ಆ ರುದ್ರನನ್ನು ನೋಡಿ, ಬ್ರಹ್ಮನು ಮೇಲೆದ್ದು ಸಮೀಪಿಸಿ, ನನ್ನ ಅಂಶಸಂಭೂತನೆಂದು

ಉತ್ಥಾಯಾತಿ ಪ್ರಸೃಜ್ಯೈನಂ ಪ್ರಣಮ್ಯಾಥ ಮದಂಶಜಂ ।
ಮನ್ವಾನಸ್ತಂ ಚ ತುಷ್ಟಾವ ಸೃಷ್ಟಿವಿಸ್ತಾರಕಾರಣೇ ॥೨೬॥

॥ ಬ್ರಹ್ಮೋವಾಚ ॥

ಭೋ ಭೋ ಕಾಲಾಗ್ನಿರುದ್ರ ತ್ರಿನಯನ ಜಗತೋ ಹೇತವೇ ಸೇತವೇ ತ್ವಾಂ
ವಿಶ್ವೇಶಾಜ್ಞಾನಿಯುಕ್ತಃ ಸಕಲಜಗಮಹಾಸೃಷ್ಟಿಸಾಹಾಯ್ಯಭಾರಂ ।
ಯೋಕ್ಷ್ಯೇ ಯುಂಕ್ಷ್ವ ತ್ವಯಾಹಂ ಸೃಜ ಜನಮಪಿ ತತ್ತೇ ಕಟಾಕ್ಷಾಗ್ರ
ಜಾಗ್ರ-
ದ್ಭೂಮಾನೇವಾದ್ಯ ಶೂಲೋದ್ಯತಕರ ಭಗವನ್ನೇವಮೇವೇತಿ ಮನ್ಯೇ॥೨೭॥

ಇತ್ಯುಕ್ತೋ ವೇಧಸಾಯಂ ಮಮ ನಯನಭವಃ ಕಾಲರುದ್ರೋರುಘೋಷಂ
ಕೃತ್ವಾಕಂಪ್ಯ ಚ ರೋದಸೀಂ ಸ ಸಸೃಜೇ ರುದ್ರಾನನೇಕಾಂಬಿವೇ ।
ನಾನಾವೇಷಮಹೋರು ಹೇಷಣಮಹಾಬಾಣಾಸಿಪಾಶೋದ್ಯತಾ
ನುದ್ಧೂತಾಂಬುದ ನಿಸ್ವನಾನ್ಗಿರಿಭವೇ ದೃಷ್ಟ್ವೈವ ಬಿಭ್ಯದ್ವಿಧಿಃ ॥೨೮॥

---

ಅವನನ್ನು ತಿಳಿಯುತ್ತಾ ತನ್ನ ಸೃಷ್ಟಿಕಾರ್ಯವು ವಿಸ್ತಾರವಾಗುವುದಕ್ಕೋಸ್ಕರ ಹೀಗೆ ರುದ್ರದೇವನನ್ನು ಸ್ತೋತ್ರಮಾಡುವನು. ॥೨೫-೨೬॥

ತ್ರಿಲೋಚನನೆನಿಸಿದ ಕಾಲಾಗ್ನಿರುದ್ರದೇವನೇ! ವಿಶ್ವೇಶ್ವರನ ಅಪ್ಪಣೆಯಿಂದ ನಿಯುಕ್ತನಾದ ನಾನು ಸಕಲ ಜಗತ್ತಿನ ಸೃಷ್ಟಿಮಹಾಕಾರ್ಯಕ್ಕೆ ಸೇತುವೆಯಂತೆ ಸಹಾಯಕನಾದ ನಿನ್ನನ್ನು ಸಹಾಯಬೇಡುತ್ತೇನೆ. ಶೂಲಪಾಣಿಯಾದ ಭಗವಂತನೇ! ನಿನ್ನ ಕಟಾಕ್ಷಲೇಶದಿಂದ ಸೃಷ್ಟಿಮಾಡುವ ಸಾಮರ್ಥ್ಯವನ್ನು ಪಡೆದು ಅತಿಸೂಕ್ಷ್ಮ ಭಾಗವುಳ್ಳ ಈ ಭೂಮಿಯಲ್ಲಿನ ಪ್ರಜೆಗಳನ್ನು ನಿನ್ನನುಗ್ರಹದಿಂದ ಸೃಷ್ಟಿಮಾಡಲು ಇಚ್ಛಿಸುತ್ತೇನೆ. ॥೨೭॥

ಈ ರೀತಿ ಬ್ರಹ್ಮನಿಂದ ಸ್ತುತಿಸಲ್ಪಟ್ಟು, ನನ್ನ ಕಣ್ಣಿನಿಂದ ಜನಿಸಿದ ಆ ಕಾಲ ರುದ್ರನು, ದೊಡ್ಡದಾಗಿ ಧ್ವನಿಮಾಡುತ್ತಾ ಅದರಿಂದ ಭೂಮ್ಯಂತರಿಕ್ಷಗಳನ್ನೂ ನಡುಗಿಸುತ್ತಾ, ನಾನಾವೇಷಗಳಿಂದಲೂ, ಭಯಂಕರಧ್ವನಿಯಿಂದಲೂ ಕೂಡಿ, ಮಹತ್ತಾದ ಬಾಣಗಳು, ಕತ್ತಿ ಆಯುಧಗಳನ್ನು ಹೊಂದಿ, ಮೇಘದಂತೆ ಗಂಭೀರ ಧ್ವನಿಯುಳ್ಳ ಅನೇಕಮಂದಿ ರುದ್ರರನ್ನು ಸೃಷ್ಟಿಮಾಡಿದನು. ಹಾಗೆ ಅವನು ಮಾಡಿದ ರುದ್ರಸೃಷ್ಟಿಯನ್ನು ನೋಡಿಯೇ ಬ್ರಹ್ಮನು ಹೆದರಿಬಿದ್ದನು. ॥೨೮॥

ತಂ ನತ್ವಾ ಪುನರಾಹ ಸಾಹಸಮಹೋ ರುದ್ರ ತ್ವಯಾ ಯತ್ಕೃತಂ
ಮಾಸ್ರಾಕ್ಷೀಃ ಪುನರೇವ ಸುಷ್ಠು ಸುಮಹಾರುದ್ರಾನ್ತ್ರಿನೇತ್ರಪ್ರಿಯಾನ್ ।
ಯೈಶ್ಚ ವ್ಯಾಪ್ತಮಿದಂ ಚರಾಚರ ಜಗಜ್ಜಾತಂ ಚ ಜನ್ಮಾರ್ತಿಗಂ
ತ್ವಂ ಚಾಪ್ಯದ್ಯ ಸೃಜಸ್ವ ಜಂತುನಿವಹಂ ಮೈವಂ ವಿಧಾ ತೇ ಪ್ರಜಾ ॥೨೯॥

ಇತ್ಯುಕ್ತೋ ವೇಧಸಾಯಂ ವರಮಖಿಲಮಹಾರುದ್ರಸಂಘಾಸು ತಸ್ಮಾ-
ದ್ಭೂಮ್ಯಂತೇ ದಿವಿ ರೋದಸೀ ತ್ರಿಭುವನೇ ತಾನ್ವೈ ನಿಯುಂಜ್ಯಾದರಾತ್ ।
ನಾಹಂ ಮೃತ್ಯುವಶಾನುಗಾನ್ಸೃಜೇಹಮಖಿಲಾಂತ್ಸರ್ಗೇನ ಮೇ ತಾದೃ-
ಶಸ್ತ್ವಂ ಕೌಲಾಲಕಕರ್ಮಣಾ ಜನಿಮೃತಿಪ್ರಾಯಾಂ ಪ್ರಜಾಂ ವೈ ಸೃಜ॥೩೦

ಇತ್ಯುಕ್ತ್ವಾ ನಿರಗಾಚ್ಚ ತತ್ರ ಭವನಾತ್ಸ್ಥಾಣುಸ್ತತೋಽಸೌ ಭವ
ತ್ತತ್ರೈವಾತಿಸೃಜತ್ಸಚಾಬ್ಜಭವನಃ ಸೃಷ್ಟಿಂ ಸ್ವಕೀಯಾಂ ಸೃಜನ್ ।

---

ಅನಂತರ ಬ್ರಹ್ಮನು ರುದ್ರನಿಗೆ ನಮಸ್ಕಾರ ಮಾಡಿ, "ಅಯ್ಯ ರುದ್ರದೇವನೇ, ನೀನು ಅತಿಯಾದ ಸಾಹಸಕಾರ್ಯವನ್ನಾಚರಿಸಿರುವೆ. ಕಾಲಾಗ್ನಿರುದ್ರದೇವನೇ, ಮಹಾದೇವನಿಗೆ ಇಷ್ಟರಾದ ಈ ರುದ್ರನನ್ನು ಇನ್ನು ಪುನಃ ಸೃಷ್ಟಿಮಾಡಬೇಡ; ಏಕೆಂದರೆ ಈ ಪ್ರಪಂಚದ ಚರಾಚರರೂಪವಾದ ಪ್ರಾಣಿಗಳೆಲ್ಲರೂ ಜನನ ಮರಣ ರೂಪವಾದ ಬಂಧನಕ್ಕೊಳಪಟ್ಟವರಾಗಿರಲಿ. ನಿನ್ನಿಂದ ಸೃಷ್ಟರಾದ ರುದ್ರಗಣಗಳು ಅದಕ್ಕೆ ಒಳಪಡುವರಲ್ಲವಾದ್ದರಿಂದ ಇನ್ನು ಮುಂದೆ ಆ ಸೃಷ್ಟಿಯನ್ನು ಕೊನೆಮಾಡುವನಾಗು" ಎಂದು ಬ್ರಹ್ಮನು ರುದ್ರನನ್ನು ಪ್ರಾರ್ಥಿಸಿಕೊಂಡನು. ॥೨೯॥

ಹೀಗೆ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟ ರುದ್ರದೇವನು, ತಾನು ಸೃಷ್ಟಿಮಾಡಿದ್ದ ಮಹಾರುದ್ರಸಂಘಗಳನ್ನೆಲ್ಲಾ ಭೂಮಿ, ಆಕಾಶ, ಸ್ವರ್ಗ, ಮರ್ತ್ಯ, ಪಾತಾಳ ಮುಂತಾದ ಸ್ಥಳಗಳಿಗೆ ಹೋಗುವಂತೆ ಆದರದಿಂದ ಅವರನ್ನು ನಿಯಮಿಸಿ, ಅನಂತರ ಎಲೈ ಬ್ರಹ್ಮನೇ, ನಾನು ಎಂದೂ ಮರಣಕ್ಕೊಳಗಾಗುವವರನ್ನು ಸೃಷ್ಟಿಮಾಡುವುದಿಲ್ಲ. ನನ್ನ ಸೃಷ್ಟಿಯೇ ಅಂತಹದಲ್ಲ. ನೀನು ಮಾತ್ರ, ಕುಂಬಾರನು ಕ್ಷಣಿಕವಾದ ಗಡಿಗೆಗಳನ್ನು ನಿರ್ಮಿಸುವಂತೆ ಜನನ ಮರಣಗಳನ್ನು ಹೊಂದುವ ಪ್ರಜೆಗಳನ್ನೇ ಸೃಷ್ಟಿಮಾಡಿಕೋ ಎಂದು ಹೇಳಿದನು. ॥೩೦॥

ಹೀಗೆ ಹೇಳಿ ಸ್ಥಾಣುವೆನಿಸಿದ ರುದ್ರದೇವನು ಬ್ರಹ್ಮನ ಸ್ಥಾನದಿಂದ ಹೊರಟು ಹೋದನು. ಅನಂತರ ಬ್ರಹ್ಮನು ಅಲ್ಲಿಯೇ ತನ್ನ ಇಷ್ಟದಂತೆ ಪ್ರಾಣಿಸೃಷ್ಟಿಯನ್ನು

ಏವಂ ರುದ್ರಸಮುದ್ಭವಾ ವಿಧಿಭವಾ ಸೃಷ್ಟಿಪ್ರತಿಷ್ಠಾ ಕಥಿ
ಏವಂ ಕಲ್ಪಪರಂಪರಾಸು ತೇ ಹರಿಹರಾ ಬ್ರಹ್ಮಾದಯಶ್ಚಾಂಬಿಕೇ ॥೩೧

ಅನ್ಯೋನ್ಯಂ ಗುರವೋ ಭವಂತಿ ಜಗತಾಂ ಸಂತ್ರಾಣಸಂಸ್ಥಾಪತೀ
ನಾಶಾಯಾಂತಿಮಕಾಲಕೇಽಪಿ ಸುಮಹಾರುದ್ರೋ ಭವೇದಂಬಿಕೇ ।
ತದ್ಬ್ರಹ್ಮೋದ್ಭವಭಸ್ಮಸಂಗತ ಮಹಾವಾಮಾಂಗತಸ್ತಂ ಪುನ
ರ್ಮದ್ಗರ್ಭಸ್ಥಿತ ವಿಷ್ಣುಮೇವ ಸುಮಹಾರುದ್ರಂ ಚ ಮತ್ಫಾಲತಃ ॥೩೨

ತಾನೇವಾಶು ವಿಸೃಜ್ಯ ವೇದಮಖಿಲಂ ದತ್ವೈವ ತದ್ಬ್ರಹ್ಮಣೇ
ತತ್ಫಾಲೋತ್ತಮಸಂಭವಂ ಚ ಸುಮಹಾರುದ್ರಂ ಕರೋಮ್ಯಂಬಿಕೇ ।
ಸ್ವಚ್ಛಂದಂ ಪುನರೇವ ಸರ್ವಜಗತೀ ಸಂಪೂರಣೇ ಕೇವಲಂ
ಮತ್ಫಾಲಾನಲಕೀಲದಗ್ಧಮವನೀಜಾಲಂ ಸೃಜಾಮ್ಯಂಬಿಕೇ ॥೩೩॥

---

ಮುಂದುವರಿಸಿದನು. ದೇವಿಯೇ, ಕೇಳು ; ಹೀಗೆ ರುದ್ರ ಮತ್ತು ಬ್ರಹ್ಮರಿಂದ ಸೃಷ್ಟಿ ಕ್ರಮವು ನಡೆಯಿತು. ಹೀಗೆಯೇ, ಪ್ರತಿಯೊಂದು ಕಲ್ಪಗಳ ಪರಂಪರೆಯಲ್ಲಿಯೂ ಬ್ರಹ್ಮ, ವಿಷ್ಣು, ರುದ್ರರು ಒಂದೊಂದು ಕಾರ್ಯಾರ್ಥವಾಗಿ ಉತ್ಪನ್ನರಾಗುತ್ತಾ ರೆಂಬುದನ್ನರಿಯುವವಳಾಗು. ॥೩೧॥

ಹೀಗೆ ಬ್ರಹ್ಮವಿಷ್ಣುರುದ್ರರು ಪರಸ್ಪರವಾಗಿ ಸೃಷ್ಟಿ, ರಕ್ಷಣೆ ಮತ್ತು ಪ್ರಳಯಾಧಿಕಾರಿಗಳಾದರೂ, ಒಬ್ಬರಿಗೊಬ್ಬರು ಗುರುಗಳಂತೆ ಆಚರಿಸಿ, ಸೃಷ್ಟಿ, ಸ್ಥಿತಿ, ಲಯ ಕರ್ಮಗಳನ್ನು ನಡೆಸುವರು. ಕೊನೆಗಾಲದಲ್ಲಿಯಾದರೋ ಮಹಾರುದ್ರನೇ, ಪ್ರಪಂಚನಾಶಕ್ಕೆ ಕಾರಣನಾಗುತ್ತಾನೆ. ಹೀಗೆಯೇ ನನ್ನ ಭಸ್ಮಯುಕ್ತವಾದ ಎಡ ಭಾಗದಿಂದ ಬ್ರಹ್ಮನೂ, ಹೃದಯದಿಂದ ಮಹಾವಿಷ್ಣುವೂ, ನನ್ನ ಫಾಲನೇತ್ರದಿಂದ ಮಹಾರುದ್ರನೂ ಜನಿಸುತ್ತಾರೆ. ಇದೇರೀತಿ ತ್ರಿಮೂರ್ತಿಗಳ ಸೃಷ್ಟಿಕ್ರಮವು ನಡೆಯುವುದೆಂದು ಭಾವಿಸು. ॥೩೨॥

ಹೀಗೆ ಬ್ರಹ್ಮ, ವಿಷ್ಣು, ರುದ್ರರನ್ನು ಪ್ರಳಯಾನಂತರ ಸೃಷ್ಟಿಮಾಡಿ, ಸೃಷ್ಟಿ ಕಾರ್ಯಕ್ಕಾಗಿ ಸಕಲ ವೇದಗಳನ್ನೂ ಬ್ರಹ್ಮನಿಗೆ ಕೊಟ್ಟು, ಪ್ರಳಯಕಾಲದಲ್ಲಿ ನನ್ನ ಉತ್ತಮವಾದ ಫಾಲನೇತ್ರದಿಂದ ಮಹಾರುದ್ರನನ್ನು ನಿರ್ಮಿಸುತ್ತೇನೆ. ಎಲೌ ಪಾರ್ವತಿ, ಹೀಗೆ ತ್ರಿಮೂರ್ತಿಗಳ ಕಾರ್ಯದಿಂದ ಸ್ವೇಚ್ಛೆಯಾಗಿ ಪ್ರಪಂಚವೆಲ್ಲವೂ ಪೂರ್ಣವಾಗಿರಲು, ಪುನಃ ನನ್ನ ಹಣೆಗಣ್ಣಿನ ಜ್ವಾಲೆಯಿಂದ ಪ್ರಪಂಚವನ್ನು ಭಸ್ಮ

ಬ್ರಹ್ಮಾ ಹರಿರ್ಹರಸುರಾಸ್ತ್ರಿಜಗತ್ಪ್ರತಿಷ್ಠಾ
ಸೃಷ್ಟ್ಯಂತಪಾಲನ ವಿಸರ್ಗಕರಾ ಭವಂತಿ ।
ಪೂರ್ವಂ ಯಥೈವ ಮಮ ಚಿತ್ತವಶಾನುಗಾಸ್ತೇ
ಏವಂ ತವಾದ್ಯ ಕಥಿತಾ ನಿಯತಿಶ್ಚ ಗೌರಿ ॥೩೪॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಜಗತ್ಸೃಷ್ಟಿಕ್ರಮ
ವರ್ಣನಂ ನಾಮ ಚತುರ್ದಶೋಽಧ್ಯಾಯಃ

---

ಮಾಡಿಬಿಡುವೆನು. ಪುನಃ ಹೀಗೆಯೇ ಪ್ರಪಂಚವನ್ನು ಸೃಷ್ಟಿಮಾಡಿಸುವೆನು. ಇದು ನನ್ನ ಲೀಲೆ. ॥೩೩॥

ಹೀಗೆ ಬ್ರಹ್ಮ, ವಿಷ್ಣು, ರುದ್ರ ಈ ದೇವತೆಗಳು ಮೂರುಲೋಕಗಳ ಸೃಷ್ಟಿ, ಸ್ಥಿತಿ, ಸಂಹಾರರೂಪವಾದ ಕಾರ್ಯಗಳಲ್ಲಿ ನಿರತರಾಗುತ್ತಾರೆ. ಹಿಂದೆ ಅವರೆಲ್ಲರೂ ನನ್ನ ಮನಸ್ಸಿಗೆ ಅನುಗುಣವಾಗಿದ್ದಂತೆಯೇ ಈಗಲೂ ನಡೆಯುತ್ತಿರುವರೆಂದು ತಿಳಿ. ದೇವಿ, ಈರೀತಿ ನಡೆಯುತ್ತಿರುವ ನನ್ನ ಲೀಲಾಕ್ರಮವನ್ನು ಈಗ ನಾನು ನಿನಗೆ ವಿವರಿಸಿ ಹೇಳಿರುವೆನು ಎಂದು ಪರಶಿವನು ಪಾರ್ವತಿಗೆ ಹೇಳಿದನು. ॥೩೪॥

ಇಲ್ಲಿಗೆ ಶ್ರೀ ಶಿವರಹಸ್ಯದ ಸದಾಶಿವಸಂಜ್ಞಕವಾದ ಒಂಭತ್ತನೆಯ ಅಂಶದಲ್ಲಿ ಪ್ರಪಂಚಸೃಷ್ಟಿಕ್ರಮವರ್ಣನೆಯೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಪಂಚದಶೋಽಧ್ಯಾಯಃ

॥ ದೇವ್ಯುವಾಚ ॥

ದಾಮೋದರಸ್ತ್ವಯೋದಾರ ಉದರೋದರಸಂಸ್ಥಿತಃ ।
ಅವಾತ್ಸೀತ್ಸ ಕಿಯಂತಂ ವೈ ಕಾಲಂ ಕಾಲವಿನಾಶನ ॥೧॥

ತನ್ಮಹ್ಯಂ ಕೌತುಕವತೀಂ ವಾಚಮಾಮೋಚಯಾಧುನಾ ॥೨॥

॥ ಶ್ರೀ ಸ್ಕಂದ ಉವಾಚ ॥

ಇತ್ಥಂ ದೇವ್ಯಾ ತದಾ ಪೃಷ್ಟೋ ಮಹಾದೇವೋಽಭ್ಯುವಾಚ ತಾಂ ॥೩॥

---

### ಹದಿನೈದನೆಯ ಅಧ್ಯಾಯ

ಪರಶಿವನ ಮಾತುಗಳನ್ನು ಕೇಳಿ ಮತ್ತೆ ಪಾರ್ವತಿಯು ಯಮಾಂತಕನಾದ ಸ್ವಾಮಿಯೇ, ನಿನ್ನ ಹೃದಯದಲ್ಲಿ ಮಹಾವಿಷ್ಣುವು ಉದ್ಭವಿಸುವನೆಂದು ಹೇಳಿದೆಯಲ್ಲವೆ? ಹಾಗಾದರೆ ಆ ವಿಷ್ಣುವು ಎಷ್ಟುಕಾಲ ನಿನ್ನ ಹೃದಯದಲ್ಲಿ ಅಡಗಿರುವನು? ಹಾಗೆ ಅಡಗಿರಲು ಕಾರಣವೇನು? ಆ ವಿಷಯವನ್ನು ತಿಳಿಯಬೇಕೆಂದು ನನಗೆ ತುಂಬಾ ಕುತೂಹಲವುಂಟಾಗಿದೆ. ಮಹಾದೇವನೇ, ಈ ನನ್ನ ಸಂಶಯವನ್ನು ನಿನ್ನ ಮಧುರ ಮಾತುಗಳಿಂದ ನಿವಾರಿಸಿ ಸಂತೋಷಪಡಿಸುವವನಾಗೆಂದು ಶಿವನನ್ನು ಬೇಡಿಕೊಂಡಳು. ॥೧-೨॥

ಹೀಗೆ ದೇವಿಯಿಂದ ಪ್ರಶ್ನೆ ಮಾಡಲ್ಪಟ್ಟ ಮಹಾದೇವನು, ಪಾರ್ವತಿಯನ್ನು ಕುರಿತು, ಹೀಗೆ ಹೇಳಿದನೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಶಿವರಹಸ್ಯದ ಕಥೆಯನ್ನು ಮುಂದುವರಿಸಿದನು. ॥೩॥

॥ ಶ್ರೀ ಈಶ್ವರ ಉವಾಚ ॥

ಶೃಣು ಮೇ ಕೌತುಕಂ ದೇವಿ ಕಮಲಾಮಲಲೋಚನೇ ।
ವಿಷ್ಣುರ್ಬಭ್ರಾಮ ತತ್ರೈವ ಕಲ್ಪಂ ಮದುದರಸ್ಥಿತಃ ॥೪॥

ಸಾಗರಾಂತ್ಸರಿತಃ ಶೈಲಾನ್ದ್ವೀಪಾನ್ವನಪುರಾಣಿ ಚ ।
ದೇವಾದೀನಸುರಾಂಶ್ಚೈವ ಭೂತಭವ್ಯಮನುಂ ತಥಾ ॥೫॥

ಸ ಶಕ್ರಶುಕ್ರಾದಿಗ್ರಹಾಂಶ್ಸೋಮಸೂರ್ಯಾಂಶ್ಚ ಋಕ್ಷಕಾನ್ ।
ಗಂಧರ್ವಾಪ್ಸರಸಃ ಸಿದ್ಧಸಾಧ್ಯಾನ್ವಸ್ವಶ್ವಿನೌ ತಥಾ ॥೬॥

ಸ್ವಸಮಾನಾಂಸ್ತಥಾ ವಿಷ್ಣೂನ್ಬ್ರಹ್ಮರುದ್ರಮುನೀಂಸ್ತಥಾ ।
ವೇದಾಶ್ಚತ್ವಾರ ಏವೈತೇ ವೇದಾಂಗಾಃ ಶಾಸ್ತ್ರಜಾಲಕಂ ॥೭॥

ಸರ್ವಂ ಭೂತಂ ಚ ಭವ್ಯಂ ಚ ಕಾಲಕಲ್ಪಾ ತು ಯಕ್ಷಕಾಃ ।
ಅಹರ್ನಿಶಾ ವರ್ಷಜಾಲಂ ಯುಗಾಶ್ಚತ್ವಾರ ಏವ ಹಿ ॥೮॥

ಸರ್ವಂ ಚರಾಚರಂ ದೃಷ್ಟ್ವಾ ವಿಸ್ಮಯೋತ್ಫುಲ್ಲಲೋಚನಃ ।
ಹರಿಸ್ತುಷ್ಟಾವ ಮಾಂ ದೇವಿ ತದಾ ಮದುದರೇ ಸ್ಥಿತಃ ॥೯॥

---

ಕಮಲಲೋಚನಳೆನಿಸಿದ ಪಾರ್ವತಿಯೇ, ಒಂದಾಶ್ಚರ್ಯವನ್ನು ಕೇಳು, ಒಂದುಸಾರಿ ವಿಷ್ಣುವು ನನ್ನ ಹೊಟ್ಟೆಯಲ್ಲಿಯೇ ನನ್ನ ಸ್ವರೂಪವನ್ನರಿಯಬೇಕೆಂದು ಒಂದು ಕಲ್ಪಕಾಲದವರೆಗೆ ಅಲೆಯುತ್ತಿದ್ದನು. ಆಗ ನನ್ನ ಉದರದಲ್ಲಿ ಸಾಗರಗಳು ನದಿಗಳು, ಬೆಟ್ಟಗಳು, ದ್ವೀಪಗಳು, ಕಾಡುಗಳು, ಪಟ್ಟಣಗಳು, ಸಮಸ್ತ ದೇವತೆಗಳೂ ರಾಕ್ಷಸರೂ, ಕಳೆದುಹೋದ ಮತ್ತು ಮುಂದೆ ಬರುವ ಮನುಗಳೂ, ಇಂದ್ರ, ಶುಕ್ರನೇ ಮೊದಲಾದ ಗ್ರಹಗಳೂ, ಚಂದ್ರಸೂರ್ಯರು, ಗಂಧರ್ವರು, ಅಪ್ಸರಸ್ಸುಗಳು, ಸಿದ್ಧರು ಸಾಧ್ಯರು, ವಸುಗಳು, ಅಶ್ವಿನೀದೇವತೆಗಳೂ ಅವನಿಗೆ ಅಲ್ಲಿಯೇ ಕಂಡುಬಂದರು. ॥೪-೫-೬॥

ಮತ್ತು ನನ್ನ ಹೃದಯದಲ್ಲಿ ಆ ವಿಷ್ಣುವಿಗೆ ಸಮಾನರಾಗಿರುವ ಅನೇಕ ವಿಷ್ಣುಗಳೂ, ಬ್ರಹ್ಮರುದ್ರರೂ, ನಾಲ್ಕು ವೇದಗಳೂ, ಆರು ವೇದಾಂಗಗಳೂ, ಇತರ ಶಾಸ್ತ್ರಸಮೂಹಗಳೂ, ಭೂತಭವಿಷ್ಯದ್ರೂಪಗಳೆನಿಸಿದ ಕಾಲರೂಪಿಯಾದ ಕಲ್ಪಗಳು, ಯಕ್ಷರು, ಹಗಲಿರುಳುಗಳು, ವರ್ಷಸಮೂಹಗಳೂ, ಕೃತಾದಿ ನಾಲ್ಕುಯುಗಗಳೂ

ಪ್ರಣಮ್ಯ ಪ್ರಾಂಜಲಿಃ ಪ್ರಾಹ ಧೃತರುದ್ರಾಕ್ಷಭೂತಿಯುಕ್ ।
ಸಮ್ಯಗಾಕರ್ಣಯಾಪರ್ಣೇ ಮಮ ವಿಷ್ಣುಕೃತಾಂ ಸ್ತುತಿಂ ॥೧೦॥

ತಯಾ ಸ್ತುತ್ಯಾ ಸುಪ್ರಸನ್ನಸ್ತಮಪಾನಾದಮೋಚಯಂ ।
ಅಧರೇಂದ್ರಿಯಜಾತತ್ವಾದಧೋಕ್ಷಜ ಇತಿ ಸ್ಮೃತಃ ॥೧೧॥

॥ ವಿಷ್ಣುರುವಾಚ ॥

ಉಗ್ರೋಽನುಗ್ರೋಽಸಿ ಶಂಭೋ ಪುರಹರ ಭಗವನ್ನಂಧಕಾರೇ ಕಪರ್ದಿ
ನ್ಭೂತೇಶಾಮರಪಾಲಶಂಕರಮಹಾಗ್ರಾಸೋಽಸಿ ವೇದೇರಿತಃ ।
ಮಾಂ ಪಾಹೀಶ್ವರ ಸಾಮಿಸೋಮಶಕಲಾಲಂಕಾರಮೌಳೇ ಹರ
ಸ್ವಾಮಿನ್ದೇವ ದಯಾನಿಧೇ ಕರುಣಯಾ ತ್ವಂ ಶರ್ವ ಸರ್ವೇಶ್ವರ ॥೧೨॥

---

ತುಂಬಿದ್ದುವು. ಇಂತಹ ಚರಾಚರಾತ್ಮಕವಾದ ಪ್ರಪಂಚವನ್ನೆಲ್ಲಾ ನೋಡಿ, ವಿಷ್ಣುವು ಆಶ್ಚರ್ಯದಿಂದ ಅರಳಿದ ಕಣ್ಣುಳ್ಳವನಾಗಿ ನನ್ನನ್ನು ಅಲ್ಲಿಯೇ ಇದ್ದುಗೊಂಡು ನಾನಾರೀತಿ ಸ್ತೋತ್ರಮಾಡಿದನು. ॥೭-೮-೯॥

ಹಾಗೆ ಸ್ತೋತ್ರಮಾಡುವಾಗ ವಿಷ್ಣುವು ಭಸ್ಮರುದ್ರಾಕ್ಷಧಾರಿಯಾಗಿ ಪದೇ ಪದೇ ವಂದಿಸುತ್ತಾ ರುದ್ರಾಕ್ಷಧಾರಿಯಾಗಿದ್ದನು. ಎಲೌ ಅಪರ್ಣೇ, ಆ ವಿಷ್ಣುವು ಆಗ ನನ್ನನ್ನು ಸ್ತೋತ್ರಮಾಡಿದ ಕ್ರಮವನ್ನು ಹೇಳುವೆನು. ಚೆನ್ನಾಗಿ ಲಾಲಿಸು ; ದೇವಿ, ಆ ವಿಷ್ಣುವಿನ ಸ್ತುತಿಯಿಂದ ಪ್ರಸನ್ನನಾಗಿ ನಾನು ಅವನನ್ನು ಅಪಾನವಾಯು ನಿಷ್ಕ್ರಮಣಜಾಗದಿಂದ ಬಿಟ್ಟೆನು, ವಿಷ್ಣುವು ಹಾಗೆ ಕೆಳಗಿನ ಇಂದ್ರಿಯದಿಂದ ಹುಟ್ಟಿದವನಾದುದರಿಂದ ಅವನಿಗೆ ಅಧೋಕ್ಷಜನೆಂದು ಹೆಸರಾಯಿತು. ॥೧೦-೧೧॥

ಶತ್ರುಭಯಂಕರನಾದ ಶಂಭುವೇ, ನೀನು ಸ್ವಭಾವತಃ ಉಗ್ರನಾದರೂ ಭಕ್ತರಿಗೆ ಶಾಂತಸ್ವರೂಪನಾಗಿರುವೆ. ತ್ರಿಪುರರನ್ನು ಸಂಹರಿಸಿದವನೂ, ಷಡ್ಗುಣಭರಿತನೂ, ಅಂಧಕಾಸುರಸೂದನನೂ ಆದ ನೀನು ಜಟಾಭಾರದಿಂದ ರಂಜಿಸುತ್ತಿರುವೆ. ಸಕಲ ಭೂತಗಳಿಗೂ ಒಡೆಯನೆನಿಸಿ ದೇವತೆಗಳನ್ನು ಪಾಲಿಸುವವನೂ, ಜಗನ್ಮಂಗಳಕರನೂ, ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ಪೂರ್ಣವಾಗಿ ನುಂಗುವವನೂ ಆಗಿರುವೆ. ವೇದಪ್ರತಿಪಾದ್ಯನಾದ ಈಶ್ವರನೇ, ನನ್ನನ್ನು ಕಾಪಾಡು. ಎಲೌ ಅರ್ಧಚಂದ್ರಕಲಾಮೌಳಿಯೇ, ಶಿವನೇ, ದಯಾನಿಧಿಯಾದ ಸ್ವಾಮಿಯೇ, ಶರ್ವನೂ, ಸಕಲಲೋಕಕ್ಕೆ ಈಶ್ವರನೂ ಆಗಿರುವ ನೀನು ನನ್ನನ್ನು ದಯೆಯಿಂದ ಕಾಪಾಡು. ॥೧೨॥

ಹೇ ಮನ್ಮಥಾಂತಕ ಮಹೇಶ್ವರ ದೇವದೇವ
ಶ್ರೀವಾಮದೇವ ಜಿತಕಾಮ ಉಮಾಸಹಾಯ ।
ವ್ಯೋಮಾದಿಭೂಮ ಶ್ರುತಿಸೀಮ ಸುಖಾದಿಧಾಮ
ಸಾಮ್ನೈಸ್ತು ವಾಮಹರ ಸೋಮಲಲಾಮ ಪಾಹಿ ॥೧೩॥

ಭೋ ಭರ್ಗ ತ್ರಿಜಗಚ್ಛರಣ್ಯ ಕರುಣಾ ಕಾರುಣ್ಯವಾರಾಂ ನಿಧೇ
ಹೇ ಕಾಲಾಂತಕ ದೇವದಾನವ ಸುರಾಧ್ಯಕ್ಷಾದಿ ಸಂಸೇವಿತ ।
ವೀಕ್ಷಾಶಿಕ್ಷಿತ ಮನ್ಮಥಾಂತಕ ಮಹಾದಕ್ಷಾದಿದೀಕ್ಷಾಪಹ
ಉಕ್ಷಾಧ್ಯಕ್ಷಭಗಾಕ್ಷಿನಾಶಕ ಮಹಾದೇವಾದ್ಯ ಸಂವೀಕ್ಷಯ ॥೧೪॥

ಜಟಾಜೂಟಾಭೂಷಾ ಶಿವ ಸುರಸರಿತ್ಪೂರಮಸಕೃ-
ನ್ಮಹಾಘೋಟೇ ಧಾಟೇ ಶ್ರುತಿವಚನಕೋಟೀರಕ ವಿಭೋ ।
ವಧೂಟೀ ಶೈಲಾಜಾ ತರುಣಶಶಿಚೂಡಾಲ ಭಗವ-
ನ್ನನಾಥಂ ಮಾಂ ಶಂಭೋ ಸುಖಯತು ಸನಾಥಾ ತವ ಕೃಪಾ ॥೧೫॥

---

ಮನ್ಮಥಶತ್ರುವೆನಿಸಿ ಐಶ್ವರ್ಯಭರಿತನಾಗಿ ದೇವದೇವನಾಗಿರುವ ಮಹಾದೇವನೇ, ನೀನು ಸುಂದರವಾದ ದೇಹವುಳ್ಳವನು, ಮನ್ಮಥನನ್ನು ಗೆದ್ದವನು, ಉಮಾರಮಣನು, ಆಕಾಶವೇ ಮೊದಲಾದವುಗಳಿಗೆ ಆಶ್ರಯನು, ವೇದಗಳಿಗೆ ಎಲ್ಲೆಯಾಗಿರುವವನು, ಸುಖಸಂತೋಷಗಳಿಗೆ ನೆಲೆಯಾಗಿ ಸಾಮಗಾನದಿಂದ ಸ್ತುತನಾಗಿ ದೇವಿಯೊಡನೆ ವಿಹಾರಮಾಡುತ್ತಿರುವೆ. ಇಂತಹ ಚಂದ್ರಶೇಖರನೆನಿಸಿದ ಸ್ವಾಮಿಯೆ, ನನ್ನನ್ನು ಕಾಪಾಡು. ॥೧೩॥

ಮನ್ಮಥ, ಯಮ, ಮುಂತಾದವರನ್ನೆಲ್ಲಾ ನಿಗ್ರಹಮಾಡಿದವನೇ, ಮೂರು ಲೋಕಕ್ಕೂ ರಕ್ಷಕನಾಗಿರುವವನೇ, ಕರುಣಾಸಮುದ್ರನೇ, ಯಮಾಂತಕನೇ, ದೇವತೆಗಳು, ದಾನವರು, ದೇವೇಂದ್ರ ಇವರಿಂದ ಸೇವಿಸಲ್ಪಡುವವನೇ, ದರ್ಶನಮಾತ್ರದಿಂದಲೇ ಮನ್ಮಥ ಮತ್ತು ಯಮ ಇವರಿಬ್ಬರನ್ನೂ ಶಿಕ್ಷೆಮಾಡಿದವನೇ, ದಕ್ಷಬ್ರಹ್ಮನ ಮಹಾದೀಕ್ಷೆಯನ್ನೂ ಸಹ ಭಂಗಪಡಿಸಿದವನೇ, ವೃಷಭವಾಹನನೇ, ಭಗನೆಂಬದೇವತೆಯ ಕಣ್ಣನ್ನು ದಕ್ಷಯಜ್ಞಕಾಲದಲ್ಲಿ ನಾಶಮಾಡಿದವನೇ, ಮಹಾದೇವನೇ, ಇಂದು ನನ್ನ ಮೇಲೆ ಕರುಣಾಕಟಾಕ್ಷವನ್ನು ಬೀರು. ॥೧೪॥

ಜಡೆಗಳ ಸಂಘಗಳಿಂದ ಅಲಂಕೃತನಾದವನೇ, ನೀನು ನಿನ್ನ ಜಡೆಗಳ ಬಿಗಿತ

ವೇದಾಶ್ವಸಾರಥಿವಿಧೇರ್ವರಚಕ್ರಕೇಂದು
ಕ್ಷ್ಮಾಸ್ಯಂದನಕ್ಷಿತಿಧರಾತ್ತಶರಾಸನೇಜ್ಯ ।
ಸೋಮಾಗ್ನಿವಿಷ್ಣುಶರಕೃಂತಪುರಾದಿಕಸ್ತ್ವಂ
ಜೇತಾ ರಥೇಷ್ವಧಿಪತಿಃಸುರಸೈನ್ಯಪಾಲಃ ॥೧೬॥

ಪಶ್ಯಾಮ್ಯಹಂ ಪ್ರಾಮಿ ಶಂಭೋ ತವ ವರಕರುಣಾಪಾರಪೂರೈಕರಾಶಿಂ
ವಾರಾಶೀನಮುರಾಸುರ ದ್ವಿಜವರಾನ್ಲೋಕಾಂಶ್ಚ ಲೋಭ್ಯಾನಪಿ ।
ಮಾಂ ನಿಸ್ತಾರಯ ವಿಸ್ತರೋರುಜಠರೀ ಕಾಂತಾರತಸ್ತ್ವಂ ವಿಭೋ
ಬಿಭ್ಯಂತಂ ಕರುಣಾರುಣದ್ಧಿ ಯದಿ ತೇ ಚಿತ್ತೇನ ಹೃಷ್ಟೋ ಹರ ॥೧೭॥

---

ದಿಂದಲೇ ದೇವಗಂಗಾನದಿಯ ಪ್ರವಾಹವನ್ನು ತಡೆದು ನಿಲ್ಲಿಸಿಬಿಟ್ಟೆ. ವೇದವಾಕ್ಯಗಳಿಗೆ ಅಗ್ರಸ್ಥಾನನಾಗಿರುವ ವಿಭುವೇ, ಪರ್ವತರಾಜಕುಮಾರಿಯನ್ನೇ ಪತ್ನಿಯನ್ನಾಗಿ ಮಾಡಿಕೊಂಡಿರುವವನೇ, ಬಾಲಚಂದ್ರಶೇಖರನಾದ ಭಗವಂತನೇ, ಜಗನ್ಮಂಗಳಕರನಾದ ನೀನು ಅನಾಥನಾದ ನನ್ನನ್ನು ಸಲಹು. ಸ್ವಾಮಿ, ನಿನ್ನ ದಯೆಯು ನನ್ನನ್ನು ಸನಾಥನನ್ನಾಗಿ ಮಾಡಿ ಸುಖಪಡಿಸಲಿ. ॥೧೫॥

ವೇದಗಳನ್ನೇ ಕುದುರೆಗಳನ್ನಾಗಿಯೂ, ಬ್ರಹ್ಮನನ್ನು ಸಾರಥಿಯನ್ನಾಗಿಯೂ, ಚಂದ್ರಸೂರ್ಯರನ್ನೇ ರಥಚಕ್ರಗಳನ್ನಾಗಿಯೂ ಮಾಡಿಕೊಂಡು, ಭೂಮಿಯೆಂಬ ತೇರಿನಲ್ಲಿ ಕುಳಿತು, ಮೇರುಪರ್ವತವನ್ನೇ ಬಿಲ್ಲಾಗಿಯೂ, ಆದಿಶೇಷನನ್ನು ಹೆದೆಯನ್ನಾಗಿಯೂ ಕಲ್ಪಿಸಿ, ಸೋಮ, ಅಗ್ನಿ ಮತ್ತು ವಿಷ್ಣುಗಳನ್ನು ಬಾಣಗಳನ್ನಾಗಿಟ್ಟು ತ್ರಿಪುರಾಸುರರೇ ಮುಂತಾದ ರಕ್ಕಸರನ್ನು ಕೊಂದ ನೀನು ರಥದಲ್ಲಿ ದೇವಸೈನ್ಯವನ್ನು ಕಾಪಾಡುತ್ತಾ ಶತ್ರುಗಳನ್ನು ಗೆದ್ದಿರುವೆ. ॥೧೬॥

ಎಲೈ ಶಂಭುವೇ, ನಿನ್ನ ಶ್ರೇಷ್ಠವಾದ ಅಪಾರ ದಯಾರಸವನ್ನೇ ಜಲಭರಿತವಾದ ಸಮುದ್ರವೆಂದು ತಿಳಿದಿದ್ದೇನೆ. ನೀನು ಅಗಾಧಗಳಾದ ಸಮುದ್ರಗಳನ್ನೂ ಹಾಗೆಯೇ ದೇವತೆಗಳು, ರಾಕ್ಷಸರು, ಬ್ರಾಹ್ಮಣೋತ್ತಮರು ಮತ್ತು ಲೋಭವಿಶಿಷ್ಟರಾದ ಇತರ ಸಕಲ ಮಾನವರು, ಇವರನ್ನೆಲ್ಲಾ ಉದ್ಧಾರಮಾಡುತ್ತಿರುವೆ. ಎಲೈ ವಿಭುವೇ, ಬಹು ವಿಸ್ತಾರವಾದ ನಿನ್ನ ಹೃದಯವೆಂಬ ದೊಡ್ಡ ಕಾಡಿನಿಂದ ಹೊರ ಹೋಗುವಂತೆ ನನ್ನಲ್ಲಿ ಕರುಣೆಯಿಡು. ಭಯಗೊಂಡಿರುವ ನನ್ನನ್ನು ನೀನು ದಯೆಯಿಂದ ಅನುಗ್ರಹಿಸಿ, ನಿಜವಾಗಿಯೂ ನಿನ್ನ ಮನಸ್ಸಿನಲ್ಲಿ ನನ್ನನ್ನು ಉದ್ಧಾರಮಾಡಬೇಕೆಂಬ ಇಚ್ಛೆಯಿದ್ದರೆ ಕಾಪಾಡು ಎಂದು ವಿಷ್ಣುವು ಸ್ತೋತ್ರಮಾಡಿದನು. ॥೧೭॥

ಅರೀರಚದಿಮಂ ಸ್ತವಂ ಮುರಹರೋಽಬ್ಜನೇತ್ರೋಽಂಬಿಕೇ-
ಷ್ಯರೀರಮದಥೋತ್ಥಿತೋ ಮಮ ಸುಭಕ್ತಿಪೂರಾದರಃ ।
ಭರೀಭರದಥಾಂಜಸಾ ಮಮ ಪದಾಬ್ಜಪೂಜೋತ್ಸವೈ
ರಭೀಭರದಿದಂ ಜಗನ್ಮಮ ವರೋದರಾನ್ನಿಸ್ಸೃತಃ ॥೧೮॥

ವಿಷ್ಣುರ್ಜಿಷ್ಣುರ್ಭಿವಿಷ್ಣುರ್ಮದುದರಪಿಠರೀಪೀಠಸಂಸ್ಥೋರುಲೋಕಾಂ
ಸ್ಸಂವೀಕ್ಷ್ಯೈವ ಸುರಾಸುರವ್ರಜಹರಬ್ರಹ್ಮೇಂದ್ರನಾರಾಯಣಾನ್ ।
ದ್ವೀಪಾಬ್ಧಿಪ್ರವರಾನ್ನದೀಗಿರಿವನಂ ಕಿಂ ವೇತ್ಯಮೋ ವಿಸ್ಮಯ
ನ್ನಿಮಂ ಸ್ತವಮಪೀಪಠಚ್ಛ್ರುತಮಘೌಘನಾಶಾಯ ಹಿ ॥೧೯॥

ಪ್ರಾಣೇಶಿ ವಿಧಿರಪ್ಯಮೋ ಹರಿಮಥೋ ದೃಷ್ಟ್ವೋದರಾನ್ನಿಸ್ಸೃತಂ
ಚಾಸ್ಥಾಪಿಷನ್ಮಮ ಪಾದಪಂಕಜಲಸದ್ಭೃಂಗಾಂಗಸಂಗೋಪಮಃ ।

---

ಎಲೌ ಅಂಬಿಕೇ, ಕಮಲನೇತ್ರನಾದ ಆ ವಿಷ್ಣುವು ಈ ಸ್ತೋತ್ರವನ್ನು ತಾನೇ ಹೀಗೆ ರಚಿಸಿ ಹಾಡಿದನು. ಹಾಗೆಯೇ ನನ್ನನ್ನು ಧ್ಯಾನಿಸುತ್ತಾ ಉತ್ತಮವಾದ ಶಿವಭಕ್ತಿಪ್ರವಾಹದಲ್ಲಿ ಆದರವುಳ್ಳವನಾಗಿ ವಿಹರಿಸಿದನು. ಹೀಗೆ ಧ್ಯಾನಸ್ತುತಿಗಳಿಂದ ನನ್ನನ್ನು ಮೆಚ್ಚಿಸಿ, ನನ್ನ ಅನುಮತಿಯಿಂದ ಹೊಟ್ಟೆಯೊಳಗಿನಿಂದ ಹಿಂದೆ ಹೇಳಿದಂತೆ ಹೊರಬಿದ್ದ ವಿಷ್ಣುವು ಈ ಜಗತ್ತನ್ನೆಲ್ಲಾ ನನ್ನ ಪಾದಕಮಲಪೂಜಾ ಉತ್ಸವಾದಿಗಳಿಂದಲೇ ಪೂರ್ಣಗೊಳಿಸಿದನು. ॥೧೮॥

ಸರ್ವ ವ್ಯಾಪಕನೂ, ಜಯಶೀಲನೂ, ನಾನಾರೀತಿಯ ಅವತಾರಮಾಡುವವನೂ, ಆದ ವಿಷ್ಣುವು ನನ್ನ ಹೃದಯದಲ್ಲಿದ್ದ ದೊಡ್ಡ ಲೋಕಗಳನ್ನೂ, ದೇವ ದಾನವರ ಸಮೂಹಗಳನ್ನೂ, ರುದ್ರ, ಬ್ರಹ್ಮ, ಇಂದ್ರ ಮತ್ತು ನಾರಾಯಣರನ್ನೂ, ದ್ವೀಪಗಳೂ, ಉತ್ತಮ ಸಮುದ್ರಗಳು, ನದಿಗಳು, ಬೆಟ್ಟಗಳು, ಕಾಡುಗಳೆಲ್ಲವನ್ನೂ ನೋಡಿ ವಿಸ್ಮಯಗೊಂಡವನಾಗಿ, ಇದೇನಾಶ್ಚರ್ಯವೆನ್ನುತ್ತಾ, ಕೇವಲ ಶ್ರವಣಮಾಡುವುದರಿಂದಲೇ ಸಕಲ ಪಾಪರಾಶಿಗಳನ್ನೂ ನಾಶಗೊಳಿಸುವ ಈ ಸ್ತೋತ್ರವನ್ನು ಪುನಃ ಪಠಿಸಿ ಪ್ರಚಾರಮಾಡಿದನು. ॥೧೯॥

ಪ್ರಾಣೇಶ್ವರಿಯಾದ ಉಮಾದೇವಿಯೇ, ಹೀಗೆ ನನ್ನ ಹೃದಯಮಧ್ಯದಿಂದ ಹೊರಬಿದ್ದ ಆ ವಿಷ್ಣುವನ್ನು ನೋಡಿ, ಬ್ರಹ್ಮನೂ ಸಹ ನನ್ನ ಪಾದಕಮಲದಲ್ಲಿ ತನ್ನ ಚಿತ್ತವೆಂಬ ದುಂಬಿಯನ್ನು ಹಾರಾಡಿಸಿ, ಪದೇಪದೇ ವಂದಿಸುತ್ತಾ ನನ್ನ

ಪ್ರಹ್ವೈಸ್ಸ್ವರ್ವದನಚ್ಯುತೋರುಸುರಸಂ ನಂದೋತ್ಥಸತ್ಕಂದಲೀ-
ನಾಚಾ ಮಾಂ ಸುರಸಾಯನೋತ್ತರ ಝುರೀಪೂರೇಣ ಪಶ್ಯಾಂಬಿಕೇ ॥೨೦॥

ಯಕ್ಷಾಧೀಶಸಖಂ ವಲಕ್ಷಭಸಿತಾನಂಗಾಂಗಮುಕ್ಷಸ್ಥಿತಂ
ಪಕ್ಷೀಂದ್ರಪ್ರಿಯವಾಹಪೂಜಿತಮುಮಾವಕ್ಷೋಜಶೈಲಪ್ರಿಯಂ ।
ಭಿಕ್ಷಾಪೂರ್ಣಕಪಾಲಪಾಣಿ ಸುರತಾಪಕ್ಷಸ್ಥಿತಂ ತ್ವಾಂ ಭಜೇ
ತ್ರ್ಯಕ್ಷಂ ದಕ್ಷಸುಶಿಕ್ಷಕಂ ಪುರಹರಂ ಚಕ್ಷುಶ್ಶ್ರವಾಕಲ್ಪಕಂ ॥೨೧॥

ಮಾತಂಗತ್ವಗಲಂಕೃತಾಂಗಮಗಜಾಕಾಂತಂ ಕುರಂಗಾಂಕಧೃಕ್
ಹಾರೀಭೂತಭುಜಂಗರಾಜವಿಲಸದ್ಗಂಗಾಕಪರ್ದೋಜ್ಜ್ವಲಂ ।
ಲೀಲಾಂಗೀಕೃತಲಿಂಗಸಂಗತಮಹಾಘಾಲೇ ಪತಂಗಸ್ಫುರ
ಜ್ಜ್ವಾಲಾಲೋಲವರಾಂಗಭಂಗ ಸುಮಹದ್ವಿಧ್ಯುತ್ತಮಾಂಗಂ ಭಜೇ ॥೨೨॥

---

ಸ್ವರೂಪವನ್ನೇ ಕ್ಷಣಕ್ಷಣದಲ್ಲಿಯೂ ಅನುಸಂಧಾನಮಾಡುತ್ತಾ ವಿನಯಪೂರ್ವಕವಾಗಿ ಈರೀತಿ ಸ್ತುತಿಸಿದನು. ಆ ಸ್ತೋತ್ರವಾದರೋ ರಸಭರಿತವಾದುದಾಗಿಯೂ, ಮೃದು ಮಧುರಶೈಲಿಯಿಂದ ಉತ್ತಮವಾದ ರಸಾಯನದ ಝುರಿಯಂತೆ ತೋರುವುದಾಗಿಯೂ ಇದ್ದಿತು. ಎಲೌ ಅಂಬಿಕೆಯೇ ಅದನ್ನು ಹೇಳುವೆನು ಕೇಳು. ॥೨೦॥

ಯಕ್ಷರಾಜನಾದ ಕುಬೇರನ ಮಿತ್ರನೂ, ಶುಭ್ರವಾದ ಭಸ್ಮವನ್ನು ಧರಿಸಿದವನೂ, ಮನ್ಮಥನಂತೆ ಮನೋಹರವಾದ ದೇಹವುಳ್ಳವನೂ, ವೃಷಭವನ್ನೇರಿರುವವನೂ, ಆದ ಪರಶಿವನೇ, ನೀನು ಪಕ್ಷಿರಾಜನಾದ ಗರುಡನನ್ನೇ ವಾಹನವಾಗುಳ್ಳ ವಿಷ್ಣುವಿನಿಂದ ಪೂಜಿಸಲ್ಪಟ್ಟವನಾಗಿರುವೆ. ನೀನು ಉಮಾದೇವಿಯ ಪರ್ವತ ಸಮಾನವಾದ ಕುಚಗಳಲ್ಲಿ ಪ್ರೀತಿಯುಳ್ಳವನು. ಭಿಕ್ಷೆಯಿಂದ ಪೂರ್ಣವಾಗಿರುವ ಬ್ರಹ್ಮಕಪಾಲವನ್ನು ಹಿಡಿದಿರುವವನು. ದೇವಸಮೂಹಗಳ ಪರವಾಗಿಯೇ ಯಾವಾಗಲೂ ಶತ್ರುನಿಗ್ರಹಮಾಡುವವನು, ಮುಕ್ಕಣ್ಣನು, ದಕ್ಷಬ್ರಹ್ಮನನ್ನು ಶಿಕ್ಷೆಮಾಡಿದವನು, ತ್ರಿಪುರಾಸುರನನ್ನು ನಾಶಗೊಳಿಸಿದವನು, ಆದಿಶೇಷನನ್ನೇ ಆಭರಣವನ್ನಾಗಿ ಮಾಡಿಕೊಂಡಿರುವವನು, ಇಂತಹ ನಿನ್ನನ್ನು ನಾನು ಸದಾ ಸೇವಿಸುವೆನು. ॥೨೧॥

ಗಜಚರ್ಮದಿಂದ ಅಲಂಕರಿಸಲ್ಪಟ್ಟ ದೇಹವುಳ್ಳವನೂ, ಪಾರ್ವತೀರಮಣನೂ, ಚಂದ್ರನೇತ್ರನೂ ಆದ ಜಗದೀಶ್ವರನೇ, ನೀನು ಸರ್ಪರಾಜನನ್ನೇ

ಹರಪುರಹರಾಘೋರ ಕಾಕೋದರ
ಹಾರಾವ ಭವೋದ್ಭವಾಂ ತಥಾರ್ತಿಂ ।
ಪರಿಹರ ಶಿವಾದ್ಯಶಂಕರ
ತ್ರಿಜಗದ್ಬಂಧವಿರಾಮ ದೇವ ಪಾಹಿ ॥೨೩॥

ಭವ ತವ ವಿಭವಾವಲೋಕಭಾವಾ
ಭವನಾಶಾಯ ಕಿಲ ಪ್ರಬುದ್ಧಭಾವಾಃ ।
ಪ್ರಭವಾಯ ವಿಸೃಷ್ಟಿಸಂಸ್ಥಿತೌ
ಮಮ ಕಿಂಚಿತ್ತ್ವಯಿ ಭಾವನಾದಧಸ್ವ ॥೨೪॥

ಶಂಭೋ ಬಾಲೇಂದುಚೂಡದ್ಯುತಿವಿಚಿತದಿಶಸ್ತೋಮ ಸೀಮಾಸುಧಾಮ
ಪ್ರೇಮಾ ತೇ ಮಹಿಮಾವಲೋಕನವಿಧೌ ತ್ವಾಹಂ ಹರಿರ್ವಾ ಹರಃ ।

---

ಹಾರವನ್ನಾಗಿ ಮಾಡಿಕೊಂಡು ಗಂಗಾನದಿಯಿಂದ ಶೋಭಿಸುತ್ತಿರುವ ಜಟಾಜೂಟ ವುಳ್ಳವನಾಗಿ ಲೀಲಾಮಾತ್ರದಿಂದ ಅಂಗೀಕಾರಮಾಡಿರುವ ಸರ್ವಸಂಗವುಳ್ಳವನೆನಿಸಿರುವೆ. ತನ್ನ ದೊಡ್ಡ ಹಣೆಯಲ್ಲಿರುವ ಹಣೆಗಣ್ಣಿನ ಜ್ವಾಲೆಗಳಿಂದ ಸುಂದರಾಂಗನಾದ ಮನ್ಮಥನನ್ನು ಪತಂಗದಂತೆ ಸುಟ್ಟವನು ನೀನು. ಶ್ರೇಷ್ಠವಾದ ಬ್ರಹ್ಮಕಪಾಲವನ್ನು ಧರಿಸಿರುವ ಮಹಾದೇವನೇ, ನಿನ್ನನ್ನೇ ನಾನು ಸದಾ ಭಜಿಸುತ್ತೇನೆ. ॥೨೨॥

ಭಕ್ತರ ಪಾಪರಾಶಿಯನ್ನು ನಾಶಮಾಡುವವನೂ, ತ್ರಿಪುರನಾಶಕನೂ, ಭಯಂಕರವಾದ ಸರ್ಪವನ್ನೇ ಹಾರಮಾಡಿಕೊಂಡಿರುವವನೂ ಆದ ಶಂಕರನೇ, ಈ ಸಂಸಾರಬಂಧನದಿಂದುಂಟಾಗುವ ಪೀಡೆಯಿಂದ ನನ್ನನ್ನು ಕಾಪಾಡು ; ಮಂಗಳಸ್ವರೂಪನೂ, ಜಗನ್ಮಂಗಳಮೂರ್ತಿಯೂ, ಮೂರು ಲೋಕಗಳ ಬಂಧನಗಳನ್ನೂ ಬಿಡಿಸುವವನೂ ಆದ ದೇವದೇವನೇ, ನಮ್ಮನ್ನು ಸಲಹು. ॥೨೩॥

ಜಗದುದ್ಭವಕಾರಣನೇ, ನಿನ್ನ ವೈಭವವನ್ನು ನೋಡುವ ಭಾವನೆಯುಳ್ಳವರು ಈ ಲೋಕದಲ್ಲಿ ತಮ್ಮ ಸಂಸಾರಬಂಧನವನ್ನು ನಾಶಮಾಡಿಕೊಳ್ಳುವುದಕ್ಕೋಸ್ಕರವೇ ಎಚ್ಚೆತ್ತ ಭಾವವುಳ್ಳವರಾಗಿರುವರು. ಮುಂದೆ ಈ ಪ್ರಪಂಚದ ಸೃಷ್ಟಿ ಮಾಡುವ ಕಾರ್ಯವು ಸರಿಯಾಗಿ ನೆರವೇರುವುದಕ್ಕೋಸ್ಕರ ನಿನ್ನ ಭಕ್ತಿಯನ್ನು ನನ್ನಲ್ಲಿ ಕೊಂಚ ಇರಿಸಿ ಕಾಪಾಡು ; ಸ್ವಾಮಿ. ॥೨೪॥

ಶಂಭುವೇ, ತಲೆಯಮೇಲಿರುವ ಬಾಲಚಂದ್ರನ ಕಾಂತಿಯಿಂದ ಸಕಲ ದಿಕ್ಕುಗಳನ್ನೂ ಬೆಳಗಿಸಿ ದಿಕ್ಕುಗಳ ಎಲ್ಲೆಗಳಲ್ಲಿ ವ್ಯಾಪಿಸಿರುವ ತೇಜಸ್ಸುಳ್ಳವನೇ, ದೇವ

ವಿಶ್ವಾಧೀಶ್ವರ ವೇದಜಾಲಸುಮಹಾನಿಶ್ವಾಸ ವಿಶ್ವಾಸಿನೇ
ತದ್ದಾತುಂ ಪ್ರಭವೇದ್ಭವಾನ್ಪ್ರಭುರಹೋ ಕಿಂ ವಚ್ಮಿ ತತ್ರೇಽಗ್ರತಃ ॥೨೫॥

॥ ಶ್ರೀ ಈಶ್ವರ ಉವಾಚ ॥

ತದ್ಬ್ರಹ್ಮಸ್ತುತಿತೋಽಹಮುಗಜೇ ತಂ ಚಾಬ್ರುವಂ ಲೋಕಯ
ನ್ನಸ್ಮೈ ವಾಚಮಿಮಾಮವಾದಿಷಮಿಮಾಂ ತಾಂ ವೈ ಶೃಣುಷ್ವಾಂಬಿಕೇ ।
ತೇನೈವಾಶುವಿನಿರ್ಗತೌ ವಿಧಿಹರೀ ಲೋಕಂ ಚ ಸ್ರಷ್ಟುಂ ತದಾ
ಪಾತುಂ ಮಾಮಭಿತಃ ಪ್ರಣಮ್ಯ ಸಸೃಜೇ ಬ್ರಹ್ಮಾ ಹರಿಃ ಪಾತ್ಯಪಿ ॥೨೬॥

ಅಗಾಧಬೋಧವೇದಜಾಲಮೇವ ತೇ
ನಿಸೃಷ್ಟಮಷ್ಟಮೂರ್ತಿನಾ ಮಮ ।
ತತೋ ವಿಸೃಷ್ಟಿರಧ್ರುವೇ ಭವೇ ಕ್ಷಮಾಯ
ಪೂರಿಣೇ ಭವೋದ್ಭವಾರ್ಚನಾತ್ತವ ॥೨೭॥

---

ದೇವನೇ, ನಿನ್ನ ಪ್ರಭಾವವನ್ನು ನೋಡುವ ಶಕ್ತಿಯಲ್ಲಿ ನಿನ್ನ ಪ್ರೇಮವೊಂದೇ ಕಾರಣವಲ್ಲದೇ, ನಾನಾಗಲೀ, ವಿಷ್ಣುವಾಗಲೀ ಯಾವುದಕ್ಕೂ ಸಮರ್ಥರಾಗಲಾರೆವು. ಜಗದೀಶ್ವರನೇ, ನಿನ್ನ ನಿಶ್ವಾಸರೂಪವಾದ ವೇದರಾಶಿಗಳಲ್ಲಿ ನಂಬಿಕೆಯುಳ್ಳ ನನಗೆ ವೇದಗಳನ್ನು ಅನುಗ್ರಹಿಸಲು ನೀನು ಶಕ್ತನಾಗಿರುವೆ. ಪ್ರಭೋ, ಇದಕ್ಕಿಂತಲೂ ಹೆಚ್ಚಿನದಾದ ಇನ್ನೇನನ್ನು ತಾನೇ, ನಿನ್ನ ಮುಂದೆ ನಾನು ಕೇಳಬಲ್ಲೆನು. ॥೨೫॥

ಅಂಬಿಕೆಯೇ, ಆ ಬ್ರಹ್ಮನ ಸ್ತೋತ್ರದಿಂದ ಸಂತುಷ್ಟನಾದ ನಾನು ಅವನನ್ನು ನೋಡುತ್ತಾ ಅವನಿಗೆ ಈ ಮಾತುಗಳನ್ನು ಹೇಳಿದೆನು. ಅದೇ ಮಾತುಗಳನ್ನು ನಿನಗೆ ಈಗ ಮತ್ತೆ ಹೇಳುವೆನು. ಕೇಳು. ಈರೀತಿಯಾದ ಸ್ತೋತ್ರಗಳಿಂದಲೇ ಅವರಿಬ್ಬರೂ ನನ್ನ ದಯೆಯನ್ನು ಪಡೆದು ಜಠರದಿಂದ ಹೊರಹೊರಟು ನನ್ನಾಜ್ಞೆಯಂತೆ ಲೋಕವನ್ನು ಸೃಷ್ಟಿಮಾಡುತ್ತಲೂ ಕಾಪಾಡುತ್ತಲೂ ಇರುವರು. ಬ್ರಹ್ಮನೂ ಮತ್ತು ವಿಷ್ಣುವೂ ತಮ್ಮ ತಮ್ಮ ಸೃಷ್ಟಿ ಮತ್ತು ಪಾಲನಕಾರ್ಯಗಳನ್ನೆಸಗುವುದಕ್ಕೆ ಮೊದಲು ನನಗೆ ಪ್ರಣಾಮ ಮಾಡಿ ಪ್ರಾರಂಭಿಸಿದರು. ॥೨೬॥

ದೇವ, ಅಷ್ಟಮೂರ್ತಿಯಾದ ನೀನು ಅಗಾಧಜ್ಞಾನರೂಪವಾದ ವೇದರಾಶಿಯನ್ನೇ ಈಗ ನನಗೆ ದಯೆಯಿಂದ ಕೊಟ್ಟಿರುವೆ. ಇದೇ ನನಗೆ ಶುಭಶಕುನ.

ಏವಂ ತೇ ಕಥಿತಂ ಯುಗೋದ್ಭವಮಹಾಧರ್ಮಂ ಗುಣಂ ಚಾಗುಣಂ
ಶ್ರುತ್ವಾ ಹೃಷ್ಟತರಾ ಭವಾಶು ಗಿರಿಜೇ ಕೈಲಾಸಮೌಳಿಪ್ರಿಯೇ ।
ಸಾರಂ ತೇ ಪ್ರವದಾಮ್ಯಹಂ ಪುನರಪಿ ತ್ವಂ ತೂರ್ಣಮಾಕರ್ಣಯ
ನಿಸ್ತೀರ್ಣಾಹಿತ ಏವ ಭಾರಭುವನೇ ಮತ್ಪಾದಪೂಜಾದರಾ ॥೨೮॥

ಕೃತತ್ರೇತಾತಾಂತಾ ಅನಶನತಪೋಭಿಶ್ಚಿರತರಂ
ಮಖಾದೌ ದೀಕ್ಷಾಯಾಮುಪಸದಿ ಶಿವೇ ದ್ವಾಪರಯುಗೇ ।
ಕಲೌ ಕ್ಷೀಣೇ ಧರ್ಮೇ ಪ್ರಭವತಿ ಕ್ಷಣಾರ್ಧೇ ಕ್ಷತಧಿಯಾಂ
ಶಿವಾರ್ಚಾಯಾಂ ಪುಣ್ಯಂ ಮಮ ಭವತಿ ನಾಮ್ನೈವ ವಿಪುಲಂ ॥೨೯॥

---

ಆದ್ದರಿಂದಲೇ ನಿನ್ನ ಪಾದಪೂಜೆಮಾಡುವ ನನಗೆ ಮುಂದೆ ಮಾಡುವ ಪ್ರಜಾಸೃಷ್ಟಿ ಕಾರ್ಯವು ನಿರ್ವಿಘ್ನವಾಗಿ ನೆರವೇರುವುದರಲ್ಲಿ ಸಂದೇಹವೇ ಇಲ್ಲ. ॥೨೭॥

ಪಾರ್ವತಿಯೇ, ಈರೀತಿ ಯುಗಗಳಲ್ಲಿ ಕ್ರಮವಾಗಿ ಉಂಟಾಗುವ ಮಹಾಧರ್ಮ, ಗುಣ ಮತ್ತು ದೋಷಗಳೆಲ್ಲವನ್ನೂ ನಿನಗೆ ವಿಸ್ತಾರವಾಗಿ ಹೇಳಿರುವೆನು. ಕೈಲಾಸಶಿಖರದಲ್ಲಿ ಪ್ರೀತಿಯುಳ್ಳ ದೇವಿಯೇ, ಇದನ್ನು ಕೇಳಿ ಸಂತೋಷಭರಿತಳಾಗು. ದೇವಿ, ಇದಲ್ಲದೇ ನಿನಗೆ ಇನ್ನೂ ಸಾರಭೂತವಾದ ವಿಷಯವನ್ನು ಪುನಃ ಹೇಳುತ್ತೇನೆ. ಏಕಾಗ್ರತೆಯಿಂದ ಕೇಳು. ಈ ವಿಸ್ತಾರವಾದ ಪ್ರಪಂಚದಲ್ಲಿ ನನ್ನ ಪಾದಪೂಜೆಮಾಡುವುದರಲ್ಲಿ ಆದರವುಳ್ಳವರೇ ಉದ್ಧಾರವಾಗುವರೆಂದು ತಿಳಿಯುವಳಾಗು. ॥೨೮॥

ದೇವಿ, ಕೃತತ್ರೇತಾಯುಗಗಳಲ್ಲಿ ಜನರು ಉಗ್ರವಾದ ಉಪವಾಸ, ತಪಸ್ಸು, ಮುಂತಾದುವುಗಳನ್ನು ನಡೆಸುತ್ತಾ ಬಳಲುವರು. ದ್ವಾಪರಯುಗದವರು ಬಹಳಕಾಲ ಯಜ್ಞಯಾಗಾದಿಕರ್ಮಗಳ ದೀಕ್ಷೆಯಲ್ಲಿಯೇ ಬದ್ಧಕಂಕಣರಾಗಿರುತ್ತಾರೆ. ಧರ್ಮಕ್ಷಯವುಳ್ಳ ಈ ಕಲಿಯುಗದಲ್ಲಿಯಾದರೋ ಪರಿಣತ ಬುದ್ಧಿಯುಳ್ಳವರಿಗೆ ಮಾತ್ರ ಒಂದು ಕ್ಷಣಕಾಲ ನನ್ನ ಪೂಜೆಯಲ್ಲಿ ಮನಸ್ಸುಂಟಾಗುತ್ತದೆ. ಅದೇ ವಿಶೇಷ ಪುಣ್ಯಪ್ರದವೆನಿಸುವುದು. ಅಲ್ಲದೇ ಆ ಕಲಿಯುಗದಲ್ಲಿ ನನ್ನ ವಿಸ್ತಾರವಾಗಿರುವ ಅನಂತ ನಾಮಗಳೇ ಮುಕ್ತಿಪ್ರದಗಳೆಂದು ಭಾವಿಸಬೇಕು. ॥೨೯॥

ನಾಮ ಕಿಂ ಮಮ ಕಾರಣೇ ಕಲಿಯುಗೇ ಗಂಗೇವ ಪಾಪಾಪಹಂ
ಕಿಂ ದಾನೈರ್ಮಖಜಾಲವೇದಪಠನೈಸ್ತೀರ್ಥಾಟನೇನಾಪಿ ಕಿಂ ।
ಮಲ್ಲಿಂಗಂ ಯದಿ ದೃಷ್ಟಿಸಂಗತಮಮೀ ಭಾಗ್ಯಾನಿ ಸೂತೇ ಕಲೌ
ತೇನಾಪಾತತಪಃಕ್ರಿಯಾದಿಚರಣಂ ಸಾಯಂ ಪ್ರದೋಷೇ ಭವೇತ್ ॥೩೦॥

ಮಲ್ಲಿಂಗಾಲಯತುಂಗಗೋಪುರಮಹಾಶೃಂಗಾಗ್ರಸಂವೀಕ್ಷಣೈ
ಸ್ತತ್ಕುಂಭಸ್ಪೃಶಿವಾತಪೋತಕವರೈಃ ಪುಣ್ಯೈಃ ಕಥಾಕರ್ಣನೈಃ ।
ಚಂಡಾಲಾಃ ಶ್ವಪಚಾಶ್ಚ ಪುಲ್ಕಸನರಾಃ ಸಂಕೀರ್ಣಜಾತ್ಯುದ್ಭವಾ
ಸ್ತೇ ವೈ ಶಂಕರಿ ಸ್ಥಾವರಾ ಅಪಿ ಚರಾಃ ಮಲ್ಲೋಕವಾಸಾಃ ಕಲೌ ॥೩೧॥

---

ಈ ಕಲಿಯುಗದಲ್ಲಿ ಗಂಗಾನದಿಯಂತೆ ನನ್ನ ದಿವ್ಯನಾಮಗಳೇ ಮಾನವರ ಪಾಪಗಳನ್ನೆಲ್ಲಾ ಹೋಗಲಾಡಿಸಿ, ಜನಗಳನ್ನುದ್ಧಾರಮಾಡುತ್ತವೆ. ದಾನ, ವೇದ ಸಮೂಹ, ವೇದಾಧ್ಯಯನ, ತೀರ್ಥಾಟನ ಇವುಗಳಿಂದ ಪ್ರಯೋಜನವೇನಿರುವುದು? ಶಿವಲಿಂಗದ ದರ್ಶನಮಾತ್ರದಿಂದಲೇ ಈ ಕಲಿಯುಗದಲ್ಲಿ ಅನೇಕ ಭೋಗಭಾಗ್ಯಗಳು ಅನಾಯಾಸವಾಗಿ ಲಭಿಸುತ್ತವೆ. ಪ್ರತಿದಿನದ ಪ್ರದೋಷವೇಳೆಗಳಲ್ಲಿ ಮಾಡುವ ದಿವ್ಯಶಿವಲಿಂಗದರ್ಶನವೇ ಅಪಾರವಾದ ತಪಸ್ಸು, ದಾನಧರ್ಮಾದಿ ಸಕಲ ಭೋಗಗಳನ್ನೂ ಒದಗಿಸುವುದರಿಂದ ಕಲಿಯುಗದಲ್ಲಿ ಇದಕ್ಕಿಂತ ಪುಣ್ಯಪ್ರದವಾದ ಕರ್ಮವೊಂದೂ ಇರಲಾರದು. ॥೩೦॥

ದೇವಿ, ಕಲಿಯುಗದಲ್ಲಿ ಶಿವಲಿಂಗವಿರುವ ದೇವಾಲಯಗಳ ಎತ್ತರವಾದ ಗೋಪುರವನ್ನು ದರ್ಶನಮಾಡುವುದು, ಶೈವಶಿಖರದ ತುದಿಗಳನ್ನು ನೋಡುವುದು, ಶಿಖರಗಳ ಕಲಶಪ್ರದೇಶವನ್ನು ಮುಟ್ಟುವುದು, ಅಥವಾ ಶಿವಾಲಯಗಳ ಮೇಲಿನ ಗಾಳಿಗೆ ಮೈಕೊಡುವುದು, ನನ್ನ ಪುಣ್ಯಕಥೆಗಳನ್ನು ಕೇಳುವುದು ಇವೇ ಮೊದಲಾದ ಭಕ್ತಿಭಾವನಾಕಾರ್ಯಗಳಿಂದ ಚಂಡಾಲರು, ಶ್ವಪಚರು (ನಾಯಿಯ ಮಾಂಸವನ್ನು ಬೇಯಿಸಿ ತಿನ್ನುವವರು), ಪುಲ್ಕಸರು (ಇವರು ಚಂಡಾಲಜಾತಿಯಲ್ಲಿ ಒಂದು ಪಂಗಡದವರು), ಸಂಕರಜಾತಿಯಲ್ಲಿ ಹುಟ್ಟಿದವರು ಇವರೇ ಮುಂತಾದ ಸ್ಥಾವರಜಂಗಮಾತ್ಮಕವಾದ ಪ್ರಪಂಚವೆಲ್ಲವೂ ಎಂತಹ ನೀಚಸ್ಥಿತಿಯಲ್ಲಿದ್ದರೂ ನನ್ನ ಲೋಕವನ್ನು ಪಡೆದು ಅಲ್ಲಿ ಸುಖದಿಂದ ನೆಲಸುವುವು. ॥೩೧॥

ಮದುತ್ಸವವಿಲೋಕಿನಾಂ ಸುಕೃತಪುಂಜಮೇತತ್ಕಲೌ
ಭವೇತ ವಿಭವಾಧಿಕೋ ಪ್ರಭವತೇ ಚ ನೀಚೋ ಜನಃ ।
ಅನಂತಮಹಿಮಾಸ್ಪದಂ ಭುವಿ ಕಲೌ ಹಿ ಲಿಂಗಾರ್ಚನಂ
ಕರೋತ್ಯಪಿ ಚ ಪಶ್ಯತಿ ಸಮುಪೇತಯೋರ್ನೈ ಫಲಂ ॥೩೨॥

ಕಾಂತಾರೇ ನಿವಸಂತಿ ಶಾಂತಮನಸಾ ಸ್ವಾಂತಹೃದಬ್ಜಸ್ಥಿತಂ
ತಂ ಕಾಲಾಂತಕಮಂಧಕಾಂತಕಮುಮಾಕಾಂತಂ ಸಮರ್ಚ್ಯಾದರಾತ್ ।
ಕೋಲಪ್ರಾಯಮಹಾಪ್ಸರೋತ್ತರ ಕಲೌ ತತ್ಕೀಲಜ್ವಾಲಾನಲ
ಜ್ವಾಲಾದಾಹವಿವರ್ಜಿತಾರ್ಜವಯುತಾಸ್ತಿಷ್ಠಂತಿ ಲೋಕೋತ್ತರಾಃ ॥೩೩॥

॥ ಶ್ರೀ ಸ್ಕಂದ ಉವಾಚ ॥

ಏವಂ ಸಾ ಶೈಲಕನ್ಯಾ ಶ್ರುತಿವರ ಶಿಖರೋತ್ತಂಸ ಸದ್ವಕ್ತ್ರಧಾರಾಂ
ಸಂಶ್ರುತ್ಯ ಪ್ರಮಥಾಧಿರಾಜಮಗಜಾ ವಾಚಂ ಬಭಾಷೇ ಪುನಃ ।

---

ಪಾರ್ವತಿಯೇ, ಕೇಳು, ನನ್ನ ಸಂಬಂಧವಾದ ಉತ್ಸವಗಳನ್ನು ಈ ಕಲಿಯುಗದಲ್ಲಿ ನೋಡುವವರಿಗೆ ಅನಂತ ಪುಣ್ಯಸಮೂಹವೇ ಲಭಿಸುವುದರಲ್ಲಿ ಸಂಶಯವಿಲ್ಲ. ನೀಚಮನುಜನೂ ಸಹ ಐಶ್ವರ್ಯದಿಂದ ಪೂರ್ಣನಾಗಿ ಶ್ರೇಷ್ಠನೆನಿಸುತ್ತಾನೆ. ಕಲಿಯುಗದಲ್ಲಿ ಶಿವಲಿಂಗಪೂಜೆಯು ಭೂಮಿಯಲ್ಲಿ ವಿಶೇಷ ಮಹಿಮೆಗಳಿಗೆ ಆಶ್ರಯವಾಗಿದೆ. ಈ ಶಿವಲಿಂಗಪೂಜೆಯನ್ನು ಮಾಡುವುದು ಮತ್ತು ನೋಡುವುದು ಅಥವಾ ಇವೆರಡನ್ನೂ ಒಟ್ಟಿಗೇ ಆಚರಿಸುವುದು, ಇವುಗಳಿಂದ ದೊರೆಯುವಂತಹ ಪುಣ್ಯರಾಶಿಯು ಮತ್ತಾವುದರಿಂದಲೂ ಲಭಿಸಲಾರದು. ॥೩೨॥

ಜನಗಳು ತಮ್ಮ ಹೃದಯವೆಂಬ ಕಮಲದಲ್ಲಿ ನೆಲಸಿರುವ ಯಮಾಂತಕನೂ, ಅಂಧಕಾಸುರಶತ್ರುವೂ, ಉಮಾರಮಣನೂ ಆದ ಶಂಕರನನ್ನು ಕಾಡಿನಲ್ಲಿ ವಾಸಮಾಡುತ್ತಾ ಶಾಂತಮನಸ್ಸಿನಿಂದ ಧ್ಯಾನಮಾಡುತ್ತಲೂ, ಪೂಜಿಸುತ್ತಲೂ ಇರುವವರಾದರೆ, ಅಂತಹವರಿಗೆ ದುಷ್ಟರೇ ಹೆಚ್ಚಾಗಿರುವ ಈ ಕಲಿಯುಗದಲ್ಲಿ ಆ ದುಷ್ಟರ ಯಾವ ರೀತಿಯ ತೊಂದರೆಗಳೂ ಸಮೀಪಗತವಾಗಲಾರವು. ಒಂದುವೇಳೆ ಅಂತಹ ಉಪದ್ರವಗಳು ಒದಗಿದರೂ ಪರಶಿವಾನುಗ್ರಹವೆಂಬ ಬೆಂಕಿಯ ಜ್ವಾಲೆಯಿಂದ ಅವು ಶುದ್ಧಗಳಾಗಿ ಶುಭಪ್ರದಗಳಾಗಿ ಪರಿಣಮಿಸುವುವು. ॥೩೩॥

ಹೀಗೆ ಪಾರ್ವತಿಯು ವೇದಾಂತಗಳಿಗೆ ಶಿರೋಭೂಷಣವಾಗಿರುವ ಮಹಾದೇವನ ಮುಖದಿಂದ ಹೊರಟ ಕಥಾರೂಪವಾದ ವಾಗ್ಧಾರೆಯನ್ನು ಕೇಳಿ ಸಂತೋಷ

ಧಾನ್ಯಾನಾಂ ಕಲಿಕಾಲಜಾತಜನುಷಾಂ ಭಕ್ತಿಪ್ರಭಾವಿಸ್ತರಾಂ
ಶ್ರೋತುಂ ದಿವ್ಯಚರಿತ್ರಮದ್ಭುತತರಂ ದೇವ್ಯೈಚ ದೇವೋದಿತಂ ॥೩೪॥

॥ ದೇವ್ಯುವಾಚ ॥

ಕೇ ಧಾನ್ಯಾ ಭವ್ಯರೂಪಾ ತ್ವಯಿ ಶಿವಭಜನಾದ್ಭಾವಪೂತಾಶ್ಚ ಭಾವಾ
ಸ್ತೇಷಾಂ ಕಿಂ ಚರಿತಂ ಭವೈಕತರಣಂ ಮಹ್ಯಂ ವದೈತತ್ಪ್ರಭೋ ।
ತ್ವದ್ಭಾವಾನುಗತಾ ಭವೋದ್ಭವ ಭವಾಂಭೋಧೇಃ ಶ್ರುತಂ ತಾರಕಂ
ಭೂಮಾನಂದಘನ ಪ್ರಸೀದ ಭಗವನ್ತ್ವದ್ಭಾವಯುಕ್ತೋಽಸ್ಮ್ಯಹಂ ॥೩೫॥

ಯೋಷಾಪ್ರಮೋಷರಹಿತಃ ಸುಕೃತೀಕೃತೀ ಸ
ಭಾಷಾಸು ವಾ ಪರಶಿವಂ ಸ್ತುವತೇ ವಿಶೇಷಾತ್ ।
ಸಂಶೋಷಿತಾಘನಿಚಯಾಸ್ತವ ಭಕ್ತಿಭಾವೈ
ರುದ್ಘೋಷಿತತ್ರಿಭುವನಾಪ್ಯತಿಶೇಷಜಾತಾಃ ॥೩೬॥

---

ಪಟ್ಟು, ಪುನಃ ಆ ಪ್ರಮಥಗಣಗಳಿಗೆಲ್ಲಾ ಅಧಿರಾಜನಾದ ಶಂಕರನನ್ನು ಕುರಿತು, ಮುಂದೆ ಕಲಿಯುಗದಲ್ಲಿ ಅವತರಿಸಿ ಶಿವಭಕ್ತಿಪ್ರಭೆಗಳಿಂದ ಬೆಳಗುವ ಭಕ್ತರಿಗೆ ಆಶ್ಚರ್ಯಕರವೂ, ಅದ್ಭುತವೂ ಆದ ದಿವ್ಯಚರಿತ್ರೆಯನ್ನು ಹೇಳಬೇಕೆಂದು ಪ್ರಾರ್ಥಿಸಿ ಕೊಳ್ಳಲು, ಆಗ ಶಂಕರನು ದೇವಿಗೆ ಅದನ್ನು ಮತ್ತೆ ಹೇಳಿದನು ಎಂದು ಕುಮಾರ ಸ್ವಾಮಿಯು ಜೈಗೀಷವ್ಯನಿಗೆ ತಿಳಿಸಿದನು. ॥೩೪॥

ಪ್ರಭುವೇ, ಮುಂದೆ ಕಲಿಯುಗದಲ್ಲಿ ಮಂಗಳರೂಪಿಗಳಾದವರು ಯಾರು ಜನಿಸಿ ಶಿವಭಜನಮಾಡುತ್ತಾ, ಭಕ್ತಿಪೂತರಾಗಿ ಮೆರೆಯುವರು ? ಸಂಸಾರಸಾಗರ ವನ್ನು ಮುಖ್ಯವಾಗಿ ದಾಟಿಸುವಂತಹ ಆ ಭಕ್ತರ ಚರಿತ್ರೆಗಳೇನು ? ಸ್ವಾಮಿಯೇ, ನಿನ್ನ ಭಕ್ತಿಭಾವಸಿರತಳಾಗಿರುವ ನನಗೆ ಅದನ್ನು ವಿಸ್ತರಿಸಿ ಹೇಳು. ನಿನ್ನ ತಾರಕ ಮಹಾಮಂತ್ರವು ನಿನ್ನಿಂದಲೇ ಉಪದೇಶಿಸಲ್ಪಟ್ಟು, ನನಗೆ ಸಂಸಾರಾಂಬುಧಿಯನ್ನು ದಾಟಿಸಲು ಉಪಕಾರವಾಯಿತು. ಆನಂದಘನಸ್ವರೂಪನಾದ ಸ್ವಾಮಿಯೇ, ನಿನ್ನಲ್ಲಿ ನಾನು ಭಕ್ತಿಯುಕ್ತಳಾಗಿರುವೆನು. ನನ್ನಲ್ಲಿ ಅನುಗ್ರಹಮಾಡು. ॥೩೫॥

ಸ್ತ್ರೀವ್ಯಾಮೋಹವನ್ನು ದೂರೀಕರಿಸಿರುವವನೇ, ಲೋಕದಲ್ಲಿ ಪುಣ್ಯಶಾಲಿಯೂ ಧನ್ಯನೂ ಎನಿಸುವನು. ಅವನು ಅನೇಕ ಭಾಷೆಗಳಲ್ಲಿ ಸ್ತೋತ್ರಗಳಿಂದ ಪರಶಿವ ನೆನಿಸಿದ ನಿನ್ನನ್ನು ವಿಶೇಷವಾಗಿ ಸ್ತೋತ್ರಮಾಡುತ್ತಾನೆ. ನಿನ್ನ ಭಕ್ತಿಭಾವನೆಗಳಿಂದ

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ವಿಷ್ಣೂತ್ಪತ್ತಿ ವಿಷ್ಣುಬ್ರಹ್ಮಸ್ತುತಿ ಕಥನಂ ನಾಮ ಪಂಚದಶೋಽಧ್ಯಾಯಃ

---

ಸಕಲ ಪಾಪರಾಶಿಗಳನ್ನು ಒಣಗಿಸಿಕೊಂಡು (ನಾಶಮಾಡಿಕೊಂಡು) ಮೂರು ಲೋಕಗಳಲ್ಲಿ ವಿಶೇಷ ಖ್ಯಾತಿಪಡೆದು ಅತಿ ಶ್ರೇಷ್ಠರೆನಿಸುತ್ತಾರೆ. ಒಟ್ಟಿನಲ್ಲಿ ಶಿವಭಕ್ತಿಯುಕ್ತರಾದವರೇ ಕಲಿಯುಗದಲ್ಲಿ ಮುಕ್ತರೆನಿಸುವರು. ಎಂದು ದೇವಿಯು ಶಿವಸ್ತುತಿಯನ್ನು ಉಪಸಂಹರಿಸಿದಳು. ॥೩೬॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ವಿಷ್ಣುವಿನ ಉತ್ಪತ್ತಿ, ವಿಷ್ಣುಬ್ರಹ್ಮ ಇವರು ಮಾಡಿದ ಶಿವಸ್ತುತಿವರ್ಣನೆ ಎಂಬ ಹದಿನೈದನೆಯ ಅಧ್ಯಾಯವು ಮುಗಿಯಿತು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಷೋಡಶೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

ತದಾ ಗಿರಿಜಯಾ ಪೃಷ್ಟಸ್ತ್ರಿಕಾಲಜ್ಞಸ್ತ್ರಿಲೋಚನಃ ।
ಭವಿಷ್ಯಚ್ಛಿವಭಕ್ತಾನಾಂ ಭಕ್ತಿಂ ಸಂವೀಕ್ಷ್ಯ ವಿಸ್ಮಯನ್ ||೧||

ವಮೌಳಿಮಾಂದೋಳಯನ್ದೇವೋ ಬಭಾಷೇ ವಚನಂ ಮುನೇ ।
ಶೃಣು ತ್ವಮೇಭಿರ್ಗಣಪೈರ್ಮುನೀಶೈಶ್ಚ ಸುರೈಸ್ತಥಾ ||೨||

ಪ್ರಭಾವಂ ಶಿವಭಕ್ತಾನಾಂ ಭವಿಷ್ಯಾಣಾಂ ಕಲಾವಪಿ ||೩||

---

## ಹದಿನಾರನೆಯ ಅಧ್ಯಾಯ

ಮತ್ತೂ ಗಿರಿಜೆಯಿಂದ ಈ ರೀತಿ ಪ್ರಶ್ನಿಸಲ್ಪಟ್ಟ ಭೂತಭವಿಷ್ಯದ್ವರ್ತಮಾನ ಕಾಲಗಳನ್ನರಿತ ಮುಕ್ಕಣ್ಣನು ಮುಂದೆ ಜನರಲ್ಲಿ ಹುಟ್ಟುವ ಶಿವಭಕ್ತಿಸ್ವರೂಪವನ್ನು ಜ್ಞಾನದೃಷ್ಟಿಯಿಂದ ಊಹಿಸಿ ತಿಳಿದು, ವಿಸ್ಮಯಗೊಂಡು ತನ್ನ ತಲೆಯನ್ನಲ್ಲಾಡಿಸುತ್ತಾ ಇಂತು ದೇವಿಗೆ ಹೇಳಿದನು. ಎಲೈ ಜೈಗೀಷವ್ಯಮುನಿಯೇ, ನೀನು ಈ ಗಣಾಧಿಪನೊಡನೆಯೂ, ಮುನಿಪುಂಗವರು ಮತ್ತು ದೇವತೆಗಳೊಡನೆಯೂ ಮುಂದೆ ಕಲಿಯುಗದಲ್ಲಿ ಅವತಾರಮಾಡುವ ಶಿವಭಕ್ತರ ಪ್ರಭಾವವನ್ನು ಶಿವೋಕ್ತಿಯಿಂದ ಕೇಳೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ||೧-೨-೩||

|| ಶ್ರೀ ಈಶ್ವರ ಉವಾಚ ||

ಶೃಣು ದೇವಿ ಭವಿಷ್ಯಾಣಾಂ ಭಕ್ತಾನಾಂ ಚರಿತಂ ಕಲೌ ।
ವದಾಮಿ ಸಂಗ್ರಹೇಣೈವ ಶ್ರವಣಾದ್ಭಕ್ತಿವರ್ಧನಂ ||೪||

ಗೋಪನೀಯಂ ಪ್ರಯತ್ನೇನ ನಾಖ್ಯೇಯಂ ಯಸ್ಯ ಕಸ್ಯಚಿತ್ ।
ಪಾಪಘ್ನಂ ಪುಣ್ಯಮಾಯುಷ್ಯಂ ಶ್ರೋತೃಣಾಂ ಮಂಗಲಾವಹಂ ||೫||

ಪಾಪಕರ್ಮೈಕನಿರತಾನ್ನಿರತಾನ್ಸರ್ವಕರ್ಮಸು
ವರ್ಣಾಶ್ರಮಪರಿಭ್ರಷ್ಟಾನಧರ್ಮಪ್ರವಣಾನ್ಜನಾನ್ ||೬||

ಕಲ್ಯಬ್ಧೌ ಮಜ್ಜಮಾನಾಂಸ್ತಾನ್ದೃಷ್ಟ್ವಾನುಕ್ರೋಶತೋಽಂಬಿಕೇ ।
ಮದಂಶಜಾತಂ ದೇವೇಶಿ ಕಲಾವಪಿ ತಪೋಧನಂ ||೭||

ಕೇರಳೇಷು ತದಾ ವಿಪ್ರಂ ಜನಯಾಮಿ ಮಹೇಶ್ವರಿ ।
ತಸ್ಯೈವ ಚರಿತಂ ತೇಽದ್ಯ ವಕ್ಷ್ಯಾಮಿ ಶೃಣು ಶೈಲಜೇ ||೮||

---

ಗಿರಿಜೆಯೇ ಕೇಳು ; ಕಲಿಯುಗದಲ್ಲಿ ಮುಂದೆ ಅವತಾರಮಾಡುವ ನನ್ನ ಭಕ್ತರ ಚರಿತ್ರೆಗಳನ್ನು ಸಂಗ್ರಹವಾಗಿ ಹೇಳುವೆನು. ಈ ಚರಿತೆಯು ಶ್ರವಣಮಾತ್ರ ದಿಂದಲೇ ಭಕ್ತರಲ್ಲಿ ಭಕ್ತಿಯನ್ನು ಹೆಚ್ಚಿಸುವುದು. ಆದರೆ ನಾನು ಹೇಳುವ ವಿಷಯ ವನ್ನು ಜಾಗರೂಕತೆಯಿಂದ ಕಾಪಾಡಬೇಕು. ಈ ಚರಿತೆಯು ಸಕಲಪಾಪನಾಶಕವೂ ಪುಣ್ಯಕರವೂ, ಆಯುಃಪ್ರದವೂ, ಶ್ರವಣಮಾಡುವವರಿಗೆ ಮಂಗಳವನ್ನುಂಟುಮಾಡು ವುದೂ ಆಗಿರುವುದು. ಎಲೌ ಪಾರ್ವತಿ, ಈ ನನ್ನ ಭಕ್ತರ ಚರಿತೆಯನ್ನು ತೋರಿದ ವರಿಗೆಲ್ಲಾ ಹೇಳಬಾರದು. ||೪-೫||

ಎಲೌ ಅಂಬಿಕೆಯೇ, ಕೇವಲ ಪಾಪಕರ್ಮಗಳಲ್ಲಿಯೇ ನಿರತರಾಗಿ, ಇತರ ಸಕಲ ಶುಭಕರ್ಮಗಳನ್ನೂ ಬಿಟ್ಟು, ವರ್ಣಾಶ್ರಮಧರ್ಮಭ್ರಷ್ಟರೆನಿಸಿ, ಅಧರ್ಮ ತತ್ಪರರಾಗಿರುವ ಜನಗಳು, ಕಲಿಯೆಂಬ ಸಮುದ್ರದಲ್ಲಿ ಮುಳುಗುತ್ತಾ ಕೂಗುತ್ತಿರು ವುದನ್ನು ನೋಡಿ, ನಾನು ಆಗ ನನ್ನ ಅಂಶದಿಂದ ಕೂಡಿದ ಒಬ್ಬ ತಪಸ್ವಿ ಬ್ರಾಹ್ಮಣ ನನ್ನು ಕೇರಳದೇಶದಲ್ಲಿ ನಿರ್ಮಿಸುವೆನು. ದೇವೇಶಿಯೇ, ತುಂಬಾ ಐಶ್ವರ್ಯ ಶಾಲಿನಿಯೂ, ಪರ್ವತರಾಜಕುಮಾರಿಯೂ ಆದ ನಿನಗೆ ಆ ಭಕ್ತನ ಚರಿತ್ರೆಯನ್ನೇ ಈಗ ಹೇಳುತ್ತೇನೆ ಕೇಳು. ||೬-೭-೮||

ಕಲ್ಯಾದಿಮೇ ಮಹಾದೇವಿ ಸಹಸ್ರದ್ವಿತಯಾತ್ಪರಂ ।
ಸಾರಸ್ವತಾಸ್ತಥಾ ಗೌಡಾ ಮಿಶ್ರಾಃ ಕರ್ಣಾಜಿನಾ ದ್ವಿಜಾಃ ॥೯॥

ಆಮಮೀನಾಶನಾ ದೇವಿ ಆರ್ಯಾವರ್ತಾನುವಾಸಿನಃ ।
ಔತ್ತರಾ ವಿಂಧ್ಯನಿಲಯಾ ಭವಿಷ್ಯಂತಿ ಮಹೀತಲೇ ॥೧೦॥

ಶಬ್ದಾರ್ಥಜ್ಞಾನಕುಶಲಾಸ್ತರ್ಕಕರ್ಕಶಬುದ್ಧಯಃ ।
ಜೈನಾ ಬೌದ್ಧಾ ಬುದ್ಧಿಯುಕ್ತಾ ಮೀಮಾಂಸಾನಿರತಾಃ ಕಲೌ ॥೧೧॥

ವೇದಬೋಧದವಾಕ್ಯಾನಾಮನ್ಯಥೈವ ಪ್ರರೋಚಕಾಃ ।
ಪ್ರತ್ಯಕ್ಷವಾದಕುಶಲಾ ಶಲ್ಯಭೂತಾಃ ಕಲೌ ಶಿವೇ ॥೧೨॥

ಮಿಶ್ರಾಃ ಶಾಸ್ತ್ರಮಹಾಸ್ತ್ರೈರದ್ವೈತೋಚ್ಛೇದನೋಽಂಬಿಕೇ ।
ಕರ್ಮೈವ ಪರಮಂ ಶ್ರೇಯೋ ನೈವೇಶಃ ಫಲದಾಯಕಃ ॥೧೩॥

---

ಮಹಾದೇವಿ, ಕಲಿಯುಗವು ಪ್ರಾರಂಭವಾಗಿ ಎರಡುಸಾವಿರವರ್ಷಗಳು ಕಳೆದ ಮೇಲೆ, ಸಾರಸ್ವತರು, ಗೌಡರು, ಮಿಶ್ರಜಾತಿಯವರು, ಕಿವಿಯಲ್ಲಿ ಚರ್ಮಧಾರಿಗಳಾದ ಇನ್ನೂ ಇತರ ಬ್ರಾಹ್ಮಣರು, ಹಸಿಯ ಮೀನುಗಳನ್ನೇ ತಿನ್ನುವವರಾಗಿ ಆರ್ಯಾವರ್ತದಲ್ಲಿ ಬಹಳವಾಗಿ ನೆಲಸುವರು. ದೇವಿ, ಈ ಭಾರತದ ಉತ್ತರ ಭೂಮಿಯಲ್ಲಿ ವಿಂಧ್ಯಪರ್ವತವನ್ನಾಶ್ರಯಿಸಿರುವ ಕೆಲವು ದೇಶಗಳಲ್ಲಿ ಇವರು ವಿಶೇಷವಾಗಿ ನೆಲಸುವರು. ॥೯-೧೦॥

ಕೇವಲ ಶಬ್ದಾರ್ಥಜ್ಞಾನದಲ್ಲಿ ಮಾತ್ರ ಪಂಡಿತರಾಗಿ ತರ್ಕಶಾಸ್ತ್ರಾಭ್ಯಾಸದಿಂದ ಒರಟಾಗಿ ವಾಕ್ಯಾರ್ಥಮಾಡುತ್ತಾ ಜನಗಳು ಮೆರೆಯುವರು. ಈ ಕಲಿಯುಗದಲ್ಲಿ ಜೈನರೂ ಮತ್ತು ಬೌದ್ಧರೂ ಬುದ್ಧಿವಂತರಾಗಿ ವೇದಾರ್ಥಪ್ರತಿಪಾದಕವಾದ ಮೀಮಾಂಸಾಶಾಸ್ತ್ರದಲ್ಲಿ ನಿರತರಾಗುತ್ತಾರೆ. ಇವರು ವೇದದ ಜ್ಞಾನಪ್ರದವಾದ ವಾಕ್ಯಗಳಿಗೆ ವಿಪರೀತವಾಗಿ (ವಿರುದ್ಧವಾಗಿ) ಅರ್ಥಮಾಡುತ್ತಾರೆ. ಕೇವಲ ಪ್ರತ್ಯಕ್ಷ ಪ್ರಮಾಣವನ್ನೇ ಮುಖ್ಯವಾಗಿಟ್ಟುಕೊಂಡು ಕಣ್ಣಿಗೆ ಕಾಣುವ ಪದಾರ್ಥಗಳ ವಿಷಯದಲ್ಲಿಯೇ ವಾದಮಾಡುತ್ತಾ, ಅದರಲ್ಲಿ ಕುಶಲರಾದ ಕೆಲವರು ಕಲಿಯುಗದಲ್ಲಿ ಇತರರಿಗೆ ಕಂಟಕರಾಗಿ ಪರಿಣಮಿಸುವರು. ॥೧೧-೧೨॥

ಮಿಶ್ರವರ್ಣದವರಾದ ಇವರು ಶಾಸ್ತ್ರವೆಂಬ ದೊಡ್ಡ ಕತ್ತಿಗಳಿಂದ ಅದ್ವೈತ ಧರ್ಮವನ್ನು ಕತ್ತರಿಸುವರು. ಎಲೌ ಅಂಬಿಕೇ, ಕರ್ಮವೇ ತುಂಬಾ ಶ್ರೇಯಸ್ಕರವು.

ಇತಿ ಯುಕ್ತಿಪರಾವೃಷ್ಟವಾಕ್ಯೈರುದ್ಬೋಧಯಂತಿ ಚ ।
ತೇನ ಘೋರಾ ಕುಲಾಚಾರಾ ಕರ್ಮಸಾರಾ ಭವಸ್ತಥಾ ॥೧೪॥

ತೇಷಾಮುದ್ಘಾಟನಾರ್ಥಾಯ ಸೃಜಾಮೀಶೇ ಮದಂಶಜಂ ।
ಕೇರಳೇ ಶಲಲಗ್ರಾಮೇ ವಿಪ್ರಪತ್ನ್ಯಾಂ ಮದಂಶತಃ ॥೧೫॥

ಭವಿಷ್ಯತಿ ಮಹಾದೇವಿ ಶಂಕರಾಖ್ಯೋ ದ್ವಿಜೋತ್ತಮಃ ।
ಉಪನೀತಸ್ತದಾ ಮಾತ್ರಾ ವೇದಾನ್ಸಾಂಗಾನ್ಗ್ರಹೀಷ್ಯತಿ ॥೧೬॥

ಅಬ್ದಾವಧಿ ತತಃ ಶಬ್ದೇ ವಿಹೃತ್ಯ ಸ ಸುತರ್ಕಜಾಂ ।
ಮತಿಂ ಮೀಮಾಂಸಮಾನೋಽಸೌ ಕೃತ್ವಾ ಶಾಸ್ತ್ರೇಷು ನಿಶ್ಚಯಂ ॥೧೭॥

ವಾದಿಮತ್ತದ್ವಿಪವರಾಂಛಂಕರೋತ್ತಮಕೇಸರೀ ।
ಭಿನತ್ತ್ಯೇವ ಮಹಾಬುದ್ಧಾಂತ್ಸಿದ್ಧವಿದ್ಯಾನಪಿ ದ್ರುತಂ ॥೧೮॥

---

ಈಶ್ವರನು ಫಲಪ್ರದನಲ್ಲವೆಂಬ ಯುಕ್ತಿಯನ್ನು ಬೋಧಿಸುವವರಾಗಿ, ವ್ಯರ್ಥವಾಕ್ಯಗಳಿಂದ ಜನರಿಗೆ ಈ ಮಾರ್ಗವನ್ನೇ ಬೋಧನೆಮಾಡುತ್ತಾರೆ. ಇದರಿಂದ ಕುಲಗಳ ಆಚಾರಗಳೆಲ್ಲವೂ ಭಯಂಕರರೂಪ ತಾಳಿ, ಕೇವಲ ಪ್ರಪಂಚವೆಲ್ಲವೂ ಕರ್ಮಮಯವೇ ಆಗುತ್ತದೆ. ಈ ರೀತಿ ಉಪದೇಶಮಾಡುವ ಜೈನಬೌದ್ಧಾದಿಗಳನ್ನು ನಿರ್ಮೂಲವಮಾಡುವುದಕ್ಕೋಸ್ಕರವೇ ನನ್ನ ಅಂಶಯುಕ್ತನಾದ ಭಕ್ತನೊಬ್ಬನನ್ನು ಕೇರಳದೇಶದ ಶಲಲಗ್ರಾಮದಲ್ಲಿ ಬ್ರಾಹ್ಮಣನ ಹೆಂಡತಿಯ ಗರ್ಭದಲ್ಲಿ ಜನಿಸುವಂತೆ ಪ್ರೇರಿಸುತ್ತೇನೆ. ||೧೩-೧೪-೧೫||

ಎಲೌ ಮಹಾದೇವಿ, ಆ ಬ್ರಾಹ್ಮಣೋತ್ತಮನು ಶಂಕರನೆಂಬ ಹೆಸರಿನಿಂದ ಪ್ರಖ್ಯಾತನಾಗಿ ಅವತರಿಸುವನು. ಆತನು ತಾಯಿಯಿಂದ ಉಪನಯನಸಂಸ್ಕಾರವನ್ನು ಪಡೆದು, ವೇದವೇದಾಂಗಗಳನ್ನು ಸಾಂಗವಾಗಿ ಗ್ರಹಿಸುತ್ತಾನೆ. ಒಂದು ವರ್ಷದವರೆಗೆ ಆಮೇಲೆ ಶಬ್ದಶಾಸ್ತ್ರವನ್ನಭ್ಯಸಿಸಿ, ಉತ್ತಮವಾದ ಕರ್ಮಶಾಸ್ತ್ರದಲ್ಲಿಯೂ ತನ್ನ ಬುದ್ಧಿಯನ್ನು ಬೆಳೆಸಿ, ಮೀಮಾಂಸಾಶಾಸ್ತ್ರರಹಸ್ಯವನ್ನೂ ಇನ್ನೂ ಉಳಿದ ಶಾಸ್ತ್ರಪಾಂಡಿತ್ಯವನ್ನೂ ನಿಸ್ಸಂಶಯವಾಗಿ ಪಡೆದು, ವಿದ್ಯಾಮೂರ್ತಿಯೆನಿಸುವನು. ಈ ಶಂಕರನೆಂಬ ಶ್ರೇಷ್ಠಸಿಂಹವು, ವಾದಿಗಳೆಂಬ ಮದಿಸಿದ ಸಲಗಗಳನ್ನು ಅಂದರೆ ಸಿದ್ಧವಿದ್ಯರೆನಿಸಿದ ಮಹಿಮಾಬದ್ಧರನ್ನೂ ಜಾಗ್ರತೆಯಾಗಿ ಸೀಳಿಹಾಕುವುದರಲ್ಲಿ ಪ್ರಯತ್ನಿಸುವುದು. ||೧೬-೧೭-೧೮||

ಜೈನಾನ್ವಿಜಿಗ್ಯೇ ತರಸಾ ತಥಾನ್ಯಾನ್ಕುಮತಾನುಗಾನ್ ।
ತದಾ ಮಾತರಮಾಮಂತ್ರ್ಯ ಪರಿವ್ರಾಟ್ಸ ಭವಿಷ್ಯತಿ ॥೧೯॥

ಪರಿವ್ರಾಜಕವೇಷೇಣ ಮಿಶ್ರಾನಾಶ್ರಮದೂಷಕಾನ್ ।
ದಂಡಹಸ್ತಸ್ತಥಾ ಕುಂಡೀ ಕಾಷಾಯವಸನೋಽಮಲಃ ॥೨೦॥

ಭಸ್ಮದಿವ್ಯತ್ರಿಪುಂಡ್ರಾಂಕೋ ರುದ್ರಾಕ್ಷಾಭರಣೋಜ್ವಲಃ ।
ತಾರರುದ್ರಾರ್ಥಪಾರೀಣೋ ಶಿವಲಿಂಗಾರ್ಚನಪ್ರಿಯಃ ॥೨೧॥

ಸ್ವಶಿಷ್ಯೈಸ್ತಾದೃಶೈರ್ಘುಷ್ಯನ್ಭಾಷ್ಯವಾಕ್ಯಾನಿ ಸೋಽಂಬಿಕೇ ।
ಮದ್ದತ್ತವಿದ್ಯಯಾ ಭಿಕ್ಷುರ್ವಿರಾಜತಿ ಶಶಾಂಕವತ್ ॥೨೨॥

ಸೋಽದ್ವೈತೋಚ್ಛೇದಕಾನ್ಪಾಪಾನುಚ್ಛಾದ್ಯಾಕ್ಷಿಪ್ಯ ತರ್ಕತಃ ।
ಸ್ವಮತಾನುಗತಾನ್ದೇವಿ ಕರೋತ್ಯೇವ ನಿರರ್ಗಲಃ ॥೨೩॥

---

ಆ ಶಂಕರನು ಕೂಡಲೇ ಜೈನರನ್ನೂ ಇನ್ನುಳಿದ ನೀಚಮತಾನುಯಾಯಿಗಳನ್ನೂ ಜಯಿಸಿ, ಅನಂತರ ತನ್ನ ತಾಯಿಯ ಅನುಮತಿಯನ್ನು ಪಡೆದು ಸಂನ್ಯಾಸವನ್ನು ಸ್ವೀಕರಿಸುತ್ತಾನೆ. ಆಮೇಲೆ ಸಂನ್ಯಾಸಿಯ ವೇಷದಿಂದ ದಂಡ, ಕಮಂಡಲು ಮತ್ತು ಕಾಷಾಯವಸ್ತ್ರಗಳನ್ನು ಧರಿಸಿ, ನಿರ್ಮಲನಾಗಿ, ಸಂಕರರಾಗಿ ಆಶ್ರಮಧರ್ಮಗಳನ್ನು ದೂಷಣೆಮಾಡುವವರನ್ನು ನಿಗ್ರಹಿಸಲು ಯತ್ನಿಸುತ್ತಾನೆ. ॥೧೯-೨೦॥

ದಿವ್ಯವಾದ ಭಸ್ಮತ್ರಿಪುಂಡಗಳನ್ನಲಂಕರಿಸಿಕೊಂಡು, ರುದ್ರಾಕ್ಷಾಭರಣಗಳಿಂದ ಪ್ರಕಾಶಿಸುತ್ತಾ; ಪ್ರಣವಮಂತ್ರ, ಮತ್ತು ರುದ್ರಮಂತ್ರಗಳ ಅರ್ಥವನ್ನು ಪೂರ್ಣವಾಗಿ ಅರಿತು, ಯಾವಾಗಲೂ ಶಿವಲಿಂಗ ಪೂಜೆಯಲ್ಲಿ ಆಸಕ್ತಿಯುಳ್ಳವನಾಗುತ್ತಾನೆ. ತನಗೆ ಅಣುಗುಣರಾಗಿರುವ ಶಿಷ್ಯರೊಡನೆ ಭಾಷ್ಯವಾಕ್ಯಗಳ ಅರ್ಥವನ್ನು ನಿರ್ದುಷ್ಟವಾಗಿ ಪ್ರತಿಪಾದಿಸುತ್ತಾ, ನಾನು ಕೊಟ್ಟ ವಿದ್ಯಾಶಕ್ತಿಯಿಂದ ಚಂದ್ರನಂತೆ ಆ ಸಂನ್ಯಾಸಿಯು ವಿರಾಜಿಸುವನು. ॥೨೧-೨೨॥

ಶಂಕರನು ಹಾಗೆಯೇ ಅದ್ವೈತವನ್ನು ನಾಶಮಾಡುತ್ತಿರುವ ಪಾಪಿಗಳನ್ನು ತರ್ಕಶಾಸ್ತ್ರಬಲದಿಂದ ಗೆದ್ದು ನಿರ್ಮೂಲಮಾಡಿ, ತನ್ನ ಅದ್ವೈತಮತಧರ್ಮವನ್ನು ತಡೆಯೇ ಇಲ್ಲದೇ ಹರಡುತ್ತಾನೆ. ಆದರೂ ಆಗಿನ ಕಾಲದ ಜನಗಳಿಗೆ ವೇದ ಮತ್ತು

ತಥಾಪಿ ಪ್ರತ್ಯಯಂ ತೇಷಾಂ ನೈವಾಸೀಚ್ಛ್ರುತಿದರ್ಶನೈಃ ।
ಮಿಶ್ರಾಃ ಶಾಸ್ತ್ರಾರ್ಥಕುಶಲಾಸ್ತರ್ಕಕರ್ಕಶಬುದ್ಧಯಃ ॥೨೪॥

ತೇಷಾಮುದ್ಬೋಧನಾರ್ಥಾಯ ತಿಷ್ಯೇ ಭಾಷ್ಯಂ ಕರಿಷ್ಯತಿ ।
ಭಾಷ್ಯಘುಷ್ಯನ್ಮಹಾವಾಕ್ಯೈಸ್ತಿಷ್ಯಜಾತಾನ್ವಿನಿಷ್ಯತಿ ॥೨೫॥

ವ್ಯಾಸೋಪದಿಷ್ಟಸೂತ್ರಾಣಾಂ ದ್ವೈತವಾಕ್ಯಾತ್ಮನಾಂ ಶಿವೇ ।
ಅದ್ವೈತಮೇವ ಸೂತ್ರಾರ್ಥಂ ಪ್ರಾಮಾಣ್ಯೇನ ಕರಿಷ್ಯತಿ ॥೨೬॥

ಅವಿಮುಕ್ತೇ ಸಮಾಸೀನಂ ವ್ಯಾಸಂ ವಾಕ್ಯೈರ್ವಿಜಿಗ್ಯ ಚ ।
ಶಂಕರಂ ಸ್ತೌತಿ ಹೃಷ್ಟಾತ್ಮಾ ಶಂಕರಾಖ್ಯೋಽಥ ಮಸ್ಕರೀ ॥೨೭॥

॥ ಶ್ರೀಶಂಕರಾಚಾರ್ಯೋವಾಚ ॥

ಸತ್ಯಂ ಸತ್ಯಂ ನೇಹ ನಾನಾಸ್ತಿ ಕಿಂಚಿ
ದೀಶಾವಾಸ್ಯಂ ಬ್ರಹ್ಮ ಸತ್ಯಂ ಜಗದ್ಧಿ ।

---

ಸ್ಮೃತಿಗಳಲ್ಲಿ ನಂಬಿಕೆಯುಂಟಾಗುವುದಿಲ್ಲ. ಶಾಸ್ತ್ರಾರ್ಥವಿಚಾರದಲ್ಲಿ ನಿಪುಣರೂ, ತರ್ಕಾಭ್ಯಾಸದಿಂದ ಕಠಿಣಬುದ್ಧಿಯುಳ್ಳವರೂ ಆದ ಮಿಶ್ರಜಾತಿಯವರಿಗಂತೂ ಅದು ಸಹಿಸುವುದಿಲ್ಲ. ॥೨೩-೨೪॥

ಅಂತಹವರಿಗೆ ಜ್ಞಾನೋದಯವಾಗಲೆಂದೇ ಶಂಕರನು ಈ ಕಲಿಯುಗದಲ್ಲಿ ವ್ಯಾಸಸೂತ್ರಗಳಿಗೆ ಭಾಷ್ಯವನ್ನು ಬರೆಯುತ್ತಾನೆ. ತಾನುಮಾಡಿದ ಸೂತ್ರಭಾಷ್ಯದ ಮಹಾವಾಕ್ಯಗಳಿಂದ ಈ ಕಲಿಯುಗದ ಇತರಮತದವರನ್ನು ಜಯಿಸುತ್ತಾನೆ. ಎಲೌ ದೇವಿ! ದ್ವೈತವಾಕ್ಯಸ್ವರೂಪವಾಗಿ ಆಪಾತತಃ ತೋರುತ್ತಿರುವ ವ್ಯಾಸ ಮುನಿಯು ಉಪದೇಶಮಾಡಿದ ಶಾರೀರಕ ಸೂತ್ರಗಳಿಗೆ ಅದ್ವೈತರೀತ್ಯಾ ಸೂತ್ರಾರ್ಥವೇ ಪ್ರಮಾಣವಾದುದೆಂದು ತೀರ್ಮಾನಿಸುತ್ತಾನೆ. ಅನಂತರ ಅವಿಮುಕ್ತ ಕ್ಷೇತ್ರದಲ್ಲಿ (ಕಾಶಿಯಲ್ಲಿ) ಕುಳಿತಿದ್ದ ವ್ಯಾಸಮುನಿಯನ್ನು ತನ್ನ ವಾಕ್ಯಗಳಿಂದ ಗೆದ್ದು ಅವರನ್ನು ತೃಪ್ತಿಪಡಿಸಿ ಅವರ ಅನುಮತಿಯನ್ನು ಪಡೆದು, ಸಂತುಷ್ಟಚಿತ್ತನಾಗಿ ಆ ಶಂಕರಸಂನ್ಯಾಸಿಯು ಜಗನ್ಮಂಗಳಕರನಾದ ಶಿವನನ್ನು ಈರೀತಿ ಸ್ತೋತ್ರ ಮಾಡುತ್ತಾನೆ. ॥೨೫-೨೬-೨೭॥

ಪ್ರಪಂಚವೆಲ್ಲವೂ ಪರಬ್ರಹ್ಮನಿಂದ ವ್ಯಾಪ್ತವಾದುದು. ಈ ಜಗತ್ತೆಲ್ಲವೂ ಸತ್ಯರೂಪನಾದ ಬ್ರಹ್ಮಸ್ವರೂಪವೇ ಆಗಿದೆ. ಇಲ್ಲಿ, ಇತರ ದೇವತಾ ವೈವಿಧ್ಯವು,

ಬ್ರಹ್ಮೈವೇದಂ ಬ್ರಹ್ಮ ಪಶ್ಚಾತ್ಪುರಸ್ತಾ
ದೇಕೋರುದ್ರೋ ನ ದ್ವಿತೀಯೋಽವತಸ್ಥೇ ॥೨೮॥

ಏಕೋ ದೇವಃ ಸರ್ವಭೂತೇಷು ಗೂಢೋ
ನಾನಾಕಾರೋ ಭಾಸಿ ಭಾನೈಸ್ತ್ವಮಾತ್ಮಾ ।
ಪೂರ್ಣಾಪೂರ್ಣೋ ನಾಮರೂಪೈರ್ವಿಹೀನೋ
ವಿಶ್ವಾತೀತೋ ವಿಶ್ವನಾಥೋ ಮಹೇಶಃ ॥೨೯॥

ಭೂತಂ ಭವ್ಯಂ ವರ್ತಮಾನಂ ತ್ವಯೀಶೇ
ಸಾಮಾನ್ಯಂ ವೈ ದೇಶಕಾಲಾದಿಹೀನಃ ।
ನೋ ತೇ ಮೂರ್ತಿರ್ವೇದವೇದ್ಯಸ್ತ್ವಸಂಗೋ
ಸಂಗೀವ ತ್ವಂ ಲಿಂಗಸಂಸ್ಥೋ ವಿಭಾಸಿ ॥೩೦॥

---

ಸತ್ಯವಾಗಿಯೂ ಇಲ್ಲ. ಈ ಕಣ್ಣಿಗೆ ಗೋಚರಿಸುತ್ತಿರುವುದೂ, ನಮಗೆ ಕಾಣದೇ ಇರುವುದೂ, ಇಂತಹ ಜಗತ್ತೆಲ್ಲವೂ ಬ್ರಹ್ಮಮಯವೇ; ಇದರಲ್ಲಿ ಸಂಶಯವಿಲ್ಲ. ಆ ರುದ್ರನೊಬ್ಬನೇ ಪರಬ್ರಹ್ಮಸ್ವರೂಪನೆನಿಸಿ ಎಲ್ಲೆಲ್ಲಿಯೂ ನೆಲಸಿರುವನು. ಬ್ರಹ್ಮ ಭಿನ್ನವಾದ ಎರಡನೆಯ ವಸ್ತುವೇ ಜಗತ್ತಿನಲ್ಲಿಲ್ಲ. ॥೨೮॥

ಅದ್ವಿತೀಯನಾದ ಪರಬ್ರಹ್ಮನೆ, ನೀನೊಬ್ಬನೇ ಎಲ್ಲಾಪ್ರಾಣಿಗಳಲ್ಲಿಯೂ, ಗೂಢವಾಗಿರುತ್ತಾ ಪರಮಾತ್ಮಸ್ವರೂಪಿಯಾದ ನೀನು ಅನೇಕ ಉಪಾಧಿಗಳಿಂದ ಬೇರೆ ಬೇರೆಯಾಗಿ ಪ್ರಕಾಶಿಸುತ್ತಿರುವೆ. ಪೂರ್ಣಸ್ವರೂಪನೂ, ಕೆಲವುವೇಳೆ ಪರಿಚ್ಛಿನ್ನ ರೂಪನೂ ಆಗಿ ತೋರುವೆ; ವಾಸ್ತವವಾಗಿ ನಾಮರೂಪಗಳು ನಿನಗಿಲ್ಲ. ಈ ಪ್ರಪಂಚದ ಕರ್ಮಬಂಧನಕ್ಕೆ ಸಿಲುಕದವನೂ, ಜಗದೊಡೆಯನೂ, ಮಹೇಶ್ವರನೂ ನೀನೇ ಆಗಿರುವೆ. ॥೨೯॥

ದೇವ! ನಿನ್ನಲ್ಲಿ ಭೂತ, ಭವಿಷ್ಯದ್ವರ್ತಮಾನರೂಪವೆಲ್ಲವೂ, ಸಾಮಾನ್ಯವೇ ಆಗಿರುವುವು. ನೀನು ದೇಶಕಾಲಾದಿಗಳಿಂದ ರಹಿತನಾದವನು. ವೇದಗಳಿಗೂ ನಿನ್ನ ಆಕಾರವು ತಿಳಿಯಲಾರದು. ಸಂಗರಹಿತನಾದರೂ ನೀನು ಭಕ್ತರಿಗೆ ಅನುಗ್ರಹ ಮಾಡುವ ಉದ್ದೇಶದಿಂದ ಲಿಂಗಾಕೃತಿಯಲ್ಲಿ ನೆಲಸಿ ಪ್ರಕಾಶಿಸುವೆ. ॥೩೦॥

ತ್ವದ್ಭಾಸಾ ವೈ ಸೋಮಸೂರ್ಯಾನಲೇಂದ್ರಾ
ಭೀಷ್ಯೈವೋದೇತ್ಯೇಷ ಸೂರ್ಯಶ್ಚ ದೇವಃ ।
ತ್ವಂ ವೇದಾದೌ ಸ್ವೈರ ಏಕೋ ಮಹೇಶೋ
ವೇದಾಂತಾನಾಂ ಸಾರವಾಕ್ಯಾರ್ಥವೇದ್ಯಃ ॥೩೧॥

ವೈದ್ಯೋಽಭೇದಃ ಸರ್ವಭೂತಾದ್ಯವೇದೋ
ಭಿದ್ಯೇ ದೃಷ್ಟ್ಯಾ ವೈ ತವ ಹೃತ್ತ್ವಮೋಽದ್ಯ ।
ಓಂಕಾರಾರ್ಥಃ ಪುರುಷಸ್ತ್ವಂ ಋತಂ ಚ
ಸತ್ಯಜ್ಞಾನಾನಂದಭೂಮಾಸಿ ಸೋಮ ॥೩೨॥

ಬದ್ಧೋ ಮುಕ್ತೋ ನಾಸಿ ಸಂಗಿಷ್ವಸಂಗೋ
ಪ್ರಾಣಪ್ರಾಣೋ ಮನಸಸ್ತ್ವಂ ಮನಶ್ಚ ।
ತ್ವತ್ತೋ ವಾಚೋ ಮನಸಾ ಸಂನಿವೃತ್ತಾ
ಸ್ತ್ವಾನಂದಜ್ಞಾನಿನೋ ಬುದ್ಧಭಾವಾಃ ॥೩೩॥

---

ನಿನ್ನ ಕಾಂತಿಯಿಂದಲೇ ಚಂದ್ರ, ಸೂರ್ಯ, ಅಗ್ನಿ, ಇಂದ್ರ ಮುಂತಾದವರೆಲ್ಲರೂ ಬೆಳಗುವರು. ನಿನ್ನ ಭಯದಿಂದಲೇ ಸೂರ್ಯದೇವನು ಪ್ರತಿದಿನವೂ ತಪ್ಪದೆ ಉದಯವಾಗುತ್ತಿರುವನು. ವೇದಗಳ ಆದಿಯಲ್ಲಿ ನೀನೇ ಗಟ್ಟಿಯಾಗಿ ಉಚ್ಚರಿಸುವ ಓಂಕಾರಸ್ವರೂಪವಾಗಿರುವೆ. ವೇದಾಂತಗಳ ಸಾರಭೂತವಾದ ವಾಕ್ಯಾರ್ಥಗಳಿಂದ ತಿಳಿಯಲ್ಪಡುವ ಮಹೇಶ್ವರನೇ ನೀನಾಗಿರುವೆ. ॥೩೧॥

ಭವರೋಗಚಿಕಿತ್ಸಕನೂ, ಅದ್ವಿತೀಯನೂ, (ಭೇದಶೂನ್ಯನೂ) ಸಕಲ ಭೂತಗಳಿಗೂ ಆದಿಭೂತನೂ, ಅಗೋಚರನೂ, ಲೌಕಿಕದೆಸೆಯಲ್ಲಿ ಭಿನ್ನಭಿನ್ನವಾಗಿ ದೃಷ್ಟಿಗೆ ಗೋಚರವಾಗುವವನೂ, ಓಂಕಾರದ ಅರ್ಥರೂಪನೂ, (ಬ್ರಹ್ಮ, ವಿಷ್ಣು, ರುದ್ರಾತ್ಮಕನು) ಪುರುಷನೂ, ಕಾಯಿಕ ಮತ್ತು ವಾಚಿಕವಾದ ಸತ್ಯಾತ್ಮಕನೂ, ಸತ್ಯ, ಜ್ಞಾನ ಮತ್ತು ಆನಂದಗಳಿಗೆ ಆಶ್ರಯನೂ, ಎಲೈ ಉಮಾರಮಣನೇ, ನೀನೇ ಆಗಿರುವೆ. ॥೩೨॥

ದೇವ, ನಿನಗೆ ಬಂಧನ ಅಥವಾ ಮೋಕ್ಷಾವಸ್ಥೆಗಳಿಲ್ಲ. ನೀನು ಕಾಮ ಕ್ರೋಧಾದಿ ವಿಷಯಸಂಬಂಧಗಳಲ್ಲಿ ಸಂಬಂಧರಹಿತನಾದವನು. ಪ್ರಾಣಗಳಿಗೂ ಪ್ರಾಣಸ್ವರೂಪನು. ಮನಸ್ಸಿಗೆ ಮನೋರೂಪನೂ ನೀನಾಗಿರುವೆ. ಅಂದರೆ ಪ್ರಾಣ,

ತ್ವತ್ತೋ ಜಾತಂ ಭೂತಜಾಲಂ ಮಹೇಶ
ತ್ವಯಾ ಜೀವತ್ಯೇವಮೇನಂ ವಿಚಿತ್ರಂ ।
ತ್ವಯ್ಯೇವಾಂತೇ ಸಂವಿಶತ್ಯೇವ ವಿಶ್ವಂ
ಜ್ಞಾತ್ವೈಕೋ ವಾ ಸ್ತುವತೇ ಸ್ತವ್ಯಮೀಶ ॥೩೪॥

ಕಿಂಚಿಜ್ಜ್ಞಾತ್ವಾ ಸರ್ವಭಾಸ್ಯೇವ ಬುದ್ಧ್ಯಾ ।
ತ್ವಾಮಾತ್ಮಾನಂ ವೇದ್ಮಿ ದೇವಂ ಮಹೇಶಂ ॥೩೫॥

॥ ಈಶ್ವರ ಉವಾಚ ॥

ಇತಿ ಶಂಕರವಾಕ್ಯೇನ ವಿಶ್ವೇಶಾಖ್ಯಾದಹಂ ತದಾ ।
ಪ್ರಾದುರ್ಬಭೂವ ಲಿಂಗಾತ್ಸ್ವಾದಲಿಂಗೋಽಪಿ ಮಹೇಶ್ವರಿ ॥೩೬॥

ತ್ರಿಪುಂಡ್ರವಿಲಸತ್ಫಾಲಚಂದ್ರಾರ್ಧಕೃತಶೇಖರಃ ।
ನಾಗಾಜಿನೋತ್ತರಾಸಂಗೋ ನೀಲಕಂಠಸ್ತ್ರಿಲೋಚನಃ ॥೩೭॥

---

ಮನಸ್ಸುಗಳು ನಿನ್ನಿಂದ ಬೇರೆಯಿಲ್ಲ. ನಿನ್ನ ವಿಷಯವನ್ನು ತಿಳಿಯಲು, ಮನಸ್ಸಿನೊಡನೆ ಹೊರಟ ವಾಕ್ಯಗಳು ನಿನ್ನ ಸ್ವರೂಪವನ್ನು ಪ್ರತಿಪಾದಿಸಲಾರದೆ ಹಿಂದಿರುಗಿ ಬಂದವು. ನಿನ್ನ ಆನಂದಸ್ವರೂಪವನ್ನರಿತವರೇ ಜ್ಞಾನಿಗಳಾದ ಶೈವರು. ॥೩೩॥

ಮಹೇಶ್ವರನೇ, ಸಕಲ ಭೂತಸಮೂಹಗಳೂ ನಿನ್ನಿಂದಲೇ ಉಂಟಾಗಿವೆ. ವಿಚಿತ್ರವಾದ ಪ್ರಾಣಿಗಳೆಲ್ಲವೂ ಈಗ ನಿನ್ನಿಂದಲೇ ಬದುಕುತ್ತಿರುವುವು. ಕೊನೆಗೆ ನಿನ್ನಲ್ಲಿಯೇ ಈ ಪ್ರಪಂಚವೆಲ್ಲವೂ ಲೀನವಾಗುತ್ತದೆ. ಈಶ್ವರನೇ, ಒಬ್ಬನಾದರೂ ಇಂತಹ ನಿನ್ನ ವಿಚಿತ್ರ ಸ್ವರೂಪವನ್ನರಿತು ಸ್ತೋತ್ರಾರ್ಹನಾದ ನಿನ್ನನ್ನು ಸರಿಯಾಗಿ ಸ್ತುತಿಸಲಾರನು. ನಾನು ಅಲ್ಪಜ್ಞನೇ ಸರಿ. ಸರ್ವದಾ ಪ್ರಕಾಶಮಾನವಾದ ಬುದ್ಧಿಯನ್ನು ನೀನು ನನಗೆ ಕೊಟ್ಟಿದ್ದರೂ ಅದನ್ನು ಪೂರ್ಣವಾಗಿ ಉಪಯೋಗಿಸಿಕೊಳ್ಳುವ ಶಕ್ತಿಯು ನನಗಿಲ್ಲ. ದೇವದೇವನೂ, ಮಹೇಶ್ವರನೂ ಆದ ನಿನ್ನನ್ನೇ ನಾನು ಪರಮಾತ್ಮನೆಂದೂ, ನೀನೇ ನಾನೆಂದೂ ತಿಳಿಯುತ್ತೇನೆ ಎಂದು ಆ ಶಂಕರಯತಿಯು ಸ್ತೋತ್ರಮಾಡುವನು. ॥೩೪-೩೫॥

ಈ ರೀತಿಯಾದ ಶಂಕರನ ವಾಕ್ಯರೂಪವಾದ ಸ್ತೋತ್ರದಿಂದ ತೃಪ್ತನಾಗಿ ಅಲ್ಲಿದ್ದ ವಿಶ್ವೇಶ್ವರನ ಲಿಂಗದಿಂದ ನಾನು ನಿಜವಾಗಿ ರೂಪರಹಿತನಾದವನಾದರೂ

ವರಕಾಕೋದರಾನದ್ಧ ರಾಜದ್ಧಾರಸ್ತಯಾಂಬಯಾ ।
ತಮಬ್ರುವನ್ಮಹಾದೇವಿ ಪ್ರಣತಂ ಯತಿನಾಂವರಂ ॥೩೮॥

ಶಿಷ್ಯೈಶ್ಚತುರ್ಭಿಶ್ಚ ಯುತಂ ಭಸ್ಮರುದ್ರಾಕ್ಷಭೂಷಣಂ ॥೩೯॥

॥ ಶ್ರೀ ಈಶ್ವರ ಉವಾಚ ॥

ಮದಂಶಜಸ್ತ್ವಂ ಜಾತೋಽಸಿ ಭುವಿ ಚಾದ್ವೈತಸಿದ್ಧಯೇ ।
ಪಾಪಮಿಶ್ರಾಶ್ರಿತೈರ್ಮಾರ್ಗೈರ್ಜೈನದುರ್ಬುದ್ಧಿಬೋಧಕೈಃ ॥೪೦॥

ಭಿನ್ನೇ ವೇದೈಕಸಂಸಿದ್ಧೇ ಅದ್ವೈತೇ ದ್ವೈತವಾಕ್ಯತಃ ।
ತಚ್ಛೇದಗಿರಿವಜ್ರಸ್ತ್ವಂ ಸಂಜಾತೋಽಸಿ ಮದಂಶತಃ ॥೪೧॥

---

ಹಣೆಯಲ್ಲಿ ಭಸ್ಮತ್ರಿಪುಂಡ್ರ, ತಲೆಯಲ್ಲಿ ಅರ್ಧಚಂದ್ರ, ದೇಹದಲ್ಲಿ ಆನೆಯಚರ್ಮ, ಕಪ್ಪುಗೊರಳು ಮತ್ತು ಮೂರು ಕಣ್ಣುಗಳು ಇವುಗಳಿಂದ ಶೋಭಿಸುತ್ತಾ ಶಂಕರ ಯತಿಗೆ ಪ್ರತ್ಯಕ್ಷನಾಗುವೆನು. ॥೩೬-೩೭॥

ಪಾರ್ವತಿಯೇ, ಶ್ರೇಷ್ಠವಾದ ಸರ್ಪರಾಜನನ್ನೇ ಹಾರವನ್ನಾಗಿ ಮಾಡಿ ಕೊಂಡು, ನಿನ್ನೊಡನೆ ನಾನು ಪ್ರತ್ಯಕ್ಷವಾಗಿ ಅವನಿಗೆ ಕಾಣಿಸಿಕೊಳ್ಳುವೆನು. ಮಹಾ ದೇವಿ, ಆಗ ಯತಿಶ್ರೇಷ್ಠನಾದ ಆ ಶಂಕರನು ತನ್ನ ನಾಲ್ಕು ಶಿಷ್ಯರೊಡನೆ ಭಸ್ಮ, ರುದ್ರಾಕ್ಷಗಳನ್ನಲಂಕರಿಸಿಕೊಂಡು ನನಗೆ ನಮಸ್ಕಾರಮಾಡುವುದನ್ನು ನೋಡಿ ಅವನಿಗೆ ಹೀಗೆ ಹೇಳುವೆನು. ॥೩೮-೩೯॥

ಎಲೈ ಶಂಕರಯತಿಯೇ, ಈ ಭೂಮಿಯಲ್ಲಿ ಅದ್ವೈತಮಾರ್ಗವನ್ನು ಪ್ರಕಟಿ ಸುವುದಕ್ಕೋಸ್ಕರವೇ ನನ್ನ ಅಂಶದಿಂದ ನೀನು ಅವತರಿಸಿರುವೆ. ಜೈನರ ದುರ್ಬುದ್ಧಿ ಬೋಧಕವಾದ ಪಾಪಮಿಶ್ರಿತವಾದ ನಾಸ್ತಿಕವಾದಗಳಿಂದಲೂ, ದ್ವೈತಾರ್ಥಪ್ರತಿ ಪಾದಕಗಳಾದ ವಾಕ್ಯಗಳಿಂದಲೂ, ವೇದಗಳಲ್ಲಿ ಮುಖ್ಯವಾಗಿ ಪ್ರತಿಪಾದಿತವಾಗಿರುವ ಅದ್ವೈತಮಾರ್ಗವು ಒಡೆದುಹೋಗಿರಲು, ಅದನ್ನು ಸರಿಪಡಿಸಿ ಮತ್ತೆ ಅದ್ವೈತ ಮತವನ್ನು ಸ್ಥಾಪನೆಮಾಡುವೆ. ಪರ್ವತಗಳ ಅಹಂಕಾರವನ್ನು ಮುರಿಯಲು ವಜ್ರಾಯುಧದಂತೆ ನೀನು ನನ್ನ ಅಂಶದಿಂದ ದುರ್ಮತಧ್ವಂಸಕನಾಗಿ ಅವತರಿಸಿರುವೆ. ಎಲೈ ಯತಿಪುಂಗವನೇ, ನಿನಗೆ ಕೇವಲ ಮೂವತ್ತೆರಡು ವರ್ಷಗಳೇ ಪರಮಾ ಯುಸ್ಸು. ಅದು ಮುಗಿದ ಕೂಡಲೇ ಜಾಗ್ರತೆಯಾಗಿ ನೀನು ಕೈಲಾಸಕ್ಕೆ ಬಂದು ಬಿಡು. ॥೪೦-೪೧॥

ದ್ವಾತ್ರಿಂಶತ್ಪರಮಾಯುಸ್ತೇ ಶೀಘ್ರಂ ಕೈಲಾಸಮಾವಸ ।
ಏತತ್ಪ್ರತಿಗೃಹಾಣ ತ್ವಂ ಪಂಚಲಿಂಗಂ ಸುಪೂಜಯ ॥೪೨॥

ಭಸ್ಮರುದ್ರಾಕ್ಷಸಂಪನ್ನಃ ಪಂಚಾಕ್ಷರಪರಾಯಣಃ ।
ಶತರುದ್ರಾವರ್ತನೈಶ್ಚ ತಾರೇಣ ಭಸಿತೇನ ಚ ॥೪೩॥

ಬಿಲ್ವಪತ್ರೈಶ್ಚ ಕುಸುಮೈರ್ನೈವೇದ್ಯೈರ್ವಿವಿಧೈರಪಿ ।
ತ್ರಿವಾರಂ ಸಾವಧಾನೇನ ಗಚ್ಛ ಸರ್ವಜಯಾಯ ಚ ॥೪೪॥

ತ್ವದರ್ಥೇ ಕೈಲಾಸಾಚಲವರಸುಪಾಲೀಗತಮಹಾ
ಸಮುದ್ಯಚ್ಚಂದ್ರಾಭಸ್ಫಟಿಕಧವಲಂ ಲಿಂಗಕುಲಕಂ ।
ಸಮಾನೀತಂ ಸೋಮೋದ್ಧೃತವಿಮಲಮೌಳ್ಯರ್ಚಯ ಪರಂ
ಕಲೌ ಲಿಂಗಾರ್ಚಾಯಾಂ ಭವತಿ ಹಿ ವಿಮುಕ್ತಿಃ ಪರತರಾ ॥೪೫॥

ಸ ಶಂಕರೋ ಮಾಂಸ್ಕಪ್ರಣನಾಮ ಮಸ್ಕರೀ
ಮಯಸ್ಕರಂ ತಸ್ಕರವರ್ಯಮಾರ್ಯೇ ।

ಎಲೈ ಯತಿಯೇ, ಈ ಪಂಚಲಿಂಗಗಳನ್ನು ತೆಗೆದುಕೋ ! ಭಸ್ಮರುದ್ರಾಕ್ಷಧರನಾಗಿ, ಶಿವಪಂಚಾಕ್ಷರಮಂತ್ರಜಪಪರಾಯಣನಾಗಿ, ನೂರುಬಾರಿ ರುದ್ರಮಂತ್ರವನ್ನು ಆವರ್ತಿಮಾಡುತ್ತಾ, ಪ್ರಣವಮಂತ್ರವನ್ನು ಉಚ್ಚರಿಸುತ್ತಾ, ಭಸ್ಮ, ಬಿಲ್ವದಳಗಳು, ಹೂವು ಮತ್ತು ಬಗೆಬಗೆಯಾದ ನೈವೇದ್ಯಗಳಿಂದ ಸಾವಧಾನವಾಗಿ ತ್ರಿಕಾಲಗಳಲ್ಲಿಯೂ ಈ ಪಂಚಲಿಂಗಗಳನ್ನು ಪೂಜಿಸಿ ಸಕಲ ದಿಗ್ವಿಜಯವನ್ನೂ ಪಡೆ, ಹೋಗು ಎಂದು ನಾನು ಶಂಕರಯತಿಗೆ ಆಶ್ವಾಸನಕೊಡುವೆನು. ॥೪೨-೪೩-೪೪॥

ಮತ್ತು ಆ ಶಿವಲಿಂಗದ ಮಹಿಮೆಯನ್ನು ಅವನಿಗೆ ವಿವರಿಸುತ್ತಾ, ನಿನಗೋಸ್ಕರ ಶ್ರೇಷ್ಠವಾದ ಕೈಲಾಸಶಿಖರದಲ್ಲಿ ಶೋಭಿಸುತ್ತಿರುವ ಚಂದ್ರಕಾಂತ ಸ್ಫಟಿಕಗಳಂತೆ ಶುಭ್ರವಾದ ಈ ಲಿಂಗಗಳ ಸಮೂಹವನ್ನು ತಂದಿರುವೆನು. ಎಲೈ ಯತಿವರ್ಯನೇ, ಉಮಾಕಾಂತನಾದ ಚಂದ್ರಮೌಳಿಗೆ ಆಶ್ರಯವಾದ ಈ ಲಿಂಗಗಳನ್ನು ಭಕ್ತಿಯಿಂದ ನೀನು ಪೂಜೆಮಾಡು. ಈ ಕಲಿಯುಗದಲ್ಲಿ ಮಾನವರಿಗೆ ಶಿವಲಿಂಗಪೂಜೆಯಿಂದಲೇ ಶ್ರೇಷ್ಠವಾದ ಮೋಕ್ಷವುಂಟಾಗುವುದೆಂದು ತಿಳಿ. ಎಂದು ಬೋಧಿಸುವೆನು. ॥೪೫॥

ಆರ್ಯಳೇ, ಸಂನ್ಯಾಸಿಯಾದ ಆ ಶಂಕರನು ಸುಖಕರನೂ, ತಸ್ಕರಶ್ರೇಷ್ಠನೂ (ಸರ್ವಜಗತ್ಸ್ವರೂಪನಾದ್ದರಿಂದ ಚೋರಶ್ರೇಷ್ಠನೂ ತಾನೇ ಆಗಿರುವನು.) ಆದ

ಸಂಗೃಹ್ಯ ಲಿಂಗಾನಿ ಜಗಾಮ ವೇಗವಾ
ನ್ಭೂಮೌ ವಿಜೇತುಂ ಕುಪಥಾನುಗಾಮಿನಃ ॥೪೬॥

ತದ್ಯೋಗಭೋಗವರಮುಕ್ತಿಸುಮೋಕ್ಷಯೋಗ
ಲಿಂಗಾರ್ಚನಾತ್ಪ್ರಾಪ್ತಜಯಃ ಸ್ವಕಾಶ್ರಮಂ ।
ತಾನ್ಸ್ವೈ ವಿಜಿಗ್ಯ ತರಸಾಕ್ಷತಶಾಸ್ತ್ರವಾದೈ
ರ್ನಿಃಶ್ರಾನ್ಸ ಕಾಂಚ್ಯಾಮಥ ಸಿದ್ಧಿಮಾಪ ॥೪೭॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಶಂಕರಾಚಾರ್ಯ
ಚರಿತ್ರವರ್ಣನಂ ನಾಮ ಷೋಡಶೋಽಧ್ಯಾಯಃ

---

ನನಗೆ ನಮಸ್ಕರಿಸಿ ಅಲ್ಲಿಂದ ನಾನು ಕೊಟ್ಟ ಶಿವಲಿಂಗಗಳನ್ನು ತೆಗೆದುಕೊಂಡು ಜಾಗ್ರತೆಯಾಗಿ ಈ ಭೂಮಿಯಲ್ಲಿರುವ ನೀಚಮಾರ್ಗಾವಲಂಬಿಗಳಾದ ಜೈನಬೌದ್ಧಾದಿಗಳನ್ನು ಜಯಿಸುವುದಕ್ಕೋಸ್ಕರ ತಾನೇತಾನಾಗಿ ಹೊರಡುವನು. ॥೪೬॥

ಆ ಶಂಕರಯತಿಯು ಮಹಾದೇವನು ತನಗೆ ಅನುಗ್ರಹಿಸಿದ ಶಿವಲಿಂಗ ಸಂಬಂಧದಿಂದ ಜ್ಞಾನಿಯಾಗಿ, ಸಕಲ ಭೋಗಗಳನ್ನೂ, ಶ್ರೇಷ್ಠವಾದ ಮೋಕ್ಷ ಮೊದಲಾದ ಯೋಗಗಳನ್ನೂ ಉಂಟುಮಾಡುವ ಆ ಶಿವಲಿಂಗವನ್ನು ಪೂಜೆಮಾಡಿ, ಆ ಲಿಂಗಪೂಜಾಪ್ರಭಾವದಿಂದ ಜಯಪಡೆದು ತನ್ನ ಆಶ್ರಮವನ್ನು ಸೇರುವನು. ಹೀಗೆ ಶಂಕರನು ಜಾಗ್ರತೆಯಾಗಿ ಪರಮಾರ್ಥಸಿದ್ಧಿಯನ್ನು ಪಡೆದು ನೀಚವಾದ ಶಾಸ್ತ್ರಗಳ ವಾದಗಳಿಂದ ಕೊಬ್ಬಿದ ಸಂಕರರನ್ನು ಕಾಂಚೀಪಟ್ಟಣದಲ್ಲಿ ಗೆದ್ದು ಕೊನೆಗೆ ಶಿವಸಾರೂಪ್ಯಪಡೆಯುವನೆಂದು ಶಿವನು ಪಾರ್ವತಿಗೆ ತನ್ನ ಭಕ್ತಶ್ರೇಷ್ಠನ ಭವಿಷ್ಯ ಜನನ ವಿಷಯವನ್ನು ವಿವರಿಸಿ ಹೇಳಿದನು. ॥೪೭॥

ಇಲ್ಲಿಗೆ ಶ್ರೀ ಶಿವರಹಸ್ಯದ ಸದಾಶಿವಸಂಜ್ಞಕವಾದ
ಒಂಬತ್ತನೆಯ ಅಂಶದಲ್ಲಿ ಶಂಕರಾಚಾರ್ಯಚರಿತ್ರೆಯ ವರ್ಣನೆಯೆಂಬ
ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಸಪ್ತದಶೋಽಧ್ಯಾಯಃ

॥ ಶ್ರೀ ಶಿವ ಉವಾಚ ॥

ಪುನಃ ಕಲೌ ಸಹಸ್ರಾಣಾಂ ತ್ರಿತಯಾಮನಂತರಂ ಶಿವೇ ।
ಭೂಸುರೋ ಭಾಸುರಾಚಾರೋ ಭವೋದ್ಭವಪದಾರ್ಚಕಃ ॥೧॥

ಭಸ್ಮರುದ್ರಾಕ್ಷಸಂಪನ್ನಃ ಪಂಚಾಕ್ಷರಜಪಾದರಃ ।
ರುದ್ರಸೂಕ್ತಜಪಾಸಕ್ತಸ್ತ್ಯಕ್ತಾನ್ಯಸುರಪೂಜನಃ ॥೨॥

ಶಿವಲಿಂಗಾರ್ಚನಪರಃ ಶೈವಃ ಶಿವಪದಾರ್ಚಕಃ ।
ತಸ್ಯಾಂಗಸಂಗತಃ ಶೈವಾ ಭವಿಷ್ಯಂತಿ ಕಲಾವಪಿ ॥೩॥

---

## ಹದಿನೇಳನೆಯ ಅಧ್ಯಾಯ

ಪಾರ್ವತಿ, ಪುನಃ ಈ ಕಲಿಯುಗವು ಪ್ರಾರಂಭವಾದ ಮೂರುಸಾವಿರ ವರ್ಷಗಳ ಅನಂತರ ಶ್ಲಾಘ್ಯವಾದ ಆಚಾರವುಳ್ಳವನೂ, ಶಿವಪಾದಪೂಜಕನೂ, ಭಸ್ಮರುದ್ರಾಕ್ಷಸಂಪನ್ನನೂ, ಶಿವಪಂಚಾಕ್ಷರಮಂತ್ರಜಪದಲ್ಲಿ ಆದರವುಳ್ಳವನೂ, ರುದ್ರಸೂಕ್ತಮಂತ್ರಜಪಮಾಡುವುದರಲ್ಲಿ ಆಸಕ್ತನೂ, ಇತರ ದೇವತೆಗಳ ಪೂಜೆಯನ್ನು ಮಾಡದವನೂ, ಯಾವಾಗಲೂ ಶಿವಲಿಂಗಪೂಜೆ, ಶಿವಪಾದಾರ್ಚನೆಯಲ್ಲಿಯೇ ನಿರತನಾದ ಒಬ್ಬ ಶೈವಬ್ರಾಹ್ಮಣನು ಜನಿಸುವನು. ಅವನ ದೇಹಸಂಬಂಧದಿಂದ ಈ ಕಲಿಯುಗದಲ್ಲಿ ಅನೇಕಮಂದಿ ಶೈವರು ಹುಟ್ಟುವರು. ॥೧-೨-೩॥

ಮಮ ಭಕ್ತ್ಯಂತರಾಸಂಗಪಾಪಸಂಘೈಕಭಂಗಕಃ ।
ಚೋಲೇಽಥ ಭವಿತಾ ದೇಶೇ ಸಹ್ಯಜಾತೀರಶೋಭನಃ ॥೪॥

ಲಿಂಗಸಂಗೈಕಸುಭಗಃ ಶಿವಕ್ಷೇತ್ರವರಾಶ್ರಯಃ ।
ತತ್ತೀರೇ ಚಂಪಕಾಶೋಕನಾರಿಕೇಲೋರುಪಾನಸೈಃ ॥೫॥

ಲಿಕುಚೈರ್ವರಮೋಚಾಮ್ರಕಪಾಲದ್ರುಮಶೋಭಿತೇ ।
ನಾನಾಶಿವಾಲಯೋತ್ತುಂಗಗೋಪುರಾಗ್ರವಿರಾಜಿತೇ ॥೬॥

ಬಿಲ್ವಮಂದಾರಪುನ್ನಾಗಕೋವಿದಾರಾಮಲಕ್ಯಕೈಃ ।
ಶೋಭಿತೇ ಸಹ್ಯಜಾತೀರೇ ವಿನಿಂದಿತತ್ರಿವಿಷ್ಟಪೇ ॥೭॥

ಕಾಶ್ಮೀರರಸಸರ್ವಸ್ವಸಾರಭೂತೋತ್ತಮೋತ್ತಮಂ ।
ಶ್ರೀಕಂಠಾದಿಮಹಾಲಿಂಗಸೇವಿತಂ ತೀರಯೋರ್ದ್ವಯೋಃ ॥೮॥

ಜಂಬುಕೇಶಂ ಮಾತೃಭೂತತೃಣರತ್ನೇಶ್ವರಾಲಯೇ ।
ಐರಾವತೇ ಪುಷ್ಪವನೇ ಧೃತೇಶಂ ಚ ಶಮೀವನಂ ॥೯॥

---

ನನ್ನ ಭಕ್ತಿಯಿಂದ ಯುಕ್ತನಾಗಿ ಪಾಪರಾಶಿಗಳನ್ನೆಲ್ಲಾ ಧ್ವಂಸಮಾಡುವ ಆ ಭಕ್ತನು ಚೋಲದೇಶದಲ್ಲಿ ಹುಟ್ಟಿ ಕಾವೇರೀನದಿಯ ದಡದಲ್ಲಿ ಶುಭಕರನೆಂದು ಪ್ರಸಿದ್ಧನಾಗುವನು. ಯಾವಾಗಲೂ ಆತನು ಶಿವಲಿಂಗಪೂಜಾಸೌಭಾಗ್ಯವುಳ್ಳವನಾಗಿ ಶ್ರೇಷ್ಠವಾದ ಶಿವಕ್ಷೇತ್ರವನ್ನಾಶ್ರಯಿಸುವನು. ಕಾವೇರೀನದಿಯ ದಡದ ಆ ಪ್ರದೇಶವು ಸಂಪಿಗೆ, ಅಶೋಕ, ತೆಂಗು, ಹಲಸು, ಗಜನಿಂಬೆ, (ಚಕ್ಕೋತ) ಉತ್ತಮವಾದ ಬಾಳೆ, ಮಾವು, ಹೊಂಗೆ ಮುಂತಾದ ಮರಗಳಿಂದ ಶೋಭಿತವಾಗಿ ಅನೇಕಬಗೆಯ ಶಿವದೇವಸ್ಥಾನಗಳ ಎತ್ತರವಾಗಿರುವ ಗೋಪುರಗಳ ಶಿಖರಗಳಿಂದ ವಿರಾಜಿಸುತ್ತಿರುವುದು. ॥೪-೫-೬॥

ಅಂಬಿಕೇ, ಬಿಲ್ವ, ಪಾರಿಜಾತ, (ಮಂದಾರ) ಪುನ್ನಾಗ, ಕೋವಿದಾರ, (ಕೆಂಪು ಕಂಚುವಾಳದ ಗಿಡ) ನೆಲ್ಲೀಮರಗಳಿಂದ ಶೋಭಿಸುತ್ತಿರುವ ಕಾವೇರೀನದಿಯ ದಡವು ಸಂಪತ್ತಿನಲ್ಲಿ ಸ್ವರ್ಗವನ್ನೂ ನಿಂದಿಸುತ್ತಿರುವುದು. ಇಲ್ಲಿ ಸಾರಭೂತವಾದ ಚಂದನ ರಸದಿಂದ ಲೇಪಿಸಲ್ಪಟ್ಟಿರುವ ಉತ್ತಮೋತ್ತಮವಾದ ಶ್ರೀಕಂಠಲಿಂಗವೇ ಮುಂತಾದ ದೊಡ್ಡ ಶಿವಲಿಂಗಗಳು ಎರಡು ದಡಗಳಲ್ಲಿಯೂ ವಿರಾಜಿಸುವುವು. ಜಂಬುಕೇಶ್ವರ,

ಜಪ್ಯೇಶಂ ಶ್ರೀಪ್ರಯಾಣಂ ಚ ಕ್ಷೀರಿಣೀವಿಪಿನಂ ಶಿವೇ ।
ಶ್ರೀಸುಂದರಪುರಂ ದಿವ್ಯಂ ದಕ್ಷಿಣಾವರ್ತಮೇವ ಚ ॥೧೦॥

ಕುಂಭಘೋಣಂ ಸ್ವಾಮಿಶೈಲಂ ದುರ್ಗೇಶಂ ದನುಕೇಶ್ವರಂ ।
ಮಧ್ಯಾರ್ಜುನಂ ತಥಾ ಪುಣ್ಯಂ ನಾಗೇಶಂ ಗೋವಟೇಶ್ವರಂ ॥೧೧॥

ಕೋಟೀಶಂ ಮಂಗಲೇಶಂ ಚ ತಥಾಮ್ರಂ ಚ ದ್ರುತೀಶ್ವರಂ ।
ತಥೈವ ಕಂಸನಗರಂ ಶ್ರೀವಾಂಛಂ ತೇಜನೀವನಂ ॥೧೨॥

ಶ್ವೇತಾರಣ್ಯಂ ಮಯೂರೇಶಂ ಶ್ರೀಕಾಲಹರಣಂ ತಥಾ ।
ಛಾಯಾವನಂ ಚ ಕುದ್ದಾಲಂ ವೇದಾರಣ್ಯಂ ಸದಾಂಬಿಕೇ ॥೧೩॥

ಕಮಲಾಲಯಮೀಶಾನಿ ಲಿಂಗಾಲಯಮನುತ್ತಮಮ್ ।
ಅನ್ಯಾನಿ ದಿವ್ಯಲಿಂಗಾನಿ ತಸ್ಮಿಂಶ್ಚೋಲೇ ಮಹೇಶ್ವರಿ ॥೧೪॥

ನಿಚೋಲಭೂತ ಪೃಥ್ವ್ಯಾಸ್ತೇ ದೇಶೋಽಯಂ ಭಾರತೇಽಂಬಿಕೇ ।
ತಸ್ಮಿನ್ಸಹ್ಯೋದ್ಭವಾತೀರೇ ಗ್ರಾಮಸಾಹಸ್ರಶೋಭಿತೇ ॥೧೫॥

---

ಮಾತೃಭೂತೇಶ್ವರ, ತೃಣ, ರತ್ನೇಶ್ವರಸಂಜ್ಞಕವಾದ ದೇವಾಲಯಗಳೂ, ಐರಾವತ ಮತ್ತು ಪುಷ್ಪವನಗಳಲ್ಲಿ ಧೃತೇಶ್ವರ ಮತ್ತು ಶಮೀವನೇಶ್ವರರೂ, ಶ್ರೀಪ್ರಯಾಣ, ಕ್ಷೀರಿಣೀವಿಪಿನ, ಶ್ರೀ ಸುಂದರಪುರ, ದಕ್ಷಿಣಾವರ್ತ, ಕುಂಭಘೋಣ, ಸ್ವಾಮಿಶೈಲ, ದುರ್ಗೇಶ, ಧನುಕೇಶ್ವರ, ಮಧ್ಯಾರ್ಜುನ ಮುಂತಾದ ಶಿವಕ್ಷೇತ್ರಗಳೂ, ಹಾಗೆಯೇ ಪುಣ್ಯಕರವಾದ ನಾಗೇಶ್ವರ, ಗೋವಟೇಶ್ವರ, ಕೋಟೇಶ್ವರ, ಮಂಗಳೇಶ್ವರ, ಆಮ್ರೇಶ್ವರ, ದ್ರುತೀಶ್ವರ, ಕಂಸನಗರ, ಶ್ರೀವಾಂಛ, ತೇಜನೀವನ, ಶ್ವೇತಾರಣ್ಯ, ಮಯೂರೇಶ್ವರ, ಶ್ರೀ ಕಾಲಹರಣ, ಛಾಯಾವನ, ಕುದ್ದಾಲ, ವೇದಾರಣ್ಯ, ಕಮಲಾಲಯ ಮುಂತಾದ ಅನೇಕ ಉತ್ತಮವಾದ ಶಿವಲಿಂಗಾಲಯಗಳೂ, ಶಿವ ಕ್ಷೇತ್ರಗಳೂ ಇರುವುವು. ಎಲೌ ಮಹೇಶ್ವರಿ, ಈ ಚೋಲದೇಶದಲ್ಲಿ ಇನ್ನೂ ಅನೇಕ ದಿವ್ಯಲಿಂಗಗಳಿರುವುವು. ||೭-೮-೯-೧೦-೧೧-೧೨-೧೩-೧೪||

ಎಲೌ ಅಂಬಿಕೇ, ಈ ಚೋಲದೇಶವು ಭಾರತದೇಶದಲ್ಲಿ ಭೂದೇವಿಗೆ ಕುಪ್ಪಸ ದಂತಿರುವುದು. ಆ ಕಾವೇರೀನದಿಯ ದಡದಲ್ಲಿ ಸಾವಿರಾರು ಗ್ರಾಮಗಳು ಶೋಭಿಸು ವುವು. ಅನೇಕ ಬ್ರಾಹ್ಮಣರ ಅಗ್ರಹಾರಗಳು ಅಲ್ಲಿ ಪ್ರಸಿದ್ಧವಾಗಿರುವುವು. ಬಗೆಬಗೆಯ

ದ್ವಿಜಾಗ್ರಹಾರಸಂಪನ್ನೇ ನಾನಾಸಸ್ಯವಿರಾಜಿತೇ ।
ವೇದವಾದರತೈರ್ವಿಪ್ರೈಃ ಶಾಸ್ತ್ರಾಧ್ಯಯನಕೋವಿದೈಃ ॥೧೬॥

ಮುಖೀಭಿಃ ಸುಖಸಂವಾಸೈಃ ಸೇವಿತೇ ಜನಸಂಯುತೇ ।
ಭಸ್ಮರುದ್ರಾಕ್ಷಲಿಂಗಾರ್ಚಾನಿರತೈರುಪಸೇವಿತೇ ॥೧೭॥

ಮಠೋಪಕರಣೈರ್ದಿವ್ಯೈರ್ಯತ್ಯಾವಸಥಕಲ್ಪಿತೈಃ ।
ಯತಿಭಿರ್ನಿಯತೈಶ್ಚೈವ ಶಿವಯೋಗ್ಯುಪಸೇವಿತೇ ॥೧೮॥

ತತ್ರಚ್ಛಿವಾಲಯೋದ್ಭೂತ ದಿವ್ಯತೂರ್ಯವಿನಾದಿತೇ ।
ನರನಾರೀಗಣಾಕೀರ್ಣೇ ಬ್ರಹ್ಮವಿಟ್ಶೂದ್ರಸಂಕರೈಃ ॥೧೯॥

ವಿಪಣಾಪಣವೀಥೀಭಿಃ ಶೋಭಿತೇ ವಣಿಜೈರಪಿ ।
ಫಲಪುಷ್ಪಾವನಮಿತವನರಾಜೀವಿರಾಜಿತೇ ॥೨೦॥

---

ಸಸ್ಯಗಳಿಂದ ವಿರಾಜಿಸುತ್ತಿರುವುದು. ವೇದಾಧ್ಯಯನ ನಿರತರೂ, ಶಾಸ್ತ್ರಾಭ್ಯಾಸದಲ್ಲಿ ಪಂಡಿತರೂ ಅನೇಕ ಮಂದಿ ಅಲ್ಲಿ ವಾಸಿಸುವರು. ಅನೇಕಮಂದಿ ಯಜ್ಞಶೀಲರು ಇಲ್ಲಿ ಸುಖವಾಗಿ ವಾಸಮಾಡುವರು. ಭಸ್ಮ, ರುದ್ರಾಕ್ಷ, ಶಿವಲಿಂಗಪೂಜೆ ಮುಂತಾದುವುಗಳಲ್ಲಿ ನಿರತರಾದ ಜನಗಳಿಂದ ಈ ದೇಶವು ಪರಿಪೂರ್ಣವಾಗಿರುವುದು. ||೧೫-೧೬-೧೭||

ಯತಿಗಳ ವಾಸಗಳಿಗೋಸ್ಕರ ಕಲ್ಪಿಸಲ್ಪಟ್ಟಿರುವ ದಿವ್ಯವಾದ ಮಠೋಪಕರಣಗಳೂ, ವಿಶೇಷವಾಗಿ ಆ ಚೋಲದೇಶದಲ್ಲಿರುವುವು. ನಿಯಮಬದ್ಧರಾದ ಸಂನ್ಯಾಸಿಗಳೂ ಆ ಮಠಗಳಲ್ಲಿ ವಾಸಮಾಡುವರು. ಅನೇಕ ಶಿವಯೋಗಿಗಳು ಅಲ್ಲಿ ಸೇವಿಸುವರು. ಆಯಾ ಶಿವದೇವಾಲಯಗಳಲ್ಲಿ ದಿವ್ಯವಾದ ಕೊಂಬು, ಕಹಳೆ, ನಗಾರಿ ಮುಂತಾದ ವಾದ್ಯಗಳು ಮೊರೆಯುವುವು. ಆ ದೇವಾಲಯಗಳಲ್ಲಿ ಗಂಡಸರು ಮತ್ತು ಹೆಂಗಸರು ಗುಂಪುಗುಂಪಾಗಿ ತುಂಬಿರುವರು. ಬ್ರಾಹ್ಮಣರು, ವೈಶ್ಯರು, ಶೂದ್ರರು ಮತ್ತು ಸಂಕರಜಾತಿಯವರೂ ಆ ದೇಶದಲ್ಲಿ ಯಾವಾಗಲೂ ಕಿಕ್ಕಿರಿದಿರುವರು. ಅಂಗಡಿಗಳ ಬೀದಿಗಳು ವರ್ತಕರ ತಂಡದಿಂದ ಶೋಭಿಸುತ್ತಿರುವುವು. ಹೂವು, ಹಣ್ಣುಗಳಿಂದ ಬಾಗಿದ ಅನೇಕ ಮರಗಳ ಸಮೂಹವು ಅಲ್ಲಲ್ಲಿ ವಿರಾಜಿಸುತ್ತಿರುವುದು. ||೧೮-೧೯-೨೦||

ರಾಜೀವಪಲ್ಲಕೋಲ್ಲಾಸಿಸರೋವರವಿರಾಜಿತೇ ।
ಛಾಯಾವೃಕ್ಷಾಕ್ಷತಚ್ಛಾಯಾಮಂಡಪೈಶ್ಚ ವಿರಾಜಿತೇ ॥೨೧॥

ಪಾನೀಯಶಾಲಾನಿರತಪಾನೀಯಹೃಷಿತೇ ಜನೇ ।
ದಿವ್ಯಾನ್ನಸತ್ರಸಂಘುಷ್ಟ ದ್ವಿಜರಾಜೋಪಶೋಭಿತೇ ॥೨೨॥

ಮಹೇಶ್ವರರಥೋದ್ಯೋಗಕರ್ಷಜ್ಞನವಿರಾಜಿತೇ ।
ಕ್ವಣತ್ಕಂಕಣ ನಿಸ್ಸ್ವಾನಶೋಶುಭ್ಯಗಣಿಕಾವೃತೇ ॥೨೩॥

ನಕ್ತಂ ದೀಪಾವಲೀಜಾಲೈರುದ್ಯಲ್ಲಿಂಗಾಲಯೈರ್ವೃತೇ ।
ಮಹಾದೇವಮಹೋದ್ಯೋಗ ಅಭಿಷೇಚನಕೋದ್ಯತೈಃ ॥೨೪॥

ಪುರುಷೈಃ ಶ್ರಾವಣೈಶ್ಚೈವ ನಾನಾಸಂಭಾರಪಾಣಿಭಿಃ ।
ನಾರಿಕೇಲೇಕ್ಷುಸಾರಾಮ್ರಪಾನಸೈರ್ಲಿಕುಚೈರಪಿ ॥೨೫॥

---

ಸರೋವರಗಳು, ತಾವರೆ ಮತ್ತು ಕೆಂದಾವರೆ ಹೂಗಳಿಂದ ವಿರಾಜಿಸುವುವು. ನೆರಳುಗೊಡುವ ಮರಗಳು ತಪ್ಪದೆ ಛಾಯೆಯನ್ನು ಬೀರುವುವು. ನೆರಳಿಗೋಸ್ಕರ ಅನೇಕ ತಳಿರುಮಂಟಪಗಳು ನಿರ್ಮಿಸಲ್ಪಟ್ಟು ಯಾವಾಗಲೂ ಶೋಭಿಸುತ್ತಿರುವುವು. ಅರವಟ್ಟಿಗೆಗಳಲ್ಲಿ ಬಾಯಾರಿದ ಜನರು ಬಂದು, ಬೇಕಾದ ನೀರು, ಮಜ್ಜಿಗೆ ಮುಂತಾದವುಗಳನ್ನು ಕುಡಿದು ಸಂತುಷ್ಟರಾಗಿ ಹೋಗುತ್ತಿರುವರು. ಅನ್ನಸತ್ರಗಳಲ್ಲಿ ದಿವ್ಯವಾದ ಅನ್ನವನ್ನು ಉಂಡು ಸಂತುಷ್ಟರಾದ ಬ್ರಾಹ್ಮಣವೃಂದವು ತೃಪ್ತಿಹೊಂದುವುದು. ಮಹಾದೇವನ ರಥದ ಉತ್ಸವಕಾರ್ಯದಲ್ಲಿ ಜನಗಳು ಉತ್ಸಾಹದಿಂದ ನಿರತರಾಗಿ ಶೋಭಿಸುತ್ತಿರುವರು. ವೇಶ್ಯೆಯರು ಗುಂಪುಗುಂಪಾಗಿ ತಮ್ಮ ಕಾಲುಗಳ ಗೆಜ್ಜೆಗಳನ್ನು ಧ್ವನಿಮಾಡುತ್ತಾ ಕುಣಿಯುವರು. ॥೨೧-೨೨-೨೩॥

ರಾತ್ರಿವೇಳೆಗಳಲ್ಲಿ ದೇವಾಲಯಗಳಲ್ಲಿ ಶಿವಲಿಂಗಗಳ ಮುಂದೆ ದೀಪಪಂಕ್ತಿಗಳು ಶೋಭಿಸುವುವು. ಮಹಾದೇವನ ಸಂಬಂಧವಾದ ಪೂಜಾದಿ ಉದ್ಯೋಗಗಳಲ್ಲಿಯೂ ಅಭಿಷೇಕಕಾರ್ಯಗಳಲ್ಲಿಯೂ ಜನರು ನಿರತರಾಗಿ ಬಗೆಬಗೆಯ ಸಾಮಾನುಗಳನ್ನು ಹಿಡಿದು ಬರುವರು. ಎಳನೀರು, ಕಬ್ಬಿನ ಹಾಲು, ಮಾವು, ಹಲಸು, ಗಜನಿಂಬೆ, ಬಾಳೆ ಮುಂತಾದ ಹಣ್ಣುಗಳನ್ನೂ, ಹಾಲು, ಮೊಸರು, ತುಪ್ಪ, ಜೇನು ಮತ್ತು ಸಕ್ಕರೆ

ನೋಽಚಾಪಂಚಾಮೃತಕ್ಷೀರಘೃತಕ್ಷೌದ್ರಸುಶರ್ಕರಾಃ ।
ತಿಲತೈಲದಧಿಭಿಶ್ಚ ಗಂಧಪುಷ್ಪಾಕ್ಷತಾದಿಭಿಃ ॥೨೬॥

ಬಿಲ್ವಪಂಕಜಮಂದಾರಮಲ್ಲೀಸರ ವಿರಾಜಿತೇ ।
ನೈವೇದ್ಯಶರ್ಕರಾಪೂಪಸ್ವಾದ್ವನ್ನೈಃಪಾಯಸೈರಪಿ ॥೨೭॥

ಧೂಪದೀಪಾವಲೀಭಾಸ್ವನ್ನೀರಾಜಿತ ಶಿವಾಲಯೇ ।
ತಾಂಬೂಲವೀಣಾವೇಣೂತ್ಥದುಂದುಭ್ಯಾಘಾತಪೂರಿತೇ ॥೨೮॥

ಶಿವಾಲಯೇಷು ಲಿಂಗಾಗ್ರೇ ನೃತ್ಯದ್ವಾರಾಂಗನಾಯುತೇ ।
ವಿಚ್ಛಿನ್ನಸಂಧಿಕರಣವರಗೋಪುರಮಂಟಪಾನ್ ॥೨೯॥

ಸುಧಾಧವಲಿತೋಽಧಾರಾನ್ಪಾಷಾಣೈರಿಷ್ಟಕಾಚಿತಾನ್ ।
ನದೀಸರೋವರಸ್ವಚ್ಛತೀರಬಂಧೋರುಮಂಡಪೈಃ ॥೩೦॥

---

ಈ ಪಂಚಾಮೃತಸಾಮಾನುಗಳನ್ನೂ, ಎಳ್ಳು, ಎಣ್ಣೆ, ಮೊಸರು, ಗಂಧ, ಪುಷ್ಪ, ಅಕ್ಷತೆ ಮುಂತಾದವುಗಳನ್ನೂ ಪರಂಪರೆಯಾಗಿ ತರುವರು. ॥೨೪-೨೫-೨೬॥

ಬಿಲ್ವ, ತಾವರೆ, ಪಾರಿಜಾತ, ಮಲ್ಲಿಗೆ ಇವುಗಳ ಸರಗಳನ್ನು ದೇವರಿಗೆ ತರುತ್ತಾ ದೇವಾಲಯ ಪ್ರವೇಶಮಾಡುವರು. ಮಹಾದೇವನ ನೈವೇದ್ಯಕ್ಕೋಸ್ಕರ ಸಕ್ಕರೆ, ಒಬ್ಬಟ್ಟು, ಅಥವಾ ಕಡುಬು, ರುಚಿಕರವಾದ ಅನ್ನಗಳು, ಪಾಯಸ ಮುಂತಾದವುಗಳನ್ನು ಸಮರ್ಪಿಸುವರು. ಧೂಪದೀಪಗಳ ಸಮೂಹದಿಂದ, ಪ್ರಜ್ವಲಿಸುತ್ತಿರುವ ನೀರಾಜನಗಳಿಂದ ಶಿವಾಲಯವು ಸದಾ ವಿರಾಜಿಸುವುದು. ತಾಂಬೂಲವನ್ನು ಬಂದವರಿಗೆ ಸಮರ್ಪಿಸುವುದು ಬಹಳವಾಗಿರುವುದು. ಒಂದುಕಡೆ ವೀಣೆ, ಕೊಳಲು, ನಗಾರಿ ಮುಂತಾದ ವಾದ್ಯಧ್ವನಿಗಳು ಶಿವಾಲಯದಲ್ಲೆಲ್ಲಾ ವ್ಯಾಪಿಸುವುವು. ಶಿವದೇವಾಲಯಗಳಲ್ಲಿ ಶಿವಲಿಂಗಗಳ ಮುಂದೆ ವಾರವನಿತೆಯರು (ಸೂಳೆಯರು) ನರ್ತನ ಮಾಡುವರು. ಉತ್ತಮವಾದ ಆ ದೇವಾಲಯದ ಗೋಪುರ, ಮಂಟಪಗಳಲ್ಲೆಲ್ಲಾ ಮಧ್ಯೆ ಮಧ್ಯೆ ರಂಧ್ರಗಳನ್ನು ಮಾಡುವರು. ಕಲ್ಲು ಮತ್ತು ಇಟ್ಟಿಗೆಗಳಿಂದ ರಚಿತವಾದ ಪ್ರಾಕಾರಗಳಿಗೆ ಸುಣ್ಣದಿಂದ ಧಾರೆಗಳನ್ನು (ಪಟ್ಟೆಗಳನ್ನು) ಬಳಿಯುವರು. ನದಿಗಳು, ಸರೋವರ ಅಥವಾ ಸ್ವಚ್ಛವಾದ ನೀರಿರುವ ಕಡೆಗಳಲ್ಲೆಲ್ಲಾ ದೊಡ್ಡ ಮಂಟಪಗಳನ್ನು ಕಟ್ಟುವರು. ॥೨೭-೨೮-೨೯-೩೦॥

ಛತ್ರಚಾಮರಪಂಕ್ತೀಭಿರ್ವಾಹನಾನಾಂ ಚ ಕಾರಣೈಃ।
ತದ್ಭಿತ್ತಿಚಿತ್ರೀಕರಣರುದ್ರಕ್ರೀಡಾದಿಲೇಖನೈಃ ॥೩೧॥

ವೃಷೋತ್ಸವರಥಾರೂಢ ಶಿವೋತ್ಸವ ನಿರೀಕ್ಷಣೈಃ।
ಕುರ್ವಂತಿ ಚೋಲಾವನಿಪಾಸ್ತೇ ಷೋಡಶ ಮಹೇಶ್ವರಿ ॥೩೨॥

ಏವಂ ಕೈಂಕರ್ಯಯುಕ್ತಾಸ್ತೇ ಚೋರಾಸ್ತತ್ರೈವ ಶಂಕರಿ।
ತಸ್ಮಿನ್ದೇಶೇ ವಿಪ್ರವರೋ ಹರದತ್ತೋ ಮದಂಶಜಃ ॥೩೩॥

ಅಶೈವಗಜಪಂಚಾಸ್ಯೋ ಭವಿಷ್ಯತಿ ಮಹೇಶ್ವರಿ।
ತತ್ರ ಕಂಸಪುರೇ ದೇವಿ ಅಗ್ನೀಶೇ ಭಕ್ತಿಮಾನ್ದ್ವಿಜಃ ॥೩೪॥

ಬಭೂವ ಹರದತ್ತಾಖ್ಯೋ ಮದಂಶೋಽಯಂ ದ್ವಿಜೋತ್ತಮಃ।
ಶ್ರೀವಾಂಛಾವಾಸಿನಃ ಕನ್ಯಾಂ ಭಸ್ಮರುದ್ರಾಕ್ಷಭೂಷಣಃ ॥೩೫॥

---

ಎಲೌ ಮಹೇಶ್ವರಿ, ಆ ಚೋಲದೇಶದ ಹದಿನಾರು ಮಂದಿ ರಾಜರೂ ಛತ್ರ, ಚಾಮರಗಳ ಸಮೂಹಗಳನ್ನು ಅರ್ಪಿಸುವುದು, ದೇವತಾಯೋಗ್ಯಗಳಾದ ವಾಹನಗಳನ್ನು ಮಾಡಿಸುವುದು, ದೇವಾಲಯದ ಗೋಡೆಗಳಿಗೆ ಚಿತ್ರಬರೆಸುವುದು, ರುದ್ರನ ಕ್ರೀಡೆಯೇ ಮುಂತಾದವುಗಳನ್ನು ಕೆತ್ತಿಸುವುದು, ವೃಷಭವಾಹನ ಮತ್ತು ರಥದ ಮೇಲಿರುವ ಶಿವೋತ್ಸವಗಳನ್ನು ನೋಡುವುದು, ಇಂತಹ ದೇವತಾಕಾರ್ಯಗಳಲ್ಲಿ ತುಂಬಾ ಆಸಕ್ತರಾಗುತ್ತಾರೆ. ಶಂಕರಿ, ಆ ಚೋಲಾಧಿಪತಿಗಳು ಹಾಗೆ ಭಕ್ತಿಯಿಂದ ಸೇವೆಮಾಡುವರು. ॥೩೧-೩೨॥

ಎಲೌ ಮಹೇಶ್ವರಿ, ಇಂಥ ಚೋಲದೇಶದಲ್ಲಿ ನನ್ನ ಅಂಶದಿಂದ ಜನಿಸುವ ಬ್ರಾಹ್ಮಣೋತ್ತಮನಾದ ಹರದತ್ತನೆಂಬುವನು ಶಿವದ್ರೋಹಿಗಳೆಂಬ ಆನೆಗಳಿಗೆ ಸಿಂಹಪ್ರಾಯನಾಗುತ್ತಾನೆ. ದೇವಿ, ಆ ಚೋಲದೇಶದ ಕಂಸಪುರದಲ್ಲಿ ಅಗ್ನೀಶ್ವರನಲ್ಲಿ ಭಕ್ತಿಯುಳ್ಳ ನನ್ನ ಅಂಶಸಂಭೂತನಾದ ಹರದತ್ತನೆಂಬುವನೊಬ್ಬ ಬ್ರಾಹ್ಮಣ ಶ್ರೇಷ್ಠನು ಜನಿಸುವನು. ॥೩೩-೩೪॥

ಅವನ ತಂದೆಯು ಶ್ರೀವಾಂಛದಲ್ಲಿ ವಾಸಿಸುವನು. ಅವನು ಭಸ್ಮರುದ್ರಾಕ್ಷಧಾರಣೆಯಲ್ಲಿ ಆಸಕ್ತನಾದ ಒಬ್ಬ ಶೈವನ ಮಗಳನ್ನು ಮದುವೆಮಾಡಿಕೊಳ್ಳುವನು.

ಶೈವಸ್ಯ ತಸ್ಯ ಸಾ ಮಾತಾ ದತ್ತಾ ಶೈವಾಯ ಸಾ ತದಾ ।
ತತ್ಪಿತಾ ಕಲಿಕಾಲಸ್ಯ ಬಲತೋ ಮೋಹಮಾಸ್ಥಿತಃ ॥೩೬॥

ತಪ್ತಚಕ್ರಾಂಕಿತೈಃ ಸಾರ್ಧಂ ತಪ್ತಚಕ್ರಾಂಕಿತೋಽಭವತ್ ।
ಮೃದೋರ್ಧ್ವಪುಂಡ್ರಸಚ್ಛಿದ್ರಂ ದಧಾರ ಕಿಲ ಪಾಪತಃ ॥೩೭॥

ದ್ರಾವಿಡಾನಿ ಭಷನ್ಪಾಪಃ ಶುನಾಮಿವ ನಿರಂತರಂ ।
ಏವಂ ಸ್ಥಿತೇಽಥ ವಿಪ್ರಸ್ಯ ಮಹಿಲಾ ಕಮಲೋಪಮಾ ॥೩೮॥

ವೀಥೀಸ್ಥವಿಪ್ರಪತ್ನೀಭಿರ್ಯಯೌ ನಿತ್ಯಂ ಶಿವಾಲಯಂ ।
ಸ್ನಾತ್ವಾ ಮರುದ್ವೃಧಾತೋಯೇ ನತ್ವಾಚಾಗ್ನೀಶ್ವರಂ ಗೃಹಾತ್ ॥೩೯॥

ಸಖೀಭಿಃ ಸಾ ಯಯೌ ಗೇಹಂ ಭರ್ತ್ರಾ ಸಂತಾಡಿತಾಪಿ ಸಾ ।
ತಸ್ಯಾಃ ಸ್ವಪ್ನೇ ಮಿಮೃತ್ಯೋರುವಕ್ತ್ರೇ ದೀಪೋಪಮಂ ಮಹತ್ ॥೪೦॥

---

ಆಕೆಯು ಶೈವಧರ್ಮಾನುರಾಗಿಣಿಯಾಗಿಯೇ ಸಂಸಾರ ನಡೆಸುವಳು. ಅವಳ ಪತಿಯಾದರೋ ಕಲಿಯುಗದ ಪಾಪಬಲದಿಂದ ಅಜ್ಞಾನಿಯಾಗಿ ತಪ್ತಚಕ್ರಾಂಕವುಳ್ಳವರೊಡನೆ ಬೆರೆತು, ತಾನೂ ಅವರಂತೆ ಚಕ್ರಚಿಹ್ನೆಯನ್ನು ಧಾರಣೆಮಾಡಿಕೊಳ್ಳುವನು. ಮೃತ್ತಿಕೆಯಿಂದ ಊರ್ಧ್ವಪುಂಡ್ರಗಳನ್ನಿಡುವನು. ಅವನ ಪಾಪವಶದಿಂದ ಅವನಿಗೆ ಈ ರೀತಿ ಭಾವನೆಯೊದಗುವುದು. ॥೩೫-೩೬-೩೭॥

ಆ ಪಾಪಿಯು ನಾಯಿಗಳಂತೆ ದ್ರಾವಿಡಭಾಷೆಯ ಮಂತ್ರಗಳನ್ನೇ ಯಾವಾಗಲೂ ಉಚ್ಚರಿಸುತ್ತಾ ಕಾಲಕಳೆಯುವನು. ಈ ವಿಪ್ರನು ಹೀಗೆಯೇ ಕಾಲಹಾಕುತ್ತಿರಲು ಲಕ್ಷ್ಮೀದೇವಿಯಂತೆ ಸುಂದರಳಾಗಿದ್ದ ಆತನ ಪತ್ನಿಯು ತನ್ನ ಬೀದಿಯ ಬ್ರಾಹ್ಮಣಪತ್ನಿಯರೊಡನೆ ನಿತ್ಯವೂ ಕಾವೇರೀನದಿಯ ನೀರಿನಲ್ಲಿ ಸ್ನಾನಮಾಡಿ, ಶಿವಾಲಯವನ್ನು ಹೊಕ್ಕು ಅಲ್ಲಿ ಅಗ್ನೀಶ್ವರನಿಗೆ ನಮಸ್ಕಾರಮಾಡಿ ಅನಂತರ ತನ್ನ ಗೆಳತಿಯರೊಡನೆ ಮನೆಗೆ ಹಿಂತಿರುಗುವಳು. ಒಂದೊಂದು ಸಲ ತನ್ನ ಪತಿಯು ಅದಕ್ಕಾಗಿ ಕೋಪಿಸಿಕೊಂಡು ದೂಷಿಸಿದರೂ ಹೊಡೆದರೂ ಆ ಶಿಕ್ಷೆಗೆ ತಾನು ಪಾತ್ರಳಾಗಿ ತಾನು ಮಾಡುವುದನ್ನು ಮಾತ್ರ ಎಂದೂ ಬಿಡುವುದಿಲ್ಲ. ॥೩೮-೩೯॥

ಹೀಗೆ ಶಿವಸೇವೆಮಾಡುತ್ತಿದ್ದ ಆ ಸಾಧ್ವಿಯು ಕನಸಿನಲ್ಲಿ ಒಂದುದಿನ ನನ್ನಿಂದ ಪ್ರೇರಿಸಲ್ಪಟ್ಟ ನನ್ನ ಅಂಶಾತ್ಮಕವಾದ ತೇಜಸ್ಸು ದೀಪದಂತೆ ದೊಡ್ಡದಾಗಿ

ಮಯೈವ ಪ್ರೇರಿತಂ ತೇಜಃ ಪ್ರವಿಶಂತಸ್ಮದಂಕಕಂ ।
ಸಾ ದಧಾರ ತದಾ ಗರ್ಭಂ ವರ್ಧಮಾನಂ ದಿನೇ ದಿನೇ ॥೪೧॥

ತತಃ ಕಾಲೇನ ಸುಷುವೇ ಕುಮಾರಮಿವ ಪಾರ್ವತೀ ।
ಸೋಽಪ್ಯವರ್ಧತ ಕಾಲೇನ ಪಿತ್ರೋರಾನಂದದಾಯಕಃ ॥೪೨॥

ಪಾಂಸುಕ್ರೀಡಾಸ್ವಪಿ ಶಿವಂ ಪಾಂಸವ್ಯಂ ಸೋಽಪ್ಯಪೂಜಯತ್ ।
ಭಸ್ಮರುದ್ರಾಕ್ಷಧೃಜ್ನಿತ್ಯಂ ಸವಯೋಭಿಶ್ಚ ಬಾಲಕೈಃ ॥೪೩॥

ತತ್ಪಿತಾ ಪ್ರಾಹರತ್ತಂ ಚ ನಿತ್ಯಂ ಪುತ್ರಂ ಶಿವಾರ್ಚಕಂ ।
ಉಪನೀತಃ ಸ ಕಾಲೇನ ವೇದಾನ್ಜಗ್ರಾಹ ಶಾಸ್ತ್ರವಿತ್ ॥೪೪॥

ಉಗ್ರಪ್ರಸಾದಾದತ್ಯುಗ್ರಾ ತಸ್ಯಾಭೂದ್ಬುದ್ಧಿರುತ್ತಮಾ ।
ಸಂಸಸ್ನೌ ಸಹ್ಯಜಾತೋಯೇ ಕೃತನಿತ್ಯಕ್ರಿಯೋ ವಟುಃ ॥೪೫॥

---

ಪ್ರಜ್ವಲಿಸುತ್ತಾ ಆಕೆಯ ವಿಶಾಲ ಮುಖದಲ್ಲಿ ಪ್ರವೇಶಮಾಡಿದುದನ್ನು ಅವಳು ಕಾಣುವಳು. ಅದು ಮೊದಲುಗೊಂಡು ಅವಳು ಗರ್ಭಿಣಿಯಾಗಿ ದಿನದಿನಕ್ಕೂ ಅಭಿವೃದ್ಧಿಪಡೆಯುತ್ತಾ ಸಕಾಲದಲ್ಲಿ ಪಾರ್ವತಿಯು ಕುಮಾರಸ್ವಾಮಿಯನ್ನು ಪಡೆದಂತೆ ಗಂಡುಮಗುವನ್ನು ಪ್ರಸುವಿಸುವಳು. ಆ ಮಗುವು ಕ್ರಮಕ್ರಮವಾಗಿ ಬೆಳೆಯುತ್ತಾ ತಂದೆತಾಯಿಗಳಿಗೆ ಆನಂದವನ್ನುಂಟುಮಾಡುವುದು. ॥೪೦-೪೧-೪೨॥

ಆ ಬಾಲಕನು ಮಣ್ಣುಕಲ್ಲುಗಳಲ್ಲಿ ಆಡುವಾಗಲೂ, ಆ ಧೂಳಿನ ರೂಪದಲ್ಲಿರುವ ಶಿವನನ್ನೇ ಪೂಜೆಮಾಡುವನು. ಪ್ರತಿದಿನವೂ ಭಸ್ಮ, ರುದ್ರಾಕ್ಷಗಳನ್ನು ಧರಿಸಿ ತನ್ನ ಸರಿಸಮಾನರಾದ ಹುಡುಗರೊಡನೆ ಆಡುವನು. ಅವನ ತಂದೆಯು ಶಿವಪೂಜಾನಿರತನಾಗಿರುವ ತನ್ನ ಮಗನನ್ನು ನಿತ್ಯವೂ ಹೊಡೆಯುವನು. ಹಾಗೆಯೇ ಸರಿಯಾದ ಕಾಲದಲ್ಲಿ ತಂದೆಯಿಂದ ಉಪನಯನಸಂಸ್ಕಾರ ಹೊಂದಿ ಅವನು ವೇದಗಳನ್ನೂ ಮತ್ತು ಶಾಸ್ತ್ರಗಳನ್ನೂ ಲೀಲೆಯಿಂದ ಅರಿಯುವನು. ॥೪೩-೪೪॥

ಶತ್ರುಭಯಂಕರನಾದ ಆ ಮಹಾದೇವನ ಅನುಗ್ರಹದಿಂದ ಅವನ ಬುದ್ಧಿಯು ತುಂಬಾ ಶ್ರೇಷ್ಠವೂ ಮತ್ತು ತೀಕ್ಷ್ಣವೂ ಆಗುವುದು. ಆ ಬ್ರಹ್ಮಚಾರಿಯು ಕಾವೇರೀ ನದಿಯಲ್ಲಿ ಸ್ನಾನಮಾಡಿ ನಿತ್ಯಕರ್ಮಗಳನ್ನು ನಡೆಸಿಕೊಂಡು ದಿವ್ಯವಾದ ಭಸ್ಮ ತ್ರಿಪುಂಡ್ರ, ರುದ್ರಾಕ್ಷಮಾಲೆಗಳನ್ನಲಂಕರಿಸಿಕೊಂಡು, ಶ್ರೀಮದಗ್ನೀಶ್ವರಸ್ವಾಮಿಗೆ

ಭಸ್ಮ ದಿವ್ಯತ್ರಿಪುಂಡ್ರಾಂಕೋ ರುದ್ರಾಕ್ಷಸ್ರಗಲಂಕೃತಃ ।
ಶ್ರೀಮದಗ್ನೀಶ್ವರಂ ನತ್ವಾ ತಥಾನ್ಯಾಂಛಾಂಭವಾನ್ಯತೀನ್ ॥೪೬॥

ಅಗ್ರಹೀತ್ಸರ್ವವಿದ್ಯಾಸ್ತಾಃ ವಿದ್ಯಾಧಿಪಪದಾರ್ಚಕಃ ।
ತತ್ಪಿತಾ ಪ್ರಾಹರತ್ತಂ ಚ ನಾನ್ನತೋಯಪ್ರದಾಯಕಃ ॥೪೭॥

ತನ್ಮಾತಾ ಪುತ್ರವಾತ್ಸಲ್ಯಾದ್ಗೃಹಪ್ರಾಂತೇ ಚ ತಂ ತದಾ ।
ಸಮಾಹೂಯ ತಥೈಕಾಂತೇ ದದಾತ್ಯನ್ನಂ ದಿನೇ ದಿನೇ ॥೪೮॥

ಭಿಕ್ಷಿತ್ವಾ ಸೋಽಪಿ ವಿಪ್ರೇಭ್ಯೋ ಗೃಹೀತ್ವಾನ್ನಮಭೂಭುಜತ್ ।
ಕಾಲೇನ ನಿಧನಂ ಪ್ರಾಪ್ತಸ್ತತ್ಪಿತಾ ನರಕಂ ಗತಃ ॥೪೯॥

ತಸ್ಯೋಚಿತಕ್ರಿಯಾಂ ಪುತ್ರಶ್ಚಕಾರ ದ್ವಿಜಪುಂಗವೈಃ ।
ಮಾತ್ರಾವಾತ್ಸೀದ್ಗೃಹೇ ನಿತ್ಯಂ ಶಿವಮಭ್ಯರ್ಚಯಂಸ್ತದಾ ॥೫೦॥

---

ಪ್ರಣಾಮಮಾಡಿ ಇತರ ಶಾಂಭವರಿಗೂ ಯತಿಗಳಿಗೂ ನಮಸ್ಕರಿಸುತ್ತಿದ್ದನು. ವಿದ್ಯೆಗಳಿಗೆಲ್ಲಾ ಅಧಿಪತಿಯಾದ ಶಂಕರನ ಪಾದಪೂಜಕನಾದ ಆ ಬ್ರಹ್ಮಚಾರಿಯು ಸಕಲ ವಿದ್ಯೆಗಳನ್ನು ಸುಲಭವಾಗಿ ಗ್ರಹಿಸಿಬಿಡುವನು. ||೪೫-೪೬||

ಅವನ ತಂದೆಯು ಶೈವಧರ್ಮನಿರತನಾದ ಮಗನಿಗೆ ಅನ್ನ ನೀರನ್ನೂ ಕೊಡದೆ ಅವನನ್ನು ಹೊಡೆದೋಡಿಸುವನು. ಅವನ ತಾಯಿಯು ಮಗನ ಮೇಲಿನ ಪ್ರೀತಿಯಿಂದ ಮನೆಯ ಪಕ್ಕದಲ್ಲಿ ಒಂದುಕಡೆ ಅವನನ್ನು ಕರೆದು ಗುಟ್ಟಾಗಿ ಪ್ರತಿದಿನವೂ ಅವನಿಗೆ ಅನ್ನವನ್ನು ಕೊಟ್ಟು ಸಲಹುವಳು. ಅವನು ತಾಯಿಯು ಕೊಟ್ಟ ಆಹಾರದೊಡನೆ ಇನ್ನೂ ಕೆಲವು ಬ್ರಾಹ್ಮಣರ ಮನೆಗಳಲ್ಲಿ ಭಿಕ್ಷೆಬೇಡಿ ಬಂದ ಅನ್ನದಿಂದ ಜೀವನ ನಡೆಸುವನು. ಹೀಗೆಯೇ ಕೆಲವು ಕಾಲ ಕಳೆದ ಮೇಲೆ ಅವನ ತಂದೆಯು ಮೃತನಾಗಿ ನರಕವನ್ನೈದುವನು. ||೪೭-೪೮-೪೯||

ತನ್ನ ತಂದೆಗೆ ಯೋಗ್ಯವಾದ ಅಪರಕರ್ಮಗಳನ್ನೆಲ್ಲಾ ಆ ಮಗನು ಬ್ರಾಹ್ಮಣೋತ್ತಮರೊಡಗೂಡಿ ಆಚರಿಸಿದನು. ಅನಂತರ ಮನೆಯಲ್ಲಿ ತಾಯಿಯೊಡನೆ ವಾಸಮಾಡುತ್ತಾ ನಿತ್ಯವೂ ತಪ್ಪದೆ ಶಿವಪೂಜೆಮಾಡುವನು ಹೀಗೆಯೇ ಕೆಲವು ದಿನಗಳು ಕಳೆಯಲು ಅವನು ಗೃಹಸ್ಥಾಶ್ರಮವನ್ನು ಹೊಂದಬೇಕೆಂದು ಅಪೇಕ್ಷಿಸಿ

ವಿವಾಹಾಯ ಮತಿಂ ಚಕ್ರೇ ಕನ್ಯಾಂ ಕೋಽಸ್ಯೈದದಾದ್ದ್ವಿಜಃ ।
ತಾಮುದ್ವಾಹ್ಯ ಮಹಾಸೋಮೈರಾರಾಧ್ಯಾಶ್ರಮತತ್ಪರಃ ॥೫೧॥

ದೇವಂ ಲಿಂಗೇಽರ್ಚಯನ್ನಿತ್ಯಂ ತ್ರಿಕಾಲಂ ಭಸ್ಮಭೂಷಣಃ ।
ಅಗ್ನೀಶ್ವರಂ ತಥಾ ನತ್ವಾ ಸಪ್ತಗ್ರಾಮಾಣಿ ಸಂಚರನ್ ॥೫೨॥

ತತ್ರ ತತ್ರ ಮಹೇಶಾನಂ ನತ್ವಾ ಯಾತಿ ಸ ನಿತ್ಯಶಃ ।
ತಸ್ಯ ಭಕ್ತಿಂ ತಥಾ ಜ್ಞಾತ್ವಾ ದಹ್ಯಮಾನಾ ಹಿ ವೈಷ್ಣವಾಃ ॥೫೩॥

ಊಚುಸ್ತಂ ಕ್ರೋಧತಾಮ್ರಾಕ್ಷಾ ಋಕ್ಷಾ ಇವ ದ್ವಿಜಾಧಮಾಃ ॥೫೪॥

॥ ವೈಷ್ಣವಾ ಊಚುಃ ॥

ಭೋ ಭೋ ವಿಪ್ರಾರ್ಭಕ ತ್ವಂ ಹಿ ಮಹಾದೇವಪದಾರ್ಚಕಃ ।
ಶಿವೋತ್ಕರ್ಷೇ ತ್ವಮಸ್ಮಾಕಂ ಪ್ರಮಾಣಂ ಕುರು ಮಾಚಿರಂ ॥೫೫॥

---

ಒಬ್ಬ ಬ್ರಾಹ್ಮಣನ ಕನ್ಯೆಯೊಡನೆ ವಿವಾಹವಾಗುವನು. ಆ ಬ್ರಾಹ್ಮಣನು ಹೀಗೆ ಗೃಹಸ್ಥನಾಗಿ ದೊಡ್ಡ ಸೋಮಯಾಗಗಳಿಂದ ಮಹಾದೇವನನ್ನು ತೃಪ್ತಿಪಡಿಸುತ್ತಾ ಆಶ್ರಮಧರ್ಮನಿರತನಾಗುವನು. ಬೆಳಗ್ಗೆ, ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಭಸ್ಮವನ್ನು ಅಲಂಕರಿಸಿಕೊಂಡು ಶಿವಲಿಂಗದಲ್ಲಿ ಆ ಮಹೇಶ್ವರನನ್ನು ಪ್ರತಿದಿನವೂ ಪೂಜೆಮಾಡುವನು. ಹಾಗೆಯೇ ಅಗ್ನೀಶ್ವರನಿಗೆ ನಮಸ್ಕಾರಮಾಡಿ, ಏಳು ಶಿವಕ್ಷೇತ್ರಗಳಲ್ಲಿ ಸುತ್ತುತ್ತಾ ಅಲ್ಲಿರುವ ಮಹಾದೇವನಿಗೆ ನಿತ್ಯವೂ ನಮಸ್ಕಾರಮಾಡಿ, ಏಳು ಶಿವಕ್ಷೇತ್ರಗಳಲ್ಲಿ ಸುತ್ತುತ್ತಾ ಅಲ್ಲಿರುವ ಮಹಾದೇವಲಿಂಗಕ್ಕೆ ನಿತ್ಯವೂ ನಮಸ್ಕರಿಸಿಕೊಂಡು ಬರುವನು. ॥೫೦-೫೧-೫೨॥

ಆ ಹರದತ್ತನ ಈ ರೀತಿಯಾದ ಶಿವಭಕ್ತಿಯನ್ನು ನೋಡಿ ಒಳಗೊಳಗೇ ಸುಡುತ್ತಿರುವ ನೀಚದ್ವಿಜರೆನಿಸಿದ ವೈಷ್ಣವರು, ಕೋಪದಿಂದ ಕೆಂಗಣ್ಣುಗಳುಳ್ಳವರಾಗಿ ಕರಡಿಗಳಂತೆ ಅವನೊಡನೆ ಹೀಗೆ ಮಾತನಾಡುವರು. ॥೫೩-೫೪॥

ಎಲೈ ಬ್ರಾಹ್ಮಣಬಾಲಕನೇ, ಮಹಾದೇವನ ಪಾದಪೂಜಕನಾದ ನೀನು ಶಿವನು ಸರ್ವೋತ್ಕೃಷ್ಟನೆಂಬ ವಿಷಯದಲ್ಲಿ ನಮಗೆ ಪ್ರಮಾಣವನ್ನು ಕೊಡಬಲ್ಲೆಯಾ! ಹಾಗೆ ಶಿವನಲ್ಲಿ ಸರ್ವೋತ್ಕೃಷ್ಟತೆ ಕಾಣವಿದ್ದರೆ ನಿನ್ನ ತಂದೆಯಂತೆಯೇ

ನೋ ಚೇತ್ಸಂತಪ್ತಚಕ್ರಾಂಕೋ ಭವ ತ್ವಂ ತ್ವತ್ಪಿತೋಪಮಃ ।
ಶಿವೋತ್ಕರ್ಷಪ್ರಮಾಣೇನ ಯದಿ ಪ್ರಾಮಾಣ್ಯದೋಹಿ ನಃ ॥೫೬॥

ಭಸ್ಮರುದ್ರಾಕ್ಷಸಂಪನ್ನಾಃ ಶಿವಲಿಂಗಾರ್ಚಕಾಃ ಸದಾ ।
ಭವಾಮೋ ನಾತ್ರ ಸಂದೇಹಃ ಸಂತಪ್ತಾಗ್ನೌ ತ್ವಮಾವಸ ॥೫೭॥

॥ ಸ್ಕಂದ ಉವಾಚ ॥

ಇತಿ ವೈಷ್ಣವವಾಕ್ಯೇನ ಹರದತ್ತೋಽತಿಹರ್ಷಿತಃ ।
ನಿವೇದಯತ್ತದಾ ರಾಜ್ಞೇ ಚೋಲಭೂಪಂ ನಿರೀಕ್ಷಿತುಂ ॥೫೮॥

ಶಿವಲಿಂಗಾಖ್ಯಚೋಲೋಽಪಿ ತತ್ರಾಗಾತ್ಸೇನಯಾ ಸಹ ।
ಅಗ್ನೀಶ್ವರಂ ತಥಾ ನತ್ವಾ ಹರದತ್ತಂ ಚ ವೈ ಶಿವೇ ॥೫೯॥

ವೈಷ್ಣವಾಂಸ್ತಾಂತ್ಸಮಾಹೂಯ ಲಿಖ್ಯಪತ್ರಾಣಿ ಚೈತಯೋಃ ।
ವಿಸ್ತಾರಮಾಯಸಂ ತಪ್ತಂ ಕೃತ್ವಾಗ್ನೀಶಸ್ಯ ಸಂನಿಧೌ ॥೬೦॥

---

ನೀನೂ ಕಾದ ಚಕ್ರದಿಂದ ಚಕ್ರಾಂಕನ ಮಾಡಿಸಿಕೋ. ಒಂದುವೇಳೆ ಶಿವನ ಉತ್ಕರ್ಷವಿಷಯದಲ್ಲಿ ನೀನು ಪ್ರಮಾಣಗಳನ್ನು ಕೊಡುವುದಾದರೆ ನಾವೆಲ್ಲರೂ ಭಸ್ಮ, ರುದ್ರಾಕ್ಷಧಾರಿಗಳಾಗಿ ನಿನ್ನಂತೆಯೇ ಶಿವಲಿಂಗಪೂಜೆಮಾಡುವವರಾಗುತ್ತೇವೆ. ಇದರಲ್ಲಿ ಕೊಂಚವೂ ಸಂಶಯಪಡಬೇಡ. ಇಗೋ, ಇಲ್ಲಿ ಉರಿಯುವ ಅಗ್ನಿಯನ್ನು ಪರೀಕ್ಷೆಗಾಗಿ ಪ್ರವೇಶಿಸಿ ಅನಂತರ ನಮ್ಮ ಮಾತಿಗೆ ಉತ್ತರ ಕೊಡು ಎಂದು ವೈಷ್ಣವರು ಆ ಹರದತ್ತನಿಗೆ ತಿಳಿಸುವರು. ॥೫೫-೫೬-೫೭॥

ಹೀಗೆ ನುಡಿದ ವೈಷ್ಣವರ ಮಾತಿಗೆ ಹರದತ್ತನು ಒಪ್ಪಿ ಸಂತುಷ್ಟನಾಗಿ, ಆ ಕಾರ್ಯಕ್ಕೆ ಚೋಲರಾಜನನ್ನು ಮಧ್ಯಸ್ಥನನ್ನಾಗಿ ಮಾಡಬೇಕೆಂದು ಚೋಲ ರಾಜನಿಗೆ ಈ ವಿಷಯವನ್ನು ಹೇಳಿ ಕಳುಹಿಸುವನು. ಆಗ ಶಿವಲಿಂಗನೆಂಬ ಹೆಸರಿನ ಚೋಲರಾಜನೂ ಅಲ್ಲಿಗೆ ತನ್ನ ಸೈನ್ಯದೊಡನೆ ಬಂದು ಅಗ್ನೀಶ್ವರ ದೇವನಿಗೂ ಮತ್ತು ಹರದತ್ತನಿಗೂ ನಮಸ್ಕಾರಮಾಡುವನು. ಎಲೌ ಪಾರ್ವತಿ, ಅನಂತರ ಅಲ್ಲಿ ನೆರೆದಿದ್ದ ವೈಷ್ಣವರನ್ನೆಲ್ಲಾ ಕರೆಸಿ, ಆ ರಾಜನು ಅವರು ಹೇಳಿದಂತೆ ಎರಡು ಕಡೆಯವರಿಂದಲೂ ಕಾಗದಗಳನ್ನು ಬರೆಸಿಕೊಂಡು ಆ ಅಗ್ನೀಶ್ವರನ

ಆಹೂಯ ನೃಪತಿಂ ತತ್ರ ಬ್ರಹ್ಮಕ್ಷತ್ರವಿಶಃಸ್ತ್ರಿಯಃ ।
ವೈಷ್ಣವಾಂಸ್ತಾಂಸ್ತಥಾ ಶೂದ್ರಾನ್ಸಂಕರಾನ್ಹರದತ್ತಕಃ ॥೬೦॥

ಸ್ನಾತ್ವಾ ಕವೇರಜಾತೋಯೇ ಭಸ್ಮರುದ್ರಾಕ್ಷಭೂಷಣಃ ।
ಪ್ರದಕ್ಷಿಣತ್ರಯಂ ಕೃತ್ವಾ ನತ್ವಾಚಾಗ್ನೀಶ್ವರಂ ಶಿವೇ ॥೬೧॥

ಉತ್ಫುಲ್ಲಪದ್ಮಸಂಕಾಶಂ ತಮಾರುಹ್ಯ ತದಾಯಸಂ ।
ಊರ್ಧ್ವಬಾಹುರಥೋ ವಾದೀ ವೇದಸಾರವಚೋ ದ್ವಿಜಃ ॥೬೨॥

ಪಶ್ಯತ್ಸು ಜನಸಂಘೇಷು ವೈಷ್ಣವೇಷು ನೃಪೇಷು ಚ ॥೬೪॥

॥ ಹರದತ್ತ ಉವಾಚ ॥

ಮಹಾದೇವೋ ದೇವಃ ಶ್ರುತಿಶಿಖರಮೌಳಿಸ್ಥವಚನೈ
ಸ್ತಥಾನ್ಯೇ ವಿಷ್ಣ್ವಾದ್ಯಾ ವಿಧಿಹರಿಹರೇಂದ್ರಾನಲಯಮಾಃ ।
ಮಹಾದೇವಾಜ್ಞಾತಾಃ ಶೃಣುತ ಪರಮೋನೇನ ಜನಿತಾ
ಅತೋ ವೇದ್ಯೈರ್ವೇದ್ಯೋ ಭವತಿ ಶಿವ ಏಕಃ ಶಿವಕರಃ ॥೬೫॥

---

ಮುಂಭಾಗದಲ್ಲಿ ವಿಶಾಲವಾದ ಚೆನ್ನಾಗಿ ಕಾಯಿಸಿದ ಕಬ್ಬಿಣದ ಕೊಪ್ಪರಿಗೆಯೊಂದನ್ನು ಇಡಿಸುವನು. ॥೫೮-೫೯-೬೦॥

ಕೂಡಲೇ ಹರದತ್ತನು ಅಲ್ಲಿಗೆ, ರಾಜನನ್ನೂ, ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಸ್ತ್ರೀಯರು, ವೈಷ್ಣವರು ಮತ್ತು ಶೂದ್ರರು, ಸಂಕರಜಾತಿಯವರು, ಇವರನ್ನೂ ಬರಮಾಡಿಕೊಂಡು, ಕಾವೇರೀನದಿಯಲ್ಲಿ ಸ್ನಾನಮಾಡಿ, ಭಸ್ಮರುದ್ರಾಕ್ಷ ಗಳನ್ನಲಂಕರಿಸಿಕೊಂಡು, ಮೂರು ಪ್ರದಕ್ಷಿಣೆಮಾಡಿ ಅಗ್ನೀಶ್ವರಸ್ವಾಮಿಗೆ ನಮಸ್ಕರಿಸಿ, ಅರಳಿದ ಕೆಂದಾವರೆಯಂತೆ ಇದ್ದ ಆ ಕಾದ ಕಬ್ಬಿಣದ ಮೇಲೆ ನಿಂತು ಅಲ್ಲಿ ನೆರೆದಿದ್ದ ಜನಗಳ ಸಮೂಹವೂ, ವೈಷ್ಣವರೂ ಮತ್ತು ರಾಜರೂ ಸಹ ನೋಡುತ್ತಿರುವಂತೆಯೇ ಕೈಗಳನ್ನು ಮೇಲಕ್ಕೆತ್ತಿ, ಸಾರಭೂತವಾದ ವೇದವಚನಗಳನ್ನು ಈ ರೀತಿ ಪ್ರತಿಪಾದಿ ಸುತ್ತಾ ನಿಂತುಕೊಂಡನೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೬೧-೬೨-೬೩-೬೪॥

"ವೇದಾಂತವಾಕ್ಯಗಳು ಆ ಮಹಾದೇವನನ್ನೇ ಶ್ರೇಷ್ಠದೇವನೆಂದು ಹೇಳುತ್ತಿರುವುವು. ಇತರ ವಿಷ್ಣು, ಬ್ರಹ್ಮ, ಇಂದ್ರ, ರುದ್ರ, ಅಗ್ನಿ, ವಾಯು, ಯಮ

ಮಖಾನಾಮೇವಾಯಂ ಪ್ರಭುರಖಿಲವಿಶ್ವಾಧಿಕಹರೋ
ಮಹರ್ಷಿರ್ವೇದಾದೌ ಸ್ವರಜನಿತತಾರಃ ಪರಶಿವಃ ।
ಯತೋ ಬ್ರಹ್ಮೇಂದ್ರಾದ್ಯಾ ಹರಿರವಿರಹೋ ರುದ್ರನಿವಹಾಃ
ಪ್ರಸೂತಾ ಧ್ಯೇಯೋಽಯಂ ಶ್ರುತಿಶಿರಪರವಾಕ್ಯೈಃ ಪರಶಿವಃ ॥೬೬॥

ಋತಂ ಸತ್ಯಂ ದೇವಃ ಪುರುಷಪರಮೋ ಭೂತಹೃದಯೋ
ನಮೋಽಂತಾನಾಂ ಶೇಷೀ ಶ್ರುತಿವರಮಹಾರುದ್ರವಚಸಾ ।
ರವೇರಂತರ್ಧ್ಯೇಯೋ ಭವತಿ ಸ ಹಿ ಭರ್ಗೇನ ವಚಸಾ
ದ್ವಿಜೈರ್ಗಾಯತ್ರ್ಯಾಂ ಚ ಪ್ರತಿಪದಮುಪಾಸ್ಯಃ ಪರಶಿವಃ ॥೬೭॥

---

ಮುಂತಾದ ದೇವತೆಗಳೆಲ್ಲರೂ ಈ ಶ್ರೇಷ್ಠನಾದ ಮಹೇಶನಿಂದಲೇ ಜನಿಸಿದವರೆಂದು ತಿಳಿಯಿರಿ ; ಆದ್ದರಿಂದಲೇ ಸಕಲ ವೇದ ಪ್ರತಿಪಾದ್ಯನಾದ ಮತ್ತು ಜಗಜ್ಜನ್ಮಾದಿಕಾರಣನಾದ ಆ ಶಿವನೊಬ್ಬನೇ ಶ್ರೇಷ್ಠದೇವನು. ಅವನೇ ಜಗತ್ಪೂಜ್ಯನು. ॥೬೫॥

ಸಕಲ ಲೋಕಗಳಲ್ಲಿಯೂ ಶ್ರೇಷ್ಠನಾದ ಆ ಹರನೇ ಸಕಲ ಯಾಗಗಳಿಗೂ ಪ್ರಭುವು. ಅವನೇ ಮಹರ್ಷಿಯು, ವೇದಗಳ ಮೊದಲಿನಲ್ಲಿ ವೇದಸ್ವರದಿಂದ ಜನಿತವಾದ ಓಂಕಾರರೂಪವಾದ ಪ್ರಣವವೇ ಅವನು. ಅವನೇ ಪರಶಿವನಾಗಿರುವನು. ಬ್ರಹ್ಮ, ಇಂದ್ರ, ವಿಷ್ಣು, ಸೂರ್ಯ ಮತ್ತು ರುದ್ರರ ನಿವಹ (ಗುಂಪು) ಇವರೆಲ್ಲರೂ ಯಾರಿಂದ ಜನಿಸಿದರೋ, ಅಂತಹ ವೇದಾಂತವಾಕ್ಯ ಪ್ರತಿಪಾದ್ಯನಾದ ಪರಶಿವನೇ ಧ್ಯಾನಾರ್ಹನೆಂದು ತಿಳಿಯಿರಿ. ॥೬೬॥

ಪರಮಪುರುಷನಾದ ಮಹಾದೇವನೇ, ಕಾಯಿಕವಾದ ಮತ್ತು ಮಾನಸಿಕವಾದ ಸತ್ಯಸ್ವರೂಪನೆಂದು ಹೇಳಲ್ಪಡುವವನು. ಸಕಲ ಪ್ರಾಣಿಗಳ ಹೃದಯದಲ್ಲಿಯೂ ನೆಲಸಿರುವವನು ಅವನೇ. ವೇದಶ್ರೇಷ್ಠವಾದ ಮಹಾರುದ್ರವಾಕ್ಯದಿಂದ ನಮಃ ಎಂಬ ಶಬ್ದವೇ ಕೊನೆಯಾಗುಳ್ಳ ವಾಕ್ಯಗಳಲ್ಲಿ ಉಳಿಯುವ ದೇವನೂ ಈ ಮಹಾದೇವನೇ ಆಗಿದ್ದಾನೆ. ಭರ್ಗನೆಂಬ ಹೆಸರಿನಿಂದ ಸೂರ್ಯನ ಮಧ್ಯದಲ್ಲಿರುತ್ತಾ ಧ್ಯಾನಾರ್ಹನಾಗಿರುವವನೂ ಈತನೇ ; ಬ್ರಾಹ್ಮಣರು ಗಾಯತ್ರೀಮಂತ್ರದಿಂದ ಪ್ರತಿಯೊಂದು ಕರ್ಮದಲ್ಲಿಯೂ ಉಪಾಸನೆಮಾಡುವುದೂ ಈ ಪರಶಿವನನ್ನೇ. ॥೬೭॥

ಯತೋ ವಾಚಃ ಶಂಭೋರ್ಭವತಿ ಚ ನಿವೃತ್ತಾಶ್ಚ ಮನಸಾ
ಮಹಾನಂದೋ ಯಸ್ಮಾದ್ಭವತಿ ಜನತಾಸ್ವೇವ ನಿಪುಣಃ ।
ಜಗದ್ಯಸ್ಮಾಜ್ಜಾತಂ ಪ್ರಭವತಿ ಮಹೇಶೇನ ಜನಿತಂ
ಅತೋ ತೇನಾಸ್ಮಿನ್ಯದ್ಭವತಿ ಚ ವಿಲೀನಂ ಪರಶಿವೇ ॥೬೮॥

ದ್ವಿಜಾನಾಂ ಜಾಬಾಲಶ್ರುತಿಶಿಖರವಾಕ್ಯೈಶ್ಚ ವಿಹಿತೋ
ಮಹಾತ್ರ್ಯಪಿದ್ಯೋಕ್ತಃ ಶ್ರುತಿಗದಿತವರ್ಣಾಶ್ರಮವಿಧಿಃ ।
ಶಿವಸ್ಯಾರ್ಚಾ ಲಿಂಗೇ ಶ್ರುತಿಗದಿತಭಸ್ಮಾಕ್ಷವಿಧೃತಿಃ
ಜಪೋ ರುದ್ರಸ್ಯಾಯಂ ಶಿವಗದಿತಪಂಚಾಕ್ಷರಮನೋಃ ॥೬೯॥

ವಿಷ್ಣುರ್ಬ್ರಹ್ಮಾನಲೇಂದ್ರಾ ಮುನಿನೃಪದಿತಿಜಾ ಯಸ್ಯ ಲಿಂಗಾರ್ಚನಾದ್ವೈ
ಸಂಪ್ರಾಪ್ತಾಃ ಪದವೀಂ ಸದೈವ ಮುದಿತಾಸ್ತೇ ಕರ್ಮದೇವಾ ಜನಾಃ ।

---

ಪರಮೇಶ್ವರನ ಮಹಿಮೆಯನ್ನು ವರ್ಣಿಸಲು ಮನಸ್ಸಿನೊಡನೆ ಹೊರಟ ವಾಕ್ಕುಗಳು ಸಾಧ್ಯವಿಲ್ಲದೇ ಹಿಂದಿರುಗುವುವು. ಸಕಲ ಜನಸಮೂಹಕ್ಕೂ ಆ ಮಹಾದೇವನಿಂದಲೇ ಆತ್ಮಾನಂದವು ವಿಶೇಷವಾಗಿ ಲಭಿಸಬೇಕು. ಮಹಾದೇವ ನಿಂದಲೇ ಸಕಲ ಜಗತ್ತುಗಳೂ ಸೃಷ್ಟಿಮಾಡಲ್ಪಟ್ಟು ಜಗದ್ರೂಪವಾಗಿ ಕಂಡು ಬರುವುವು. ಪರಶಿವನಿಂದ ಯಾವಯಾವ ವಸ್ತುಗಳು ನಿರ್ಮಿತವಾಗಿರುವುವೋ ಅಥವಾ ಮುಂದೆ ನಿರ್ಮಿತವಾಗುವುವೋ, ಅವೆಲ್ಲವೂ ಕೊನೆಯಲ್ಲಿ ಆ ಪರಶಿವನ ಲ್ಲಿಯೇ ಐಕ್ಯವಾಗುವುವು ಎಂದು ತಿಳಿಯಿರಿ. ॥೬೮॥

ಜಾಬಾಲೋಪನಿಷತ್ತಿನಲ್ಲಿಯೂ ಮತ್ತು ಮೂರು ವೇದಗಳಲ್ಲಿಯೂ ಪ್ರತಿಪಾದಿತ ವಾಗಿರುವ ವರ್ಣಾಶ್ರಮಧರ್ಮವಿಧಾನವೂ ಹಾಗೆಯೇ. ಶಿವಲಿಂಗದಲ್ಲಿ ಶಿವ ಪೂಜೆಯೂ, ವೇದೋಕ್ತವಾದ ಶಿವಪಂಚಾಕ್ಷರಮಂತ್ರಗಳ ಜಪವೂ ಸಹ ಬ್ರಾಹ್ಮಣರಿಗೆ ವಿಹಿತವಾಗಿರುವ ಕರ್ಮಗಳು. ಇವುಗಳನ್ನೇ ಶೈವಧರ್ಮಗಳೆಂದು ಹೇಳಬೇಕು. ಇಂತಹ ಧರ್ಮದಿಂದ ಸಾಕ್ಷಾತ್ಕರಿಸಲ್ಪಡುವ ಶಿವನೇ ಸರ್ವಶ್ರೇಷ್ಠನು. ॥೬೯॥

ವಿಷ್ಣು, ಬ್ರಹ್ಮ, ಅಗ್ನಿ, ಇಂದ್ರ, ಮುನಿಗಳು, ರಾಜರು, ವೈದ್ಯರು ಮತ್ತು ಇತರ ದೇವತೆಗಳು, ಇವರೆಲ್ಲರೂ ಪರಮೇಶ್ವರನ ಲಿಂಗಪೂಜೆಯಿಂದಲೇ ಉತ್ತಮ ಪದವಿಯನ್ನು ಪಡೆದು ಯಾವಾಗಲೂ ಸುಖಿಗಳಾಗಿ ವಿಹರಿಸುತ್ತಿರುವರು. ಎಲೈ ವೈಷ್ಣವಾದಿ ಮನುಜರೇ, ಈಗ ನಾನು ಹೇಳುತ್ತಿರುವ ವಿಷಯವು ನಿತ್ಯವೆಂದು

ಏತತ್ಸತ್ಯಮಹೋ ತ್ರಿಸತ್ಯಮಧುನಾ ವಚ್ಮೀದಮಗ್ನೀಶಿತುಃ
ಸಾನ್ನಿಧ್ಯೇ ನಿವಸಾಮಿ ಶೀತಸುಮಹಾಪದ್ಮೇವ ತಪ್ತಾಯಸೇ ॥೨೦॥

ಇತ್ಯುಕ್ತ್ವಾ ಹರದತ್ತಕಸ್ತ್ರಿಜಗತೀನಾಥಂ ಪ್ರಣಮ್ಯಾದರಾ
ನ್ನಿಸ್ತೀರ್ಣಂ ಸುಮಹಾಯಸೋರುಶಯನಾದುತ್ತೀರ್ಯ ರಾಜಾಂಚಿತಃ ।
ಶೈವೇಂದ್ರೈರ್ಹರಭಕ್ತಿಭಾವಜನಿತೈಃ ಸಾನಂದಬಾಷ್ಪಾಂಬುಭಿಃ
ಲೋಕೈಸ್ಸಾಧ್ವಿತಿ ನಂದಿತೋ ಮಮ ಕೃಪಾಪೀಯೂಷವಾರಾಂನಿಧೌ ॥೨೧॥

ಮಗ್ನಸ್ತಾನ್ದ್ವಿಜವೈಷ್ಣವಾಧಮಪಶೂನ್ ।
ಭಸ್ಮಾಕ್ಷಪೂತಾನಕರೋತ್ ॥೨೨॥

ವಿಪ್ರಃ ಕಶ್ಚನ ವಿಪ್ರವಧ್ಯಜಮಹಾದೋಷೈರ್ಯುತೋ ನಿಂದಿತೋ
ವಿಪ್ರೈರ್ವರ್ಹರದತ್ತಕೇನ ಸ ತದಾ ಸಂಭೋಜಿತಃ ಪಾವಿತಃ ।

---

ತಿಳಿಯಿರಿ. ಈ ಅಗ್ನೀಶ್ವರನ ಸಾಕ್ಷಿಯಾಗಿ ಮೂರುಸಾರಿ ಪ್ರಮಾಣಮಾಡಿ ಹೇಳುತ್ತಾ, ಆ ದೇವನ ಸನ್ನಿಧಿಯಲ್ಲೇ ಕಾದಕಬ್ಬಿಣದ ಮೇಲೆ ತಣ್ಣಗಿರುವ ದೊಡ್ಡ ಕಮಲದ ಮೇಲೆ ನಿಲ್ಲುವಂತೆ ನಿಂತುಕೊಂಡಿರುವೆನು.” ॥೨೦॥

ಹರದತ್ತನು ಹೀಗೆ ಹೇಳಿ ಮೂರುಲೋಕಗಳಿಗೂ ಒಡೆಯನಾದ ಪರಶಿವ ನಿಗೆ ಆದರದಿಂದ ಪ್ರಣಾಮಮಾಡಿ, ಆ ದೊಡ್ಡ ಕಾದ ಕಬ್ಬಿಣದ ಹಾಸಿಗೆಯಿಂದ ಮೇಲೆದ್ದು, ಸುಖವಾಗಿ ಹೊರಗೆ ಬಂದು ರಾಜನ ಹತ್ತಿರಕ್ಕೆ ಹೋಗುವನು. ಶಿವಭಕ್ತಿಭಾವಪೂರ್ಣರೂ ಶೈವಾಗ್ರಣಿಗಳೂ ಆದ ಜನರು, ಭಲೇ, ಭಲೇ, ಹರದತ್ತನ ಮಾತು ಸತ್ಯವಾದುದು ಎಂದು ಕೂಗುತ್ತಾ ಆನಂದಬಾಷ್ಪವನ್ನು ಸುರಿಸುತ್ತಾ ಇವನನ್ನು ಆನಂದಪಡಿಸುತ್ತಿರಲು, ಹರದತ್ತನು ನನ್ನ ದಯಾಮೃತಸಾಗರದಲ್ಲಿ ಲೀನನಾಗಿ ನಿಂತುಕೊಂಡನು. ॥೨೧॥

ಅನಂತರ ಹರದತ್ತನು ಹಿಂದಿನ ಪ್ರತಿಜ್ಞೆಯಂತೆ ಅಧಮರೂ, ಪಶುಸಮಾನರೂ ಆದ ಆ ವೈಷ್ಣವಬ್ರಾಹ್ಮಣರನ್ನು ಭಸ್ಮ, ರುದ್ರಾಕ್ಷಧಾರಣೆಗಳಿಂದ ಪವಿತ್ರಗೊಳಿಸಿ, ಎಲ್ಲರನ್ನೂ ಶೈವಧರ್ಮಾನುಯಾಯಿಗಳನ್ನಾಗಿ ಮಾಡಿಬಿಡುವನು. ॥೨೨॥

ಅಲ್ಲಿ ಒಬ್ಬ ಬ್ರಾಹ್ಮಣನು ಬ್ರಹ್ಮಹತ್ಯೆ ಮಾಡಿ, ಅದರಿಂದುಂಟಾದ ಮಹಾ ದೋಷದಿಂದ ನಿಂದಿಸಲ್ಪಟ್ಟಿದ್ದನು. ಆಗ ಆ ಹರದತ್ತನು ಇತರ ಬ್ರಾಹ್ಮಣರೊಡನೆ ಅವನನ್ನೂ ತನ್ನ ಜೊತೆಯಲ್ಲಿ ಕೂರಿಸಿಕೊಂಡು ಭೋಜನಮಾಡಿಸಿ ಅವನನ್ನು

ಮುನ್ನಾನ್ಮ್ಯೈವ ಶಿವೇತಿ ತಂ ಸಕೃದುಮೇ ಮಲ್ಲಿಂಗಸಾನ್ನಿಧ್ಯಗಂ
ವಿಪ್ರಾ ಘಾಸವರಂ ಪ್ರದಾಯ ವೃಷಭಂ ಹ್ಯಾದತ್ತವಕ್ತ್ರಂ ಕರೋತ್ ॥೭೩॥

ಏವಂ ಕಲಾವಪಿ ಭವಂತಿ ಮಮೇಷ್ಟಶೈವಾ
ಲೋಕಾಯ ದರ್ಶಿತುಮುಮೇ ಮಮ ಭಕ್ತಿಭಾವಂ ।
ತೇ ಸಾಮಿಸೋಮಮುಕುಲಲಾಮವಿದೀಪ್ತನೇತ್ರಾಃ
ಕೈಲಾಸಮೇತ್ಯ ಸುಖಿತಾ ನಿವಸಂತಿ ಶೈವಾಃ ॥೭೪॥

ಶೈವಗ್ರಂಥಾನುಬಂಧದ್ಯುತಿಜಿತಜನೇಷೂದ್ಯತತಮೋ
ಪ್ಯಭೇದ್ಯಂ ನಿರ್ಭಿದ್ಯ ಶ್ರುತಿಗದಿತತಾತ್ಪರ್ಯವಚನೈಃ ।
ದ್ವಿಜೈಃ ಶೈವೈರಂತೇ ಕಲಿಕುಪಥಕಾಲುಷ್ಯಜನಿತಂ
ಸ ದೇಹಃ ಕೈಲಾಸಂ ಮಮ ಸ ಹಿ ಶಿವೇ ಯಾಸ್ಯತಿ ದ್ವಿಜಃ ॥೭೫॥

---

ಪವಿತ್ರನನ್ನಾಗಿ ಮಾಡುವನು. ಎಲೌ ಉಮೇ, ಒಂದು ಸಲ ನನ್ನ ಹೆಸರಿನಿಂದಲೇ ಅವನನ್ನು ಶಿವನೆಂದು ನಂಬಿ, ನನ್ನ ಸನ್ನಿಧಿಯಲ್ಲಿರುವ ಕಲ್ಲಿನ ವೃಷಭಕ್ಕೆ ಬ್ರಾಹ್ಮಣರು ಶ್ರೇಷ್ಠವಾದ ಹುಲ್ಲನ್ನು ಕೊಡಲು, ಆಗ ಆ ಹರದತ್ತನು ಆ ಕಲ್ಲಿನ ವೃಷಭವು ಬಾಯಿ ತೆರೆದು ಹುಲ್ಲು ತಿನ್ನುವಂತೆ ಮಾಡುವನು. ॥೭೩॥

ಎಲೌ ಪಾರ್ವತಿಯೇ, ಹೀಗೆ ಕಲಿಯುಗದಲ್ಲಿಯೂ ನನ್ನ ಭಕ್ತಿಭಾವನೆಯನ್ನು ಜನಗಳಿಗೆ ತೋರಿಸಲು ನನಗೆ ಇಷ್ಟರಾದ ಶೈವರನೇಕರು ಹುಟ್ಟುತ್ತಾರೆ. ಆ ಶೈವರು ಭೂಮಿಯಲ್ಲಿ ತಮ್ಮ ಕಾರ್ಯಗಳನ್ನು ಮುಗಿಸಿ, ಅನಂತರ ಅರ್ಧಚಂದ್ರ ಮೌಳಿಗಳಾಗಿಯೂ ಮತ್ತು ಹಣೆಗಣ್ಣುಗಳಿಂದ ಶೋಭಿಸುವವರಾಗಿಯೂ ಕೈಲಾಸವನ್ನು ಪಡೆದು ಸುಖಪಡುತ್ತಾ ಶಿವಸಾರೂಪ್ಯದಿಂದ ಆನಂದಿಸುವರು. ॥೭೪॥

ಹರದತ್ತನು ಶೈವಗ್ರಂಥಗಳನ್ನೂ, ಅನೇಕ ವ್ಯಾಖ್ಯಾನ, ಅನುಬಂಧಾದಿಗಳನ್ನೂ ರಚಿಸಿ, ಅದರಿಂದುಂಟಾದ ತೇಜಸ್ಸಿನಿಂದ ಎಲ್ಲಾ ಕಡೆಯಲ್ಲಿಯೂ ಜನಗಳಲ್ಲಿ ಹರಡಿದ್ದ ಕತ್ತಲೆಯನ್ನು ಹೋಗಲಾಡಿಸಿ, ವೇದಪ್ರತಿಪಾದ್ಯವಾದ ಮತ್ತು ತಾತ್ಪರ್ಯರೂಪವಾದ ವಾಕ್ಯಗಳನ್ನೂ ಪ್ರಚಾರಪಡಿಸಿ, ಕಲಿಯುಗದ ನೀಚಮಾರ್ಗಾವಲಂಬನದಿಂದುಂಟಾದ ಇತರ ಶೈವಬ್ರಾಹ್ಮಣರಿಂದ ಹೋಗಲಾಡಿಸಲಸಾಧ್ಯವಾದ ಪಾಪಗಳನ್ನು ತೊಡೆದು, ಕೊನೆಗೆ ಶರೀರಸಮೇತನಾಗಿಯೇ ಕೈಲಾಸಕ್ಕೆ ನನ್ನ ಸಂನಿಧಿಗೆ ಬಂದು ಸೇರುವನು. ॥೭೫॥

ಕಲೌ ಛಂದೋಗೋಽಪಿ ಶ್ರುತಿಶಿಖರತಾತ್ಪರ್ಯವಚನೈ
ರ್ಮಹಾಗ್ರಂಥೋದ್ಬೋಧೈರ್ಜಯತಿ ಮತವಾದಿದ್ವಿಪಕರೀನ್ ।
ಭಿನತ್ತ್ಯೇವಂ ದೀಕ್ಷಾಂ ಕ್ಷಪಿತಸುಖವೃತ್ತಿಃ ಶಿವಪದೇ
ಶಿವೇ ದಭ್ರಸ್ಥಾನೇ ಭವತಿ ಚ ತತೋಽಂತೇ ಮಮ ಗಣಃ ॥೭೬॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಚೋಲದೇಶಹರದತ್ತಾ
ಖ್ಯಾನವರ್ಣನಂ ನಾಮ ಸಪ್ತದಶೋಽಧ್ಯಾಯಃ

---

ಪಾರ್ವತಿ, ಹೀಗೆ ಈ ಕಲಿಯುಗದಲ್ಲಿ ಕೇವಲ ಶಾಸ್ತ್ರಜ್ಞನೂ ಕೂಡ ಮಹಾಗ್ರಂಥಗಳ ಜ್ಞಾನಸಾರರೂಪವಾದ ವೇದಾಂತತಾತ್ಪರ್ಯವಾಕ್ಯಗಳಿಂದ ನನ್ನ ಮತಕ್ಕೆ ವಿರುದ್ಧರಾದ ವಾದಿಗಳೆಂಬ ಆನೆಗಳನ್ನು ಜಯಿಸುತ್ತಾನೆ. ಅಲ್ಲದೇ ಅವರ ದೀಕ್ಷೆಯನ್ನೂ ಮುರಿದು ಸುಖವಾಗಿ ಕಾಲಕಳೆಯುತ್ತಾ ಶಿವಸ್ಥಾನದಲ್ಲಿ ನೆಲಸುವನು. ದೇವಿ, ಪ್ರಳಯಕಾಲದಲ್ಲಿ ನನ್ನ ಗಣಗಳೆಲ್ಲಾ ನಾಟ್ಯಸ್ಥಾನದಲ್ಲಿ ಸುಖವಾಗಿ ನೆಲಸಿರುವುವು. ಎಂದು ಶಂಕರನು ಪಾರ್ವತಿಗೆ ಹೇಳಿದುದನ್ನು ಕುಮಾರಸ್ವಾಮಿಯು ಜೈಗೀಷವ್ಯನಿಗೆ ನಿರೂಪಿಸಿದನು. ॥೭೬॥

ಇಲ್ಲಿಗೆ ಶ್ರೀಶಿವರಹಸ್ಯದ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ.
ಚೋಲದೇಶದ ಹರದತ್ತನ ಆಖ್ಯಾನವರ್ಣನೆಯೆಂಬ
ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಅಷ್ಟಾದಶೋಽಧ್ಯಾಯಃ

॥ ಶ್ರೀ ದೇವ್ಯುವಾಚ ॥

ತೇ ತೇ ಭಾವ್ಯಾ ಶಿವೇ ಭಕ್ತಾ ಭವ್ಯಾ ಭವಪದಾರ್ಚಕಾಃ ।
ಕಿಂ ತೇಷಾಂ ಚರಿತಂ ಶಂಭೋ ವಿಸ್ತರೇಣ ವದಸ್ವ ಮೇ ॥೧॥

॥ ಶ್ರೀ ಸ್ಕಂದ ಉವಾಚ ॥

ಇತಿ ದೇವ್ಯಾ ಮಹಾದೇವಃ ಪೃಷ್ಟಸ್ತುಷ್ಟೋಽಭ್ಯುವಾಚ ತಾಂ ।
ಕೈಲಾಸೇ ಲಾಸ್ಯಸದನೇ ಮದನಾಂತಕರೋ ಹರಃ ॥೨॥

---

## ಹದಿನೆಂಟನೆಯ ಅಧ್ಯಾಯ

ಪರಮೇಶ್ವರನೇ, ಹೀಗೆಯೇ ಮುಂದೆ ಕಲಿಯುಗದಲ್ಲಿ ಅವತರಿಸುವ ಪ್ರಸಿದ್ಧರಾದ ಶಿವಪಾದಪೂಜಕರಾರು? ಅವರ ಚರಿತ್ರೆಯನ್ನು ವಿಸ್ತಾರವಾಗಿ ನನಗೆ ತಿಳಿಸೆಂದು ಪಾರ್ವತಿಯು ಪುನಃ ಶಂಕರನನ್ನು ಪ್ರಶ್ನೆ ಮಾಡಿದಳು. ॥೧॥

ಹೀಗೆ ದೇವಿಯಿಂದ ಪ್ರಶ್ನಿಸಲ್ಪಟ್ಟ ಮನ್ಮಥಶತ್ರುವಾದ ಶಂಕರನು, ಸಂತುಷ್ಟನಾಗಿ ಕೈಲಾಸಪರ್ವತದ ನಾಟ್ಯಾಲಯದಲ್ಲಿ ದೇವಿಯನ್ನು ಕುರಿತು ಇಂತೆಂದನೆಂದು ಜೈಗೀಷವ್ಯನಿಗೆ ಕುಮಾರಸ್ವಾಮಿಯು ಹೇಳಿದನು. ॥೨॥

|| ಶ್ರೀ ಮಹಾದೇವ ಉವಾಚ ||

ಶೃಣುಷ್ವೈಕಮನಾ ಭದ್ರೇ ಮದ್ಭಕ್ತಚರಿತಂ ಮುದಾ ।
ಕಲಾವಪಿ ಭವಂತ್ಯೇವ ಮತ್ಪ್ರಸಾದಾಚ್ಚ ಶಾಂಕರಾಃ ||೩||

ಶಾಂಕರಾಃ ಶಂಕರೇ ಭಕ್ತಿಮಾನಸಾಃ ಕಮಲಾನನೇ ।
ಮತ್ಸ್ತುತ್ವಾ ಸ್ವಸ್ತಯೇ ಲೋಕೇ ತೇ ಭವಂತ್ಯೇವ ಕಾರಕಾಃ ||೪||

ವಾರಕಾಃ ಪಾಪಸಂಘಾನಾಂ ವರಾಕಾ ಅಪಿ ಶಂಕರಿ ।
ತದಗ್ರೇ ಚರಿತಂ ತೇಷಾಂ ಲೋಕಾನಾಂ ವಿಸ್ಮಯಾವಹಂ ||೫||

ಭವಿಷ್ಯಂತಿ ಕಲೌ ದೇವಿ ಮದ್ಭಕ್ತಚರಿತಂ ಸದಾ ।
ಭಕ್ತಿಂ ದರ್ಶಯಿತುಂ ಲೋಕೇ ಮಯಾ ಸೃಷ್ಟಾ ಮಹೇಶ್ವರಿ ||೬||

ತ್ರಿಷಷ್ಟಿಪರಿಮಾಣಾಸ್ತೇ ಭಕ್ತಿಪ್ರಾಮಾಣ್ಯದರ್ಶಿನಃ ।
ತದಗ್ರೇ ಮುನಿಮುಖ್ಯಾನಾಂ ಉಪಮನ್ಯುರ್ಮಹಾದ್ಯುತಿಃ ||೭||

---

ಎಲೌ ಮಂಗಳಾಂಗಿಯೇ, ನನ್ನ ಭಕ್ತರ ಚರಿತ್ರೆಯನ್ನು ಸಂತೋಷದಿಂದ ಹೇಳುವೆನು. ಸಾವಧಾನಳಾಗಿ ಕೇಳು; ದೇವಿ, ಈ ಕಲಿಯುಗದಲ್ಲಿಯೂ ನನ್ನ ಅನುಗ್ರಹದಿಂದ ನನ್ನ ಭಕ್ತರನೇಕರು ಶಾಂಭವರೆನಿಸಿ ಅವತರಿಸುವರು. ತಾವರೆಯಂತೆ ಮುಖವುಳ್ಳ ದೇವಿಯೇ, ನನ್ನಲ್ಲಿ ವಿಶೇಷ ಭಕ್ತಿಯುಳ್ಳ ಆ ನನ್ನ ಭಕ್ತರು ನನ್ನನ್ನು ಸ್ತೋತ್ರಮಾಡುತ್ತಾ ಜಗತ್ಕಲ್ಯಾಣಕ್ಕೋಸ್ಕರ ಅವತರಿಸುತ್ತಾರೆ. ಹಾಗೆಯೇ ಲೋಕವನ್ನೂ ಉದ್ಧಾರಮಾಡುತ್ತಾರೆ. ||೩-೪||

ನನ್ನ ಭಕ್ತರು ಪಾಪಿಗಳ ಪಾಪರಾಶಿಗಳನ್ನು ನಿವಾರಿಸುವರು. ಅವರ ಚರಿತ್ರೆಯು ಮುಂದೆ ಕಲಿಯುಗದಲ್ಲಿ ಜನಗಳಿಗೆ ಆಶ್ಚರ್ಯಕರವಾಗುವುದು. ನನ್ನ ಭಕ್ತರ ಚರಿತ್ರೆಯು ಯಾವಾಗಲೂ ಕಲಿಯುಗದಲ್ಲಿ ಹೊಸ ಹೊಸದಾಗಿ ಇದ್ದೇ ಇರುವುದು. ಮಹೇಶ್ವರಿ, ಈ ಕಲಿಯುಗದಲ್ಲಿಯೂ ನನ್ನ ಭಕ್ತಿಯು ಮಹಿಮೆಯನ್ನು ಪ್ರಕಾಶಪಡಿಸುವುದಕ್ಕೋಸ್ಕರವೇ ಲೋಕದಲ್ಲಿ ನನ್ನ ಭಕ್ತರು ನನ್ನಿಂದ ಆಗಾಗ ನಿರ್ಮಿಸಲ್ಪಡುವರು. ||೫-೬||

ಒಟ್ಟು ನನ್ನ ಭಕ್ತಿಯಲ್ಲಿ ಪ್ರಾಮಾಣ್ಯವನ್ನು ತೋರ್ಪಡಿಸುವವರು ಅರುವತ್ತು ಮೂರುಮಂದಿ ಮಾತ್ರ ಇರುವರು. ಅವರಲ್ಲಿ ಮೊದಲಿನವನು ಮುನಿಶ್ರೇಷ್ಠನಾದ

ಭಕ್ತಿಪ್ರಭಾವಂ ಸರ್ವೇಷಾಂ ಭಕ್ತಾನಾಂ ವದತಿ ಸ್ವಯಂ ।
ತದೇತತ್ತೇ ಪ್ರವಕ್ಷ್ಯಾಮಿ ನಾತಿಸಂಗ್ರಹವಿಸ್ತರಂ ॥೮॥

ವದಾಮಿ ತೇ ಮುದಾ ದೇವಿ ಸದಾ ಲೋಕೇಷು ಭೂತಯೇ ।
ಮದ್ಗಣಸ್ಯ ಮಹಾದೇವಿ ಸುಂದರಸ್ಯ ಕಥಾಶ್ರಯಂ ॥೯॥

ಕೈಲಾಸೇ ಮಮ ದೇವೇಶಿ ನಾನಾಶ್ಚರ್ಯಸಮನ್ವಿತೇ ॥೧೦॥

ಉದ್ದಾಲಸಾಲಕೃತಮಾಲತಮಾಲತಾಲ-
ಬಾಲಾಮ್ರಜಾಲವರಬಿಲ್ವಸಮೂಲಮೂಲೇ ।
ಲಿಂಗಾನುಷಂಗವರಭೂಧರಸಂಗಶಾಂಗ
ಮಾತಂಗತುಂಗ ಸುಕುರಂಗಗಣಾಧಿಪಾಂತೇ ॥೧೧॥

ಜ್ವಾಲಾವಲೀಜಟಿಲಫಾಲತಲಾಭಿರಾಮ
ನಿರ್ಯತ್ಕೃಶಾನುಶರಜಾಲವಿಶಾಲಮಾರ್ಗೇ ।

---

ಮಹಾತೇಜಸ್ವಿಯಾದ ಉಪಮನ್ಯುವೆಂಬುವನು. ಆತನು ಇತರ ಭಕ್ತರಿಗೆಲ್ಲಾ ಶಿವಭಕ್ತಿಮಹಿಮೆಯನ್ನು ಉಪದೇಶಿಸುತ್ತಾನೆ. ದೇವಿ, ಆ ಭಕ್ತರ ಕಥೆಗಳನ್ನು ನಿನಗೆ ಹೆಚ್ಚು ಸಂಗ್ರಹ ಮತ್ತು ವಿಸ್ತಾರಗಳಿಲ್ಲದಂತೆ ಸಾಮಾನ್ಯವಾಗಿ ಹೇಳುತ್ತೇನೆ. ಕೇಳು. ॥೭-೮॥

ಮಹಾದೇವಿಯೇ, ಲೋಕದ ನನ್ನ ಭಕ್ತರ ಸಂಪತ್ತು ವೃದ್ಧಿಯಾಗಬೇಕಾದರೆ ನನ್ನ ಗಣಶ್ರೇಷ್ಠನಾದ ಸುಂದರನ ಕಥೆಗೆ ಆಶ್ರಯವಾದ ಭಾಗವನ್ನು ಕೇಳಬೇಕು. ಆದಕ್ಕಾಗಿ ನಿನಗೆ ಆದನ್ನು ಸಂತೋಷದಿಂದ ಹೇಳುತ್ತೇನೆ ಕೇಳು; ದೇವತಾ ಸಾರ್ವಭೌಮಳಾದ ಪಾರ್ವತಿಯೇ, ನಾನಾವಿಧವಾದ ಆಶ್ಚರ್ಯಗಳಿಂದ ಕೂಡಿರುವ ನನ್ನ ಈ ಕೈಲಾಸಪರ್ವತದಲ್ಲಿ; ॥೯-೧೦॥

ಎತ್ತರವಾಗಿ ಬೆಳೆದಿರುವ ಸಾಲ, ಕೃತಮಾಲ, ಹೊಂಗೆ, ತಾಳೆ, ಎಳೆಮಾವು ಈ ಮರಗಳ ಗುಂಪೂ, ಶ್ರೇಷ್ಠವಾದ ಬಿಲ್ವದಳಗಳಿಂದ ಶೋಭಿಸುವ ಬಿಲ್ವ ಮರಗಳೂ, ಅವುಗಳ ಬುಡದಲ್ಲಿ ಶಿವಲಿಂಗಗಳೂ, ಶ್ರೇಷ್ಠವೆನಿಸುವ ಆ ಪ್ರದೇಶದಲ್ಲಿ ಶಿವಲಿಂಗಾರಾಧನೆ ಮಾಡುತ್ತಿರುವ ನನ್ನ ಭಕ್ತರೂ, ದೊಡ್ಡ ಆನೆಗಳೂ ಸುಂದರವಾದ ಜಿಂಕೆಗಳೂ ಗುಂಪುಗುಂಪಾಗಿ ಶೋಭಿಸುತ್ತಿರುವುವು. ॥೧೧॥

ಜ್ವಾಲೆಗಳ ಸಮೂಹದಿಂದ ಜಟಿಲವಾಗಿ ನನ್ನ ಹಣೆಯಲ್ಲಿ ಉಗ್ರತಮ

ಲೋಲಾಕ್ಷಕಾಲಕೃತ ನೀಲಸಶೂಲದಗ್ಧ
ಕಾಮಾಂಗಭಸ್ಮಸಗಿರೀಶ್ವರಮೌಳಿಮಾಲೇ ॥೧೨॥

ಉದ್ಯಚ್ಛಶಾಂಕಕರಸಂನಿಭ ಪರ್ವತೇಂದ್ರ-
ಶ್ರೀಮೌಳಿಲಿಂಗ ಕುಲಧಾಮಕಲೋತ್ತಮಾಂಗೇ ।
ಗಂಗಾತರಂಗ ಭವ ನೀರಜ ಫುಲ್ಲಗಂಧ-
ಬಂಧದ್ವಿರೇಫ ವರಸಾರಸ ಕೋಕಕಾಂತೇ ॥೧೩॥

ಉತ್ಫುಲ್ಲಕೇತಕಕದಂಬಜಕರ್ಣಿಕಾರ-
ಮಾಲೂರಪುಷ್ಪಸಹಕಾರಭವೋರುವಾತೇ ।
ಕೇಕಾರವೈಃ ಪರಭೃತಾ ಶುಕಶಾರಿಕಾನಾಂ
ಸಾರಂಗಬೃಂಹಿತರವೈರ್ಗಿರಿಸಾನುಜಾಲೇ ॥೧೪॥

---

ವಾಗಿರುವ ಫಾಲನೇತ್ರದಿಂದ ಹೊರಡುವ ಅಗ್ನಿಯೆಂಬ ಬಾಣಸಮೂಹಗಳಿಗೆ ವಿಸ್ತಾರವಾದ ದಾರಿಯಂತೆ ಕೈಲಾಸವು ರಂಜಿಸುತ್ತಿದ್ದಿತು. ಚಂಚಲನೇತ್ರನಾದ ಪರಮೇಶ್ವರನಿಂದ ನಿಗ್ರಹಿಸಲ್ಪಟ್ಟ ಯಮನಿಂದಲೂ, ನೀಲವರ್ಣವಾದ ಶೂಲವನ್ನು ಧರಿಸಿರುವ ಶಿವನಿಂದ ಸುಡಲ್ಪಟ್ಟ ಮನ್ಮಥನಿಂದಲೂ, ಸೇವಿತವಾಗಿ ಮಹೇಶ್ವರನಿಗೆ ಆವಾಸವೆನಿಸಿದ್ದ ಕೈಲಾಸಪರ್ವತದ ಶಿಖರವು ಜ್ವಾಲಾಮಯವಾಗಿ ರಂಜಿಸುತ್ತಿತ್ತು. ॥೧೨॥

ಉದಯಿಸುತ್ತಿರುವ ಚಂದ್ರನ ಕಿರಣಗಳಿಗೆ ಸಮಾನವಾಗಿ ಕೈಲಾಸಪರ್ವತವು ಕಾಂತಿಯುಕ್ತವಾಗಿ ಹೊಳೆಯುತ್ತಿದ್ದಿತು. ಅದರ ಶಿಖರದಲ್ಲಿರುವ ಲಿಂಗಸಮೂಹಗಳ ತೇಜಸ್ಸಿನ ಕಲೆಗಳು ಆ ಶಿಖರಕ್ಕೆ ಅಲಂಕಾರಪ್ರಾಯವಾಗಿರುವುವು. ಗಂಗಾನದಿಯ ನೀರಿನಲ್ಲಿ ಬೆಳೆದು ಅರಳಿದ ಕಮಲಗಳಿಂದ ಹೊರಬೀಳುವ ಸುಗಂಧಗಳ ಬಂಧನಕ್ಕೊಳಗಾಗಿ ದುಂಬಿಗಳೂ, ಶ್ರೇಷ್ಠವಾದ ಸಾರಸ ಮತ್ತು ಚಕ್ರವಾಕಪಕ್ಷಿಗಳೂ ಮನೋಹರವಾಗಿ ಅಲ್ಲಿ ತೋರುತ್ತಿರುವುವು. ॥೧೩॥

ಅರಳಿದ ಕೇದಗೆ, ಈಚಲು, ಕಣಿಗಲೆ, ಬಿಲ್ವದಳ ಮುಂತಾದ ಹೂಗಳ ಮೇಲೆ ಬೀಸಿ ಅವುಗಳ ಸುಗಂಧವನ್ನೆಲ್ಲಾ ಹೊತ್ತು ಗಾಳಿಯು ತಂಪಾಗಿ ಅಲ್ಲಿ ಬೀಸುತ್ತಿರುವುದು. ಕೈಲಾಸಕ್ಕೆ ಸಂಬಂಧಿಸಿದ ಬೆಟ್ಟಗಳ ತಪ್ಪಲುಗಳಲ್ಲಿ ನವಿಲುಗಳು

ಉದ್ಘೋಷಿತಾಂತರ ಮುಖಾಂತರಸಾರಭಾರ-
ನಿರ್ಯತ್ಪ್ರಭಾಕರಕರೈಃ ಕಲಧೌತಶೈಲೇ ।
ಭುಲ್ಲೀಜಮಲ್ಲೀವರವಲ್ಲಿಸಮೂಹಸಾಲೀ
ಝುಲ್ಲೀಗಣೈಶ್ಚರಣರೇಣುಜ ವೃಂದಜಾಲೇ ॥೧೫॥

ನಿಃಸಾಣಬಾಣಕರಘೋಷಮಹೋರುಹಾಸ
ವಾದ್ಯನ್ಮೃದಂಗವರದುಂದುಭಿನಾದಯುಕ್ತೇ ।
ಕುಂದೇಂದುಸನ್ನಿಭ ಮಹಾವರಸಾಗರೋತ್ಥ
ಕಂಜೋರುನಾದಬಧಿರೀಕೃತ ದಿಙ್ಮುಖಾದ್ಯೇ ॥೧೬॥

ಮುಗ್ಧೇ ವೃಷೇಂದ್ರವರಗರ್ಜನತರ್ಜಿತೋರು
ಮಾತಂಗ ಸಿಂಹ ಹರಿಣೀ ಕರುಣಾಕ್ಷಕೋಲೇ ।

---

ಕೇಕಾಧ್ವನಿಗೈಯುತ್ತಿರುವುವು. ಕೋಗಿಲೆ, ಗಿಳಿ, ಸಾರಿಕಾ, ಜಿಂಕೆ ಮುಂತಾದ ಮೃಗ ಪಕ್ಷಿಗಳ ನಾದವು ಎಲ್ಲೆಡೆಗಳಲ್ಲಿಯೂ ವ್ಯಾಪಿಸಿದ್ದಿತು. ॥೧೪॥

ಈ ಸುವರ್ಣಪರ್ವತವೆನಿಸಿದ ಕೈಲಾಸವು ಮಾತನಾಡಿದ ಸಾರವನ್ನೆಲ್ಲಾ ಸ್ಪಷ್ಟವಾಗಿ ಪ್ರತಿಧ್ವನಿರೂಪದಲ್ಲಿ ತಿರುಗಿಸಿ ಹೇಳುತ್ತಿದ್ದಿತು. ಆ ಕೈಲಾಸದ ಪ್ರಭೆಯು ಅಡ್ಡಡ್ಡಲಾಗಿಯೂ ತನ್ನ ಕಿರಣಗಳನ್ನು ವ್ಯಾಪಿಸಿದ್ದಿತು. ಪೊದೆಗಳಲ್ಲಿರುವ ಲತೆಗಳಲ್ಲಿಯೂ, ಮಲ್ಲಿಗೆಯ ಬಳ್ಳಿಗಳಲ್ಲಿಯೂ ಗುಂಪುಗುಂಪಾಗಿ ಭ್ರಮರಗಳೂ ಮತ್ತು ಚೀರುಂಡೆಯ ಹುಳುಗಳೂ ಕಾಲಿನ ಧೂಳಿನ ರಾಶಿಗಳಲ್ಲಿ ಕುಳಿತು ಧ್ವನಿಮಾಡುತ್ತಿದ್ದುವು. ॥೧೫॥

ಕೊಂಬುಕಹಳೆ, ಬಾಣಧಾರಿಗಳ ಘೋಷ, ಮಹಾಹಾಸ್ಯಧ್ವನಿ, ಪ್ರತಿಧ್ವನಿಗೊಡುತ್ತಿರುವ ಶ್ರೇಷ್ಠವಾದ ಮೃದಂಗ, ದುಂದುಭಿ ಮುಂತಾದ ವಾದ್ಯದ ಶಬ್ದಗಳು ಕೈಲಾಸಗಿರಿಯಲ್ಲಿ ಮೊಳಗುತ್ತಿದ್ದುವು. ಕೋಲುಮಲ್ಲಿಗೆಯಂತೆ, ಚಂದ್ರನಂತೆ, ಶುಭ್ರವಾಗಿ ಹೊಳೆಯುವ ಮಹಾಸಾಗರದಲ್ಲಿ ಹುಟ್ಟಿದ ಶಂಖನಾದದಿಂದ ಎಲ್ಲಾ ದಿಗ್ಭಾಗಗಳೂ ಕಿವುಡಾಗುತ್ತಿದ್ದುವು. ॥೧೬॥

ಕೈಲಾಸಶಿಖರದಲ್ಲಿ ವೃಷರಾಜನ ವೀರಗರ್ಜನೆಯಿಂದ ದೊಡ್ಡ ದೊಡ್ಡ ಆನೆ, ಸಿಂಹ, ಜಿಂಕೆಗಳೆಲ್ಲವೂ ಹೆದರಿ ದೀನವಾಗಿ ಧ್ವನಿಮಾಡುವುವು. ದಪ್ಪಬಾಲವುಳ್ಳ ಚಮರೀಮೃಗಗಳು ಗುಂಪಾಗಿ ತಮ್ಮ ಬಾಲಗಳನ್ನು ಬೀಸುತ್ತಿರುವುವು. ಕಿರುಬ,

**ಉತ್ಪುಚ್ಛಚಾಮರಗಣ್ಯೈಃ ಸೃಮರೀವೃಕಾದಿ**
**ದಂಷ್ಟ್ರೈರ್ಹರ್ಯಯಾರಿಗಣಧಾವನಮೌಳಿಜಾಲೇ ॥೧೭॥**

**ವಾತಾದಿಘರ್ಷಣಮಹಾವರವೇಣುಮೌಲಿ**
**ಸಂಜಾತವಹ್ನಿಶಿಖರಾರುಣಕಾಂತಿಕಾಂತೇ ।**
**ಸಂದಗ್ಧಗಂಧವಹಬಂಧುರಧೂಮತಾಂತ**
**ಗಂಧೈರ್ವಿಸರ್ಪಿತವರಾಗರುದೇವದಾರ್ವೈಃ ॥೧೮॥**

**ಕೈಲಾಸಶೈಲಮಣಿಗೋಪುರಮೌಳಿಜಾಲ**
**ಕುಂಭೋದ್ಯತಾಮಲಮಣಿವ್ರಜಕಾಂತಿಕಾಂತೇ ।**
**ದೋಧೂಯಮಾನಸುಪತಾಕತತಿಪ್ರಭಾಭಿ**
**ರಾದೀಪಿತೇ ತಿಮಿರಹಾರಿಣಿ ಪರ್ವತೇಂದ್ರೇ ॥೧೯॥**

---

ತೋಳ ಮುಂತಾದ ದುಷ್ಟಮೃಗಗಳು ತಮ್ಮ ಕೋರೆದಾಡೆಗಳಿಂದ ಕುದುರೆ ಮುಂತಾದ ತಮ್ಮ ಶತ್ರುಪ್ರಾಣಿಗಳನ್ನು ಹಿಂಬಾಲಿಸಿ ಈ ಕೈಲಾಸಪರ್ವತದ ಶಿಖರದಲ್ಲಿ ಓಡುತ್ತಿರುವುವು. ॥೧೭॥

ಗಾಳಿಯೇ ಮೊದಲಾದುವುಗಳ ಘರ್ಷಣೆಗಳಿಂದ ದೊಡ್ಡ ದೊಡ್ಡ ಬಿದಿರು ಮೆಳೆಗಳಲ್ಲಿ ಬೆಂಕಿಯುಂಟಾಗಿ, ಅದರ ಜ್ವಾಲೆಯಿಂದ ಕೈಲಾಸಶಿಖರವೆಲ್ಲವೂ ಕೆಂಪು ಕಾಂತಿಯಿಂದ ಶೋಭಿಸುತ್ತಿದ್ದಿತು. ಆ ಕಾಳ್ಗಿಚ್ಚಿನಿಂದ ಬೆಂದ ಗಂಧಯುಕ್ತವಾದ ಶ್ರೀಗಂಧ, ಚಂದನ, ಅಗುರು ಮತ್ತು ದೇವದಾರುಮರಗಳ ಸುವಾಸನೆಯು ಎಲ್ಲಾ ಕಡೆಯಲ್ಲಿಯೂ ಘಮಘಮಿಸುತ್ತಿದ್ದಿತು. ॥೧೮॥

ಆ ಪರ್ವತರಾಜನೆನಿಸಿದ ಕೈಲಾಸಪರ್ವತವು ರತ್ನಮಯವಾದ ಗೋಪುರಗಳ ಶಿಖರಸಮೂಹಗಳಿಂದಲೂ, ಕುಂಭಗಳಿಂದಲೂ ಹೊರಟ ನಿರ್ಮಲವಾದ ರತ್ನರಾಶಿಗಳ ಕಾಂತಿಗಳಿಂದ ವಿರಾಜಿಸುತ್ತಿದ್ದಿತು. ಅಲ್ಲಾಡುತ್ತಿರುವ ಉತ್ತಮವಾದ ರತ್ನಪತಾಕೆಗಳ ಸಮೂಹಕಾಂತಿಗಳಿಂದ ಈ ಪರ್ವತವು ಅಲ್ಲಿದ್ದ ಅಂಧಕಾರವನ್ನೆಲ್ಲಾ ಹೋಗಲಾಡಿಸಿ ಪ್ರಜ್ವಲಿಸುತ್ತಿದ್ದಿತು. ॥೧೯॥

ಅದಳಿತಕದಳೀದಳೋರುಭಾರವಿಲ
ಸನ್ನಾರಿಕೇಳಸುರಸಾಲಸುಮೌಳಿಭಾರೈಃ ।
ಆಂದೋಲಿತೇ ಚ ಸುಸಮೀಕ್ಷಣಕಾರಣೇ ಚ
ಸಂತಾರಣೇ ತರಿಶಿಖಾಸುಸಮೀರಕಾಂತೇ ॥೨೦॥

ಮಣಿಗಣಸುಖನಾಲುಕಾಭಿರಾಮೇ
ಗಿರಿಮೌಲೌ ಗಣವೃಂದತೋಷಯುಕ್ತೇ ।
ಗಿರಿಗರಿಮಾಧುರಿಮಾನುಸಾನುಭಾನು
ದ್ಯುತಿವಿದ್ಯುತ್ಪ್ರಭಭಾವಿತೇ ತತೇ ಚ ॥೨೧॥

ಫಣಿಫಣಮಣಿಜಾಲಜಾಲವಿದ್ಯುತ್ಪ್ರಭಯಾ
ಭಾಸಿತಕಾಶಿತಾಂತರೇ ಗಿರೌ ಚ ।
ತರುಣಾರುಣಪ್ರಭಾಭಿರಾಮ
ದ್ಯುತಿವಿದ್ಯುತ್ಪ್ರಭಶೈಲಮೌಲಿಜಾಲೇ ॥೨೨॥

---

ಎಲೆಯೊಡೆಯದಿರುವ ಬಾಳೆಯ ಗಿಡಗಳ ದೊಡ್ಡದೊಡ್ಡ ಬುಡಗಳೂ, ಶ್ರೇಷ್ಠ ವಾದ ತೆಂಗು, ಸಿಹಿಮಾವು ಮುಂತಾದುವುಗಳ ಸಮೂಹವೂ ಆ ಶಿಖರದಲ್ಲಿ ರಾಜಿಸುತ್ತಿದ್ದುವು. ತಂಪಾದ ಗಾಳಿಯು ಬೀಸುತ್ತಾ ಆಂದೋಳನಗೈಯುವಂತೆ ಅದು ಆನಂದಗೊಳಿಸುತ್ತಿರುವುದು. ಅಲ್ಲಿರುವ ಈಶ್ವರಭಕ್ತಜನರನ್ನು ಉದ್ಧಾರಮಾಡುವ ಈ ಕೈಲಾಸಪರ್ವತದ ಶಿಖರವು ತಂಗಾಳಿಯಿಂದ ಶೋಭಿಸುತ್ತಾ, ಸಕಲ ಸುಖ ಗಳಿಗೂ ಕಾರಣಭೂತವಾಗಿದ್ದಿತು. ॥೨೦॥

ರತ್ನ ಸಮೂಹಗಳಂತಿರುವ ಮರಳುಗಳಿಂದ ಮನೋಹರವಾಗಿರುವ ಈ ಕೈಲಾಸಪರ್ವತದ ಶಿಖರವು ಶಿವಗಣಗಳ ಗುಂಪಿಗೆ ವಿಶೇಷ ಸಂತೋಷವನ್ನುಂಟು ಮಾಡುತ್ತಿದ್ದಿತು. ಆ ಪರ್ವತದ ಗಾಂಭೀರ್ಯಯುಕ್ತವಾದ ತಪ್ಪಲುಗಳು ಸೂರ್ಯನ ತೇಜಸ್ಸು, ಮತ್ತು ಮಿಂಚಿನ ಪ್ರಭೆಗಳಿಂದ ವ್ಯಾಪ್ತವಾಗಿ ವಿಸ್ತಾರವಾಗಿರುವುವು. ॥೨೧॥

ಹಾವುಗಳ ಹೆಡೆಮಣಿಗಳ ಸಮೂಹಗಳಿಂದ ಹೊರಟ ದಿವ್ಯಕಾಂತಿಯು ಎಳೆಮಿಂಚಿನ ಕಾಂತಿಯಂತೆ ಆ ಬೆಟ್ಟದ ಮಧ್ಯಭಾಗದಲ್ಲೆಲ್ಲಾ ಆವರಿಸಿರುವುದು. ಅಲ್ಲದೆ ಎಳೆಸೂರ್ಯನ ಪ್ರಕಾಶದಿಂದಲೂ, ಮಿಂಚಿನ ಕಾಂತಿಯಿಂದಲೂ ಈ ಪರ್ವತದ ಶಿಖರಭಾಗವು ರಮ್ಯವಾಗಿ ಶೋಭಿಸುತ್ತಿದ್ದಿತು. ॥೨೨॥

ತತ್ಸೌಧಜಾಲಪರಿಕಲ್ಪಗವಾಕ್ಷಶಿಕ್ಷಾ
ಶಿಲ್ಪೇಷು ನಾಲ್ಪಮತಿಭಿಃ ಪರಿಚಿಂತನೀಯೇ ।
ತಸ್ಮಿನ್ಕೈಲಾಸಮೌಲೌ ಪರಿಮಳಕುಸುಮಾಸಾರಭಾರಾನುಗಂಧ
ಬಂಧಾಭಿದಾನಪ್ರತಿನಗಕುಸುಮಾನೋದಷಟ್ಪಾದಕಾಂತೇ ॥೨೩॥

ಶಾಂತೇ ಶೌಚಾಂಬುಜಬೃಂದ ಬಂಭರರವೇ ನೈತಂಸಿಕೇ ಮಾರುತೇ
ಮತ್ಪಾದಾಂಬುಜಪೂಜನೋತ್ಸವಮತಿಃ ಕಶ್ಚಿದ್ಗಣೇಷೂತ್ತಮಃ ।
ತತ್ಪುಷ್ಪಾಪಚಯಾಯ ಸಂಪ್ರತಿ ಯಯೌ ಕೈಲಾಸಮೌಲೀವನಂ ॥೨೪॥

ಸಮುಲ್ಲಸಿತಯೌವನೋ ಮದನಕೋಟಿಕಾಂತಪ್ರಭಾ
ವಿಭಾಸಿತ ದಿಗಂತತೋ ಭಸಿತಭೂಷದಿವ್ಯಾಂಗಕಃ ।
ಮದೇಭಕರಸಪ್ರಭಪ್ರಬಲಹಸ್ತ ದಂಡೋಜ್ಜ್ವಲ
ತ್ರಿಪುಂಡ್ರಲಲಿತಾಲಕಃ ಸುರವರಾರಿಸಂಮರ್ದನಃ ॥೨೫॥

---

ಆ ಕೈಲಾಸಶಿಖರದಲ್ಲಿನ ಉಪ್ಪರಿಗೆಯ ಮನೆಗಳ ಸಮೂಹಗಳಲ್ಲಿ ವಾಯು ಸಂಚಾರಕ್ಕಾಗಿ ಏರ್ಪಡಿಸಿರುವ ವೃಕ್ಷಗಳ ಶಿಲ್ಪಚಾತುರ್ಯವನ್ನು ಅಲ್ಪಬುದ್ಧಿಯುಳ್ಳವರು ಹೀಗೆಂದು ಯೋಚಿಸಲೂ ಸಾಧ್ಯವಿಲ್ಲ. ಈ ಕೈಲಾಸಶಿಖರದಲ್ಲಿ ಪರಿಮಳದ ಆಸೆಯಿಂದ ಹೂವಿನ ಮಕರಂದವನ್ನು ಪಾನಮಾಡುವುದಕ್ಕೋಸ್ಕರ ಎಲ್ಲಾ ಹೂಗಳ ಮೇಲೂ ದುಂಬಿಗಳು ಮುತ್ತಿಕೊಂಡು ಮೊರೆಯುತ್ತಾ ಸದಾ ವಿರಾಜಿಸುತ್ತಿರುವುವು. ||೨೩||

ಶಾಂತವೂ ಶುಚಿಕರವೂ ಆದ ಕಮಲಸಮೂಹಗಳ ಮೇಲಿರುವ ದುಂಬಿಗಳ ಧ್ವನಿಯೂ, ವಾಯುವು ಬೀಸುವ ಶಬ್ದವೂ, ಮನೋಹರವಾಗಿ ಈ ಕೈಲಾಸಪರ್ವತ ಶಿಖರದಲ್ಲಿ ತೋರಿಬರುತ್ತಿದ್ದಾಗ ನನ್ನ ಪಾದಕಮಲವನ್ನು ಪೂಜೆಮಾಡುವ ಸಂತೋಷದ ಉತ್ಸಾಹದಲ್ಲಿ ಒಬ್ಬ ಗಣಶ್ರೇಷ್ಠನು ಹೂಗಳನ್ನು ಕೊಯ್ದು ತರುವುದಕ್ಕೋಸ್ಕರ ಆ ಶಿಖರದ ಕಾಡಿಗೆ ಹೋದನು. ||೨೪||

ಅವನು ಯೌವ್ವನದಿಂದ ಶೋಭಿಸುತ್ತಾ, ಕೋಟಿಮನ್ಮಥರಂತೆ ಹೊಳೆಯುವ ತನ್ನ ದೇಹಪ್ರಭೆಯಿಂದ ದಿಗ್ಭಾಗಗಳನ್ನೆಲ್ಲಾ ಪ್ರಕಾಶಗೊಳಿಸುತ್ತಾ, ಶುಭ್ರವಾದ ಭಸ್ಮವನ್ನು ತನ್ನ ದಿವ್ಯದೇಹಕ್ಕೆ ಅಲಂಕರಿಸಿಕೊಂಡು, ಮದಿಸಿದ ಆನೆಯ ಸೊಂಡಲಿನಂತಿರುವ ದಪ್ಪ ತೋಳಿನಿಂದ ಕಂಡುಬರುತ್ತಾ, ಆ ಗಣಶ್ರೇಷ್ಠನು ದೈತ್ಯಧ್ವಂಸಕ

ರುದ್ರಾಕ್ಷೋತ್ತಮ ಹಾರಕಂಠವಲಯೋಽನಂಗಾಂಗಭಂಗಾರ್ಚಕೋ
ಲಿಂಗೇ ತುಂಗಸರೋಜಬಿಲ್ವಕುಸುಮಾಸಾರೈಶ್ಚ ಸಂಪೂಜಕಃ ।
ತಸ್ಮಿನ್ಪುಷ್ಪವನೇ ಸಮೀರಣಗಲತ್ಪುಷ್ಪೋಚ್ಚಯೋಚ್ಚದ್ರುಮ
ಕ್ಷೌದ್ರಾಸಾರಪರಾಗರಂಜಿತಮಹೀಪೀಠೇ ಸುಶೀತೇ ತದಾ ॥೨೬॥

ಮಾಕಂದದ್ರುಮಪಲ್ಲವೋತ್ಸವಲಸದ್ವಾಸಂತಿಕೇ ಚಾಂತಿಕೇ
ಉತ್ಫುಲ್ಲಾರುಣಪದ್ಮರಾಗಸದೃಶಪ್ರೋದ್ಯನ್ಮಣೀಂದ್ರಪ್ರಭಾ ।
ಭಾಸ್ವತ್ಕೋಕಿಲಕಾಕಲೀರವಯುತೇ ನಾಮ್ನಾಪ್ಯಸೌ ಸುಂದರಃ
ದೃಷ್ಟ್ವಾ ತಾಂ ಚಕಮೇ ಕಲಾಸು ಕುಶಲೋ ಪಂಚೇಷುಬಾಣಾಹತಃ॥೨೭॥

ಮುಂಚನ್ಸ್ವಂ ನಯನಾಂಬುಜಾಂಚಲಗಲದ್ಧೈರ್ಯೋವರೋಽಸೌ ಯುವಾ
॥೨೮॥

---

ನೆನಿಸಿ, ಹಣೆಯಲ್ಲಿ ಭಸ್ಮತ್ರಿಪುಂಡ್ರಧಾರಣೆ ಮಾಡಿಕೊಂಡು ದಿವ್ಯಮುಂಗುರುಳು ಗಳಿಂದ ಶೋಭಿಸುತ್ತಿದ್ದನು. ॥೨೫॥

ಕೊರಳಲ್ಲಿ ಉತ್ತಮವಾದ ರುದ್ರಾಕ್ಷಮಾಲೆಗಳನ್ನೂ, ಕೈಯಲ್ಲಿ ರುದ್ರಾಕ್ಷ ಕಂಕಣಗಳನ್ನೂ ಧರಿಸಿ, ಮನ್ಮಥಶತ್ರುವಾದ ಮಹಾದೇವನ ಪೂಜಕನಾದ ಅವನು ಶಿವಲಿಂಗಗಳನ್ನು ನೋಡಿದೊಡನೆಯೇ, ಅದಕ್ಕೆ ಬಿಲ್ವದಳ, ತಾವರೆ ಮತ್ತು ಇತರ ಶ್ರೇಷ್ಠವಾದ ಹೂಗಳಿಂದ ಪೂಜೆಮಾಡುತ್ತಾ ಬರುತ್ತಿದ್ದನು. ಆ ಹೂವಿನ ಉದ್ಯಾನ ದಲ್ಲಿ ವಾಯುವು ಚಲಿಸಿ, ಹೂವುಗಳ ರಾಶಿಯುಳ್ಳ ಮರಗಳ ಮೇಲಿಂದ, ಮಕರಂದವೂ ಪರಾಗಗಳೂ ಬಿದ್ದು ನೆಲವೆಲ್ಲವೂ ಸುಗಂಧಮಯವಾಗಿದ್ದಿತು. ॥೨೬॥

ಇಂತಹ ಸುಂದರವಾದ ಆ ಗಿರಿಯ ತಪ್ಪಲಿನಲ್ಲಿ ಸಿಹಿಮಾವಿನಮರದ ಚಿಗುರಿನ ಉತ್ಸವದಿಂದ ಪ್ರಕಾಶಿಸುತ್ತಿರುವ ವಸಂತಋತುವಿನ ಸೊಬಗು ಎಲ್ಲೆಲ್ಲಿಯೂ ಕಂಡು ಬರುತ್ತಿದ್ದಿತು. ಆಗ ಅರಳಿದ ಕೆಂದಾವರೆಯಂತೆ ದೇಹಕಾಂತಿಯನ್ನು ಪಡೆದು ಹೊರಚಿಮ್ಮುತ್ತಿರುವ ರತ್ನಶ್ರೇಷ್ಠದ ಪ್ರಭೆಯುಳ್ಳವಳಾಗಿ, ಕೋಗಿಲೆಯ ಮೃದು ಮಧುರಧ್ವನಿಯನ್ನು ಅಳವಡಿಸಿಕೊಂಡಿದ್ದ ಓರ್ವ ಸುಂದರಿಯನ್ನು ಈ ಸುಂದರ ನೆಂಬ ನನ್ನ ಗಣಮುಖ್ಯನು ನೋಡಿ, ಕಲೆಗಳಲ್ಲಿ ನಿಪುಣನಾದ ಆತನು ಮನ್ಮಥ ಬಾಣಗಳಿಂದ ಹೊಡೆಯಲ್ಪಟ್ಟು, ತಾವರೆಗಣ್ಣಿನ ತುದಿಗಳಿಂದ ಸುರಿಯುವ ಕಣ್ಣೀರಿ ನಿಂದ ಧೈರ್ಯಗುಂದಿದವನಾಗಿ ಅವಳನ್ನು ಸ್ವಾಧೀನಪಡಿಸಿಕೊಳ್ಳಲು ಯತ್ನಿಸಿದನು. ॥೨೭-೨೮॥

ತನಾಲೀಪಾಲೀಂ ಗತಿಜಿತಮರಾಳೀಂ ಚ ಸ ತದಾ
ಶಿವೇ ವ್ಯಾಲೀವೇಣೀಂ ಮಣಿಗಣಸಪೃಕ್ತಾಲಕಭರಾಂ ।
ಸ್ಮರಾಂಭೋಧೇಃ ಕೇಳೀಂ ವನಭುವಿ ಸುಗಾಂಧರ್ವಸರಳೀಂ
ವಿಶೇಷಾಪ್ತಾ ಯಂತೀಂ ಸ್ಮರಸರಣಿಕಾಂತಾಂ ಸ ದದೃಶೇ ॥೨೯॥

ಮತ್ತೇಭಕುಂಭಸದೃಶೋರುಕುಚಾಗ್ರಭಾಗ
ಸಂಲಗ್ನಚೂಚುಕಭರಾ ಧರಿತೋರುಬಿಂಬಾಂ ।
ಧಮ್ಮಿಲ್ಲಭಾಗಕೃತಮಲ್ಲಿಸಮೂಹಗಂಧ
ಬಂಧದ್ವಿರೇಫಚಿಕುರಾಂ ಮುಕುರಾಭವಕ್ತ್ರಾಂ ॥೩೦॥

---

ಎಲೌ ಪಾರ್ವತಿಯೇ, ಅವಳು ನಿನ್ನ ಸಖಿಯರಿಗೆ ನಾಯಕಿಯಾಗಿದ್ದವಳು. ತನ್ನ ಗಮನದಿಂದ ಹಂಸಾಂಗನೆಯನ್ನು ಗೆದ್ದವಳು. ಅವಳ ಜಡೆಯು ಸರ್ಪದಂತೆ ಕಪ್ಪಾಗಿಯೂ ನೀಳವಾಗಿಯೂ ಇದ್ದಿತು. ಅವಳು ರತ್ನರಾಶಿಗಳಿಗೆ ಸಮಾನವಾದ ಮುಂಗುರುಳಿನಿಂದ ಶೋಭಿಸುತ್ತಿದ್ದಳು. ಮನ್ಮಥವಿಕಾರವೆಂಬ ಸಮುದ್ರದಲ್ಲಿ ವಿಹರಿಸುತ್ತಿರುವಂತೆ ಕಾಣುತ್ತಿದ್ದಳು. ಆಕೆಯು ಆ ತಪ್ಪಲು ಪ್ರದೇಶದಲ್ಲಿ ಶ್ರೇಷ್ಠವಾದ ಗಂಧರ್ವಗಾನಮಾಡುತ್ತಾ ಮನ್ಮಥಮಾರ್ಗಪ್ರವೇಶಿನಿಯೊ ಎಂಬಂತಿದ್ದ ಆ ಸುಂದರಾಂಗಿಯನ್ನು ಈ ಸುಂದರನು ನೋಡಿದನು. ॥೨೯॥

ಮದಿಸಿದ ಆನೆಯ ಕುಂಭಸ್ಥಳಕ್ಕೆ ಸಮಾನವಾದ ಆಕೆಯ ದೊಡ್ಡ ಸ್ತನಗಳಿಂದಲೂ, ಅವುಗಳ ಅಗ್ರಭಾಗದಲ್ಲಿ ಸಂಬಂಧಿಸಿರುವ ದುಂಡಾದ ಚೂಚುಕದಿಂದಲೂ ಶೋಭಿಸುತ್ತಿದ್ದಳು. ಆಕೆಯು ಕುಚಭಾರವನ್ನು ಧರಿಸುವುದಕ್ಕಾಗಿಯೇ ಈ ತರುಣಿಯು ದಪ್ಪ ತೊಡೆಗಳನ್ನು ಧರಿಸಿರುವಳೋ ಎನ್ನುವಂತೆ ಅವಳ ಊರುಗಳು ದುಂಡಾಗಿ ದಪ್ಪವಾಗಿದ್ದುವು. ಅಲ್ಲದೇ ಆಕೆಯು ತಲೆಯ ಗಂಟಿನ (ಹೆರಳಿನ)ಲ್ಲಿ ಮಲ್ಲಿಗೆಯ ದಂಡೆಗಳನ್ನು ಮುಡಿದುಕೊಂಡಿದ್ದುದರಿಂದ ಆ ಹೂಗಳ ಸುವಾಸನೆಗೋಸ್ಕರ ಭ್ರಮರಗಳು ಮುತ್ತಿ ಮೊರೆಯುತ್ತಾ ತಮ್ಮಂತೆಯೇ ಬಣ್ಣವುಳ್ಳ ಆ ಯುವತಿಯ ಮುಂಗುರುಳುಗಳಲ್ಲಿ ಹಾರಾಡುತ್ತಿದ್ದುವು. ಆಕೆಯ ಮುಖವಾದರೋ ಕನ್ನಡಿಯ ಪ್ರಭೆಯಂತೆ ಫಳಫಳನೆ ಹೊಳೆಯುತ್ತಿದ್ದಿತು. ॥೩೦॥

ತಸ್ಯಾನನೇಂದುಪರಿಕಲ್ಪಿಕಲಂಕಶಂಕಾ
ರಾಜತ್ಸುಧಾಂಶುಮಿವ ತಾಂ ತಿಲಕಾತ್ತಫಾಲಾಂ।
ಆಲೋಲಮಾರಶರಕೃತ್ತಮಹೋರುವಕ್ಷಾ
ತ್ರ್ಯಕ್ಷಾರ್ಚಕೋಽಪಿ ಸ ಶಶಾಕ ತದಾಕ್ಷಜಾಲಂ ॥೩೦॥

ಸಾಪಿ ಪ್ರಮೋದಮದಭಾರಕಟಾಕ್ಷಸಾರೈ
ರೀಷದ್ವಿಕಾಸಿಮುಖಪಂಕಜಜಾತಹರ್ಷಾ।
ತಂ ಚಾಪಿ ಸುಂದರವರೋತ್ತಮಯೌವನೋಽದ್ಯ
ತ್ತದ್ವೃತ್ತಗಾತ್ರಮಭಿವೀಕ್ಷ್ಯ ಜಗಾಮ ಹರ್ಷಂ ॥೩೧॥

ತಾವುದ್ಯತೋದ್ಧತಸುಮನ್ಮಥಬಾಣಜಾಲ
ವಿದ್ಧಾಂಗಕೌ ಮದನಕೇಳಿಷು ಜಾತಹರ್ಷೌ।
ಕಿಂಚಿದ್ವಿಹೃತ್ಯ ವನಮಧ್ಯನಿಕುಂಜಸೀಮ್ನಿ
ಸೇನಾಭಿಲಗ್ನಹೃದಯೌ ಯುಯುತುಸ್ತದಾನೀಂ ॥೩೩॥

---

ಹಣೆಯಲ್ಲಿ ತಿಲಕಧಾರಣೆಮಾಡಿಕೊಂಡಿರುವ ಅವಳ ಮುಖವು ಕಳಂಕ ಸಹಿತನಾಗಿ ಅಮೃತಕಿರಣನಾಗಿ ವಿರಾಜಿಸುವ ಚಂದ್ರನಿಗೆ ಸಮಾನವಾಗಿಯೇ ವಿರಾಜಿಸುತ್ತಿದ್ದಿತು. ಆಗ ಶಿವಲಿಂಗಾರ್ಚಕನಾದರೂ ಇಂದ್ರಿಯಪರವಶನಾಗಿ ಆ ಸುಂದರನು ಅವಳನ್ನು ನೋಡಿ, ಚಂಚಲವಾದ ಮನ್ಮಥನ ಬಾಣಗಳಿಂದ ಹೊಡೆಯಲ್ಪಟ್ಟವನಾಗಿ, ಇಂದ್ರಿಯನಿಗ್ರಹವನ್ನು ಮಾಡಲಾರದೇ ಅವಳಲ್ಲಿ ಮೋಹಿತನಾದನು. ॥೩೦॥

ಆ ಸುಂದರಿಯೂ ಕೂಡ ಆನಂದಭಾರವನ್ನು ಹೊರಸೂಸುತ್ತಿರುವ ಕಟಾಕ್ಷ ನಿರೀಕ್ಷಣಗಳಿಂದ ಅವನನ್ನು ಆನಂದಗೊಳಿಸುತ್ತಾ ಅರಳಿದ ಕಮಲದಂತಿರುವ ತನ್ನ ಮುಖದಿಂದ ಸಂತೋಷವನ್ನು ಪ್ರಕಟಪಡಿಸುತ್ತಾ, ಉತ್ತಮವಾದ ಯೌವ್ವನ ಮತ್ತು ದಿವ್ಯಶರೀರಸೌಂದರ್ಯಗಳಿಂದ ಶೋಭಿಸುತ್ತಿರುವ ಆ ಸುಂದರನನ್ನು ನೋಡಿ ಅತ್ಯಾನಂದಭರಿತಳಾದಳು. ॥೩೧॥

ಹೀಗೆ ಅವರಿಬ್ಬರೂ ಪರಸ್ಪರ ಕಾಮಾಸಕ್ತರಾಗಿ, ಮನ್ಮಥನ ಬಾಣರಾಶಿ ಗಳಿಂದ ಪೀಡಿತ ದೇಹವುಳ್ಳವರಾಗಿ, ಕಾಮಕೇಳಿಗಳಿಂದ ಸಂತೋಷಪಡೆಯಲು ಆ ಕಾಡಿನ ಮಧ್ಯದಲ್ಲಿರುವ ಲತಾವನದ ದಡದಲ್ಲಿ ಸ್ವೇಚ್ಛೆಯಾಗಿ ಕೊಂಚಕಾಲ

ತಾವಾಗತಾವಭಿಸಮೀಕ್ಷ್ಯ ಮಮಾಂತಿಕೇ ತಂ
ತ್ವತ್ಸನ್ನಿಧಾನರಸಿಕಾಮಥ ತಾಂ ಚ ದೃಷ್ಟ್ವಾ ।
ದೃಷ್ಟ್ವಾ ಸಹರ್ಷಮಧುನಾ ತಮವೋಚಮೇವಂ
ತಂ ಸುಂದರಂ ಮದನಬಾಣಗಣಾಭಿತಪ್ತಂ ॥೩೪॥

॥ ಶ್ರೀ ಈಶ್ವರ ಉವಾಚ ॥

ತ್ವಂ ಸುಂದರಾಸು ಭುವಿ ಭೋಗಪರಂಪರಾಸು
ಕಿಂಚಿದ್ವಿಹೃತ್ಯ ಮಮ ಸದ್ಮಸು ಪಶ್ಯ ಲಿಂಗಂ ।
ಯೋಷಾ ತವೈವ ಭವತಾಂ ಕಮಲೇವ ವಿಷ್ಣೋ
ರೇಷಾ ಸಖೀ ಕಮಲಿನೀ ಸತತಂ ಹಿ ದೇವ್ಯಾಃ ॥೩೫॥

ಇತ್ಥಂ ಮದ್ವದನಾಂಬುಜಾಚ್ಯುತಮಹಾವಿದ್ಯುತ್ಪ್ರಯಾತೋಪಮಂ
ವಾಕ್ಯಂ ಸಂಶ್ರವಣಾಂಬುಜಾಂಚಲಭರೈಃ ಸಂಶುಶ್ರುವೇ ತಾದೃಶಾಂ ।

---

ವಿಹರಿಸಿ, ಅನಂತರ ನನ್ನನ್ನು ಸೇವೆಮಾಡುವ ಮನಸ್ಸುಳ್ಳವರಾಗಿ, ಅಲ್ಲಿಂದ ಹೊರಟುಬಂದರು. ॥೩೩॥

ಆತುರಾತುರನಾಗಿ ಅವರಿಬ್ಬರೂ ಬಂದು ಸುಂದರನು ನನ್ನ ಸಮೀಪದಲ್ಲಿ ನಿಂತನು. ಆ ದಾಸಿಯು ನಿನ್ನ ಸನ್ನಿಧಾನಕ್ಕೆ ಸೇವೆಗಾಗಿ ಬಂದಳು. ಹೀಗೆ ಏನೂ ತಿಳಿಯದವರಂತೆ ಬಂದು ನಿಂತಿರುವ ಅವರಿಬ್ಬರನ್ನೂ ನೋಡಿ ನಾನು ಸಂತೋಷ ದಿಂದ ಮನ್ಮಥಬಾಣಜಾಲಗಳಿಂದ ಪೀಡಿತನಾಗಿರುವ ಆ ಸುಂದರನನ್ನು ಕುರಿತು ಹೀಗೆ ಶಾಪವಿತ್ತೆನು. ॥೩೪॥

ಎಲೈ ಸುಂದರನೇ, ನೀನು ಇಲ್ಲಿ ವಿಶೇಷ ಕಾಮಾಸಕ್ತಿಯನ್ನು ತೋರ್ಪಡಿ ಸಿರುವುದರಿಂದ ಭೂಮಿಯಲ್ಲಿ ವಿಷಯಭೋಗಪರಂಪರೆಗಳನ್ನು ಅನುಭವಿಸುವುದ ಕ್ಕಾಗಿ ಮಾನವನಾಗಿ ಹುಟ್ಟು. ಅಲ್ಲಿಯೂ ನನ್ನ ದೇವಾಲಯಗಳಲ್ಲಿರುವ ಶಿವಲಿಂಗ ದರ್ಶನಮಾಡುತ್ತಾ ಶೈವಧರ್ಮದಲ್ಲಿರು. ಪಾರ್ವತೀದೇವಿಯ ಸಖಿಯಾದ ಕಮಲಿ ನಿಯೂ, ವಿಷ್ಣುವಿಗೆ ಲಕ್ಷ್ಮಿಯಂತೆ ಯಾವಾಗಲೂ ನಿನ್ನ ಪ್ರೇಮಪತ್ನಿಯಾಗಿ ಜನಿಸಲಿ, ಎಂದು ನಾನು ಸಾವಧಾನಮನಸ್ಸಿನಿಂದ ಸುಂದರನಿಗೆ ಹೇಳಿದೆನು. ॥೩೫॥

ಹೀಗೆ ನನ್ನ ಮುಖಕಮಲದಿಂದ ಹೊರಬಿದ್ದ ಸಿಡಿಲಿಗೆ ಸಮಾನವಾದ ಆ ಮಾತನ್ನು ಕೇಳಿದ ಕೂಡಲೇ ಮೇಧಾವಿಯಾದ ಸುಂದರನು ನನಗೆ ವಿನಯ

ಪ್ರಾಣಂಸೀದ್ವಿನಯೇನ ಪಾಹಿ ಮತಿಮಾನ್ನಾಗಸ್ಕರಃ ಸುಂದರ
ಸ್ತುಷ್ಟಾವಾಷ್ಟತನುಂ ಪ್ರಕೃಷ್ಟಹೃದಯೋ ನಿಷ್ಠಾವತಾ ಚೇತಸಾ ॥೩೬॥

॥ ಸುಂದರ ಉವಾಚ ॥

(ಗದ್ಯ)

ನಾಕನಾಥ ವಿನಾಯಕಸ್ತುತ, ಭೇಕಭಕ್ಷಕಹಾರ, ತಕ್ಷಕ
ಕುಕ್ಷಿಸಂಸ್ಥಿತ, ಲೋಕರಕ್ಷಕ, ವೀಕ್ಷಣಕ್ಷತ ಮನ್ಮಥಾಂತಕ
ಪಾಲ, ಮುನಿಸುತ ಜೀವದಾಯಕ, ಹಸ್ತಶಸ್ತವಿರಿಂಚಿಮಸ್ತಕ
ಪಾಹಿ ಮಾಮಖಿಲಾಂತಕಾಂತಕ ದೇವದೇವ ಭವಾಂಬುಧೇಃ ॥೩೭॥

(ಗದ್ಯ)

ಸುಖತಾರಕಾವ ಮದುನ್ಮುಖಪ್ರಭಪಾರ್ಶ್ವಷಣ್ಮುಖ ದುಃಖಭರ್ಜಕ
ಸರ್ಗಸರ್ಜಕ ತರ್ಜಿತಾಸುರಗರ್ಜನೋರ್ಜಿತ ವರ್ಜಿತಾಖಿಲಪಾಪತಾಪ
ನಿವಾರಕಾವ ಮಖೋನ್ಮುಖೋತ್ಸುಕಲೇಖಶಿಕ್ಷಕ ।

---

ದಿಂದ ನಮಸ್ಕಾರಮಾಡಿ ತಾನು ಅಪರಾಧಿಯೆಂದು ತಿಳಿದು ಶ್ರೇಷ್ಠವಾದ ಮನಸ್ಸುಳ್ಳ ಆತನು ಸಮಾಧಾನಚಿತ್ತದಿಂದ ಅಷ್ಟಮೂರ್ತಿಯಾದ ನನ್ನನ್ನು ಹೀಗೆ ಸ್ತೋತ್ರ ಮಾಡಿದನು. ॥೩೬॥

ದೇವೇಂದ್ರ ಮತ್ತು ವಿಷ್ಣು ಇವರಿಂದ ಸ್ತುತಿಸಲ್ಪಟ್ಟವನೂ, ಕಪ್ಪೆಗಳನ್ನು ತಿನ್ನುವ ಸರ್ಪವನ್ನೇ ಹಾರಮಾಡಿಕೊಂಡಿರುವವನೂ, ಎದೆಯಲ್ಲಿ ತಕ್ಷಕನನ್ನು ಧರಿಸಿರುವವನೂ ಆದ ಮಹಾದೇವನೇ, ನೀನು ಜಗದ್ರಕ್ಷಕನು. ದರ್ಶನಮಾತ್ರದಿಂದ ಮನ್ಮಥನನ್ನು ನಾಶಮಾಡಿದವನು, ಯಮನನ್ನು ಕಾಪಾಡಿದವನು, ಮುನಿಕುಮಾರನಾದ ಮಾರ್ಕಂಡೇಯನಿಗೆ ಜೀವದಾನಮಾಡಿದವನು, ತನ್ನ ಕೈಯಿಂದಲೇ ಬ್ರಹ್ಮನ ತಲೆಯನ್ನು ಕತ್ತರಿಸಿದವನು, ಎಲ್ಲರನ್ನೂ ಶಿಕ್ಷಿಸುವ ಯಮನಿಗೆ ಶಿಕ್ಷಕನು. ಇಂತಹ ಮಹಾನುಭಾವನೇ, ನನ್ನನ್ನು ಈ ಸಂಸಾರಸಮುದ್ರದಿಂದ ಕಾಪಾಡು. ॥೩೭॥

ಸರ್ವರಿಗೂ ಸುಖಪ್ರದನೆನಿಸಿರುವ ಸ್ವಾಮಿಯೇ, ನನ್ನನ್ನು ಕಾಪಾಡು. ನನ್ನ ಮೇಲೆ ಅನುಗ್ರಹಮಾಡಿ ನಿನ್ನ ದಿವ್ಯಪ್ರಭೆಯನ್ನು ಬೀರು. ಷಣ್ಮುಖಸ್ವಾಮಿಯನ್ನು ಪಾರ್ಶ್ವದಲ್ಲಿ ಹೊಂದಿರುವವನೇ, ನೀನು ಭಕ್ತರ ದುಃಖವನ್ನು ಹೋಗಲಾ

ಗಾಂಗತುಂಗಜಟೋತ್ತಮಾಂಗಸುಸಂಗಬಾಲಕುರಂಗಫಣಿಧರ
ಲಿಂಗಸಂಗತಭಸ್ಮಧೂಸರಿತಾಂಗಾಹಸ್ಕರಾರುಣಿತೇಕ್ಷಣ
ಕ್ಷತಪಾಪಘಸ್ಮರ ತಸ್ಕರೋತ್ತಮ ಘನಪ್ರಭೋತ್ತಮಕಂಧರೇಶ್ವರ
ಭೂರಥಸ್ಥಿತ ಚಂದ್ರಖಂಡ ಶಿರೋಮಣೇ ॥೩೮॥

(ಗದ್ಯ)

ಗಜಚರ್ಮವರ್ಮ ಚರಾಚರಸ್ಥಿತ ವಿಷ್ಣುಚಕ್ರ
ವಿಧಾಯಕ ಪಂಚವಕ್ತ್ರ ಚತುರ್ಮುಖಸ್ತುತ ।
ಛಂದಸಾಂ ಗಣದಾಯಕಾಚ್ಛಾದಿತಾಖಿಲ ವಿಶ್ವಜನ್ಮ
ಜಗತ್ಸ್ಥಿತಿಪ್ರವಿನಾಶನಾವನ ಜಂಜಪೂಕವರಪ್ರದಾಯಕ ॥೩೯॥

---

ಡಿಸುವೆ. ಸೃಷ್ಟಿಯನ್ನು ರಚಿಸುವೆ. ರಾಕ್ಷಸರ ಗರ್ಜನೆಯಿಂದ ಕುಪಿತನಾಗಿ ಅವರನ್ನು ಕ್ಷಣಕಾಲದಲ್ಲಿ ಭಯಪಡಿಸಿದೆ. ಸಕಲ ಪಾಪರಹಿತನೇ, ದುಃಖನಿವಾರಕನೇ, ನನ್ನನ್ನು ಸಲಹು. ಯಾಗಾಸಕ್ತರಲ್ಲಿ ಆಸಕ್ತಿಯುಳ್ಳವನೇ, ದೇವತೆಗಳನ್ನು ಶಿಕ್ಷಿಸುವವನೇ, ಗಂಗಾನದಿಯನ್ನು ತನ್ನ ಉನ್ನತವಾದ ಜಡೆಯಲ್ಲಿ ಧರಿಸಿರುವ ತಲೆಯುಳ್ಳವನೇ, ಬಾಲಚಂದ್ರನನ್ನು ತಲೆಯಲ್ಲಿ ಧರಿಸಿದವನೇ, ಸರ್ಪವನ್ನು ಅಲಂಕರಿಸಿಕೊಂಡಿರುವವನೇ, ಶಿವಲಿಂಗದಲ್ಲಿ ಸಂಬಂಧಿಸಿದವನೇ, ಭಸ್ಮಧಾರಣೆಯಿಂದ ಶುಭ್ರವಾಗಿ ತೋರಿಬರುವ ಅವಯವವುಳ್ಳವನೇ, ಹಗಲನ್ನುಂಟುಮಾಡುವವನೇ, ಕೆಂಪು ಕಣ್ಣುಳ್ಳವನೇ, ಪಾಪರಹಿತನೇ, ಸೂರ್ಯಚಂದ್ರಾಗ್ನಿಗಳನ್ನೇ ನೇತ್ರಗಳನ್ನಾಗಿ ಮಾಡಿಕೊಂಡಿರುವವನೇ, ಕಳ್ಳರಲ್ಲಿ ಅಗ್ರೇಸರನೇ, (ಸರ್ವಾಂತರ್ಯಾಮಿಯಾದುದರಿಂದ) ಕಾಲಕೂಟವಿಷಭಕ್ಷಣೆಯಿಂದ ಮೇಘದ ಕಾಂತಿಯಂತೆ ಕಪ್ಪಾದ ಕೊರಳುಳ್ಳವನೇ, ಐಶ್ವರ್ಯಶಾಲಿಯೇ, ಭೂಮಿಯೆಂಬ ರಥದಲ್ಲಿರುವವನೇ, ಚಂದ್ರಖಂಡವನ್ನು ತಲೆಯ ರತ್ನವನ್ನಾಗಿ ಮಾಡಿಕೊಂಡಿರುವವನೇ, ನನ್ನನ್ನು ರಕ್ಷಿಸು. ॥೩೮॥

ಆನೆಯ ಚರ್ಮವನ್ನು ಕವಚವನ್ನಾಗಿ ಧರಿಸಿರುವವನೇ, ಸ್ಥಾವರಜಂಗಮಾತ್ಮಕವಾದ ಸಕಲ ಪ್ರಾಣಿಗಳಲ್ಲಿಯೂ ನೆಲಸಿರುವವನೇ, ನೀನು ವಿಷ್ಣುವಿಗೆ ಚಕ್ರವನ್ನಿತ್ತವನು. ಐದು ಮುಖಗಳುಳ್ಳವನು. ಬ್ರಹ್ಮನಿಂದ ಸ್ತೋತ್ರಮಾಡಲ್ಪಟ್ಟವನು. ವೇದಗಳ ರಾಶಿಯನ್ನು ಬ್ರಹ್ಮನಿಗೆ ಕೊಟ್ಟವನು. ಜಗತ್ತಿನಲ್ಲೆಲ್ಲಾ ಆವರಿಸಿರುವವನು.

(ಗದ್ಯ)

**ಝುಣಜ್ಝುಣದ್ರವನೂಪುರೋತ್ತಮಪಾದಪಂಕಜ, ಟಂಕಕರಹರ, ದೇವತಟನೀಜೂಟ, ಜಠರೀಲೋಕ, ಲುಂಠಿತಪಾಪವೃಂದ, ವಿಕುಂಠಪೂಜಿತಪಾದ, ಮೃಡ, ಹರ, ಡಮರುಗಧ್ವನಿನಾದಿತ ಭುವನಡಂಬರ, ಕುಂಡಲೀಶ್ವರ, ಕುಂಡಲಪ್ರಿಯ, ಚಂಡಭಾನುಸುತಾರ್ತಿದಾಯಕ, ಮಂಡಲೀಕೃತಪರ್ವತಾಧಿಪ, ಚಂಡದಂಡಿತವೈರಿಪುರವರ, ಖಂಡನೋದ್ಧತ ಕಾಂಡ, ಗುರುತರ ಮುಂಡಷಂಡ ವಿರಾಜಿತೇಶ್ವರ, ಖಾಂಡವಾಶನಲೋಚನ** ॥೪೦॥

---

ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಗಳನ್ನೆಸಗುವವನು. ಜಂಜಪೂಕನೆಂಬ ಭಕ್ತನಿಗೆ ದಿವ್ಯವರವನ್ನಿತ್ತವನು. ಇಂತಹ ಮಹಾನುಭಾವನಾದ ನೀನು ನನ್ನನ್ನು ಕಾಪಾಡು. ॥೩೯॥

ಮಹಾದೇವನೇ, ನೀನು ಝುಣ, ಝುಣವೆಂದು ಧ್ವನಿಮಾಡುವ ಉತ್ತಮವಾದ ಕಾಲ್ಗಡಗಗಳಿಂದ ಕೂಡಿದ ಪಾದಕಮಲಗಳುಳ್ಳವನು, ಟಂಕಾಯುಧವನ್ನು (ಉಳಿಯನ್ನು)ಕೈಯ್ಯಲ್ಲಿ ಹಿಡಿದಿರುವವನು, ಭಕ್ತರ ಪಾಪನಾಶಕನು, ದೇವಗಂಗೆಯನ್ನು ತಲೆಯ ಜಡೆಗಳಲ್ಲಿ ಧರಿಸಿರುವವನು, ಜಠರದಲ್ಲಿ ಸಕಲ ಲೋಕಗಳನ್ನೂ ಹೊತ್ತಿರುವವನು, ಸಕಲ ಪಾಪರಾಶಿಗಳನ್ನೂ ನಾಶಮಾಡುವವನು, ವಿಷ್ಣುವಿನಿಂದ ಪೂಜಿಸಲ್ಪಟ್ಟ ಪಾದವುಳ್ಳವನು, ಭಕ್ತರಿಗೆ ಸುಖವನ್ನುಂಟುಮಾಡುವವನು, ಪ್ರಳಯ ಕಾಲದಲ್ಲಿ ಸಮಸ್ತ ಲೋಕವನ್ನೂ ಸಂಹರಿಸುವವನು, ಡಮರುಗದ ಧ್ವನಿಯಿಂದ ಲೋಕವನ್ನೆಲ್ಲಾ ನಾದಮಯವನ್ನಾಗಿ ಮಾಡಿರುವವನು, ಕುಂಡಲೀಶ್ವರನು, ಕುಂಡಲಗಳಲ್ಲಿ ಪ್ರೀತಿಯುಳ್ಳವನು, ಸೂರ್ಯಕುಮಾರನಾದ ಯಮನಿಗೆ ಮಾರ್ಕಂಡೇಯನನ್ನು ಕಾಪಾಡುವುದಕ್ಕೋಸ್ಕರ ಹಿಂಸೆಕೊಟ್ಟವನು, ಮೇರುಪರ್ವತವನ್ನು ಮಂಡಲಾಕಾರವಾದ ಬಿಲ್ಲನ್ನು ಮಾಡಿಕೊಂಡು ಪ್ರಚಂಡರಾದ ತ್ರಿಪುರಾಸುರರ ಪಟ್ಟಣವನ್ನು ಧ್ವಂಸಮಾಡಿದವನು, ಬಾಳೆಯ ದಿಂಡಿನಂತೆ ರಾಕ್ಷಸರನ್ನು ಕತ್ತರಿಸುವುದರಲ್ಲಿ ಲೀಲಾಜಾಲವಾಗಿ ತೊಡಗಿ ಅವರ ಮುಂಡಗಳ ಗುಂಪಿನಿಂದ ವಿರಾಜಿಸಿದವನು, ಖಾಂಡವವನವನ್ನು ಭಕ್ಷಿಸಿದ ಅಗ್ನಿಯನ್ನೇ ಮೂರನೆಯ ಕಣ್ಣನ್ನಾಗಿ ಹೊಂದಿದವನು. ಇಂತಹ ಮಹಿಮಾಶಾಲಿಯಾದ ಈಶ್ವರನೇ, ನನ್ನನ್ನು ಕಾಪಾಡು. ॥೪೦॥

(ಗದ್ಯ)

ಪುಂಡರೀಕತ್ವಚಾ ವಿಭೂಷಿತ, ವೇತಂಡವರಶುಂಡ ಗುರುನಿಭರಮ್ಯ ಭುಜದಂಡಧಾರಿತ ವರಕೋದಂಡ, ಪಂಡಿತೋತ್ತಮ, ಭಂಡಜನಹರ, ಕರ್ಮಕಾಂಡನಿಷೂದನ, ಭಕ್ತಿದೃಢತರ ಮುಕ್ತಿದಾಯಕ, ಗೂಢಪಾದ್ವರಹಾರ, ಮೂಢಜನತಾ ಗಾಢ ಹೃತ್ತಮುಭೇದಕಾರ್ಕ, ವಿಭೂಷಣೀಕೃತಪನ್ನಗೇಶ್ವರ, ಸದ್ರತ್ನ ಗೋತ್ರೋತ್ತಮವಾಸ, ಗುಣಗಣನಂದಿತಾನನ, ಕ್ಷ್ಮೋಭ್ಯಮಾನ ಭವಸ್ಥಿತಾವನ, ತಾಮ್ರಸಂಸ್ಥಿತ, ತಸ್ಕರಾಧಿಪ, ದೀನಸದಯ ಸನಾಥನಾಥಿತ, ಮನ್ಮಥಾಂತಕ, ದಂದಶೂಕಫಣಾಮಣಿ ದ್ಯುತಿರಂಜಿತಾಂಗ, ದರಿದ್ರನಾಶಕ, ದೇವದೇವ, ದಯಾನಿಧೇ ॥೪೧॥

---

ಆನೆಯ ಚರ್ಮದಿಂದ ಅಲಂಕೃತನೂ, ಶ್ರೇಷ್ಠವಾದ ಆನೆಯ ದೊಡ್ಡ ಸೊಂಡಲಿನಂತಿರುವ ಭುಜದಂಡದಲ್ಲಿ ಉತ್ತಮವಾದ ಕೋದಂಡವನ್ನು (ಬಿಲ್ಲನ್ನು) ಹಿಡಿದಿರುವವನೂ, ಪಂಡಿತಶ್ರೇಷ್ಠನೂ ಆದ ಮಹಾಮಹಿಮನೇ, ನೀನು ಭಂಡರಾದ ಜನಗಳನ್ನು ನಾಶಮಾಡುವೆ. ಕರ್ಮಕಾಂಡವನ್ನು ನಾಶಪಡಿಸುವೆ. ದೃಢವಾಗಿ ತನ್ನಲ್ಲಿಟ್ಟಿರುವ ಭಕ್ತಿಯಿಂದ ಭಕ್ತರಿಗೆ ಶಾಶ್ವತವಾದ ಮುಕ್ತಿಯನ್ನು ಕೊಡುವೆ. ನೀನು ಸರ್ಪಹಾರವುಳ್ಳವನು, ದಡ್ಡಜನರ ಅಗಾಧವಾದ ಹೃದಯಾಂಧಕಾರವನ್ನು ನೀಗಲು ಸೂರ್ಯನಂತಿರುವವನು, ಆದಿಶೇಷನನ್ನೇ ಹಾರವನ್ನಾಗಿಮಾಡಿಕೊಂಡಿರುವವನು, ರತ್ನಪರ್ವತದಲ್ಲಿ ವಾಸಮಾಡುವವನು, ಭಕ್ತರ ಗುಣಸಮೂಹಗಳನ್ನು ನೋಡಿ ಆನಂದಪಡುವ ಮುಖವುಳ್ಳವನು, ಈ ಸಂಸಾರದಲ್ಲಿ ಬಿದ್ದು ಭಯಪಡುತ್ತಿರುವ ಜನರನ್ನು ಕಾಪಾಡುವವನು, ತಾಮ್ರವರ್ಣ(ಕೆಂಪು)ದಲ್ಲಿ ಅಡಗಿರುವವನು. ಕಳ್ಳರಿಗೆ ಅಧಿಪತಿಯಾದ ಮೂರ್ತಿಯುಳ್ಳವನು, ದೀನರೂ ಅನಾಥರೂ ಮುಂತಾದವರಿಗೆ ದಯೆಯಿಂದ ಆಶ್ರಯವಿತ್ತು ಕಾಪಾಡುವವನು, ಮನ್ಮಥನನ್ನು ಭಸ್ಮಮಾಡಿದವನು, ಆದಿಶೇಷನ ಹೆಡೆಯ ರತ್ನಗಳ ಕಾಂತಿಯಿಂದ ಶೋಭಿಸುತ್ತಿರುವ ಅವಯವವುಳ್ಳವನು, ಭಕ್ತರ ಬಡತನವನ್ನು ಹೋಗಲಾಡಿಸುವವನು, ದೇವಾದಿದೇವನೂ, ದಯಾಸಮುದ್ರನೂ ಆದ ಸ್ವಾಮಿಯೇ, ನನ್ನನ್ನು ಕಾಪಾಡು. ॥೪೧॥

(ಗದ್ಯ)

ಮಾನುವಾದ್ಯ ಧನಾಧಿಪಪ್ರಿಯ, ಧೇನುಪುತ್ರರಥ ಪ್ರಿಯಾಧ್ವರ ಶಿಕ್ಷಕವನನಾಯಕಾವ ವಿನಾಯಕಪ್ರಿಯವಾಹ ಪೂಜಿತಾಂಬುಜಪಾದಾನತಾಖಿಲಮುಕ್ತಿದಾಯಕ ಪದ್ಮಪೂಜಿತ ಪಾಪಭಯಹರ ಪನ್ನಗಪ್ರಿಯ ಪತ್ರರಥವರಪೂಜ್ಯಮಾನ ಪದಾಂಬುಜ ಪ್ರಾಣಿತಾಖಿಲ ವೇದಜಾಲ ಫಣೀಶ್ವರೋ ತ್ತಮಕುಂಡಲ ಬಂಧಮೋಚನ ಬಂಧುರಾಲಕಬಿಲ್ವಪೂಜಿತ ಬಿಲ್ವನೇತ್ರ ಬಾಣಲಿಂಗ ವಿಹಾರಶಂಕರ ॥೪೨॥

(ಗದ್ಯ)

ಭದ್ರದಾಯಕ ಭಸ್ಮಭೂಷಿತ ಭಕ್ತಿದಾಯಕ ಭೀಮ ಭೂಮ ಮಹೇಶ್ವರೇಶ್ವರ ಮನ್ಮಥಾಂತಕ ವಿಶ್ವಸೃಗ್ವರಹಸ್ತಶಸ್ತ್ರಕ

---

ಮಹೇಶ್ವರನೇ ನೀನು, ಕುಬೇರನ ಸ್ನೇಹಿತನು, ಕಾಮಧೇನುವಿನ ಮಗನಾದ ವೃಷಭನೆಂಬ ರಥದಲ್ಲಿ ಸಂಚಾರಮಾಡಲು ಪ್ರೀತಿಯುಳ್ಳವನು (ವೃಷಭವಾಹನನು), ದಕ್ಷಬ್ರಹ್ಮನ ಯಾಗವನ್ನು ಧ್ವಂಸಮಾಡಿದವನು, ಕಾಡುಗಳಿಗೂ (ನೀರುಗಳಿಗೂ) ಒಡೆಯನು, ವಿಷ್ಣುವಿನಿಂದ (ಗರುಡವಾಹನನಿಂದ) ಪೂಜಿಸಲ್ಪಟ್ಟ ಕಮಲಸಮಾನ ವಾದ ಪಾದವುಳ್ಳವನು, ವಿನಯದಿಂದ ನಮಸ್ಕಾರಮಾಡುವವರೆಲ್ಲರಿಗೂ ಮುಕ್ತಿ ಯನ್ನು ಕೊಡುವವನು, ತಾವರೆಹೂಗಳಿಂದ ಪೂಜಿಸಲ್ಪಡುವವನು, ಪಾಪಭೀತಿ ಯನ್ನು ಹೋಗಲಾಡಿಸುವವನು, ಸರ್ಪಗಳಲ್ಲಿ ಪ್ರೀತಿಯುಳ್ಳವನು, ಗರುಡನಿಂದ ಪೂಜಿಸಲ್ಪಡುವ ಪಾದಕಮಲವುಳ್ಳವನು, ವೇದರಾಶಿಗಳನ್ನೆಲ್ಲ ತನ್ನ ಪ್ರಾಣವಾಯು ವನ್ನಾಗಿ ಮಾಡಿಕೊಂಡಿರುವವನು, ಸರ್ಪರಾಜನನ್ನೇ ಉತ್ತಮವಾದ ಕುಂಡಲ ವನ್ನಾಗಿ ಧರಿಸಿರುವವನು, ಭವಬಂಧನವನ್ನು ಹೋಗಲಾಡಿಸುವವನು, ಸುಂದರ ವಾದ ಮುಂಗುರುಳುಳ್ಳವನು, ಬಿಲ್ವದಳಗಳಿಂದ ಪೂಜಿಸಲ್ಪಡುವವನು, ಬಿಲ್ವಗಳೆಂಬ ನೇತ್ರಗಳು (ಕಣ್ಣುಗಳು)ಳ್ಳವನು, ಬಾಣಾಕೃತಿಯುಳ್ಳ ಲಿಂಗಗಳಲ್ಲಿ ವಿಹಾರಮಾಡು ವವನು, ಮಂಗಳಕರನು, ಹೀಗೆ ಮಹಾಮಹಿಮನೆನಿಸಿದ ದೇವದೇವನೇ, ಈಗ ನನ್ನನ್ನು ಕಾಪಾಡು. ॥೪೨॥

ಮಹೇಶ್ವರನೇ, ನೀನು ಮಂಗಳಕರನೂ, ವಿಭೂತಿಯಿಂದಲಂಕೃತನೂ, ಭಕ್ತಿಯನ್ನುಂಟುಮಾಡುವವನೂ, ಶತ್ರುಭಯಂಕರನೂ, ಎಲ್ಲರಿಗೂ ಆಶ್ರಯನೂ,

ಮಸ್ತಕ, ಯಕ್ಷಪಕ್ಷನಿವರ್ಜಿತೇಕ್ಷಣ ಯಕ್ಷ್ಮರೋಗವಿನಾಶಕ
ರಾಜರಾಜಕಲಾವಿರಾಜಿತಮಸ್ತಕೆ ಸರ್ವದೇವಲಲಾಮಸೋಮ
ಭವಹರ ಭೀಮಲೋಚನ ಲಲಿತೋತ್ತಮಹಸ್ತಶೂಲಸಲೀಲ
ಕೀಲಿತ ವಿಶ್ವಕ, ವಾಮನಾಂಗವಿಭೂಷಣೀಕೃತ ವಾಮದೇವ
ವಿಶೋಷಕ ಶಾಶ್ವತಾವ್ಯಯ ಶಂಕರೇಶ ನಿಶಾಧಿಪೋತ್ತಮ
ಶೇಖರ ॥೪೩॥

(ಗದ್ಯ)

ಷಣ್ಮುಖಸ್ತುತಷಡ್ಜಮಧ್ಯಗ ಪಾಪಷಂಡವಿಶೋಷಣ
ಸರ್ವಮುನಿಗಣ ಹೃತ್ಸರೋಜ ವಿಹಾರಭೃಂಗಸರೋತ್ತಮ

---

ಪೂರ್ಣೈಶ್ವರ್ಯಸಂಪನ್ನನೂ, ಆಗಿರುವೆ. ಮಹೇಶನೇ, ನೀನೇ ಸಮಸ್ತ ಜಗನ್ನಿಯಾಮಕನು, ಮನ್ಮಥನನ್ನು ನಿಗ್ರಹಿಸಿದವನು, ಬ್ರಹ್ಮನ ಶ್ರೇಷ್ಠವಾದ ಐದನೆಯ ತಲೆಯನ್ನು ತನ್ನ ಕೈಯಿಂದಲೇ ಕತ್ತರಿಸಿದವನು, ಯಕ್ಷರಾಜನಾದ ಕುಬೇರನಿಗೆ ಸಖನಾದರೂ ಅವನ ಪಕ್ಷವನ್ನು ಅಷ್ಟಾಗಿ ಅನುಸರಿಸಿದವನಲ್ಲ. (ಅಂದರೆ ದ್ರವ್ಯಗಳಿಗೆ ಅಧಿಪತಿಯಾದ ಕುಬೇರನ ಸ್ನೇಹಿತನಾಗಿದ್ದರೂ ಎಲ್ಲವನ್ನೂ ತ್ಯಜಿಸಿದ ದಿಗಂಬರನು ಎಂದರ್ಥ) ಕ್ಷಯರೋಗವನ್ನು ನಾಶಮಾಡುವವನು, ಚಂದ್ರಕಲೆಗಳಿಂದ ವಿರಾಜಿಸುತ್ತಿರುವ ತಲೆಯುಳ್ಳವನು, ಸಕಲ ದೇವತೆಗಳಿಗೂ ಶ್ರೇಷ್ಠನು, ಚಂದ್ರಶೇಖರನು, ಸಂಸಾರಬಂಧನವನ್ನು ನಾಶಮಾಡುವವನು, ಭಯಂಕರವಾದ ಮೂರನೆಯ ಹಣೆಗಣ್ಣುಳ್ಳವನು, ಸುಂದರವೂ ಉತ್ತಮವೂ ಆದ ಕೈಯಲ್ಲಿ ಶೂಲಾಯುಧಧಾರಣೆ ಮಾಡಿರುವವನು, ಲೀಲೆಯಿಂದ ಸಕಲ ಪ್ರಪಂಚವನ್ನೂ ಧ್ವಂಸಮಾಡಿಬಿಡುವ ಶಕ್ತಿಯುಳ್ಳವನು, ತನ್ನ ಎಡಭಾಗದಲ್ಲಿ ಅಲಂಕರಿಸಲ್ಪಡುವ ಸುಂದರಿಯಾದ ಪಾರ್ವತಿಯನ್ನುಳ್ಳವನು, (ಅರ್ಧನಾರೀಶ್ವರನು) ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ಒಣಗಿಸಿಬಿಡುವವನು, ನಾಶರಹಿತನು, ನಿತ್ಯನು, ಸುಖಕರನು, ಜಗನ್ನಿಯಾಮಕನು, ಚಂದ್ರನಿಂದ ಶೋಭಿಸುವ ಉತ್ತಮ ಶಿರಸ್ಸುಳ್ಳವನು. ಇಷ್ಟು ಗುಣಗಣ ವಿಶಿಷ್ಟನಾದ ಸ್ವಾಮಿಯೇ, ನನ್ನನ್ನು ಕಾಪಾಡು. ॥೪೩॥

ಕುಮಾರಸ್ವಾಮಿಯಿಂದ ಸ್ತೋತ್ರಮಾಡಲ್ಪಟ್ಟವನು, ಷಡ್ಜಸ್ವರದ ಮಧ್ಯದಲ್ಲಿರುವವನು, ಪಾಪರಾಶಿಗಳನ್ನು ಒಣಗಿಸುವವನು, ಸಕಲ ಮುನಿಗಳ ಗುಂಪಿನ ಹೃದಯಕಮಲದಲ್ಲಿ ವಿಹರಿಸುವುದರಲ್ಲಿ ದುಂಬಿಗೆ ಸಮಾನನು, ಶ್ರೇಷ್ಠರೆನಿಸಿದ

ಸಾಮಜಪ್ರಿಯ ಕೃತ್ತಿಧಾರಣ ಸಾಮಸಂಸ್ತುತ ದೇವ ಭವ
ಹರಿಶರಭೂತ ವಿಷೋಲ್ಬಣೇಕೃತ ಸತ್ಫಣೀಗಣಶೋಭಿತ
ಹಾವಭಾವವಿಲಾಸವೈಭವ ಹಾರಿತಾಖಿಲವಿಷ್ಟಪ ಕ್ಷತ್ರಿಯಾಂತರ
ರಾಮಪೂಜಿತ ದಕ್ಷಯಜ್ಞವಿನಾಶನ ॥೪೪॥

ಲೋಕಶಿಕ್ಷಕ ಭಿಕ್ಷಿತಾಖಿಲಮೌನಿಪಕ್ಷಗತ್ರ್ಯಕ್ಷ ಜಗದ
ಧ್ಯಕ್ಷ ಮಾಮವ ಪಾಹಿ ಮಾಂ ಪಾಹಿಮಾಮಖಿಲಾರ್ತಿನಾಶನ
ಹರಮಹೇಶ್ವರ ಶಂಕರ ಕಿಂಕರಸ್ತವ ಸಂಕರೋಽಪಿ ಭವೇದ್ಧರಃ
ಕಿಲ ತೇಕ್ಷಣಾತ್ ॥೪೫॥

---

ದೇವತೆಗಳೆಲ್ಲರಲ್ಲಿಯೂ ಉತ್ತಮನೆನಿಸಿದವನು, ಆದ ಪರಮೇಶ್ವರನೇ ನೀನು ಸಾಮವೇದದಲ್ಲಿ ವಿಶೇಷ ಪ್ರೀತಿಯುಳ್ಳವನು, ಗಜಚರ್ಮವನ್ನು ಧರಿಸಿರುವವನು, ಸಾಮಗಾನದಿಂದ ಸ್ತೋತ್ರಮಾಡಲ್ಪಟ್ಟವನು, ಕ್ರೀಡಾದಿಗುಣಸಂಪನ್ನನು, ಸಕಲ ಜಗದುತ್ಪತ್ತಿಗೂ ಕಾರಣಭೂತನಾದವನು, ವಿಷ್ಣುವನ್ನೇ ಬಾಣವನ್ನಾಗಿ ಮಾಡಿಕೊಂಡಿದ್ದವನು, ವಿಷದಿಂದ ಉಲ್ಬಣವಾಗಿ ತೋರುವ ಶ್ರೇಷ್ಠವಾದ ಹೆಡೆಗಳುಳ್ಳ ಆದಿಶೇಷನಿಂದ ಶೋಭಿಸುತ್ತಿರುವವನು, ತನ್ನ ಹಾವ, ಭಾವ, ವಿಲಾಸಗಳ ವೈಭವದಿಂದ ಸಕಲ ಪ್ರಪಂಚವನ್ನೂ ರಂಜನೆಗೊಳಿಸುವವನು, ಪರಶುರಾಮನಿಂದ ಪೂಜಿಸಲ್ಪಟ್ಟವನು, ದಕ್ಷಬ್ರಹ್ಮನ ಯಾಗವನ್ನು ನಾಶಮಾಡಿದವನು, ಇಂತಹ ನೀನು ನನ್ನನ್ನು ಕಾಪಾಡು. ॥೪೪॥

ದುಷ್ಟಜನರನ್ನು ಶಿಕ್ಷಿಸುವವನಾಗಿಯೂ, ಬ್ರಹ್ಮಕಪಾಲವನ್ನು ಹಿಡಿದು ಎಲ್ಲಾ ಕಡೆಯಲ್ಲಿ ಭಿಕ್ಷೆಬೇಡುವವನಾಗಿಯೂ, ಯಾವಾಗಲೂ ಮುನಿಗಳ ಪಕ್ಷವನ್ನಾಶ್ರಯಿಸಿರುವವನಾಗಿಯೂ ಇರುವ ಮಹಾದೇವನೇ, ನೀನು ಮೂರುಕಣ್ಣುಗಳಿಂದ ವಿರಾಜಿಸುತ್ತಿರುವೆ. ನೀನು ಸಕಲ ಜಗತ್ತಿಗೂ ಅಧ್ಯಕ್ಷನು, ನನ್ನನ್ನು ಕಾಪಾಡು ; ಕಾಪಾಡು. ಸಕಲ ಜನಗಳ ದುಃಖವನ್ನೂ ನಾಶಮಾಡುವವನೇ, ಶಿವ, ಮಹೇಶ್ವರ, ಶಂಕರ ಎಂಬ ಪ್ರಖ್ಯಾತ ನಾಮಗಳಿಂದ ಸ್ತುತಿಸಲ್ಪಡುವವನೇ, ನಿನ್ನ ಸೇವಕನು ಸಂಕರ ಜಾತಿಯವನಾದರೂ ನಿನ್ನ ದರ್ಶನಮಾತ್ರದಿಂದಲೇ ನಿನ್ನ ಸಾರೂಪ್ಯವನ್ನು ಕ್ಷಣಕಾಲದಲ್ಲಿ ಹೊಂದುವವನಲ್ಲವೆ! ದೇವ, ನನ್ನನ್ನು ಕಾಪಾಡು ; ಕಾಪಾಡು.॥೪೫॥

ಕ್ಷಮ್ಯತಾಮಖಿಲಾರ್ತಿನಾಶನ ಮತ್ಕೃತೌ ಸಹಮಾನತಾ
ತೇ ಶ್ರುತಾವಪಿ ವಿಶ್ರುತೋ ಪ್ರಣಮಾಮಿ ದೇವ ಮಹೇಶ್ವರ ।
ವೀಕ್ಷಣೇನ ಮಹೋಕ್ಷವಾಹ ಬುಧಪ್ರಿಯಃ ಖಲು ತೇ ತರಾಂ
ನೇತರೋ ಹಿ ಭವೋದ್ಭವ ತೇ ಪದಾಂಬುಜ ಪೂಜಕ
ಸ್ತ್ವತ್ಸ್ತುತೌ ಪರಮೂಕಕೋಽಪಿ ಭವೇದ್ವರೋಽಥ ಬೃಹಸ್ಪತಿಃ॥೪೬॥

ರಕ್ಷ ಮಾಂ ಏಪ ತ್ರ್ಯಕ್ಷ ರಕ್ಷಕ ಪಕ್ಷಪಾತದೃಶಾ ತವ
ಪಾಹಿ ಮಾಮಪರಾಧಿನಂ ಭವ ಮೂಢದಾರ್ಢ್ಯಪರಾಯಣಂ ।
ಯಾತಯಾಪ್ಯಧಿವಕ್ತ್ರತಾ ಶಿವ ಪಾಹಿ ಮಾಂ ಪರಮೇಶ್ವರ
ವಾಙ್ಮನೋವಿಷಯಾ ನ ತೇ ಸ್ತುತಿರೀದೃಶೀ ಶ್ರುತಿಮೌಲಿಜೈಃ ॥೪೭॥

ಭಕ್ತಿತಃ ಶಶಿಶೇಖರಾವ ಮಹೇಶ್ವರೇಶ್ವರ ಪಾಹಿ ಮಾಂ ॥೪೮॥

---

ಎಲ್ಲರ ದುಃಖವನ್ನೂ ನಾಶಮಾಡುವ ಸ್ವಾಮಿಯೇ, ನನ್ನ ತಪ್ಪನ್ನು ಕ್ಷಮಿಸು. ದೇವದೇವನೇ, ವೇದಗಳಲ್ಲಿ ಮಹೇಶ್ವರನಾದ ನಿನಗೆ ಭಕ್ತರ ಅಪರಾಧ ಗಳನ್ನೆಲ್ಲಾ ಕ್ಷಮಿಸುವ ಸಾಮರ್ಥ್ಯವಿರುವುದೆಂದು ಪ್ರಸಿದ್ಧವಾಗಿದೆ. ಸ್ವಾಮಿ, ನಿನಗೆ ನಮಸ್ಕಾರ ಮಾಡುತ್ತೇನೆ. ವೃಷಭವಾಹನನೂ ಪಂಡಿತಪ್ರಿಯನೂ ಆದ ನೀನು ಕೃಪಾದೃಷ್ಟಿಯನ್ನು ನನ್ನಲ್ಲಿ ಬೀರು. ಸ್ವಾಮಿಯೇ, ನಿನ್ನ ಪಾದಕಮಲಪೂಜಕನು ನಿನ್ನವನೇ ಅಲ್ಲವೇ; ಜಗದ್ರಕ್ಷಕನೇ, ನಿನ್ನನ್ನು ಸ್ತೋತ್ರಮಾಡುವವನು ಹುಟ್ಟು ಮೂಗನೇ ಆಗಿದ್ದರೂ ಅವನು ಶ್ರೇಷ್ಠನಾದ ಬೃಹಸ್ಪತಿಯೇ ಆಗಲಾರನೇ! ||೪೬||

ತ್ರಿಲೋಚನನೂ ಜಗದ್ರಕ್ಷಕನೂ, ಆದ ಪರಶಿವನೇ, ವಿಶ್ವಾಸಪೂರ್ವಕವಾದ ದೃಷ್ಟಿಯಿಂದ ಈ ನನ್ನನ್ನು ಕಾಪಾಡು. ತಪ್ಪುಮಾಡಿದವನೂ, ಈ ಸಂಸಾರಬಂಧನ ದಲ್ಲಿ ಮೂಢನಾಗಿ ಸಿಕ್ಕಿಬಿದ್ದಿರುವವನೂ ಆದ ನನ್ನನ್ನು ರಕ್ಷಿಸು. ಪರಮೇಶ್ವರನೇ, ಜಗನ್ಮಂಗಳಕರನೇ, ನಿನಗೆ ಹೇಳಲೂ ಸಂಕೋಚವಾಗಿ ಕಳೆದುಹೋದ ನನ್ನ ದುಶ್ಚೇಷ್ಟಿತೆಯನ್ನು ಕ್ಷಮಿಸಿ ಕಾಪಾಡು. ದೇವ, ಈ ರೀತಿ ವೇದಾಂತವಾಕ್ಯಗಳ ಅರ್ಥ ದಿಂದ(ಉಪನಿಷತ್ತಿನಿಂದುಂಟಾದ) ಈ ನಾನು ಮಾಡಿರುವ ನಿನ್ನ ಸ್ತೋತ್ರವು ನನ್ನ ವಾಙ್ಮನಸ್ಸುಗಳಿಗೆ ಗೋಚರವಾಗತಕ್ಕುದಲ್ಲ. ಎಲ್ಲವೂ ನಿನ್ನ ಮಹಿಮೆಯಿಂದಲೇ ಉಂಟಾಗಿದೆ. ಎಲೈ ಚಂದ್ರಶೇಖರನಾದ ಮಹೇಶ್ವರನೇ, ಭಕ್ತಿಪೂರ್ವಕವಾಗಿ

॥ ಈಶ್ವರ ಉವಾಚ ॥

ಇತ್ಥಂ ಸಂಸ್ತುತ್ಯ ಮಾಂ ದೇವಿ ಸುಂದರೋ ವಿನಯಾನತಃ ।
ಅವಾಙ್ಮುಖೋ ದೀನಮನಾ ವ್ಯತಿಷ್ಠತ ಕೃತಾಂಜಲಿಃ ॥೪೯॥

ಗವ್ಯೈರನಂಗಮದಭಿಪ್ಪ್ರಿಯಲಿಂಗಮೌಲಿಂ
ಸಂಸಿಚ್ಯ ಚಂದನವಿಲೇಪನ ಬಿಲ್ವಪತ್ರೈಃ ।
ಸಂಪೂಜ್ಯ ಧೂಪವರದೀಪನಿವೇದನಾದ್ಯೈ
ರ್ನತ್ವಾ ಸ್ತುವಂತಿ ನತಿಭಿಃ ಕಿಲ ಶೈವವರ್ಯಾಃ ॥೫೦॥

ಯೋ ಮಾತೃಕಾಸ್ತವಮಿದಂ ಪಠತಿ ಪ್ರದೋಷೇ
ನತ್ವಾ ವಿಭೂತಿಕವಚೋ ಮದಜಾಕ್ಷಮಾಲಃ ।
ಭೂತ್ವಾ ವಿಭೂತಿಕವಚೋ ಪ್ರಸಮೀಕ್ಷ್ಯ ಲಿಂಗಂ
ಸ್ತುತ್ವಾ ಮಹಾಘನಿಚಯೈಃ ಸ ವಿಮುಕ್ತ ಏವ ॥೫೧॥

---

ನನ್ನನ್ನು ಕಾಪಾಡೆಂದು ಸುಂದರನು ನಾನಾರೀತಿಯಾಗಿ ನನ್ನನ್ನು (ಶಿವನನ್ನು) ಸ್ತೋತ್ರಮಾಡಿದನು. ॥೪೭-೪೮॥

ಎಲೌ ದೇವಿ, ಆ ಸುಂದರನು ಹೀಗೆ ನನ್ನನ್ನು ಸ್ತೋತ್ರಮಾಡಿ, ವಿನಯದಿಂದ ನಮ್ರನಾಗಿ, ಮಾತನಾಡದೇ ಕೈಮುಗಿದುಕೊಂಡು ದೀನನಾಗಿ ನಿಂತುಕೊಂಡನು. ॥೪೯॥

ದೇವಿ, ಆಕಾರಶೂನ್ಯವೂ, ನನಗೆ ಪ್ರಿಯತಮವೂ ಆದ ಲಿಂಗಮಸ್ತಕದಲ್ಲಿ ಪಂಚಗವ್ಯ, ಪಂಚಾಮೃತಗಳಿಂದ ಅಭಿಷೇಕಮಾಡಿ, ದಿವ್ಯಚಂದನವನ್ನು ಲೇಪನಮಾಡಿದ ನಂತರ ಬಿಲ್ವದಳಗಳಿಂದಲೂ, ಶ್ರೇಷ್ಠವಾದ ಧೂಪದೀಪನೈವೇದ್ಯಾದಿಗಳಿಂದಲೂ ನನ್ನನ್ನು ಪೂಜಿಸಿ, ನಮಸ್ಕಾರಮಾಡಿ ನನ್ನ ಭಕ್ತಾಗ್ರೇಸರರು ನನ್ನನ್ನು ನಾನಾರೀತಿ ಸ್ತೋತ್ರಮಾಡುತ್ತಾರೆ. ॥೫೦॥

ವಿಭೂತಿಯೆಂಬ ಕವಚವನ್ನು ಧರಿಸಿ, ನನ್ನ ರುದ್ರಾಕ್ಷಮಾಲೆಯನ್ನು ಹಾಕಿಕೊಂಡು ಶಿವಲಿಂಗವನ್ನು ನೋಡುತ್ತಾ, ಈ 'ಮಾತೃಕಾಸ್ತವವನ್ನು' ಪ್ರದೋಷಕಾಲದಲ್ಲಿ ಪಠಿಸುವವನು ಮಹಾಪಾಪರಾಶಿಗಳಿಂದಲೂ ಬಿಡುಗಡೆ ಹೊಂದುವುದರಲ್ಲಿ ಸಂದೇಹವೇ ಇಲ್ಲ. ॥೫೧॥

ಭ್ರಾತೃವ್ಯಂ ವಿನಿಹತ್ಯ ಭವ್ಯಪದವೀಮವ್ಯಾಹತಾತ್ಮಾ ಸುಖೀ
ಕಾವ್ಯೋತ್ತೇಜಿಶರೀರಕಾಂತಿವಿಲಸತ್ಸಾವ್ಯಂತ್ವಿದಂ ವ್ಯಾಹರನ್ ।
ನವ್ಯಾ ವೃದ್ಧಿಮುಪೈತಿ ದಿವ್ಯಸುಮಹಾಯಶಾನ್ಯೈಶ್ವರತ್ಯೇವ ಸೋ
ಮಂತವ್ಯಂ ಮನುತೇಽಪ್ಯಸೌ ಶ್ರುತಿಶಿರೋಗಂತೇತಿ ಗಂತಾ ಗತಿಂ ॥೫೨॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಸುಂದರಭಕ್ತಚರಿತ್ರ ವರ್ಣನೇ ಅಷ್ಟಾದಶೋಽಧ್ಯಾಯಃ

---

ಪಾರ್ವತಿಯೇ, ಈ ದಿವ್ಯಸ್ತೋತ್ರವನ್ನು ಯಾರು ಭಕ್ತಿಯಿಂದ ಪ್ರತಿದಿನವೂ ಪಠಿಸುವರೋ ಅವರು ದಿವ್ಯಾನಂದಮಯವಾದ ಮೋಕ್ಷಸುಖವನ್ನು ಅನಾಯಾಸವಾಗಿ ಪಡೆಯುವರು. ಅಲ್ಲದೆ ಈ ಸ್ತುತಿಯು ಕೇವಲ ಕಾವ್ಯಶೈಲಿಯಲ್ಲಿದ್ದು, ಕಾಂತಾಸಮ್ಮಿತೆಯಿಂದ ಕಾವ್ಯಸೌಖ್ಯವನ್ನು ಒದಗಿಸಬಲ್ಲುದು. ಈ ಸ್ತೋತ್ರದ ಪಠನದಿಂದ ಪರಶಿವಸ್ವರೂಪವನ್ನರಿತವರು ಸಾಕ್ಷಾತ್ ಉಪನಿಷತ್ತುಗಳ ಸಂಪೂರ್ಣ ಸಾರವನ್ನೇ ತಿಳಿದಂತಾಗುವುದು. ವೇದಾಂತಪ್ರತಿಪಾದ್ಯನಾದ ಮಹಾದೇವನ ಸರ್ವ ಮಹಿಮೆಯನ್ನೂ ಈ ಸ್ತೋತ್ರವೊಂದೇ ಸೂಚಿಸುವುದು. ಮಹಾದೇವಿಯೇ, ಈ ಸ್ತೋತ್ರವು ಅಷ್ಟು ಮಹಿಮಾಪೂರ್ಣವಾದದ್ದು. ಎಂಬುದಾಗಿ ತಿಳಿ. ಎಂದು ಪರಶಿವನು ನುಡಿದನು. ॥೫೨॥

ಇಲ್ಲಿಗೆ ಶ್ರೀಶಿವರಹಸ್ಯದ ಒಂಬತ್ತನೆಯ ಅಂಶದಲ್ಲಿ ಸುಂದರನೆಂಬ ಭಕ್ತರ ಚಾರಿತ್ರವನ್ನು ವಿವರಿಸುವ ಹದಿನೆಂಟನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಏಕೋನವಿಂಶೋಽಧ್ಯಾಯಃ

॥ ಶ್ರೀ ದೇವ್ಯುವಾಚ ॥

ದೇವದೇವ ಮಹಾದೇವ ಸೃಷ್ಟಿಸ್ಥಿತ್ಯಂತಕಾರಕ ।
ಅನಂಗೇನಾಂಗನಾಯಾಶ್ಚ ಕಮಲಿನ್ಯಾ ವಿಶೇಷತಃ ॥೧॥

ಸುಂದರಸ್ಯ ಮಹಾದೇವ ಕಿಂ ವಾ ಚೋಕ್ತಂ ಗಣಾಗ್ರಣೇಃ ।
ತ್ವಯೈವ ದೇವದೇವೇಶ ಶಶಿಶೇಖರ ಧೂರ್ಜಟೇ ॥೨॥

ಅನುಗ್ರಹಃ ಕಥಂ ತಸ್ಯ ಕೃತೋ ದೇವ ದಯಾನಿಧೇ ।
ತನ್ಮೇ ವದ ವಿಶೇಷೇಣ ತ್ವತ್ಕೃಪಾಹರ ಶಂಕರ ॥೩॥

---

## ಹತ್ತೊಂಬತ್ತನೆಯ ಅಧ್ಯಾಯ

ಸೃಷ್ಟಿ, ಸ್ಥಿತಿ, ಪ್ರಳಯಗಳನ್ನೆಸಗುವವನೂ, ದೇವಾದಿದೇವನೂ ಆದ ಮಹಾದೇವನೇ, ಮನ್ಮಥಬಾಣಪೀಡಿತಳಾಗಿ ಆ ಸುಂದರಾಂಗಿಯಾದ ಕಮಲಿನಿಗೂ ಮತ್ತು ಗಣಶ್ರೇಷ್ಠನಾದ ಆ ಸುಂದರನಿಗೂ ಮುಂದೆ ನೀನು ಯಾವರೀತಿ ಅನುಗ್ರಹಿಸಿದೆ? ದೇವಾದಿದೇವತೆಗಳಿಗೂ ಒಡೆಯನೂ, ಚಂದ್ರಶೇಖರನೂ, ಜಟಾಭಾರವುಳ್ಳವನೂ ಆದ ದಯಾಸಾಗರನೇ, ನೀನು ಅವರನ್ನು ಹೇಗೆ ಉದ್ಧರಿಸಿದೆ? ದಯಾನಿಧಿಯಾದ ಶಂಕರನೇ, ಅದನ್ನು ನನಗೆ ವಿಸ್ತಾರವಾಗಿ ನಿರೂಪಿಸೆಂದು ದೇವಿಯು ಶಿವನನ್ನು ಮತ್ತೆ ಪ್ರಾರ್ಥಿಸಿದಳು. ॥೧-೨-೩॥

॥ ಶ್ರೀಸ್ಕಂದ ಉವಾಚ ॥

ಇತ್ಥಂ ದೇವ್ಯಾ ತದಾ ಪೃಷ್ಟಃ ಶಿಪಿವಿಷ್ಟೋ ಮಹೇಶ್ವರಃ ।
ತುಷ್ಟಃ ಕಷ್ಟಹರಸ್ತಸ್ಯಾ ವಚಸಾಪ್ಯಷ್ಟಮೂರ್ತಿಮಾನ್ ॥೪॥

ಉವಾಚ ದೇವೀಮಾಲೋಕ್ಯ ಸಹರ್ಷಂ ಸ ತ್ರಿಲೋಚನಃ ।
ಮುನಿಶ್ರೇಷ್ಠ ಸುರಶ್ರೇಷ್ಠೈರ್ಗಣಶ್ರೇಷ್ಠೈಶ್ಚ ತ್ವಂ ಶೃಣು ॥೫॥

॥ ಮಹೇಶ್ವರ ಉವಾಚ ॥

ಶೃಣುಷ್ವ ಗಿರಿಜೇ ತತ್ರ ಸುಂದರೇಣ ಸ್ತುತಸ್ತದಾ ।
ತಮಬ್ರುವಂ ಮಹಾದೇವಿ ಸುಂದರಂ ಲೋಕಸುಂದರಂ ॥೬॥

॥ ಶ್ರೀ ಈಶ್ವರ ಉವಾಚ ॥

ತ್ವಂ ಸುಂದರ ಗಣಶ್ರೇಷ್ಠ ಕಮಲಿನ್ಯಾನಯಾ ಸಹ ।
ಸಹ್ಯಜಾಯಾಸ್ತಟೇ ಪುಣ್ಯೇ ಶಿವಕ್ಷೇತ್ರತಟದ್ವಯೇ ॥೭॥

ಶ್ರೀಕಂಠರತ್ನಗಿರಿರಾಣ್ಮಾತೃಭೂತಗಿರೌ ತಥಾ ।
ತೃಣಜ್ಯೋತೀಶ್ವರೇ ಪುಣ್ಯೇ ಪುಣ್ಯೇ ಪಂಚನದೇ ತಥಾ ॥೮॥

---

ಹೀಗೆ ಪಾರ್ವತೀದೇವಿಯಿಂದ ಪ್ರಶ್ನಿಸಲ್ಪಟ್ಟ ಶಿಪಿವಿಷ್ಟನೆನಿಸಿದ ಮಹೇಶ್ವರನು ಸಂತುಷ್ಟನಾಗಿ, ಕಷ್ಟವನ್ನು ಹೋಗಲಾಡಿಸುವವನೂ, ಎಂಟು ಮೂರ್ತಿಯುಳ್ಳವನೂ, ತ್ರಿಲೋಚನನೂ ಆದ ಶಂಕರನು ಆ ದೇವಿಯ ಮಾತಿಗೆ ಸಂತೋಷಪಟ್ಟು, ಅವಳನ್ನು ನೋಡುತ್ತಾ ಸಂತೋಷದಿಂದ ಹೀಗೆ ನುಡಿದನು. ಎಲೈ ಮುನಿಪುಂಗವನಾದ ಜೈಗೀಷವ್ಯನೇ, ನೀನು ದೇವತೋತ್ತಮರಿಂದಲೂ ಮುನಿಗಳಿಂದಲೂ ಕೂಡಿದವನಾಗಿ, ಆ ಶಿವೋಕ್ತಿಯನ್ನು ಕೇಳೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳುತ್ತಾ ಶಿವರಹಸ್ಯಾಂಶವನ್ನು ಮುಂದುವರಿಸಿದನು. ||೪-೫||

ಗಿರಿರಾಜಕುಮಾರಿಯಾದ ಮಹಾದೇವಿಯೇ, ಆಗ ಸುಂದರನಿಂದ ಆರೀತಿ ಸ್ತೋತ್ರಮಾಡಲ್ಪಟ್ಟವನಾಗಿ ನಾನು ಲೋಕಸುಂದರನಾದ ಆ ಸುಂದರನಿಗೆ ಹೀಗೆ ಹೇಳಿದೆನೆಂದು ಮಹೇಶ್ವರನು ದೇವಿಯೊಡನೆ ಇಂತೆಂದನು. ||೬||

ಗಣಶ್ರೇಷ್ಠನಾದ ಸುಂದರನೇ, ನೀನು ಈ ಕಮಲಿನಿಯೊಡನೆ ಕಾವೇರೀ ನದಿಯ ಪುಣ್ಯಕರವಾದ ಎರಡು ದಡಗಳಲ್ಲಿಯೂ ಇರುವ ಶ್ರೀಕಂಠಗಿರಿ, ರತ್ನಗಿರಿ,

ಶಮೀವನೇ ಕುಂಭಘೋಣೇ ತಥಾ ಮಧ್ಯಾರ್ಜುನೇ ಮುನೇ।
ಮಾಯೂರೇ ತೇಜನೀನಾಥೇ ಶ್ವೇತಾರಣ್ಯೇ ದ್ಯುತಿಸ್ಥಲೇ ॥೯॥

ಬಿಲ್ವಾರಣ್ಯೇ ಚ ಶ್ರೀವಾಂಛೇ ತಥಾ ಛಾಯಾವನೇ ಗಣ।
ಲಿಂಗಾಲಯೇ ತಥಾ ಪುಣ್ಯೇ ವಿಶಿಷ್ಟೇ ಕಮಲಾಲಯೇ ॥೧೦॥

ವೇದಾರಣ್ಯೇ ಸೇತುಬಂಧೇ ಹಾಲಾಸ್ಯೇ ಚ ವಿಶೇಷತಃ।
ಶ್ರೀಮದ್ದಕ್ಷಿಣಕೈಲಾಸೇ ಪುಣ್ಯೇ ಚೈವಾರುಣಾಚಲೇ ॥೧೧॥

ಗೋಪರ್ವತೇ ಚ ವೃದ್ಧಾದ್ರೌ ಪುಂಡರೀಕಪುರೇ ತಥಾ।
ಸ್ತುತ್ವಾ ಮಾಂ ಸಮ್ಯಗಾರಾಧ್ಯ ಸಮಾಯಾಹ್ಯನಯಾ ಗಣ ॥೧೨॥

ಕಮಲಿನ್ಯಾನಯಾ ಸಾರ್ಧಂ ಮಾಜತೇ ಸ್ಮೃತಿವಿಪ್ಲವಃ।
ಭವಿಷ್ಯತಿ ಚ ಮಾನುಷ್ಯೇ ತಿಷ್ಯೇ ಮದ್ಭಕ್ತಿಗೌರವಾತ್ ॥೧೩॥

ಇತ್ಯುಕ್ತೋ ಮಾಂ ಪ್ರಣಮ್ಯಾಸೌ ತ್ವಾಂ ಚಾಪಿ ಗಣಪಾಗ್ರಣೀಃ।
ಮಲಿನೀ ಸಾ ಕಮಲಿನೀ ಮದನೇನ ಹೃತಾಂತರಾ ॥೧೪॥

ಮಾತೃಭೂತಗಿರಿ, ಪುಣ್ಯಕರವಾದ ತೃಣಜ್ಯೋತೀಶ್ವರ, ಪಂಚನದ, ಶಮೀವನ, ಕುಂಭಘೋಣ, ಮಧ್ಯಾರ್ಜುನ, ಮಾಯೂರ, ತೇಜನೀಶ್ವರ, ಶ್ವೇತಾರಣ್ಯ, ದ್ಯುತಿಸ್ಥಲ, ಬಿಲ್ವವನ, ಶ್ರೀವಾಂಛ, ಛಾಯಾವನ, ಹಾಗೆಯೇ ಪುಣ್ಯಕರವಾದ ಶಿವಲಿಂಗಗಳಿರುವ ದೇವಾಲಯಗಳು, ಶ್ರೇಷ್ಠವಾದ ಕಮಲಾಲಯ, ವೇದಾರಣ್ಯ, ಸೇತುಬಂಧ, ಹಾಲಾಸ್ಯ, ವಿಶೇಷವಾಗಿ ಶ್ರೀದಕ್ಷಿಣಕೈಲಾಸ, ಪುಣ್ಯಕರವಾದ ವರುಣಾಚಲ, ಗೋಪರ್ವತ, ವೃದ್ಧಾದ್ರಿ, ಪುಂಡರೀಕಪುರ ಮುಂತಾದ ಶಿವಕ್ಷೇತ್ರಗಳಲ್ಲೆಲ್ಲಾ ಇವಳೊಡನೆ ಸುತ್ತಿ, ಅಲ್ಲೆಲ್ಲಾ ನನ್ನನ್ನು ಚೆನ್ನಾಗಿ ಪೂಜಿಸಿ ಸ್ತೋತ್ರಮಾಡಿ ಪುನಃ ನನ್ನ ಸಮೀಪಕ್ಕೆ ಬಾ. ॥೭-೮-೯-೧೦-೧೧-೧೨॥

ಎಲೈ ಗಣಮುಖ್ಯನೇ, ಕಲಿಯುಗದಲ್ಲಿ ಈ ಕಮಲಿನಿಯೊಡನೆ ಮನುಷ್ಯನಾಗಿ ಹುಟ್ಟುವ ನಿನಗೆ ನನ್ನಲ್ಲಿರುವ ಭಕ್ತಿಗೌರವಗಳಿಂದ ಸ್ಮೃತಿಶಕ್ತಿಯು ವಿಪರೀತವಾಗಲಾರದು. ಇದೇ ನಾನು ಕೊಡುವ ವರ ಎಂದು ನನ್ನಿಂದ ಹೇಳಲ್ಪಟ್ಟ ಆ ಸುಂದರನು ನನಗೂ ನಿನಗೂ ಬಹುಭಕ್ತಿಯಿಂದ ನಮಸ್ಕರಿಸಿ ಹೊರಡಲು ಅನುವಾದನು ಅನಂತರ ಮಲಿನಚಿತ್ತಳಾಗಿ ಮನ್ಮಥನಿಂದ ಅಪಹೃತನಾದ

ಹ್ರಿಯಾ ಕಿಂಚಿನ್ನತಾ ಮಾಂ ಸಾ ತುಷ್ಟಾವ ಶಶಿಶೇಖರಂ ॥೧೫॥

॥ ಕಮಲಿನ್ಯುವಾಚ ॥

(ಗದ್ಯ)

ಚಂದ್ರಭಾನುಕೃಶಾನುಲೋಚನ, ಸರ್ವಪಾವನನಾಮ, ಭುವನವಿರಾಮ, ಬುಧಜನಸೋಮ, ಸ್ತುತವರಸಾಮ, ಮದನ ಶಮನ ಗರಾಶನ ಕೋಪವೇಪ ಮಹಿಮಾನ ಈಶ್ವರ ತೇಂಬು ಜಾಸನ ವಾರಿಜೇಕ್ಷಣ ಕಾಮಪೀಡಾ ಸುವಂಚಿತೌ ಮೌಲಿಮೂಲ ವಿಲೋಮೋಷಿತ ಚ ಕಸ್ತವೇ ಸವಿ ವಿಹಾಹತೇ(?) ಸ್ವಮವೇಶ ಮಾನಂಗ ಸಂಗ ಶರಾರ್ದಿತಾಂಗಮಂಗನಾರ್ಧ ಕೃತಾರ್ಧಗಾತ್ರ ಶಿವ ತ್ರಿನೇತ್ರ ಪವಿತ್ರ ಮಾಂ ॥ ॥೧೬॥

---

ಮನಸ್ಸುಳ್ಳ ಆ ಕಮಲಿನಿಯೂ ಕೂಡ ನಾಚಿಕೆಯಿಂದ ತಲೆಬಾಗಿ ಚಂದ್ರಶೇಖರ ನಾದ ನನ್ನನ್ನು ಹೀಗೆ ಸ್ತೋತ್ರಮಾಡಿದಳೆಂದು ಶಿವನು ಪಾರ್ವತಿಗೆ ಹೇಳಿದನು. ॥೧೩-೧೪-೧೫॥

ಚಂದ್ರ, ಸೂರ್ಯ ಮತ್ತು ಅಗ್ನಿರೂಪವಾದ ಮೂರು ಕಣ್ಣುಳ್ಳವನೂ, ಎಲ್ಲರನ್ನೂ ಪಾವನಗೊಳಿಸುವ ನಾಮವುಳ್ಳವನೂ, ಪ್ರಪಂಚಕ್ಕೆ ವಿರಾಮವನ್ನುಂಟು ಮಾಡುವವನೂ, ಪಂಡಿತರಿಗೆ ಚಂದ್ರನಂತೆ ಆನಂದಪ್ರದನೂ, ಉತ್ತಮವಾದ ಸಾಮಗಾನದಿಂದ ಸ್ತುತಿಸಲ್ಪಡುವವನೂ, ಮನ್ಮಥನನ್ನು ಶಮನಮಾಡಿದವನೂ, ವಿಷವನ್ನು ತಿಂದವನೂ ಆದ ಮಹೇಶ್ವರನೇ, ನಿನ್ನ ಮಹಿಮೆಯನ್ನಾರು ತಿಳಿಯ ಬಲ್ಲರು? ಬ್ರಹ್ಮ ವಿಷ್ಣುಗಳಿಬ್ಬರೂ ಸಹ ನಿನ್ನ ಮಹಿಮೆಯನ್ನು ತಿಳಿಯಲಾರದೇ ಅನೇಕವೇಳೆ ವಂಚಿಸಲ್ಪಟ್ಟಿರುವರು. ಶಿವಲಿಂಗದ ಆದ್ಯಂತವನ್ನು ನೋಡಬೇಕೆಂದ ಪೇಕ್ಷಿಸಿದ ಅವರಿಗೆ ಸಾಧ್ಯವೇ ಆಗಲಿಲ್ಲ. ದೇವ, ಹೀಗಿರುವಾಗ ನಿನ್ನ ಮಹಿಮೆ ಯನ್ನು ಸ್ತೋತ್ರಮಾಡುವೆನೆಂದು ಯಾರುತಾನೆ ಪ್ರಯತ್ನಿಸಿಯಾರು? ಮನ್ಮಥ ಬಾಣಪೀಡಿತಳಾಗಿರುವ ನಿನ್ನವಳಾದ ನನ್ನನ್ನು ಅರ್ಧನಾರೀಶ್ವರನೂ, ಶಿವನೂ, ಮುಕ್ಕಣ್ಣನೂ ಆದ ನೀನು ಪವಿತ್ರಳನ್ನಾಗಿ ಮಾಡಿ, ಕಾಪಾಡು. ॥೧೬॥

ಉದ್ಧೃತೋದ್ಧತ ದಕ್ಷಪಕ್ಷಸುರತಾನಿರಾಕ್ಷಾ ಭುಜಾಧ್ಯಕ್ಷತಾ
ಧ್ವಾಂಕ್ಷಾಂಗಪ್ರಭದೈತ್ಯ ಹಂತೃಮದಭಿತ್ಸಂಧುಕ್ಷಿತಾಧೋಕ್ಷಜಂ ।
ಉಕ್ಷಾಧೀಶ್ವರಕೇತನಂ ಸ್ಮರಹರಾಪಾಂಗೇಕ್ಷಣಸ್ತ್ವಾಂ ಭಜೇ
ವೃಕ್ಷಾಣಾಮಧಿಪಂ ವಲಕ್ಷಭಸಿತಾಸಾರಾಂಗತ್ರ್ಯಕ್ಷಾಕ್ಷತಂ ॥೧೭॥

ಮಖಮುಖಶಿಖಾಶೇಖರೋದ್ವೃತ್ತಲೋಕಂ
ಸುಖನಿಶಿಖಮಯೂಖಂ ತ್ಯಕ್ತದುಃಖಾಖುವಾಹಂ ।
ಶಿಖಿವಹಮುಖನೇತ್ರಂ ತೇಜಃ ಪದ್ಮೋರುಮಾಲಂ
ವಿಖನಸಸುಖದೋಲ್ಕಂ ತ್ವಾಂ ಭಜೇ ಪಂಚವಕ್ತ್ರಂ ॥೧೮॥

---

ಉದ್ಧತರಾಗಿದ್ದ ದಕ್ಷಬ್ರಹ್ಮನ ಕಡೆಯ ದೇವಸಮೂಹವನ್ನು ನೀನು ನೋಡಿ ತನ್ನ ಭುಜಬಲದಿಂದ ಪ್ರತ್ಯಕ್ಷವಾಗಿ ಧ್ವಂಸಮಾಡಿರುವೆ. ಕಾಗೆಯಂತೆ ಮೈಬಣ್ಣವುಳ್ಳ ಹಿರಣ್ಯಕಶಿಪುವನ್ನು ಕೊಂದು ಮದಿಸಿದ್ದ ನರಸಿಂಹರೂಪಿಯಾದ ವಿಷ್ಣುವಿನ ಗರ್ವವನ್ನು ಶರಭರೂಪದಿಂದ ನಿಗ್ರಹಮಾಡಿರುವೆ. ವೃಷಭರಾಜನನ್ನೇ ಧ್ವಜವನ್ನಾಗಿ ಮಾಡಿಕೊಂಡಿರುವವನೂ, ಮನ್ಮಥನನ್ನು ಭಸ್ಮಮಾಡಿದವನೂ, ಕೃಪಾಕಟಾಕ್ಷವನ್ನು ಭಕ್ತರ ಮೇಲೆ ಬೀರುವವನೂ, ಮರಗಳಿಗೆಲ್ಲಾ ಒಡೆಯನೂ, ಶುಭ್ರವಾದ ಭಸ್ಮವನ್ನು ಸಕಲ ಅವಯವಗಳಿಗೂ ಲೇಪಿಸಿಕೊಂಡಿರುವವನೂ ಮುಕ್ಕಣ್ಣನೂ ನಾಶರಹಿತನೂ ಆದ ನಿನ್ನನ್ನು ಭಜಿಸುತ್ತೇನೆ. ॥೧೭॥

ಮಹಾದೇವನೇ, ನೀನು ಯಜ್ಞೇಶ್ವರನೆನಿಸಿದ ಸಾಕ್ಷಾದಗ್ನಿಯನ್ನೇ ನಿನ್ನ ಮಸ್ತಕದಲ್ಲಿ ನೇತ್ರರೂಪದಿಂದ ಧರಿಸಿರುವೆ. ಸಮಸ್ತ ಲೋಕಗಳನ್ನೂ ನಿನ್ನ ಹೃದಯಕುಹರದಲ್ಲಿ ಅಡಗಿಸಿರುವೆ. ಭಕ್ತರಿಗೆ ಹಿತವಾಗುವಂತಹ ತೇಜಸ್ಸಿನಿಂದ ಅವರನ್ನು ತೃಪ್ತಿಗೊಳಿಸುವೆ. ಮೂಷಕವಾಹನನಾದ ವಿಘ್ನೇಶ್ವರನಿಗೆ ದುಃಖನಾಶಕನೆನಿಸಿರುವೆ. ಅಗ್ನಿನೇತ್ರದಿಂದ ವಿರಾಜಿಸುವ ಮುಖವುಳ್ಳವನಾಗಿಯೂ, ಸುಂದರವಾಗಿ ಪ್ರಕಾಶಿಸುವ ಪದ್ಮಮಾಲೆಯುಳ್ಳವನಾಗಿಯೂ, ವೈಖಾನಸವೃತ್ತಿಯಿಂದ ಜೀವಿಸುವ ಆರಣ್ಯವಾಸಿಗಳಿಗೆ ಸುಖಪ್ರದವಾದ ಒಂದು ನಕ್ಷತ್ರದಂತಿರುವೆ. ಇಂತಹ ಮಹಾದೇವನೂ, ಸದ್ಯೋಜಾತಾದಿ ಐದು ಮುಖಗಳುಳ್ಳವನೂ ಆದ ನಿನ್ನನ್ನು ನಾನು ಸರ್ವದಾ ಸೇವಿಸುವೆನು. ॥೧೮॥

ಯಜ್ಞೇಶ ವಿಜ್ಞಾನದ ದಕ್ಷಯಜ್ಞ
ವಿನಾಶಕಾಜ್ಞಾನನಿವರ್ತಕೇಶ ।
ತ್ವದಾಜ್ಞಯಾಯಂ ವಿಧಿವಿಷ್ಣುಸರ್ಗಃ
ಸಂವರ್ತತೇಽಽಜ್ಞಾಪಯ ಮಾಂ ವಿಮುಕ್ತ್ಯೈ ॥೧೯॥

ಪವನಾನಲದಾಶುಷಾತ್ಮಕೋಽಶಿಖಂಗೌ(?)
ತಪನೇಂದ್ರತಸುಭಾಕ್ತ್ವಮೇವ ಶಂಭೋ ।
ತವ ಮೂರ್ತಿಭಿರಾಭಿರೇವ ಲೋಕಂ
ಶಿವ ಪತ್ಸೇ ಕ್ವನು ಕೋಽಸ್ತಿ ವರ್ಣನಾಶಃ ॥೨೦॥

॥ ಸ್ಕಂದ ಉವಾಚ ॥

ಇತ್ಥಂ ದೇವಿ ತಯಾ ಸಖ್ಯಾ ತವ ಸ್ತುತ್ಯಾ ಸ್ತುತಸ್ತದಾ ।
ಪ್ರಸನ್ನೋಽಸ್ಮಿ ತಯಾ ಸ್ತುತ್ಯಾ ತಾಮವಾದಿಷಮೇವ ಹಿ ॥೨೧॥

---

ಯಜ್ಞಗಳಿಗೆ ಒಡೆಯನೂ, ವಿಜ್ಞಾನವನ್ನುಂಟುಮಾಡುವವನೂ, ದಕ್ಷನ ಯಾಗವನ್ನು ನಾಶಮಾಡಿದವನೂ, ಅಜ್ಞಾನವನ್ನು ಹೋಗಲಾಡಿಸುವವನೂ ಆದ ಈಶ್ವರನೇ, ನಿನ್ನ ಅಪ್ಪಣೆಯಿಂದಲೇ ಈ ಬ್ರಹ್ಮ, ವಿಷ್ಣುಗಳ ಸೃಷ್ಟಿಯುಂಟಾಗುತ್ತಿದೆ. ಹೀಗೆ ದೇವದೇವನೆನಿಸಿದ ನೀನು ನನಗೆ ಮೋಕ್ಷವನ್ನು ಕರುಣಿಸು. ॥೧೯॥

ವಾಯು, ಅಗ್ನಿ, ಭೂಮಿ, ನೀರು, ಚಂದ್ರ, ಆಕಾಶ, ಯಜಮಾನ ಮತ್ತು ಸೂರ್ಯ ಈ ಎಂಟುರೂಪವಾದ ದೇಹಗಳಿಂದ ಅಷ್ಟಮೂರ್ತಿಯೆನಿಸಿದ ನೀನು ಸರ್ವತ್ರ ವ್ಯಾಪಿಸಿರುವೆ. ಪರಶಿವನೇ, ಈ ಮೂರ್ತಿಗಳಿಂದ ಸಕಲ ಲೋಕಗಳನ್ನೂ ಧರಿಸಿರುವ ನಿನ್ನನ್ನು ವರ್ಣಿಸಲು ಬೇರೆ ಯಾವ ಅಂಶವು ತಾನೇ ಇರುವುದು ? ಎಂದು ಕಮಲಿನಿಯು ಪರಶಿವನನ್ನು ನಾನಾರೀತಿ ಸ್ತೋತ್ರಮಾಡಿದಳು. ॥೨೦॥

ದೇವಿ, ಹೀಗೆ ನಿನ್ನ ಆ ಸಖಿಯಿಂದ ಸ್ತೋತ್ರಮಾಡಲ್ಪಟ್ಟು ಬಳಿಕ, ನಾನು ಪ್ರಸನ್ನನಾಗಿ ಅವಳಿಗೆ ಹೀಗೆ ವರವಿತ್ತೆನು, ಎಂದು ಶಿವನು ಹೇಳಿದ್ದನ್ನು ಕುಮಾರ ಸ್ವಾಮಿಯು ಜೈಗೀಷವ್ಯನಿಗೆ ತಿಳಿಸಿದನು. ॥೨೧॥

॥ ಈಶ್ವರ ಉವಾಚ ॥

ಶೃಣು ಭದ್ರೇ ವಿಶಾಲಾಕ್ಷಿ ಭೂಮೌ ತ್ವಂ ಸುಂದರೇಣ ಹಿ ।
ವಿಹೃತ್ಯ ಮಮ ಕೈಲಾಸಮಾಗಚ್ಛ ದ್ರುತಮೇವ ಹಿ ॥೨೨॥

ಜಾತಿಸ್ಮರಾ ಭವ ತ್ವಂ ಚ ಮಮ ಭಕ್ತ್ಯಾ ವಿಶೇಷತಃ ।
ಕಮಲಾಲಯಮಾಸಾದ್ಯ ಲಿಂಗಾಲಯಮನುತ್ತಮಂ ॥೨೩॥

ಗಾನನೃತ್ತಪರಾ ಸಾಧ್ವೀ ಸುಂದರೇಣಾಮುನಾ ಸಹ ।
ಸ್ಮರಕೇಳಿಷು ವಿಶ್ರಾಂತಾ ಸಮಾಯಾಹಿ ಮದಂತಿಕಂ ॥೨೪॥

ಇತ್ಯುಕ್ತಮಾತ್ರೇ ಚ ಮಯಾ ತದಾ ಕಮಲಿನೀಗಣೌ ।
ಪ್ರಣೇಮತುರ್ಮತ್ಪದಾಬ್ಜಂ ಭಕ್ತಿಯುಕ್ತೌ ದೃಢವ್ರತೌ ॥೨೫॥

ಪ್ರೋಚತುಃ ಪರಯಾ ಪ್ರೀತ್ಯಾ ಮಾಂ ಚ ತ್ವಾಂ ಚಾಪಿ ತೌ ತದಾ॥೨೬॥

---

ವಿಶಾಲವಾದ ಕಣ್ಗಳುಳ್ಳ ಮಂಗಳಾಂಗಿಯೇ, ಕೇಳು. ಭೂಮಿಯಲ್ಲಿ ನೀನು ನನ್ನ ಭಕ್ತನಾದ ಸುಂದರನೊಡನೆ ಸುಖಸಾಮ್ರಾಜ್ಯದಲ್ಲಿ ವಿಹರಿಸಿ, ಜಾಗ್ರತೆಯಾಗಿ ನನ್ನ ಕೈಲಾಸಕ್ಕೆ ಬಂದುಬಿಡು. ವಿಶೇಷವಾಗಿ ನನ್ನಲ್ಲಿಟ್ಟಿರುವ ಭಕ್ತಿಯಿಂದ ನೀನು ಮನುಷ್ಯಳಾದರೂ ಪೂರ್ವಜನ್ಮದ ಸ್ಮರಣೆಯು ಮಾತ್ರ ನಿನಗಿರುವುದು. ಶಿವಲಿಂಗಗಳಿಗೆ ಆಶ್ರಯವಾಗಿರುವ ಉತ್ತಮವಾದ ಕಮಲಾಲಯವನ್ನು ಹೊಂದಿ, ಅಲ್ಲಿ ಈ ಸುಂದರನೊಡನೆ ಸಂಗೀತ, ನಾಟ್ಯಗಳಲ್ಲಿ ನಿರತಳೂ, ಸಾಧ್ವಿಯೂ ಆಗಿ ಮನ್ಮಥ ಕ್ರೀಡೆಗಳಲ್ಲಿ ಸುಖಪಡೆದು ಅನಂತರ ನನ್ನ ಸಮೀಪಕ್ಕೆ ಹಿಂತಿರುಗಿ ಬಾ ಎಂದು ನಾನು ಕಮಲಿನೀ ಸುಂದರರಿಗೆ ಹೇಳಿದೆನು. ॥೨೨-೨೩-೨೪॥

ಹೀಗೆ ನನ್ನಿಂದ ಹೇಳಲ್ಪಟ್ಟ ಕೂಡಲೇ, ಕಮಲಿನೀ ಸುಂದರರು ದೃಢ ನಿಯಮವುಳ್ಳವರೂ ಭಕ್ತಿಯುಕ್ತರೂ ಆಗಿ ನನ್ನ ಪಾದಕಮಲಗಳಿಗೆ ಭಕ್ತಿಯಿಂದ ವಂದಿಸಿದರು. ಆಗ ನನ್ನನ್ನೂ ನಿನ್ನನ್ನೂ ಸಹ ಪ್ರೀತಿಯಿಂದ ಮತ್ತೆ ಹೀಗೆ ಕೇಳಿಕೊಂಡರು. ॥೨೫-೨೬॥

|| ಸುಂದರ ಉವಾಚ ||

**ದೇವ ದೇವ ಮಹಾದೇವ ಶರಣಾಗತವತ್ಸಲ ।**
**ಯತ್ರ ಯತ್ರ ಭವೇಜ್ಜನ್ಮ ತಸ್ಮಿನ್ಭಕ್ತಿಃ ಪದೇ ತವ ॥೨೭॥**

ಭವತಾಂ ಭವಪಾದಾಬ್ಜೇ ಭವೋದ್ಭವ ಸದಾವಯೋಃ ।
ಕಸ್ಮಿನ್ಕ್ಷೇತ್ರೇ ಮಹಾದೇವ ತವ ಸಾನ್ನಿಧ್ಯಮುತ್ತಮಂ ॥೨೮॥

ಪುಣ್ಯೇ ಸಹ್ಯಾಪಗಾತೀರೇ ಶಿವಕ್ಷೇತ್ರವಿರಾಜಿತೇ ।
ನಾನಾಶೈವಜನಾಧಾರೇ ದ್ವಿಜಗ್ರಾಮಸಮಾವೃತೇ ॥೨೯॥

ತದ್ವದಾದ್ಯ ಮಹಾದೇವ ತ್ವದ್ಭಕ್ತ್ಯಾ ಪೃಚ್ಛತೋ ಮಮ ॥೩೦॥

|| ಶ್ರೀ ಸ್ಕಂದ ಉವಾಚ ||

ಇತಿ ಸುಂದರವಾಕ್ಯೇನ ಜಾತಹರ್ಷೋ ಮಹೇಶ್ವರಃ ।
ಉವಾಚ ಸುಂದರಂ ವೀಕ್ಷ್ಯ ತದಾ ಕಮಲಿನೀಮಪಿ ॥೩೧॥

---

ದೇವಾದಿದೇವನೂ, ಶರಣಾಗತವತ್ಸಲನೂ ಆದ ಮಹಾದೇವನೇ, ನಮಗೆ ಎಲ್ಲೆಲ್ಲಿ ಜನ್ಮವುಂಟಾದರೂ ನಿನ್ನ ಪಾದಭಕ್ತಿಯು ಮಾತ್ರ ನಮಗೆ ತಪ್ಪದಿರಲಿ. ಜಗದುತ್ಪತ್ತಿಕಾರಣಭೂತನಾದ ಸ್ವಾಮಿಯೇ, ನಮ್ಮಿಬ್ಬರಿಗೂ ನಿಮ್ಮ ಅಡಿದಾವರೆಗಳಲ್ಲಿ ಅಸದೃಶವಾದ ಭಕ್ತಿಯುಂಟಾಗಲಿ. ಮಹಾದೇವ, ಪುಣ್ಯಕರವಾದ ಕಾವೇರೀ ನದಿಯ ದಡದಲ್ಲಿರುವ ಬಗೆಬಗೆಯ ಶೈವಜನರಿಗೆ ಆಶ್ರಯವಾಗಿಯೂ, ಬ್ರಾಹ್ಮಣ ಗ್ರಾಮಗಳಿಂದ ವ್ಯಾಪ್ತವಾಗಿಯೂ ವಿರಾಜಿಸುತ್ತಿರುವ ಅನೇಕ ಶಿವಕ್ಷೇತ್ರಗಳಲ್ಲಿ ನಿನಗೆ ವಿಶೇಷಪ್ರಿಯವಾಗಿಯೂ, ಮುಖ್ಯವೂ, ಉತ್ತಮವೂ ಆಗಿರುವುದು ಯಾವುದು? ಮಹಾದೇವ, ನಿನ್ನ ಭಕ್ತಿಯಿಂದ ಪ್ರಶ್ನೆಮಾಡುತ್ತಿರುವ ಈ ನನಗೆ ಈಗ ಅದನ್ನು ತಿಳಿಸಬೇಕೆಂದು ಸುಂದರನು ಶಿವನನ್ನು ಪ್ರಾರ್ಥನೆ ಮಾಡಿದನು. ||೨೭-೨೮-೨೯-೩೦||

ಈ ರೀತಿಯಾದ ಸುಂದರನ ಮಾತಿನಿಂದ ಸಂತೋಷಭರಿತನಾದ ಮಹೇಶ್ವರನು ಆ ಸುಂದರನನ್ನೂ ಮತ್ತು ಕಮಲಿನಿಯನ್ನೂ ಸಹ ನೋಡಿ, ಹೀಗೆ ನುಡಿದನೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ||೩೧||

॥ ಈಶ್ವರ ಉವಾಚ ॥

ಭುವೋ ಮಂಡಲಮೇತದ್ಧಿ ಸಪ್ತಾಬ್ಧಿಪರಿವೇಷ್ಟಿತಂ ।
ವರ್ಷೇಷ್ವಪಿ ಚ ಸರ್ವೇಷು ಭಾರತಂ ಪುಣ್ಯಮುತ್ತಮಂ ॥೩೨॥

ದ್ವೀಪೇಷು ಚ ಗಣಶ್ರೇಷ್ಠ ಜಂಬೂದ್ವೀಪೋಽಯಮುತ್ತಮಃ ।
ದೇಶೇಷ್ವಪಿ ಚ ಸರ್ವೇಷು ಚೋಲೋಽಯಂ ಪುಣ್ಯಕೃತ್ತಮಃ ॥೩೩॥

ತಸ್ಮಿನ್ನಾಸ್ತೆ ಸರಿತಾಂ ಶ್ರೇಷ್ಠಾ ಕಾವೇರೀ ಪುಣ್ಯನಿಮ್ನಗಾ ।
ದಿಗ್ಭ್ಯೋ ದಶಭ್ಯೋ ಗಣಪ ದಕ್ಷಿಣಾ ದಿಗ್ವಿಶಿಷ್ಯತೇ ॥೩೪॥

ಘಟೋದ್ಭವಮುನಿರ್ಯತ್ರ ವಿಂಧ್ಯಹೃತ್ಸಂಸ್ಥಿತಃ ಪುರಾ ।
ವ್ಯಾಘ್ರಪಾದಮುನಿರ್ಯತ್ರ ಸನ್ನಿಧತ್ತೇ ಮಹೇಶ್ವರಃ ॥೩೫॥

ಪುಂಡರೀಕಪುರಂ ಯತ್ರ ಧಾಮ ತತ್ರ ಕಪರ್ದಿನಃ ।
ತ್ವಯಾಹಂ ನಿತ್ಯಸಾಂನಿಧ್ಯಾತ್ಸಾಯಂ ತಾಂಡವತತ್ಪರಃ ॥೩೬॥

---

ಈ ಭೂಮಂಡಲವು ಏಳು ಸಮುದ್ರಗಳಿಂದ ಸುತ್ತುವರಿಯಲ್ಪಟ್ಟಿದೆ. ಎಲ್ಲಾ ವರ್ಷಗಳಲ್ಲಿಯೂ ಭಾರತವರ್ಷವು ಪುಣ್ಯವೂ, ಉತ್ತಮವೂ ಆಗಿರುವುದು. ದ್ವೀಪಗಳಲ್ಲೆಲ್ಲಾ ಈ ಜಂಬೂದ್ವೀಪವೇ ಉತ್ತಮವಾದದ್ದು. ಆ ಜಂಬೂದ್ವೀಪದ ದೇಶಗಳಲ್ಲಿ ಈ ಚೋಲದೇಶವೇ ತುಂಬಾ ಪುಣ್ಯಪ್ರದವೆನಿಸುವುದು. ॥೩೨-೩೩॥

ನದಿಗಳಲ್ಲಿ ಶ್ರೇಷ್ಠವಾದ ಕಾವೇರಿಯೆಂಬ ಪುಣ್ಯನದಿಯು ಆ ಚೋಲದೇಶದಲ್ಲಿ ಹರಿಯುತ್ತಿರುವುದು. ಎಲೈ ಗಣಾಧಿಪನೇ, ಹತ್ತು ದಿಕ್ಕುಗಳಲ್ಲಿಯೂ ದಕ್ಷಿಣ ದಿಕ್ಕಿಗೆ ಶ್ರೇಷ್ಠತೆಯಿರುವುದೆಂಬುದನ್ನು ಮರೆಯಬಾರದು. ಹಿಂದೆ ಅಗಸ್ತ್ಯಮುನಿಯು ಅಲ್ಲಿ ಮೇರುಪರ್ವತದ ಮೇಲಿನ ಜಿದ್ದಿನಿಂದ ಬೆಳೆಯುತ್ತಿದ್ದ ವಿಂಧ್ಯಪರ್ವತವನ್ನು ಬೆಳೆಯದಂತೆ ತಡೆದನು. ಅಲ್ಲಿಯೇ ವ್ಯಾಘ್ರಪಾದನೆಂಬ ಮುನಿಯೂ ಮಹೇಶ್ವರನೆನಿಸಿದ ನನ್ನನ್ನು ತೃಪ್ತಿಪಡಿಸಿ ನನ್ನ ಸಂನಿಧಾನವನ್ನು ಪಡೆದಿರುವನು. ಜಟಾಧಾರಿಯಾದ ಮಹೇಶ್ವರನ ನೆಲೆಮನೆಯಾದ ಪುಂಡರೀಕಪುರವೂ ಅಲ್ಲಿಯೇ ಇರುವುದು. ನಾನು ಅಲ್ಲಿ ನಿತ್ಯವೂ ಸಂನಿಧಾನವನ್ನಿಡುತ್ತಾ ಸಾಯಂಕಾಲದಲ್ಲಿ ನಿನ್ನೊಡನೆ (ದೇವಿಯೊಡನೆ) ತಾಂಡವನರ್ತನಮಾಡಲು ತೊಡಗುವೆನು. ಸಕಲ ದೇವತೆ

ಸರ್ವೈರ್ದೇವೈಶ್ಚ ಮುನಿಭಿರ್ಗಣವೃಂದೈಃ ಸದಾನತಃ ।
ತತ್ರ ಸ್ಥಿತೋಽಹಂ ದೇವೇಶಿ ಗಣೇಂದ್ರ ಶೃಣು ತತ್ಸದಾ ॥೩೭॥

ಶ್ರೀಮದ್ದಕ್ಷಿಣಕೈಲಾಸೇ ವಿಲಾಸೋ ಮಮ ಸರ್ವದಾ ।
ಯತ್ರ ದಂತಾವಲಿಃ ಪೂರ್ವಂ ಪೂಜಯಾಮಾಸ ಮಾಂ ತದಾ ॥೩೮॥

ವಿರಿಂಚಿನಾರಾಯಣಯೋರ್ಹಂಸಕ್ರೋಡಶರೀರಯೋಃ ।
ಅದೃಷ್ಟಮೌಲಿಪದಯೋರ್ನಿಸರ್ಗಂ ಗತಗರ್ವಯೋಃ ॥೩೯॥

ಅರುಣಾಚಲರೂಪೋಽಹಂ ತರುಣೇಂದುಶಿಖಾಮಣಿಃ ।
ಅಚಲೇಂದ್ರಂ ಸದಾ ಪಶ್ಯ ಪ್ರದಕ್ಷಿಣಪುರಃಸರಂ ॥೪೦॥

ಅಹಂ ಚಿರಂ ಗಿರಿಸ್ತತ್ರ ದೇವ್ಯಾ ವೃದ್ಧಾಂಬಯಾ ತ್ವಯಾ ।
ಸನ್ನಿಧಾಸ್ಯಾಮ್ಯಹಂ ತತ್ರ ತಥಾ ಗೋಪರ್ವತೇ ದ್ವಿಜ ॥೪೧॥

---

ಗಳಿಂದಲೂ ಮುನಿಗಳಿಂದಲೂ ಮತ್ತು ಗಣಮುಖ್ಯರಿಂದಲೂ ಯಾವಾಗಲೂ ನಮಸ್ಕೃತನಾಗಿ ನಾನು ಅಲ್ಲಿಯೇ ನೆಲಸಿರುವೆನು. ಗಣಶ್ರೇಷ್ಠನೇ, ಅಲ್ಲಿ ನನ್ನ ಸಾನ್ನಿಧ್ಯವು ವಿಶೇಷರೀತಿಯಿಂದಿರುವುದೆಂದು ಭಾವಿಸು. ॥೩೪-೩೫-೩೬-೩೭॥

ಶಿವಸನ್ನಿಧಾನದಿಂದ ಕಾಂತಿಯುಕ್ತವಾದ ದಕ್ಷಿಣಕೈಲಾಸದಲ್ಲಿ ಯಾವಾಗಲೂ ನನ್ನ ವಿಲಾಸವಿರುವುದು. ಹಿಂದೆ ದಂತಾವಲಿಯೆಂಬುವನು ನನ್ನನ್ನು ಅಲ್ಲಿಯೇ ಪೂಜೆಮಾಡಿದ್ದನು. ಹಂಸ ಮತ್ತು ಹಂದಿಯರೂಪವನ್ನು ತಾಳಿದ ಬ್ರಹ್ಮವಿಷ್ಣುಗಳು ನನ್ನ ಶಿವಲಿಂಗದ ಊರ್ಧ್ವ ಮತ್ತು ಅಧೋಭಾಗಗಳನ್ನು ನೋಡಬೇಕೆಂಬ ಹುಮ್ಮಸ್ಸಿನಿಂದ ಹೊರಟು, ಕೊನೆಗೆ ಅದನ್ನು ಸಾಧಿಸಲಾರದೆ ತಾವಾಗಿಯೇ ತಮ್ಮ ಗರ್ವವನ್ನು ಬಿಟ್ಟಿರುವರು. ಅವರಿಗೆ ನಾನು ಅರುಣಾಚಲರೂಪನಾಗಿ ತೋರುತ್ತಾ ಬಾಲಚಂದ್ರನನ್ನು ಚೂಡಾಮಣಿಯನ್ನಾಗಿ ಧರಿಸಿರುವೆನು. ಎಲೈ ಸುಂದರನೇ, ಆ ಅರುಣಾಚಲವನ್ನು ಯಾವಾಗಲೂ ಪ್ರದಕ್ಷಿಣಪೂರ್ವಕವಾಗಿ ನೋಡು. ॥೩೮-೩೯-೪೦॥

ಎಲೈ ಬ್ರಾಹ್ಮಣನೆ, ನಾನು ವೃದ್ಧಾಂಬೆಯೆನಿಸಿದ ಈ ದೇವಿಯೊಡನೆ ಅಲ್ಲಿ ಬಹಳಕಾಲ ಪರ್ವತರೂಪದಿಂದಿರುವೆನು. ಅಲ್ಲಿಯೂ ಮತ್ತು ಗೋಪರ್ವತದಲ್ಲಿಯೂ (ವೃಷಭಾಚಲದಲ್ಲಿಯೂ) ಯಾವಾಗಲೂ ನನ್ನ ಸಾನ್ನಿಧ್ಯವಿರುವುದೆಂದು ಭಾವಿಸು.

ಕಂಪಾತೀರೇ ಗಣಶ್ರೇಷ್ಠ ಸ್ವರಾಕ್ಷ್ಯಾಹಂ ತ್ವಯಾ ಸಹ ।
ಏಕಾಮ್ರಮೂಲನಿಲಯಃ ಸನ್ನಿಧಾಸ್ಯಾಮ್ಯಹಂ ಸದಾ ॥೪೨॥

ಸಹ್ಯಾಪಗಾಯಾ ಮೂಲೇ ವೈ ಶ್ರೀಕಂಠೇಶ್ವರಸಂಜ್ಞಿತಃ ।
ಸಾಕ್ಷಾದ್ರತ್ನಗಿರೀಶೋಽಹಂ ತೃಣಜ್ಯೋತೀಶ್ವರೋಽಪ್ಯಹಂ ॥೪೩॥

ತಥಾ ಮಾತೃಗಿರೌ ಪುಣ್ಯೇ ಸಿಂಧುರಾರಣ್ಯಸಂಸ್ಥಿತಃ ।
ಧೃತಸ್ಥಾನೇ ತಥಾ ಪುಣ್ಯೇ ತಥಾ ಜಪ್ಯೇಶ್ವರೇ ಗಣ ॥೪೪॥

ತಥಾಹಂ ಸುಂದರಗಿರೌ ಕ್ಷೀರಿಣೀ ವಿಪಿನೇಽಪಿ ಚ ।
ದಕ್ಷಿಣಾವರ್ತಕಸ್ಥಾನೇ ಕುಂಭಘೋಣೇಽರ್ಜುನೇಽಪಿ ಚ ॥೪೫॥

ಬ್ರಹ್ಮಾರಣ್ಯೇ ಬಿಲ್ವವನೇ ಶ್ವೇತಾರಣ್ಯೇ ಗಣೋತ್ತಮ ।
ಛಾಯಾವನೇ ಚ ಶ್ರೀವಾಂಛೇ ತೇಜಿನೀವಿಪಿನೇಽಪಿ ಚ ॥೪೬॥

ದುರ್ಗೇಶ್ವರೇ ಮಂಗಲೇ ಚ ತ್ರಿಕೋಟೌ ಚ ಮಹೇಶ್ವರಿ ।
ತಥೈವಾಮ್ರವನೇ ದೇವಿ ವೇದಾರಣ್ಯೇ ತಥೈವ ಚ ॥೪೭॥

---

ಎಲೈ ಗಣಶ್ರೇಷ್ಠನೆ! ಕಂಪಾನದಿಯುದಡದಲ್ಲಿ ಕಾಮಾಕ್ಷಿಯೆನಿಸಿದ ಈ ದೇವಿಯೊಡನೆ ಯಾವಾಗಲೂ ಏಕಾಮ್ರ (ಒಂಟಿಮಾವಿನ) ವೃಕ್ಷದ ಬುಡದಲ್ಲಿ ಏಕಾಮ್ರೇಶ್ವರ ನೆಂಬ ಹೆಸರಿನಿಂದ ನೆಲಸಿರುವೆನು. ॥೪೧-೪೨॥

ಕಾವೇರೀನದಿಯ ಬುಡದಲ್ಲಿ ನಾನು ಶ್ರೀಕಂಠೇಶ್ವರನೆಂಬ ಹೆಸರಿನಿಂದಲೂ ತೋರುವೆನು. ರತ್ನಗಿರೀಶ್ವರ, ತೃಣಜ್ಯೋತೀಶ್ವರನೆಂಬ ಹೆಸರೂ ಆ ದಕ್ಷಿಣ ಭಾರತದಲ್ಲಿ ನನಗೆ ಬಂದಿರುವುದು. ಹಾಗೆಯೇ ಪುಣ್ಯಕರವಾದ ಮಾತೃಗಿರಿಯಲ್ಲಿಯೂ ಗಜಾರಣ್ಯದಲ್ಲಿಯೂ, ಧೃತಸ್ಥಾನದಲ್ಲಿಯೂ, ಹಾಗೆಯೇ ಪುಣ್ಯಕರವಾದ ಜಪ್ಯೇಶ್ವರ ದಲ್ಲಿಯೂ ನಾನು ನೆಲಸಿರುವೆನು. ಎಲೈ ಗಣಮುಖ್ಯನೇ, ಇದರಂತೆಯೇ ನಾನು ಸುಂದರಗಿರಿಯಲ್ಲಿಯೂ, ಕ್ಷೀರಿಣೀವನ, ದಕ್ಷಿಣಾವರ್ತಕಸ್ಥಾನ, ಕುಂಭಘೋಣ, ಅರ್ಜುನ, ಬ್ರಹ್ಮಾರಣ್ಯ, ಬಿಲ್ವವನ, ಶ್ವೇತಾರಣ್ಯ, ಛಾಯಾವನ, ಶ್ರೀವಾಂಛ, ತೇಜಿನೀ ವನ, ಮಂಗಳಕರವಾದ ದುರ್ಗೇಶ್ವರ, ತ್ರಿಕೋಟಿ,ಆಮ್ರವನ, ವೇದಾರಣ್ಯಗಳಲ್ಲಿಯೂ ಶಿವಲಿಂಗರೂಪದಿಂದ ನೆಲಸಿರುವೆನು. ಕಮಲಾಲಯ ಸಂಜ್ಞಕರವಾದ ಕ್ಷೇತ್ರದಲ್ಲಿ ವಲ್ಮೀಕೇಶ್ವರನೆಂಬ ಹೆಸರಿನಿಂದ ಪ್ರಸಿದ್ಧಿಪಡೆದಿರುವೆನು. ಎಲೈ ಗಣಶ್ರೇಷ್ಠನೇ!

ಕಮಲಾಲಯಸಂಜ್ಞೇ ಚ ವಲ್ಮೀಕೇಶ್ವರಸಂಜ್ಞಿತಃ ।
ಶ್ರಿಯಾ ಯತ್ರ ತಪಸ್ತಪ್ತಂ ಬಹುವರ್ಷಂ ಗಣಾಗ್ರಣೀ ॥೪೮॥

ತತ್ರೈವ ವಸ ಸೇವಸ್ವ ಕಮಲಿನ್ಯಾನಯಾ ಗಣ ।
ತತ್ರಾಹಂ ತವ ಭಕ್ತಿಂ ಚ ಪರೀಕ್ಷ್ಯ ಸುಚಿರಂ ಗಣ ॥೪೯॥

ಕಮಲಿನ್ಯಾ ವಿವಾಹಂ ತೇ ಕಾರಯಾಮಿ ಸಮಾಹಿತಃ ।
ಸೇತುಬಂಧೇಽಹಮಮಲೋ ಹಾಲಾಸ್ಯೇಽಪ್ಯಹಮಾಸ್ಥಿತಃ ॥೫೦॥

ತಾಮ್ರಪರ್ಣ್ಯಾಸ್ತಟೇ ಪುಣ್ಯೇ ಶಿವಕ್ಷೇತ್ರೇಷು ಸಂಸ್ಥಿತಃ ।
ಅನ್ಯಾನಿ ಪುಣ್ಯಸ್ಥಾನಾನಿ ಮಮೈವ ಗಣಪೋತ್ತಮ ॥೫೧॥

ಏಷು ಸ್ಥಾನೇಷು ನಿಯತಂ ಸಂವಸನ್ತಾನಧಾರಯಾ ।
ಸ್ತುತ್ವಾ ಮಾಂ ನಿಯತೋ ಗೌರ್ಯ್ಯಾಂ ಕಮಲಿನ್ಯಾನಯಾ ಸಹ ॥೫೨॥

ಭಕ್ತ್ಯಾ ಮಾಂ ಸಮಭ್ಯರ್ಚ್ಯ ಕೈಲಾಸಂ ತ್ವಂ ಸದಾ ಮಮ ।
ಸಮಾಯಾಹಿ ಮುನಿಶ್ರೇಷ್ಠೈಃ ಶೈವೈಃ ಸರ್ವಜನಾರ್ಚಿತೈಃ ॥೫೩॥

ಚೋಲೇ ದ್ರವಿಡಭೂಪಾಲೈಃ ಸೇವಿತೇ ದೇಶಸತ್ತಮೇ ॥೫೪॥

---

ಹಿಂದೆ ಲಕ್ಷ್ಮೀದೇವಿಯು ಅಲ್ಲಿ ಬಹಳಕಾಲ ತಪಸ್ಸುಮಾಡಿದ್ದಳು. ನೀನು ಅಲ್ಲಿಯೇ (ಕಮಲಾಲಯದಲ್ಲಿಯೇ) ಈ ಕಮಲನಿಯೊಡನೆ ನೆಲಸಿ ನನ್ನನ್ನು ಸೇವಿಸು. ||೪೩-೪೪-೪೫-೪೬-೪೭-೪೮||

ಗಣಶ್ರೇಷ್ಠನಾದ ಸುಂದರನೇ, ಸ್ವಲ್ಪಕಾಲ ನಿನ್ನ ಭಕ್ತಿಯನ್ನು ಪರೀಕ್ಷೆ ಮಾಡಿ, ಅನಂತರ ಈ ಕಮಲಿನಿಯೊಡನೆ ನಿನಗೆ ಮದುವೆಮಾಡಿಸುತ್ತೇನೆ. ಎಲೈ ಗಣಾಗ್ರಣಿಯೇ! ಸೇತುಬಂಧ ಕ್ಷೇತ್ರದಲ್ಲಿಯೂ ನಾನು ಶುದ್ಧಾತ್ಮನಾಗಿರುತ್ತೇನೆ. ಹಾಲಾಸ್ಯದಲ್ಲಿಯೂ, ತಾಮ್ರಪರ್ಣೀನದಿಯ ದಡದಲ್ಲಿರುವ ಪುಣ್ಯಕರವಾದ ಶಿವಕ್ಷೇತ್ರಗಳಲ್ಲಿಯೂ ನಾನಿರುವೆನು. ಎಲೈ ಗಣಾಗ್ರಣಿಯೇ! ಇವಲ್ಲದೇ ಇನ್ನೂ ಅನೇಕ ಬೇರೆ ನನ್ನ ಪುಣ್ಯಸ್ಥಾನಗಳಿರುವುವು. ಆದರೆ ಈಗ ನಾನು ಹೇಳಿದ ಸ್ಥಾನಗಳಲ್ಲಿ ನಾನು ನಿಯತವಾಗಿ ವಾಸಮಾಡುತ್ತಿರುವೆನೆಂದು ತಿಳಿ; ಗೌರೀದೇವಿ ಯೊಡನೆ ನಿಯತನಾಗಿ ನೆಲಸಿರುವ ನನ್ನನ್ನು ಸಂಗೀತಧಾರಾಪೂರ್ವಕವಾಗಿ ಸ್ತೋತ್ರಮಾಡಿ, ಈ ಕಮಲಿನಿಯೊಡನೆ ನನ್ನನ್ನು ಚೆನ್ನಾಗಿ ಪೂಜೆಮಾಡಿ, ಅನಂತರ,

ಕಮಲಾಲಯಸಂಸ್ಥಿತೋಽಸ್ಮಿ ನಿತ್ಯಂ
ಮುಚುಕುಂದಾದ್ಯಭಿಸೇವ್ಯಮಾನಪಾದಃ ।
ಹರಿಣಾ ಶತಮನ್ಯುನಾ ಚ ತತ್ರ
ಗಣವೃಂದೈರ್ಮುನಿಭಿಶ್ಚ ಸೇವಿತೋಽಸ್ಮಿ ॥೫೫॥

ತತ್ರ ತ್ವಂ ಗಣಪಾಗ್ರಣೀಽನಯಾ ತ್ವಂ
ಸಂಸೇವ್ಯಾಮರವೃಂದಪೂಜ್ಯಪಾದ ।
ಪರಿತುಷ್ಟಃ ಸತತಂ ಮಮೈವ ಭಕ್ತ್ಯಾ
ಮಮ ಭಕ್ತೈರನಯಾ ವಿಲಾಸಲೋಲಃ ॥೫೬॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಸುಂದರಂ
ಪ್ರತಿ ಶಿವಸಾನ್ನಿಧ್ಯಸ್ಥಾನವರ್ಣನಂ ನಾಮ ಏಕೋನವಿಂಶೋಽಧ್ಯಾಯಃ

---

ಸಕಲಜನ ಪೂಜಿತರಾದ ಶೈವರಿಂದಲೂ, ಮುನಿಪುಂಗವರಿಂದಲೂ ಪರಿವೃತನಾಗಿ ದ್ರವಿಡರಾಜರಿಂದ ಸೇವಿಸಲ್ಪಟ್ಟಿರುವ ಶ್ರೇಷ್ಠವಾದ ಚೋಲದೇಶದಲ್ಲಿ ಕೆಲವು ಕಾಲವಿದ್ದು ಆಮೇಲೆ ನನ್ನ ಕೈಲಾಸಕ್ಕೆ ಬಂದುಸೇರುವನಾಗು. ॥೪೯-೫೦-೫೧-೫೨-೫೩-೫೪॥

ನಿತ್ಯವೂ ವಿಷ್ಣು, ಬ್ರಹ್ಮಾದಿಗಳಿಂದ ಸೇವಿಸಲ್ಪಟ್ಟ ಪಾದಕಮಲವುಳ್ಳವನಾಗಿ ಆ ಕಮಲಾಲಯದಲ್ಲಿಯೇ ನಾನು ಸ್ಥಿರವಾಗಿ ನೆಲಸಿರುವೆನು. ಅಲ್ಲಿ ವಿಷ್ಣುವೂ ಇಂದ್ರನೂ ಇತರದೇವಗಣಗಳ ಗುಂಪೂ, ಮತ್ತು ಮುನಿಗಳೂ ಯಾವಾಗಲೂ ನನ್ನನ್ನು ಸೇವಿಸುತ್ತಿರುವರು. ॥೫೫॥

ಎಲೈ ಗಣಾಧಿಪತಿಮುಖ್ಯನೇ! ಆ ಕಮಲಾಲಯದಲ್ಲಿ ನೀನು ಈ ಕಮಲಿನಿಯೊಡನೆ, ದೇವತೆಗಳ ಗುಂಪಿನಿಂದ ಸೇವಿಸಲ್ಪಡುತ್ತಿರುವ ನನ್ನನ್ನು ಭಕ್ತಿಯಿಂದ ಸಂತೋಷಭರಿತರಾಗಿ ಸೇವೆಮಾಡುತ್ತಿರುವ ನನ್ನ ಭಕ್ತರೊಡನೆ ಕೂಡಿ ಮತ್ತು ಈ ಕಮಲಿನಿಯೊಡನೆ ವಿಹರಿಸುವದರಲ್ಲಿ ನೀನು ಅತ್ಯಂತಾಸಕ್ತನಾಗಿ ವಾಸಮಾಡೆಂದು ಮಹೇಶ್ವರನು ಸುಂದರನಿಗೆ ಅಪ್ಪಣೆಮಾಡಿದನು. ॥೫೬॥

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಸುಂದರನನ್ನು ಕುರಿತು ಶಿವಸಾನ್ನಿಧ್ಯವಿರುವ ಸ್ಥಾನಗಳ ವರ್ಣನೆಯೆಂಬ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ವಿಂಶೋಽಧ್ಯಾಯಃ

॥ ಜೈಗೀಷವ್ಯ ಉವಾಚ ॥

ಸಗಣಃ ಸುಂದರಃ ಶಂಭೋಃ ಕಥಂ ಕ್ಷೋಣ್ಯಾಮವಾತರತ್ ।
ಸಾ ವೈ ಕಥಂ ಕಮಲಿನೀ ಸಂಜಾತಾ ಭುವಿ ಕಸ್ಯ ವಾ ॥೧॥

ಕುಲೇ ವಿವೃದ್ಧಿಮಗಮದುದ್ವಾಹೋ ವಾ ಕಥಂ ತಯೋಃ ।
ತದ್ವದಸ್ವಾನುಪೂರ್ವೇಣ ಗಣೇಂದ್ರಚರಿತಂ ಮಹತ್ ॥೨॥

ಸ್ಕಂದಾನಂದಿತಮಂದಾರ ತ್ವಂ ಸಂಕ್ರಂದನವಂದಿತ ।
ಸರ್ವೈಭಿರ್ಮುನಿಭಿರ್ದೇವೈರ್ಗಣೈರುತ್ಕಂಠತೇ ಮನಃ ॥೩॥

---

## ಇಪ್ಪತ್ತನೆಯ ಅಧ್ಯಾಯ

ಆನಂದಭರಿತನೂ, ಕಲ್ಪವೃಕ್ಷದಿಂದ ಪೂಜಿತನೂ, ಇಂದ್ರನಿಂದ ನಮಸ್ಕೃತನೂ ಆದ ಷಣ್ಮುಖಸ್ವಾಮಿಯೇ, ಶಂಕರನ ಗಣಮುಖ್ಯನಾದ ಸುಂದರನು ಭೂಮಿಯಲ್ಲಿ ಹೇಗೆ ಅವತರಿಸಿದನು? ಆ ಕಮಲಿನಿಯೂ ಭೂಮಿಯಲ್ಲಿ ಯಾರ ಮಗಳಾಗಿ ಜನಿಸಿದಳು? ಅವರಿಬ್ಬರೂ ಯಾವ ವಂಶದಲ್ಲಿ ಬೆಳೆದರು? ಹೇಗೆ ಅವರಿಬ್ಬರಿಗೂ ಮದುವೆಯಾಯಿತು? ಆ ಗಣೇಂದ್ರನ ಮಹಾಚರಿತ್ರೆಯನ್ನು ಕ್ರಮವಾಗಿ ನನಗೆ ಹೇಳು. ಎಲೈ ಷಣ್ಮುಖನೇ, ಈ ಮುನಿಗಳೊಡನೆಯೂ ದೇವತೆಗಳ ಗುಂಪಿನೊಡನೆಯೂ ಕೂಡಿ ಶ್ರೀ ಮಹಾವಿಷ್ಣುವಿನಿಂದ ಪೂಜಿಸಲ್ಪಟ್ಟ ಪಾದಕಮಲವುಳ್ಳ ಆ ಶ್ರೀಕಂಠನ ದಿವ್ಯ ಚರಿತ್ರೆಯನ್ನೂ, ಹಾಗೆಯೇ ಆತನ ಭಕ್ತನ ಚರಿತ್ರೆಯನ್ನೂ

ವೈಕುಂಠಪೂಜ್ಯಪಾದಾಬ್ಜಶ್ರೀಕಂಠಚರಿತಂ ಸದಾ।
ಶ್ರೋತುಮುತ್ಕಂಠಿತಂ ಚೇತೋ ಭಕ್ತಸ್ಯ ಚರಿತಂ ಸದಾ ॥೪॥

॥ ಸೂತ ಉವಾಚ ॥

ತಚ್ಛ್ರುತ್ವಾ ತಂ ಮುನಿಂ ಪ್ರಾಹ ಕ್ರೌಂಚಾರಿಶ್ಚರಿತಂ ಮಹತ್।
ಶೃಣುಷ್ವೇತಿ ತಮಾಹೂಯ ಧ್ಯಾಯಂಛಿವಪದಾಂಬುಜಂ ॥೫॥

ಉವಾಚ ಚರಿತಂ ತಸ್ಯ ಸುಂದರಸ್ಯ ಗಣಾಗ್ರಣೀಃ ॥೬॥

॥ ಸ್ಕಂದ ಉವಾಚ ॥

ಶೃಣುಷ್ವ ಜೈಗೀಷವ್ಯಾದ್ಯ ಕಲಾವಪಿ ತಪೋಬಲೈಃ।
ಭವಂತಿ ಶಿವಪಾದಾಬ್ಜಧ್ಯಾನನಿರ್ಧೂತಕಲ್ಮಷಾಃ ॥೭॥

ಸ ಸುಂದರಃ ಶಿವಾದೇಶಾತ್ಕಮಲಿನ್ಯಾ ಭುವಂ ಗತಃ।
ಕಸ್ಯಚಿಚ್ಛಿವಭಕ್ತಸ್ಯ ಶಿವಕ್ಷೇತ್ರನಿವಾಸಿನಃ ॥೮॥

ಜಂಬೂದ್ವೀಪೇ ಸಹ್ಯಜಾಯಾಸ್ತೀರೇ ಜನ್ಮಾಪಸತ್ತಮಃ।
ವಿಪ್ರಸ್ಯ ದೇವದೇವಸ್ಯ ಪ್ರಸಾದಾದ್ಭಕ್ತಿತತ್ಪರಃ ॥೯॥

---

ಯಾವಾಗಲೂ ಕೇಳಲು ನನ್ನ ಮನಸ್ಸು ಕುತೂಹಲಯುಕ್ತವಾಗಿರುವುದು ಎಂದು ಜೈಗೀಷವ್ಯನು ಕುಮಾರಸ್ವಾಮಿಯನ್ನು ಪ್ರಾರ್ಥಿಸಿದನು. ॥೧-೨-೩-೪॥

ಆ ಜೈಗೀಷವ್ಯನ ಮಾತನ್ನು ಕೇಳಿ ಷಣ್ಮುಖನು, ಅವನಿಚ್ಛೆಯಂತೆ ಆ ಸುಂದರಭಕ್ತನ ಮಹಾಚರಿತ್ರೆಯನ್ನು, ವಿಶ್ವಾಸಪೂರ್ವಕವಾಗಿ ಶಿವನ ಪಾದಕಮಲಗಳನ್ನು ಧ್ಯಾನಮಾಡುತ್ತಾ ಕೇಳೆಂಬುದಾಗಿ ಹೀಗೆ ನುಡಿದನೆಂದು ಸೂತರು ಶೌನಕಾದಿಗಳಿಗೆ ಹೇಳಿದರು. ॥೫-೬॥

ಎಲೈ ಜೈಗೀಷವ್ಯನೇ! ಕೇಳು; ಈ ಕಲಿಯುಗದಲ್ಲಿಯೂ ಪೂರ್ವಜನ್ಮಾರ್ಜಿತವಾದ ತಪೋಬಲದಿಂದ ಶಿವನ ಪಾದಕಮಲ ಧ್ಯಾನಾಸಕ್ತರಾಗಿ, ಅದರಿಂದ ತೊಡೆದು ಹೋದ ಪಾಪಗಳುಳ್ಳ ಅನೇಕ ಈಶ್ವರಭಕ್ತಶ್ರೇಷ್ಠರು ಜನಿಸುತ್ತಾರೆ; ಅದರಂತೆ ಆ ಸುಂದರನೂ ಶಿವನ ಅಪ್ಪಣೆಯಿಂದ ಕಮಲಸಿಯೊಡನೆ ಭೂಮಿಗೆ ಬಂದು ಜಂಬೂದ್ವೀಪದಲ್ಲಿ ಕಾವೇರೀನದಿಯ ದಡದಲ್ಲಿನ ಶಿವಕ್ಷೇತ್ರದಲ್ಲಿ ವಾಸಮಾಡುತ್ತಿರುವ ಒಬ್ಬ

ಕುಮಾರಜನ್ಮಾನಂದೇನ ನಿಧಿಂ ಪ್ರಾಪ್ಯೇವ ನಿರ್ಧನಃ ।
ಸಮಾರ್ಧಿರಿವ ಚಂದ್ರೇಣ ವೃದ್ಧಿಂ ಪ್ರಾಪ ಸ ಭೂಸುರಃ ॥೧೦॥

ವಿಪ್ರೇಷು ಶಿವಭಕ್ತೇಷು ದದೌ ಗಾಂ ಸಧನಾದಿಕಂ ।
ಕುಮಾರೋ ಮಾರಸಂಕಾಶಃ ಪೂಷವತ್ಸ ಪುಪೋಷ ಹ ॥೧೧॥

ತಂ ದೃಷ್ಟ್ವಾ ತತ್ಪಿತಾ ಮಾತಾ ಮೋದಾಬ್ಧಿ ನಿವಶಾಂತರೌ ।
ಅನ್ವಭೂತಾಂ ಚ ತದ್ಬಾಲ್ಯಂ ತತ್ಕ್ರೀಡಾಂ ನೇತ್ರಮಂಗಲಾಂ ॥೧೨॥

ಸ ಕಾಲೇ ಚೋಪನೀತಶ್ಚ ವೇದಾನ್ಜಗ್ರಾಹ ವೈ ಕ್ರಮಾತ್ ।
ಮಾತಂಗರಾಜಗಮನಂ ಯೌವನೋಲ್ಲಾಸಿತಾಂಗಕಂ ॥೧೩॥

ದೃಷ್ಟ್ವಾ ಕುಮಾರಂ ವಿಪ್ರೇಂದ್ರೋ ವಿವಾಹಾಯ ಮತಿಂ ವ್ಯಧಾತ್ ।
ಕನ್ಯಾಂ ವಿಪ್ರಕುಲೋದ್ಭೂತಾಂ ದೃಷ್ಟ್ವಾ ರೂಪವಯೋನ್ವಿತಾಂ॥೧೪॥

---

ಶೈವಧರ್ಮನಿರತನಾದವನಿಗೆ ಮಗನಾಗಿ ಉತ್ತಮ ಜನ್ಮತಾಳಿದನು. ದೇವಾದಿದೇವ ನಾದ ಆ ಶಂಕರನ ಅನುಗ್ರಹದಿಂದ ಜನ್ಮತಃ ಭಕ್ತಿತತ್ಪರನಾಗಿಯೇ ಇದ್ದನು. ॥೭-೮-೯॥

ಮಗನ ಜನ್ಮದಿಂದುಂಟಾದ ಆನಂದದಿಂದ, ನಿಧಿಯನ್ನು ಕಂಡ ಬಡವ ನಂತೆಯೂ, ಚಂದ್ರೋದಯವನ್ನು ನೋಡಿ ಉಕ್ಕುವ ಸಮುದ್ರದಂತೆಯೂ, ಆ ಬ್ರಾಹ್ಮಣನು ಅಭಿವೃದ್ಧಿಹೊಂದಿ ಸಂತೋಷಭರಿತನಾದನು. ಕೂಡಲೇ ಶೈವಸಂಪ್ರ ದಾಯಸ್ಥರಾದ ಬ್ರಾಹ್ಮಣರಿಗೆ ಗೋವುಗಳನ್ನೂ ಧನಧಾನ್ಯಾದಿಗಳನ್ನೂ ಪ್ರೀತಿಯಿಂದ ದಾನಮಾಡಿದನು. ಮನ್ಮಥಸದೃಶನಾದ ಆ ಕುಮಾರನು ಬಾಲಸೂರ್ಯನಂತೆ ದಿನ ದಿನವೂ ಪುಷ್ಟನಾಗುತ್ತಿದ್ದನು. ॥೧೦-೧೧॥

ಆ ಕುಮಾರನನ್ನು ನೋಡಿ ಅವನ ತಂದೆತಾಯಿಗಳು ಆನಂದಸಾಗರದಲ್ಲಿ ಮಗ್ನರಾಗಿಬಿಟ್ಟರು. ಕಣ್ಣುಗಳಿಗೆ ಮಂಗಳವನ್ನುಂಟುಮಾಡುವ ಆ ಮಗನ ಬಾಲ್ಯ ವನ್ನೂ ಮತ್ತು ಅವನ ಆಟಪಾಟಗಳನ್ನೂ ನೋಡಿ ಆನಂದವನ್ನನುಭವಿಸಿದರು. ಸರಿಯಾದ ಕಾಲದಲ್ಲೇ ತಂದೆಯಿಂದ ಉಪನಯನಸಂಸ್ಕಾರಹೊಂದಿ ಆ ಬಾಲಕನು ಕ್ರಮವಾಗಿ ವೇದಗಳನ್ನು ಅಧ್ಯಯನಮಾಡಿದನು. ಸಲಗನಂತೆ ಗಂಭೀರವಾಗಿ ನಡೆ ಯುತ್ತಾ ಯೌವನದಿಂದ ಶೋಭಿಸುತ್ತಿರುವ ಅವಯವವುಳ್ಳವನಾದನು. ಅಂತಹ

ಬಾಂಧವೈಸ್ತದ್ಗೃಹಂ ಗತ್ವಾ ಸಂಭಾರೈರ್ಭೂಷಣಾದಿಭಿಃ ।
ಜ್ಯೋತಿರ್ವಿದಾ ಸಮಾದಿಷ್ಟೇ ಮುಹೂರ್ತೇ ಕರ್ತುಮುದ್ಯತಃ ॥೧೫॥

ವಿವಾಹಂ ತಸ್ಯ ವಿಧಿವದ್ಬಾಂಧವೈಸ್ತತ್ಪಿತಾ ಮುದಾ ।
ಏತಸ್ಮಿನ್ನಂತರೇ ತತ್ರ ವೃದ್ಧವಿಪ್ರಾಕೃತಿಃ ಶಿವಃ ॥೧೬॥

ಪತ್ರಂ ತತ್ರ ಸಮಾದಾಯ ಪ್ರಾದರ್ಶಯದಹೋ ತದಾ ।
ತತ್ಪಿತ್ರೋಶ್ಚೈವ ಬಂಧೂನಾಂ ದಾಸ್ಯಾರ್ಥಂ ಸುಂದರಸ್ಯ ಹಿ ॥೧೭॥

ಶೃಣುಧ್ವಂ ಬಾಂಧವಾ ಯೋಽಸ್ಯ ಸುಂದರೋಽಯಂ ದ್ವಿಜಾತ್ಮಜಃ ।
ಮಯಾ ಪರಿಗೃಹೀತಶ್ಚ ಪತ್ರಂ ಸಂದೃಶ್ಯತಾಮಿದಂ ॥೧೮॥

ತದ್ವಿಪ್ರವಚಸಾ ತಸ್ಯ ಬಾಂಧವಾಃ ಪಿತರೌ ಚ ತೌ ।
ದೃಷ್ಟ್ವಾ ತತ್ಪತ್ರಮತುಲಂ ತದ್ದಾಸ್ಯಪರವಾಚಕಂ ॥೧೯॥

---

ಯುವಕ ಕುಮಾರನನ್ನು ನೋಡಿ ಆ ಬ್ರಾಹ್ಮಣೋತ್ತಮನು ಬ್ರಾಹ್ಮಣಕುಲದಲ್ಲಿ ಹುಟ್ಟಿ, ಸೌಂದರ್ಯದಿಂದಲೂ, ಅನುರೂಪವಾದ ವಯಸ್ಸಿನಿಂದಲೂ, ಕುಲಶೀಲಗಳಿಂದಲೂ ಕೂಡಿದ ಹೆಣ್ಣನ್ನು ನೋಡಿ, ಮದುವೆಮಾಡಬೇಕೆಂದು ಯೋಚಿಸಿದನು. ॥೧೨-೧೩-೧೪॥

ಅದಕ್ಕಾಗಿ ಬ್ರಾಹ್ಮಣನು ಒಡವೆವಸ್ತ್ರಗಳೇ ಮೊದಲಾದ ಸಾಮಾನುಗಳನ್ನು ತೆಗೆದುಕೊಂಡು ತನ್ನ ಬಂಧುಬಾಂಧವರೊಡನೆ ಕನ್ಯಾರತ್ನವನ್ನು ಹುಡುಕಿ ಜೋಯಿಸರು ಹೇಳಿದ ಶುಭಮುಹೂರ್ತದಲ್ಲಿ ಸಂತೋಷದಿಂದ ವಿಧಿಪ್ರಕಾರ ಮದುವೆ ಮಾಡಬೇಕೆಂದು ಪ್ರಯತ್ನಿಸಿದನು. ಈ ಸಂದರ್ಭದಲ್ಲಿ ಶಿವನು ಮುದುಕ ಬ್ರಾಹ್ಮಣನ ವೇಷವನ್ನು ಹಾಕಿಕೊಂಡು ತನ್ನ ಕೈಯಲ್ಲಿ ಒಂದು ಕಾಗದವನ್ನು ಹಿಡಿದುಕೊಂಡು ಅವನ ತಂದೆತಾಯಿಗಳಿಗೂ, ಸುಂದರನಿಗೆ ಹೆಣ್ಣುಕೊಡಲು ಬಂದಿದ್ದ ಬಂಧುಗಳಿಗೂ ಅದನ್ನು ತೋರಿಸಿ ಹೀಗೆಂದನು. ॥೧೫-೧೬-೧೭॥

ಓ ಸುಂದರನ ಬಂಧುಗಳೇ, ನೀವೆಲ್ಲರೂ ಕೇಳಿರಿ ; ಬ್ರಾಹ್ಮಣ ಕುಮಾರನಾದ ಈ ಸುಂದರನು ನನ್ನಿಂದ ಸೇವಕನಾಗಿ ಸ್ವೀಕರಿಸಲ್ಪಟ್ಟಿರುತ್ತಾನೆ. ಇಗೋ, ಈ ಪತ್ರವನ್ನು ನೋಡಿರಿ, ಎಂದು ವೃದ್ಧಬ್ರಾಹ್ಮಣನು ಹೇಳಲು, ಆ ವಿಪ್ರವಾಕ್ಯವನ್ನು ಕೇಳಿ ಅವನ ಬಂಧುಗಳೂ ಮತ್ತು ತಂದೆತಾಯಿಗಳೂ ಸುಂದರನು ಸೇವಕನೆಂಬು

ಹ್ರಿಯಾ ನತಾನನಾಃ ಸರ್ವೇ ಪಿತರೌ ತೇ ಚ ಬಾಂಧವಾಃ ।
ವಿಪ್ರಮೇನಂ ಸುಂದರಾದ್ಯ ಅನುಗಚ್ಛಸ್ವ ಸರ್ವದಾ ॥೨೦॥

ಶರಣ್ಯಃ ಶರಣೀಯಸ್ತೇ ಪತ್ರಸಂದರ್ಶನೇನ ಹಿ ।
ಇತ್ಥಂ ತದ್ಬಾಂಧವವಚೋ ಬುಭೂಷಂಸ್ತೇನ ಸೋ ಯಯೌ ॥೨೧॥

ತಂ ಸುಂದರಂ ಗೃಹೀತ್ವೈವಂ ಜಗಾಮ ಸ್ವೇಪ್ಸಿತಾಂ ದಿಶಂ ।
ತೇ ಬಾಂಧವಾಸ್ತತ್ಪಿತರೌ ದುಃಖವ್ಯಾಕುಲಮಾನಸಾಃ ॥೨೨॥

ಯಯುಸ್ತೇ ಸ್ವಾಶ್ರಮಾಣ್ಯೇವ ಮಾನಯಂತೋ ಗತಿಂ ವಿಧೇಃ ।
ತತ್ರ ವೃದ್ಧೇನ ವಿಪ್ರೇಣ ಯಯೌ ಕಂಚಿಚ್ಛಿವಾಲಯಂ ॥೨೩॥

ತಿರೋಭವತ್ಸವೃದ್ಧೋಽಪಿ ತಸ್ಮಿನ್ಲಿಂಗೇ ಮನೋಹರೇ ।
ಸುಂದರೋ ವಿಸ್ಮಯಾವಿಷ್ಟಸ್ತುಷ್ಟಾವ ಶಶಿಶೇಖರಂ ॥೨೪॥

---

ದನ್ನು ಹೇಳುತ್ತಿರುವ ಅಸದೃಶವಾದ ಆ ಪತ್ರವನ್ನು ನೋಡಿ, ನಾಚಿಕೆಯಿಂದ ತಲೆಬಾಗಿ, ತಂದೆತಾಯಿಗಳೂ ಮತ್ತು ಬಾಂಧವರೂ ಸಹ ಆ ಸುಂದರನನ್ನು ಕುರಿತು ಎಲೈ ಸುಂದರನೇ, ಯಾವಾಗಲೂ ಈ ಬ್ರಾಹ್ಮಣನನ್ನು ಹಿಂಬಾಲಿಸಿ ಅವನು ಹೇಳಿದಂತೆ ನೀನು ನಡೆಯಬೇಕು. ಇವನೇ ನಿನಗೆ ಶರಣನೆಂದು ಈ ಪತ್ರದಲ್ಲಿ ಬರೆದಿರುವುದು. ಇದನ್ನು ನೋಡು. ನಿನಗೆ ತಿಳಿಯುವುದು ಎಂದು ಹೇಳಿದರು. ॥೧೮-೧೯-೨೦॥

ಹೀಗೆ ಆ ಬಂಧುಗಳ ಮಾತನ್ನು ನಡೆಸುತ್ತಾ ಸುಂದರನು ವೃದ್ಧ ಬ್ರಾಹ್ಮಣನೊಡನೆ ಹೊರಟನು. ಆ ಬ್ರಾಹ್ಮಣನಾದರೋ ಸುಂದರನನ್ನು ಕರೆದುಕೊಂಡು ತನಗೆ ಇಷ್ಟವಾದ ದಿಕ್ಕಿಗೆ ಹೊರಟುಹೋದನು. ಅವನ ಬಂಧುಗಳೂ ಮತ್ತು ತಂದೆತಾಯಿಗಳೂ ದುಃಖದಿಂದ ವ್ಯಾಕುಲಗೊಂಡ ಮನಸ್ಸುಳ್ಳವರಾಗಿ ಅದೃಷ್ಟಘಟನೆಯನ್ನು ಯೋಚಿಸುತ್ತಾ ತಮ್ಮ ತಮ್ಮ ಮನೆಗೆ ಹಿಂತಿರುಗಿದರು. ॥೨೧-೨೨॥

ಆ ಸುಂದರನೂ ವೃದ್ಧ ಬ್ರಾಹ್ಮಣನ ಹಿಂದೆಯೇ ಹೊರಟು ಒಂದು ಶಿವ ದೇವಾಲಯಕ್ಕೆ ಹೋದನು. ಅಲ್ಲಿ ಆ ಮುದುಕನು ಅಲ್ಲಿದ್ದ ಮನೋಹರವಾದ ಶಿವಲಿಂಗದಲ್ಲಿ ಐಕ್ಯವಾಗಿ ಹೋದನು. ಆಗ ಅದನ್ನು ನೋಡಿ ಸುಂದರನು

॥ ಸುಂದರ ಉವಾಚ ॥

**ವ್ಯೋಮ ತ್ವಂ ವ್ಯೋಮಕೇಶ ಶ್ರುತಿಶಿರವಚಸಾಂ ಸೀಮಭೂಮಾ ತ್ವಮೇವ**
**ಧಾಮಾ ಸೋಮಾದಿಕಾಮಸ್ತವ ವರಮಹಿಮಾ ಸಾಮಸಿಮಾಸ್ತುತಸ್ತ್ವಂ ।**
**ಸಂಸಾರೋದ್ದಾಮಘಾಮಾ ಪ್ರಶಿಥಿಲತನುಭಿಃ ಸೇವನೀಯಸ್ತ್ವಮೀಶೋ**
**ಮಾಮೇವಂ ದಾಸ್ಯಭಾವೇ ನಿಯತಿ ಪರವಶಂ ಭಕ್ತಿಭಾವೇ ಕುರುಷ್ವ ॥೨೫॥**

**ಇತಿ ಸುಂದರವಾಕ್ಯೇನ ದೇವಸ್ತದ್ದರ್ಶನಂ ಗತಃ ।**
**ಆರುಹ್ಯ ವೃಷಭಂ ದೇವಃ ಸಹ ದೇವ್ಯಾದ್ರಿಕನ್ಯಯಾ ॥೨೬॥**

**ಜಟಾಗಂಗಾತರಂಗಾತ್ತಚಲದಿಂದುಕಲಾಧರಃ ।**
**ಖೇಲದ್ಭಿರ್ಭುಜಗದ್ವಂದ್ವೈರಾಬದ್ಧಮುಕುಟೀತಟಃ ॥೨೭॥**

**ಪತಂಗಾನಲಸೋಮೋದ್ಯತ್ಸಾರಾಪಾರೀಣಲೋಚನಃ ।**
**ಗೌರೀಮಣಿಮಯಾದರ್ಶಕಪೋಲಕಲಲಂಬಿನಾ ॥೨೮॥**

---

ಆಶ್ಚರ್ಯಚಕಿತನಾಗಿ ಚಂದ್ರಶೇಖರನನ್ನು ಕುರಿತು ಈರೀತಿ ಸ್ತೋತ್ರಮಾಡಿದನು. ||೨೩-೨೪||

ಆಕಾಶಸ್ವರೂಪನಾದ ಸ್ವಾಮಿಯೇ, ನೀನು ಆಕಾಶವನ್ನೇ ಕೂದಲಾಗುಳ್ಳವನು. ವೇದಾಂತವಾಕ್ಯಗಳಿಗೆ ಎಲ್ಲೆಯೂ, ಆಶ್ರಯನೂ ನೀನೇ ಆಗಿರುವೆ. ನೀನೇ ಚಂದ್ರಸೂರ್ಯಾದಿಗಳ ತೇಜಸ್ಸಿಗೆ ಆಶ್ರಯನು. ಸುಂದರನಾದ ನಿನ್ನ ಮಹಿಮೆಯು ಶ್ರೇಷ್ಠವಾದದ್ದು. ಸಾಮವೇದಗಳಿಂದ ನೀನು ಸರ್ವದಾ ಸ್ತೋತ್ರಮಾಡಲ್ಪಡುವೆ. ಈ ಸಂಸಾರವೆಂಬ ತೀವ್ರತಿಮಿರಗಳಿಂದ ಕೃಶವಾದ ದೇಹವುಳ್ಳ ಮಾನವರಿಂದ ಸೇವಾರ್ಹನಾಗಿರುವ ಈಶ್ವರನೂ ನೀನೇ ಆಗಿರುವೆ. ದೇವ, ಈರೀತಿ ಸೇವಕವೃತ್ತಿಯಲ್ಲಿ ನಿಯತನಾಗಿ ಪರಾಧೀನನಾಗಿರುವ ನನಗೆ ನಿನ್ನ ಭಕ್ತಿಭಾವನೆಯುಂಟಾಗುವಂತೆ ಕರುಣಿಸು ಎಂದು ಸುಂದರನು ಶಿವನನ್ನು ಕುರಿತು ಸ್ತೋತ್ರಮಾಡಿದನು. ||೨೫||

ಈ ರೀತಿಯಾದ ಆ ಸುಂದರನ ಸ್ತುತಿವಾಕ್ಯಗಳಿಗೆ ಮೆಚ್ಚಿ ಮಹಾದೇವನು ಅಲ್ಲಿಯೇ ಸುಂದರನಿಗೆ ಪ್ರತ್ಯಕ್ಷನಾದನು. ಆಗ ಮಹಾದೇವನು ಪರ್ವತರಾಜಕುಮಾರಿಯೊಡನೆ ವೃಷಭವನ್ನೇರಿ, ಜಡೆಯಲ್ಲಿರುವ ಗಂಗಾನದಿಯ ಅಲೆಗಳಿಂದ ಚಲಿಸುತ್ತಿರುವ ಚಂದ್ರಕಲೆಗಳನ್ನು ಧರಿಸಿದ್ದನು. ಅವನ ಕಿರೀಟದಲ್ಲಿ ಆಟವಾಡು

ಮಂಡಿತಂ ಕುಂಡಲೀಶಾನಕುಂಡಲೇನ ಫಣೀಭೃತಾ ।
ದಂತಮುಕ್ತಾನಿಬದ್ಧೋಷ್ಠ ಪ್ರವಾಲಮಣಿಪೇಟಕಂ ॥೨೯॥

ಸ್ಮಿತಶ್ರೀಪುಂಜಕಿಂಜಲ್ಕಮಂಜುಲಾನನಪಂಕಜಂ ।
ಕಂಠಶಂಖನಿಧಿಸ್ಫೂರ್ಜನ್ಮದಿರೋರ್ಜಿತವೈಭವಂ ॥೩೦॥

ಮೃಗಟಂಕವರಾಭೀತಿವೃತ್ತಹಸ್ತಚತುಷ್ಟಯಂ ।
ವೃಷಧಾಟೀಚಲದ್ಭಾರರುದ್ರಾಕ್ಷಸ್ಥಾನ ವೈಭವಂ ॥೩೧॥

ಕಕುದಾಸ್ಫಾಲನೋದಂಚತ್ಫಣೀಕಂಕಣಸಿಂಜಿತಂ ।
ಸಹಾರೂಢಾದ್ರಿಜಾಶ್ಲೇಷೋದಂಚದ್ರೋಮಾಂಚಕಂಚುಕಂ ॥೩೨॥

---

ತ್ತಿರುವ ಎರಡು ಸರ್ಪಗಳು ತಲೆಯ ಕಿರೀಟವನ್ನು ಹೆಚ್ಚಾಗಿ ಅಲಂಕಾರಗೊಳಿಸಿದ್ದುವು. ಸೂರ್ಯಚಂದ್ರಾಗ್ನಿರೂಪವಾದ ಮೂರುಕಣ್ಣುಗಳಿಂದ ಶೋಭಿಸುತ್ತಾ, ಗೌರೀದೇವಿಯ ರತ್ನಮಯವಾದ ಕನ್ನಡಿಯಿಂತಿರುವ ಕಪೋಲದಲ್ಲಿ ಕುಂಡಲೀಶ್ವರನೆನಿಸಿದ ತನ್ನ ಸರ್ಪರೂಪವಾದ ಕುಂಡಲವು ಅಲಂಕೃತವಾಗಿ ಪ್ರತಿಬಿಂಬಿತವಾಗಿದ್ದಿತು. ಮುತ್ತುಗಳಂತಿರುವ ಶುಭ್ರವಾದ ಹಲ್ಲುಗಳಿಂದಲೂ, ಹವಳದಂತಿರುವ ಕೆಂದುಟಿಗಳಿಂದಲೂ ಯುಕ್ತವಾದ ದೇವನ ಮುಖವು ರತ್ನದ ಪೆಟ್ಟಿಗೆಯಂತೆ ಕಾಣುತ್ತಿದ್ದಿತು. ||೨೬-೨೭-೨೮-೨೯||

ಮಂದಹಾಸವನ್ನು ಬೀರುತ್ತಿರುವ ಮುಖಕಾಂತಿಯ ಸಮೂಹ ಮತ್ತು ಕೇಸರ ಇವುಗಳಿಂದ ಮನೋಹರವಾದ ಮುಖಕಮಲವುಳ್ಳವನೂ, ಶಂಖದಂತಿರುವ ಕಂಠದಿಂದ ಶೋಭಿಸುತ್ತಿರುವ ಮದ್ಯಪಾನದಿಂದ (ಲಕ್ಷ್ಮಿಯಿಂದ) ಉದ್ರಿಕ್ತವೈಭವವುಳ್ಳವನೂ, ಜಿಂಕೆ, ಟಂಕ, (ಉಳಿ) ವರದ ಮತ್ತು ಅಭಯಮುದ್ರೆಗಳುಳ್ಳ ನಾಲ್ಕು ಕೈಗಳುಳ್ಳವನೂ, ವೃಷಭದ ಮೇಲೆ ತನ್ನ ಭಾರವನ್ನಿಟ್ಟು ಸಂಚರಿಸುತ್ತಾ ರುದ್ರಾಕ್ಷಗಳ ಸ್ಥಾನಸನ್ನಿವೇಶದಿಂದ ವೈಭವವುಳ್ಳವನೂ ಆದ ಮಹಾದೇವನು ವೃಷಭದ ಹೆಗಲನ್ನು ತಟ್ಟುವುದರಲ್ಲಿ ಪ್ರಕಾಶಮಾನವಾದ ಸರ್ಪಕಂಕಣದ ನಾದವುಳ್ಳವನಾಗಿ, ತನ್ನ ಜೊತೆಯಲ್ಲಿ ವೃಷಭವನ್ನೇರಿರುವ ಪಾರ್ವತಿಯ ಆಲಿಂಗನದಿಂದ ರೋಮಾಂಚಿತವಾದ ಕಂಚುಕವುಳ್ಳವನಾಗಿ ವಿರಾಜಿಸುತ್ತಾ, ಸುಂದರನನ್ನು ನೋಡಿದನು. ||೩೦-೩೧-೩೨||

ಉತ್ತರೀಯಾಯಿತೋದ್ದಂಡವೇತಂಡಾಜಿನ ಮಂಡಿತಂ ।
ಕಟಿಸೂತ್ರೀಕೃತವ್ಯಾಲನದ್ಧವ್ಯಾಘ್ರಾಜಿನಾಂಬರಂ ॥೩೩॥

ಸುಮೇರುವರಕೋದಂಡಚಂಡಬಾಹುವಿರಾಜಿತಂ ।
ಹರಿಸೋಮಾನಲೋತ್ತೇಜಿಶರಶೋಭಿಕರಂ ಹರಂ ॥೩೪॥

ಆಖಂಡಲಾದಿಕೋಟೀರ ಕೋಟೀಮಣಿಮರೀಚಿಭಿಃ ।
ಆಮ್ರೇಡಿತಪ್ರಭಾಪೂರಸ್ಫೂರ್ಜನ್ನೀರಜಪಾದುಕಂ ॥೩೫॥

ಸೋಮಧಾಮಸಮಾನೋದ್ಯತ್ಕೋಟಿಕಂದರ್ಪಸನ್ನಿಭಂ ।
ಧೃತಕಾಠಿಣ್ಯವನ್ಮೂರ್ತಂ ಸಚ್ಚಿದಾನಂದಸಂಪದಂ ॥೩೬॥

ಆಕಾರಂ ವೀಕ್ಷ್ಯ ನೇತ್ರಾಭ್ಯಾಂ ಪ್ರಣಮತ್ಸುಂದರಸ್ತದಾ ।
ನನರ್ತ ದೇವಂ ವೀಕ್ಷ್ಯೈವಮಸ್ತುವೀದೀದೃಶಂ ಶಿವಂ ॥೩೭॥

---

ವಿಸ್ತಾರವಾದ ಗಜಚರ್ಮವನ್ನೇ ಉತ್ತರೀಯವನ್ನಾಗಿ ಮಾಡಿಕೊಂಡಿರುವವನೂ, ಸರ್ಪವನ್ನು ಕಟಿಸೂತ್ರವನ್ನಾಗಿಯೂ, ಹುಲಿಯ ಚರ್ಮವನ್ನು ಬಟ್ಟೆಯನ್ನಾಗಿಯೂ ಧರಿಸಿರುವವನೂ ಆದ ಮಹೇಶ್ವರನು ಸುಮೇರುಪರ್ವತವನ್ನೇ ಶ್ರೇಷ್ಠವಾದ ಬಿಲ್ಲಾಗಿ ಮಾಡಿಕೊಂಡು ಪ್ರಚಂಡವಾದ ಬಾಹುಗಳಿಂದ ವಿರಾಜಿಸುತ್ತಿದ್ದನು. ವಿಷ್ಣು, ಚಂದ್ರ, ಅಗ್ನಿ, ಇವರನ್ನೇ ಹರಿತವಾದ ಬಾಣಗಳನ್ನಾಗಿ ಮಾಡಿಕೊಂಡು ಹಿಡಿದಿರುವಂತೆ ತೋರುತ್ತಿರುವನು. ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ನಾಶಮಾಡಿಬಿಡುವವನೂ, ದೇವೇಂದ್ರನೇ ಮುಂತಾದ ದೇವತೆಗಳ ಕೋಟ್ಯಂತರ ಕಿರೀಟರತ್ನಕಾಂತಿಗಳಿಂದ ಪ್ರವಾಹರೂಪವಾಗಿ ಹೊಳೆಯುತ್ತಿರುವ ಕಮಲಸದೃಶಪಾದವುಳ್ಳವನೂ ಆದ ಮಹಾದೇವನು ತನ್ನ ಭಕ್ತನಿಗೆ ಪ್ರತ್ಯಕ್ಷನಾದನು. ॥೩೩-೩೪-೩೫॥

ಚಂದ್ರನಕಾಂತಿಗೆ ಸಮಾನವಾಗಿ ಶೋಭಿಸುತ್ತಾ ಕೋಟಿ ಮನ್ಮಥರಿಗೆ ಸದೃಶನಾಗಿರುವವನೂ, ಕಠಿಣವಾದ ಲಿಂಗಾದಿಮೂರ್ತಿಗಳನ್ನು ಧರಿಸಿರುವವನೂ, ಸಚ್ಚಿದಾನಂದರೂಪವಾದ ಸಂಪತ್ತನ್ನು ಹೊಂದಿರುವವನೂ, ಆದ ಪರಮೇಶ್ವರನ ರೂಪವನ್ನು ತನ್ನ ಎರಡು ಕಣ್ಣುಗಳಿಂದಲೂ ನೋಡಿ, ಆ ಸುಂದರನು ಆವನಿಗೆ ನಮಸ್ಕಾರ ಮಾಡಿದನು. ಅಂತಹ ದಿವ್ಯರೂಪವನ್ನು ನೋಡಿ ಆ ಸುಂದರನು ದೇವದೇವನ ಮುಂದೆ ಭಕ್ತಿಪರವಶನಾಗಿ ನರ್ತನಮಾಡಿ, ನಾನಾರೀತಿ ಸ್ತೋತ್ರಮಾಡಿದನು.

ಸುಂದರಃ ಸ ತದಾ ಚಿಂತಾಸಂಸಾರೇ ತಾಮರೀರಮನ್ ।
ವ್ಯರೀರಚತ್ಸ್ತುತಿಂ ಶಂಭೋಸ್ತಸ್ಯ ಭಕ್ತಿಮಪೂಪುಷತ್ ॥೩೮॥

ಭೂಮ್ನೋ ದಾಮ್ನೇವ ಬದ್ಧಾ ಇವ ಮಣಿಗಣವಲ್ಲೋಕಜಾಲಂ ತ್ವಯೀದಂ
ಸೀಮ್ನೋ ಸಾಮ್ನಾ ಸ್ತುತಂ ತ್ವಾಂ ಭಜತಿ ಭವಹರಂ ಭೂತಯೇ ಸ್ವಸ್ತಯೇ ಚ।
ವಾಹಾಮ್ನಾಯ ಸಟಾಭಿಪೂಜಿತ ಪದಯುಗಂ ಪಶ್ಯೇಚ್ಚ ಕಶ್ಚಿದ್ಧೃಹಾ
ತಂ ತ್ವಾ ದಕ್ಷಸುದಕ್ಷರಕ್ಷರಹಿತಂ ವೀಕ್ಷೇತ ಕಃ ಪ್ರೇಕ್ಷಕಂ ॥೩೯॥

ಅತಿಚಲಕಮಲಾವಿಲಾಸಜಾಲೈ
ರ್ಮಹಿಲಾಭಿಶ್ಚಿರಮತಿಮೂಢಬಾಲಾಃ ।
ಜರಬಾಲೇಯ ಇವಾತಿಭಾರಖಿನ್ನಾ
ಭವತಾಂತಾಃ ಕುಸುಮೇಷು ಬಾಣಸುನ್ನಾಃ ॥೪೦॥

---

ಆಗ ಸುಂದರನು ಆ ಕಮಲನಿಯೊಡನೆ ಮಾಡುವ ಸಾಂಸಾರಿಕ ಚಿಂತೆಯಲ್ಲಿ ವಿಹರಿಸುತ್ತಾ ಆ ಶಂಭುವಿನ ಗುಣಗಳನ್ನೇ ಸ್ತುತಿರೂಪದಿಂದ ಪ್ರಶಂಸಿಸುತ್ತಾ ತನ್ನ ಶಿವಭಕ್ತಿಯನ್ನು ಹೆಚ್ಚಿಸಿಕೊಂಡನು. ||೩೬-೩೭-೩೮||

ಮಹೇಶನೇ, ದಾರದಿಂದ ಪೋಣಿಸಲ್ಪಟ್ಟಿರುವ ರತ್ನಮಣಿಗಳ ಸಮೂಹದಂತೆ ಈ ಬ್ರಹ್ಮಾಂಡ ಸಮೂಹವು ಮಾಲಾಕಾರವಾಗಿ ಮಹಾಮಹಿಮನಾದ ನಿನ್ನಲ್ಲಿ ಕಟ್ಟಲ್ಪಟ್ಟಿದೆ. ಎಲ್ಲಕ್ಕೂ ನೀನು ಎಲ್ಲೆಯಾಗಿರುವೆ. ಸಾಮವೇದದಿಂದ ಸ್ತೋತ್ರ ಮಾಡಲ್ಪಟ್ಟಿರುವೆ. ಸಂಸಾರಬಂಧನ ನಾಶಕರವಾದ ನಿನ್ನನ್ನು, ಐಶ್ವರ್ಯಪ್ರಾಪ್ತಿಗೂ, ಮಂಗಳಕ್ಕೂ ಸಹ ಜನಗಳು ಭಜಿಸುತ್ತಾರೆ. ತ್ರಿಪುರಾಸುರರನ್ನು ಧ್ವಂಸಮಾಡುವಾಗ ನಿನ್ನಲ್ಲಿಗೆ ಕುದುರೆಗಳಾಗಿ ಬಂದ ನಾಲ್ಕು ವೇದಗಳಿಂದಲೂ ನೀನು ನಾನಾರೀತಿ ಪೂಜಿತನಾಗಿರುವೆ. ದಕ್ಷಾಧ್ವರಧ್ವಂಸಕನಾದ ಅಂತಹ ನಿನ್ನನ್ನು ಯಾರು ಮನಸ್ಸಿನಲ್ಲಿ ಭಕ್ತಿಭಾವನೆಯಿಂದ ಧ್ಯಾನಿಸುವರೋ ಅಂತಹವರಿಗೆ ನೀನು ಅನಾಯಾಸವಾಗಿ ಪ್ರತ್ಯಕ್ಷನಾಗುವೆಯಲ್ಲವೆ? ||೩೯||

ಅತ್ಯಂತ ಚಂಚಲಳಾದ ಲಕ್ಷ್ಮೀದೇವಿಯ ವಿಲಾಸಜಾಲಗಳಿಂದಲೂ, ಸ್ತ್ರೀಯರ ಸಹವಾಸದಿಂದಲೂ, ಮೂಢರೆನಿಸಿದ ಬಾಲಕರು, ಜರಾಭಾರದಿಂದ ಖಿನ್ನರಾದ ಮುದುಕರಂತೆಯೂ ಮೂರ್ಖರಂತೆಯೂ ಈ ಸಂಸಾರದಲ್ಲಿ ಬಹಳವಾಗಿ ಬಳಲಿ,

॥ ಶ್ರೀ ಸ್ಕಂದ ಉವಾಚ ॥

ಸ ದೇವಃ ಸ್ತುತಿಮಾಕರ್ಣ್ಯ ಅಪರ್ಣಾಪತಿರೀಶ್ವರಃ ।
ತದಾ ಕಂದಲಿತಾನಂದಮುವಾದೀತ್ಸುಂದರಂ ಹರಃ ॥೪೧॥

ಮಾಧ್ವೀಝರೀಪರೀಪಾಕಚಮತ್ಕಾರಜಿತಾ ಗಿರಾ ॥೪೨॥

॥ ಹರ ಉವಾಚ ॥

ಯದವಾದಿ ಮಯಾ ಸೌಮ್ಯ ತದಿದಾನೀಮನುಷ್ಠಿತಂ ।
ಯದನಾಯಿ ಭವಾನ್ದಾಸ್ಯಂ ಪತ್ರೇಣ ಪಠತಾ ಸತಾ ॥೪೩॥

ತದದ್ಯ ಕಿಂ ವಿವಾದೇನ ಪ್ರಾಜ್ಯರಾಜ್ಯೇನ ಕಿಂ ತವ ।
ಸ್ಮರ ಸ್ಮರಹರನ್ನಾಮಸ್ತೋತ್ರಂ ತ್ವಂ ಸುಂದರಾಧುನಾ ॥೪೪॥

ಸಾ ಚಾಪಿ ತೇ ಕಮಲಿನೀ ಕಮಲಾಲಯಮಧ್ಯಗಾ ।
ಕಮಲೇವಾವಿರಾಸೀತ್ಸಾ ಕಮಲಂ ಸರಸೀಷ್ವಿವ ॥೪೫॥

---

ಮನ್ಮಥನ ಬಾಣಗಳಿಂದ ಪೀಡಿತರಾಗುತ್ತಾರೆಂದು ಸುಂದರನು ಮಹಾದೇವನನ್ನು ಸ್ತೋತ್ರಮಾಡಿದನು. ॥೪೦॥

ಅಪರ್ಣಾದೇವಿಯ ರಮಣನೂ, ಐಶ್ವರ್ಯಸಂಪನ್ನನೂ ಆದ ಮಹಾದೇವನು ಸುಂದರನ ಆ ಸ್ತೋತ್ರವನ್ನು ಕೇಳಿ ಸಂತುಷ್ಟನಾಗಿ ಆನಂದಾಂಕುರವನ್ನು ಹೊಂದಿರುವ ಆ ಸುಂದರನನ್ನು ಕುರಿತು, ಜೇನಿನ ಪ್ರವಾಹದಂತೆ ಮಧುರವೂ ಚಮತ್ಕಾರವೂ ಆದ ಮಾತಿನಿಂದ ಹೀಗೆ ನುಡಿದನು ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೪೧-೪೨॥

ವತ್ಸನೇ, ದಾಸ್ಯರೂಪವಾದ ಪತ್ರವನ್ನು ಓದಿ ಹೇಳಿದ ಒಂದು ಲೀಲೆಯನ್ನು ಈಗ ನಾನು ಇಲ್ಲಿ ಆಚರಿಸಿದ್ದೇನೆ. ಈಗ ಅದರ ವಾದವೇತಕ್ಕೆ? ಉತ್ತಮವಾದ ರಾಜ್ಯದಿಂದ ನಿನಗೇನು? ಎಲೈ ಸುಂದರನೇ, ಈಗ ಮನ್ಮಥಾಂತಕನಾದ ಶಿವನ ನಾಮಗಳನ್ನೇ ಸ್ತೋತ್ರಮಾಡಿ ಸ್ಮರಣೆಮಾಡಿಕೋ. ॥೪೩-೪೪॥

ಆ ನಿನ್ನ ಪ್ರಿಯಳಾದ ಕಮಲಿನಿಯೂ ಕಮಲಾಲಯಕ್ಷೇತ್ರ ಮಧ್ಯದಲ್ಲಿ ಲಕ್ಷ್ಮಿಯಂತೆಯೂ, ಸರಸ್ಸಿನಲ್ಲಿರುವ ಕಮಲದಂತೆಯೂ ಆವಿರ್ಭವಿಸಿರುವಳು.

ತತ್ರಾಗಚ್ಛ ವಿವಾಹಂ ತೇ ಕಾರಯಾಮ್ಯಹಮೇವ ಹಿ ।
ಇತಿ ಶಂಭುವಚಃ ಶ್ರುತ್ವಾ ಹರ್ಷಯುಕ್ತಃ ಸ ಸುಂದರಃ ॥೪೬॥

ಮನ್ನಾಮಪದಮಾಬಧ್ಯ ಸ್ತುಹೀತ್ಯಾದಿಶದೀಶ್ವರಃ ।
ಇತ್ಯಾದಿಷ್ಟಸ್ತದಾ ತೇನ ಶ್ರೀಕಂಠೇನ ದಯಾಲುನಾ ॥೪೭॥

ವ್ಯರೀರಚದನೇಕಾನಿ ಗಾನಾನ್ಯೇವ ಸ ಸುಂದರಃ ।
ವೇದಾಂತಾಗಮತತ್ತ್ವಾರ್ಥ ನಾಮಧಾರಾರಸೈಃ ಶುಭೈಃ ॥೪೮॥

ಕುರ್ವಾಣೇ ಸುಂದರೇ ಶಂಭೋಃ ಶ್ರವಣಾಮೃತಪಾರಣಾಂ ।
ಪಪಾತ ಚಾಮರೈಃ ಸೃಷ್ಟಾ ವೃಷ್ಟಿಃ ಪುಷ್ಪಮಯೀ ದಿವಃ ॥೪೯॥

ನಟಿನಾಮೃತತಿಷ್ಠಾಭ್ರೇ ಸುರವಾಮದೃಶಾಂ ಗಣಃ ।
ಪುನಸ್ತಮಾಹ ದೇವೇಶಃ ಸುಂದರಂ ವಿನಯಾನತಂ ॥೫೦॥

---

ಸುಂದರನೇ, ಅಲ್ಲಿಗೆ ಬಾ. ಅವಳೊಡನೆ ನಿನಗೆ ನಾನೇ ವಿವಾಹಮಾಡಿಸುತ್ತೇನೆಂದು ಹೇಳಿದ ಆ ಶಂಭುವಿನ ಮಾತುಗಳನ್ನು ಕೇಳಿ ಸುಂದರನು ಅತ್ಯಂತ ಸಂತೋಷ ಪರವಶನಾದನು. ಅನಂತರ ನನ್ನ ನಾಮರೂಪವಾದ ಪದಗಳನ್ನು ಜೋಡಿಸಿ ನನ್ನನ್ನು ಸ್ತುತಿಸೆಂದು ದಯಾಳುವಾದ ಆ ಶ್ರೀಕಂಠೇಶ್ವರನು ನುಡಿಯಲು, ಶಿವನ ಅಪ್ಪಣೆಯಂತೆ ಸುಂದರನು ಅನೇಕ ಗೀತೆಗಳನ್ನು ಹಾಡಿ ರಚಿಸಿದನು. ॥೪೫-೪೬-೪೭॥

ವೇದಾಂತ ಮತ್ತು ಆಗಮಗಳ ತತ್ತ್ವಾರ್ಥಪ್ರದರ್ಶಕಗಳಾದ, (ರಹಸ್ಯಾರ್ಥ ಬೋಧಕವಾದ) ಶಿವನಾಮಗಳಿಂದ ಯುಕ್ತವಾಗಿ ಧಾರಾಕಾರವಾಗಿ ರಸವನ್ನು ಸುರಿಸುತ್ತಿರುವ ಶುಭಕರವಾದ ಸ್ತೋತ್ರಗಳಿಂದ ಸುಂದರನು ಶಂಭುವಿಗೆ ಕರ್ಣಾನಂದವನ್ನುಂಟುಮಾಡುತ್ತಿರಲು, ಆಕಾಶದಿಂದ ದೇವತೆಗಳು ದಿವ್ಯವಾದ ಹೂಮಳೆಗರೆದರು. ಅಪ್ಸರಸ್ತ್ರೀಯರ ಗುಂಪು ಆಕಾಶದಲ್ಲಿ ನಾಟ್ಯವಾಡಿತು. ಪುನಃ ಆ ದೇವತೋತ್ತಮನು ವಿನಯದಿಂದ ತಲೆಬಾಗಿ ನಮಸ್ಕರಿಸಿರುವ ಸುಂದರನನ್ನು ನೋಡಿ ಇಂತೆಂದನು. ॥೪೮-೪೯-೫೦॥

॥ ಶ್ರೀ ಮಹಾದೇವ ಉವಾಚ ॥

ದ್ವಿಜಗೋವಧದಾರುಣಾಶಯೋನ ಯೋಽಂಧೋಽ
ಪ್ಯಬುಧೋವಾ ವಿಬುಧಾಧಿಪಂ ಮಹೇಶಂ ।
ಸಕೃದಾರಗ್ವಧ ಪುಷ್ಪತೋಭ್ಯರ್ಚ್ಯಲಿಂಗೇ
ಮಧುನಾ ಸಿಚ್ಯ ಧುನೋತಿ ಪಾಪಜಾಲಂ ॥೫೧॥

ಕಮ್ರಾಮ್ರತಾಮ್ರನವಪಲ್ಲವನಮ್ರಶಾಖಾ
ಸಂಲಗ್ನಮೌಲಿಮನಲಾರ್ಕ ಶಶಿತ್ರಿನೇತ್ರಂ ।
ಸಾಮ್ರಾಣಿ ಧೂಪಮಗಜೇ ಪ್ರಸಮೀಕ್ಷ್ಯ ದತ್ವಾ
ಸಾಮ್ರಾಜ್ಯಮೇವ ಲಭತೇ ಕಲಿಜೋಽಪಿ ಮರ್ತ್ಯಃ ॥೫೨॥

ಅಪಾಪಾನ್ಯೋ ದಾರಾಂಸ್ತ್ಯಜತಿ ಚ ಕುಮಾರಾನಪಿ ಸಗೋ
ತಥಾಗಾರೇ ವಹ್ನಿಂ ಕ್ಷಿಪತಿ ಸುಜನಾನಾಕ್ಷಿಪತಿ ಚ ।
ಸ ಪಾಪಾನಾಂ ನಾಶಂ ಕಲಯತಿ ಯದಿ ಸ್ವೈರಮಗಜೇ
ಚಿರಂ ವೃದ್ಧಾದ್ರೀಶಂ ಭಜತು ಭವನಾಶಾಯ ಸುಲಭಂ ॥೫೩॥

---

ದುರಭಿಪ್ರಾಯದಿಂದ ಭೀಕರವಾದ ಬ್ರಹ್ಮಹತ್ಯಾ ಮತ್ತು ಗೋಹತ್ಯಗಳನ್ನೇ ಮಾಡಿದ್ದರೂ, ದಡ್ಡನಾಗಲೀ, ವಿದ್ವಾಂಸನೇ ಆಗಲೀ ದೇವತಾಧಿಪತಿಯಾದ ಮಹೇಶ್ವರನೆನಿಸಿದ ನನ್ನನ್ನು ಒಂದುಬಾರಿ ಕಕ್ಕೆಹೂವಿನಿಂದ (ಆರಗ್ವಧ) ಪೂಜಿಸಿ ಶಿವಲಿಂಗಕ್ಕೆ ಜೇನಿನಿಂದ ಅಭಿಷೇಕಮಾಡುವವನು ತನ್ನ ಎಲ್ಲಾ ಪಾಪಗಳನ್ನೂ ಕಳೆದುಕೊಳ್ಳುತ್ತಾನೆ. ॥೫೧॥

ಮನೋಹರವಾದ ಮಾವಿನ ಹೊಸಕೆಂಪು ಚಿಗುರುಗಳಂತೆ ಬಾಗಿರುವ ಅತ್ಯಂತ ಸುಂದರಮಯವಾದ ಕಿರೀಟವುಳ್ಳವನೂ, ಅಗ್ನಿ, ಸೂರ್ಯ ಮತ್ತು ಚಂದ್ರರನ್ನೇ ನೇತ್ರಗಳನ್ನಾಗಿ ಮಾಡಿಕೊಂಡಿರುವವನೂ ಆದ ನನ್ನನ್ನು ಧ್ಯಾನಮಾಡುತ್ತಾ ಎಲೌ ಪಾರ್ವತಿಯೇ, ಸಾಮ್ರಾಣಿಯ ಧೂಪವನ್ನು ಹಾಕಿ ಪೂಜಿಸುವ ಕಲಿಯುಗದ ಮಾನವನು ಚಕ್ರವರ್ತಿಪದವಿಯನ್ನೇ ಪಡೆಯುವನೆಂಬುದರಲ್ಲಿ ಸಂಶಯವಿಲ್ಲ. ॥೫೨॥

ಪಾರ್ವತಿಯೇ, ಪಾಪರಹಿತರಾದ ಹೆಂಡತಿ ಮಕ್ಕಳನ್ನು ನಿಷ್ಕರುಣೆಯಿಂದ ಬಿಡುವವನೂ, ಮನೆಗಳಿಗೆ ಬೆಂಕಿಯಿಡುವವನೂ, ಹಾಗೆಯೇ ಸಾಧುಗಳನ್ನು ನಿಂದಿಸುವವನೂ, ಇನ್ನೂ ಅನೇಕ ಮಹಾಪಾಪಗಳಿಂದ ಕೂಡಿದವನೂ ಸ್ವಚ್ಛಂದವಾದ

ತರುಣೇಂದುಕಲಾಕಲಾಪಮೀಶಂ
ಶರಣಂ ಯೇ ಪ್ರತಿಪಾದಿತಾರುಣಾಚಲೇಶಂ ।
ಭವದಾವೋತ್ಥಮಪಾರುಣಾಲಯಂ ತೇ
ಪರಿಮೃದ್ನಂತಿ ಚ ಗೋಷ್ಪದ ಪ್ರಮಾಣಂ ॥೫೪॥

ಹಾಲಾಸ್ಯ ಲಾಸ್ಯಸುಮುಖಂ ಮಮ ಪಾದಪದ್ಮಂ
ಹಾಲಾಸ್ಯ ಜಾತಮಪಹಾಯ ಯದೀಕ್ಷಿತಾಃ ಸ್ಯಾತ್ ।
ಕಾಲಾಸ್ಯಮೇವ ನ ಹಿ ಪಶ್ಯತಿ ಕಾಲಕಾಲ
ಮಾವಶ್ಯಕಂ ಖಲು ನರೇಷು ಸದೇದಮೇವ ॥೫೫॥

ಯತ್ಪುಂಡರೀಕಾಕ್ಷ ಸುಪೂಜಿತಾಂಘ್ರಿಂ
ಹೃತ್ಪುಂಡರೀಕೇ ಸಕಲೇಷು ಸಂಸ್ಥಂ ।
ಮಾಂ ಪುಂಡರೀಕಾಜಿನವಾಸಮೀಕ್ಷ್ಯ
ತತ್ಪುಂಡರೀಕಂ ಪರಮಾಪ್ರುಜತ್ವಂ ॥೫೬॥

---

ಆ ವೃದ್ಧಾದ್ರೀಶ್ವರನನ್ನು ಸ್ವಲ್ಪಕಾಲ ಭಜಿಸಿದರೆ ಅವರು ತಮ್ಮ ಪಾಪವನ್ನು ಕಳೆದುಕೊಳ್ಳುವರಲ್ಲದೆ ಈ ಸಂಸಾರಬಂಧನದಿಂದಲೂ ಬಹುಬೇಗ ಪಾರಾಗುವರು. ॥೫೩॥

ಬಾಲಚಂದ್ರನ ಕಲೆಗಳಿಂದ ಅಲಂಕೃತನೂ, ಐಶ್ವರ್ಯಭರಿತನೂ ಆದ ಅರುಣಾಚಲೇಶ್ವರನನ್ನು ಮರೆಹೊಗುವವರು, ಸಂಸಾರವೆಂಬ ಘೋರದಾವಾಗ್ನಿಯಿಂದ ಕೂಡಿದ ದುಃಖಸಮುದ್ರವನ್ನು ಕೇವಲ ಗೋವಿನ ಹೆಜ್ಜೆಯಷ್ಟು ಅಗಲವಾದದ್ದನ್ನಾಗಿ ತಿಳಿದು ದಾಟಿಬಿಡುತ್ತಾರೆ. ॥೫೪॥

ಹಾಲಾಸ್ಯಕ್ಷೇತ್ರದಲ್ಲಿ ನಾಟ್ಯದಲ್ಲಿ ನಿರತನಾಗಿ ಹಸನ್ಮುಖನಾಗಿರುವ ನನ್ನ ಅಡಿದಾವರೆಗಳನ್ನು ಕೋಪತಾಪಗಳಿಲ್ಲದ ಪ್ರಶಸ್ತವಾದ ಮನಸ್ಸಿನಿಂದ ಧ್ಯಾನಿಸಿ ನೋಡಿದವನಾದರೆ, ಅಂತಹವನು ಯಮನ ಮುಖವನ್ನೇ ಎಂದೂ ಕಾಣುವುದಿಲ್ಲ. ಆದ್ದರಿಂದಲೇ ಮಾನವರಿಗೆ ಈ ಕಾಲಾಂತಕದ ದರ್ಶನವು ಯಾವಾಗಲೂ ಅತ್ಯವಶ್ಯಕವಾದುದೆಂದು ತಿಳಿ. ॥೫೫॥

ಕಮಲನೇತ್ರನಾದ ವಿಷ್ಣುವಿನಿಂದ ನೇತ್ರದಿಂದ ಪೂಜಿಸಲ್ಪಟ್ಟ ಪಾದಗಳುಳ್ಳ ಮತ್ತು ಎಲ್ಲರ ಹೃದಯಕಮಲಗಳಲ್ಲಿಯೂ ನೆಲಸಿರುವ ವ್ಯಾಘ್ರಚರ್ಮಧಾರಿಯಾಗಿ

ಕಮಲಾವಿಲಾಸಸದ್ಮೇ
ಕಮಲೈರ್ಮತ್ಪದಪೂಜಕೋ ಹಿ ವಿಷ್ಣುಃ ।
ಕಮಲಾಲಯಮೇಹಿ ಸುಂದರ ತ್ವಂ
ಸಮಲಾನಾಂ ನ ಹಿ ತತ್ರ ವಾಸ ಇಷ್ಟಃ ॥೫೭॥

॥ ಶ್ರೀ ಸ್ಕಂದ ಉವಾಚ ॥

ಇತ್ಥಂ ತಂ ಸುಂದರೇಶಂ ಪ್ರಣತಿಪರವಶಂ ಚೋಪದಿಶ್ಯಾಷ್ಟಮೂರ್ತಿ
ರ್ದಿವ್ಯಂ ಧಾಮ ಸ್ವಕೀಯಂ ಗಣಗಣಸಹಿತೋ ವೈ ತಿರೋಧತ್ತ ದೇವ್ಯಾ।
ಪೌರೈರೀರಿತವೈಭವೋಽಪಿ ಸ ತದಾ ಶ್ರೀಸುಂದರೋಽನಲ್ಪಧೀ
ರ್ಧಾಮಾನ್ಯೇವ ಜಗಾಮ ಶಂಭುಕೃಪಯಾ ಸಂಸೇವಿತುಂ ಭಕ್ತಿತಃ ।೫೮॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಸುಂದರ ಭಕ್ತಚರಿತ್ರ
ವರ್ಣನೇ ವಿಂಶೋಽಧ್ಯಾಯಃ

---

ರುವ ನನ್ನನ್ನು ದರ್ಶನಮಾಡಿ ಅನಂತರ ಆ ನನ್ನ ನೆಲೆಮನೆಯಾದ ಪುಂಡರೀಕ
ಪುರದಲ್ಲಿ ಹೋಗಿ ವಾಸಿಸು. ನಿನಗೆ ಹೃದಯಾನಂದವು ಲಭಿಸುವುದು. ॥೫೬॥

ಲಕ್ಷ್ಮೀವಿಲಾಸಕ್ಕೆ ಮನೆಯಾಗಿರುವ ಆ ಪುಂಡರೀಕಪುರದಲ್ಲಿ ವಿಷ್ಣುವು
ತಾವರೆಹೂಗಳಿಂದ ನನ್ನ ಪಾದಪೂಜಕನಾಗಿದ್ದಾನೆ. ಎಲೈ ಸುಂದರನೇ, ನೀನೂ
ಆ ಕಮಲಾಲಯಕ್ಕೇ ಹೋಗು. ಅಲ್ಲಿ ಕಲ್ಮಷಚಿತ್ತರಿಗೆ ವಾಸವು ರುಚಿಸುವುದಿಲ್ಲ
ಅಲ್ಲಿರುವವರೆಲ್ಲಾ ಪುಣ್ಯಾತ್ಮರೇ. ॥೫೭॥

ಈ ರೀತಿಯಾಗಿ ಈಶ್ವರಭಕ್ತಿಯಲ್ಲಿಯೇ ಪರವಶನಾಗಿರುವ ಆ ಸುಂದರೇಶನಿಗೆ
ಅಷ್ಟಮೂರ್ತಿಯಾದ ಆ ಶಂಕರನು ತನ್ನ ದಿವ್ಯಸ್ಥಾನಗಳನ್ನು ಉಪದೇಶಮಾಡಿ
ತನ್ನ ಗಣಗಳು ಮತ್ತು ದೇವಿಯೊಡನೆ ಕಣ್ಮರೆಯಾದನು. ಆಗ ಪಟ್ಟಣಿಗರಿಂದ
ಸ್ತುತಿಸಲ್ಪಟ್ಟ ವೈಭವವುಳ್ಳವನಾಗಿ ಅತ್ಯಂತ ಮೇಧಾವಿಯಾದ ಸುಂದರನು ಶಂಭುವಿನ
ದಯೆಯನ್ನು ಪಡೆದು ಆ ದೇವನನ್ನು ಭಕ್ತಿಯಿಂದ ಸೇವೆಮಾಡುವುದಕ್ಕೋಸ್ಕರ
ಆ ಶಂಕರನ ದಿವ್ಯಸ್ಥಾನಗಳಿಗೆ ಹೋದನು, ಎಂದು ಕುಮಾರಸ್ವಾಮಿಯು ಜೈಗೀ
ಷವ್ಯನಿಗೆ ಹೇಳಿದನು. ॥೫೮॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಸುಂದರನೆಂಬ ಭಕ್ತನ ಕಥಾವರ್ಣನೆಯಲ್ಲಿ ಇಪ್ಪತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ವಿಂಶೋಽಧ್ಯಾಯಃ

|| ಮುನಿರುವಾಚ ||

ಕಾನಿ ಧಾಮಾನಿ ದೇವಸ್ಯ ಸ ಜಗಾಮಾಂಬಿಕಾಪತೇಃ ।
ಸ ಸುಂದರೋ ಗಣಶ್ರೇಷ್ಠಸ್ತನ್ಮೇ ವದ ಸುವಿಸ್ತರಂ ॥೧॥

ಗಣೇಶಾನುಜ ಸರ್ವಜ್ಞ ಕಮಲಿನ್ಯಾ ಮಹೋತ್ಸವಃ ।
ಉದ್ವಾಹೋ ವಾ ಕಥಮಭೂದ್ವೃಷವಾಹಪ್ರಸಾದತಃ ॥೨॥

ಸುಂದರಸ್ಯ ಮಹಾದೇವಪ್ರಸಾದೇನ ವಿನೋದಕೃತ್ ।
ಇತಿ ತದ್ವಚನಂ ಶ್ರುತ್ವಾ ಉವಾಚ ಕ್ರೌಂಚಸೂದನಃ ॥೩॥

---

## ಇಪ್ಪತ್ತೊಂದನೆಯ ಅಧ್ಯಾಯ

ಎಲೈ ಕುಮಾರಸ್ವಾಮಿಯೇ, ಗಣಶ್ರೇಷ್ಠನಾದ ಆ ಸುಂದರನು ಅಂಬಿಕಾ ರಮಣನಾದ ಮಹಾದೇವನಿಂದ ಹೇಳಲ್ಪಟ್ಟ ಯಾವ ಯಾವ ಸ್ಥಾನಗಳಿಗೆ ಹೋದನು. ಎಂಬುದನ್ನು ವಿಸ್ತಾರವಾಗಿ ನನಗೆ ತಿಳಿಸು. ಗಣೇಶನ ತಮ್ಮನೂ ಸರ್ವಜ್ಞನೂ ಆದ ಕುಮಾರಸ್ವಾಮಿಯೇ, ಆ ವೃಷಭವಾಹನನ (ಶಿವನ) ಅನುಗ್ರಹ ದಿಂದ ಸುಂದರನೊಡನೆ ಕಮಲಿನಿಯ ವಿವಾಹವು ಹೇಗೆ ನಡೆಯಿತು? ಮಹಾದೇವನ ಅನುಗ್ರಹದಿಂದ ವಿನೋದವನ್ನುಂಟುಮಾಡುತ್ತಿರುವ ಈ ವೃತ್ತಾಂತವನ್ನು ನನಗೆ ನೀನು ದಯೆಯಿಂದ ಹೇಳಬೇಕೆಂದು ಜೈಗೀಷವ್ಯನು ಪ್ರಾರ್ಥಿಸಲು, ಆಗ ಕ್ರೌಂಚಾ ಸುರನಾಶಕನಾದ ಆ ಕುಮಾರನು ಮುನಿಶ್ರೇಷ್ಠರಿಂದಲೂ, ಗಣಾಧಿಪರಿಂದಲೂ ದೇವತೆ

ಜೈಗೀಷವ್ಯಂ ಸಮಾಲೋಕ್ಯ ಮುನೀಂದ್ರಾನ್ಗಣಪಾನ್ಸುರಾನ್ ॥೪॥

॥ ಶ್ರೀಸ್ಕಂದ ಉವಾಚ ॥

ಶೃಣು ತ್ವಂ ಸುಂದರಸ್ಯಾಸ್ಯ ಕಥಾವಿಸ್ತರಮಾದರಾತ್ ।
ಪುರಾರಿಣಾ ಸಮಾದಿಷ್ಟಃ ಸುಂದರಃ ಶಶಿಶೇಖರಂ ॥೫॥

ನಂತುಂ ಮುದಾ ಯಯೌ ವಿಪ್ರಃ ಭಕ್ತಿನಿರ್ಭರಮಾನಸಃ ।
ಶ್ರೀಮದ್ದಕ್ಷಿಣಕೈಲಾಸಂ ವಿಲಾಸಸ್ಥಾನಮೈಶ್ವರಂ ॥೬॥

ಯತ್ರ ಹಸ್ತೀಪುರಾ ಶಂಭುಂ ಶುಂಡಾದಂಡಾರ್ಜಿತೈಃ ಶುಭೈಃ ।
ಬಿಲ್ವಪತ್ರೈಃ ಸಮಭ್ಯರ್ಚ್ಯ ಪುಷ್ಕರಾಸಾರಸೇಚನೈಃ ॥೭॥

ದಂತಿಜನ್ಮ ವಿಸೃಜ್ಯೈವ ದಂತಿತ್ವಕ್ಕಟಿಚೇಲಕಃ ।
ತ್ರಿನೇತ್ರೋ ನೀಲಕಂಠಶ್ಚ ಬಭೂವ ಗಣಪೋತ್ತಮಃ ॥೮॥

ತಂ ಕಾಲಹಸ್ತಿನಗರೀಂ ಪ್ರಾಪ ಸುಂದರ ಶೇಖರಃ ।
ಕಾಲೋಽಪಿ ಫಣಿರಾಡ್ಯತ್ರ ಸ್ವಮೌಲಿಮಣಿಭಿಃ ಪುರಾ ॥೯॥

---

ಗಳಿಂದಲೂ ಕೂಡಿದ ಈ ಜೈಗೀಷವ್ಯನನ್ನು ನೋಡಿ ಹೀಗೆ ನುಡಿದನು. ॥೧-೨-೩-೪॥

ಎಲೈ ಜೈಗೀಷವ್ಯನೇ, ಆ ಸುಂದರನ ಕಥೆಯನ್ನು ವಿಸ್ತಾರವಾಗಿ ಹೇಳುತ್ತೇನೆ. ಆದರದಿಂದ ಕೇಳು. ಸುಂದರನು ಮಹಾದೇವನಿಂದ ಆಜ್ಞಪ್ತನಾಗಿ ಚಂದ್ರಶೇಖರನಾದ ಆ ಶಿವನನ್ನು ಸೇವಿಸಿ ನಮಸ್ಕರಿಸುವುದಕ್ಕೋಸ್ಕರ ಪ್ರೀತಿಯಿಂದ ಭಕ್ತಿಪೂರ್ಣಮನಸ್ಕನಾಗಿ ಪರಮೇಶ್ವರನ ವಿಲಾಸಸ್ಥಾನವಾದ ಶ್ರೀದಕ್ಷಿಣಕೈಲಾಸಕ್ಷೇತ್ರವೆಂಬ ಕಾಲಹಸ್ತಿಕ್ಷೇತ್ರಕ್ಕೆ ಹೋದನು. ॥೫-೬॥

ಅಲ್ಲಿ ಹಿಂದೆ ಒಂದು ಆನೆಯು ತನ್ನ ಸೊಂಡಲಿನಿಂದ ಸಂಪಾದಿಸಿದ ಬಿಲ್ವದಳಗಳಿಂದಲೂ, ಶುಭಕರವಾದ ಸರೋವರದ ನೀರಿನಿಂದಲೂ, ಪರಶಿವನನ್ನು ಅಭಿಷೇಕ ಪೂಜಾದಿಗಳಿಂದ ಪೂಜಿಸಿ, ತನ್ನ ಆನೆಯ ಜನ್ಮವನ್ನು ಬಿಟ್ಟು, ತಾನೂ ಆನೆಯ ಚರ್ಮವನ್ನು ಕಟಿ (ಸೊಂಟ) ವಸ್ತ್ರವನ್ನಾಗಿಯೂ, ಮೂರು ಕಣ್ಣುಗಳು, ಕಪ್ಪು ಕುತ್ತಿಗೆಗಳಿಂದ ಕೂಡಿದ್ದಾಗಿಯೂ ಇರುವ ಶಿವಸಾರೂಪ್ಯವನ್ನೇ ಪಡೆದು ಗಣಪೋತ್ತಮನೆನಿಸಿತು. ಅಂತಹ ಕಾಲಹಸ್ತೀಕ್ಷೇತ್ರಕ್ಕೆ ಆ ಸುಂದರನು ಬಂದನು.

**ಸಮಭ್ಯರ್ಚ್ಯಾಂಬಿಕಾನಾಥಂ ಬಭೂವ ಫಣಿಭೂಷಣಃ ।**
**ಊರ್ಣನಾಭಿಃ ಪುರಾ ಕೃತ್ವಾ ಸುಖತಂತುವಿತಾನಕಂ ॥೧೦॥**

**ಪ್ರಪೇದೇ ಪರಮಂ ಸ್ಥಾನಂ ಕೈಲಾಸಂ ದೇವದುರ್ಲಭಂ ।**
**ಸ ತತ್ರ ಗತ್ವಾ ಸಂಸ್ನಾಯ ಸುವರ್ಣಮುಖರೀಜಲೇ ॥೧೧॥**

**ಸ್ನಾತ್ವಾ ಭಸ್ಮಾಂಗವಿಭವೋ ಭೂತಿದಿವ್ಯತ್ರಿಪುಂಡ್ರಕಃ ।**
**ರುದ್ರಾಕ್ಷಮಾಲಾಭರಣಃ ಶಿವಾಲಯಮಥಾಗಮತ್ ॥೧೨॥**

**ನತ್ವಾ ತುಷ್ಟಾವ ದೇವೇಶಂ ಕಾಲಹಸ್ತೀಶ್ವರಂ ಶಿವಂ ।**
**ಪಶ್ಯಂತ್ಸಾನಂದ ರೋಮಾಂಚ ಕಂಚುಕಾಲಂಕೃತಾಂಗಕಃ ॥೧೩॥**

**॥ ಸುಂದರ ಉವಾಚ ॥**

**ಹೇ ಕಾಮನಾಶನ ಹಿರಣ್ಮಯ ಸುಂದರಾಂಗ**
**ಹೇ ವ್ಯೋಮಕೇಶ ಗರಲಾಶನ ಕಾಲಕಾಲ ।**

---

ಹಿಂದೆ ಅಲ್ಲಿ ಸರ್ಪರಾಜನಾದ ಕಾಲನೂ ತನ್ನ ತಲೆಯಲ್ಲಿರುವ ಕಿರೀಟದ ರತ್ನಗಳಿಂದ ಅಂಬಿಕಾರಮಣನನ್ನು ಪೂಜಿಸಿ ತಾನೂ ಸರ್ಪಭೂಷಣನಾದನು. ॥೭-೮-೯॥

ಹಿಂದೆ ಅಲ್ಲಿಯೇ ಒಂದು ಜೇಡರ ಹುಳುವು ಸುಖಕರವಾದ ಒಂದು ದಾರದ ಮೇಲ್ಕಟ್ಟನ್ನು ಆ ಶಿವಲಿಂಗಕ್ಕೆ ಮಾಡಿ, ದೇವತೆಗಳಿಗೂ ದುರ್ಲಭವಾದ ಪರಮ ಶ್ರೇಷ್ಠಸ್ಥಾನನಾದ ಕೈಲಾಸವನ್ನು ಪಡೆಯಿತು. ಅಂತಹ ಕಾಲಹಸ್ತೀಕ್ಷೇತ್ರಕ್ಕೆ ಹೋಗಿ, ಸುವರ್ಣಮುಖರೀನದಿಯ ನೀರಿನಲ್ಲಿ ಸ್ನಾನಮಾಡಿ, ಅಂಗಾಂಗಗಳಿಗೆಲ್ಲಾ ಭಸ್ಮಲೇಪನೆ ಮಾಡಿಕೊಂಡು, ಹಣೆಯಲ್ಲಿ ವಿಭೂತಿಯಿಂದ ತಿರ್ಯಕ್ಪುಂಡ್ರವನ್ನು ಧರಿಸಿ ರುದ್ರಾಕ್ಷಮಾಲೆಗಳಿಂದ ಅಲಂಕೃತನಾಗಿ ಶಿವದೇವಾಲಯಕ್ಕೆ ಹೋದನು. ಅಲ್ಲಿ ದೇವತಾಧಿಪತಿಯಾದ ಕಾಲಹಸ್ತೀಶ್ವರನೆನಿಸಿದ ಪರಶಿವಲಿಂಗಕ್ಕೆ ನಮಸ್ಕರಿಸಿ, ನೋಡುತ್ತಾ ಆ ಆನಂದದಿಂದುಂಟಾದ ರೋಮಾಂಚವೆಂಬ ಕಂಚುಕಧಾರಿಯಾಗಿ ಶಂಕರನನ್ನು ಈರೀತಿ ಸ್ತೋತ್ರಮಾಡಿದನು. ॥೧೦-೧೧-೧೨-೧೩॥

ಮನ್ಮಥನನ್ನು ನಾಶಮಾಡಿದವನೂ, ಸುವರ್ಣಸ್ವರೂಪನೂ, ಸುಂದರವಾದ ಅವಯವವುಳ್ಳವನೂ, ಅಂತರಿಕ್ಷವೆಂಬ ಕೂದಲುಳ್ಳವನೂ, ವಿಷವನ್ನು ತಿಂದವನೂ, ಯಮಾಂತಕನೂ ಆದ ಪರಶಿವನೇ, ನೀನು ನಿತ್ಯನು, ನಾಶರಹಿತನು, ಸರ್ವಶಕ್ತನು,

ಹೇ ಶಾಶ್ವತಾವ್ಯಯ ವಿಭೋ ಮುದಿರಾಭಕಂಠ
ತದ್ವತ್ಪ್ರಭಾ ಮಮ ಹೃದಿ ಪ್ರಸರತ್ವವಶ್ಯಂ ॥೧೪॥

ಏವಂ ಸ್ತುವಂತ್ಸ ನಿಯುತಂ ಮಾಸಮಾತ್ರಮನನ್ಯಧೀಃ ।
ಅಸ್ಮಾತ್ಸ್ಥಾನಾದಪಕ್ರಮ್ಯ ಕಾಂಚೀಮಭ್ಯಾಗತೋ ಗಣಃ ॥೧೫॥

ಕಂಪಾಂ ಪಾಪಾದ್ರಿಸಂಪಾತಾಪಾಲುಲೋಕೇ ಗಣೇಶ್ವರಃ ।
ತಸ್ಯಾಂ ಸ್ನಾತ್ವಾ ಭಸ್ಮದಿಗ್ಧೋ ದಿವ್ಯಫಾಲತ್ರಿಪುಂಡ್ರಕಃ ॥೧೬॥

ಕಾಮಾಕ್ಷೀ ತಪಸಾ ಕಂಪಾತಟೇ ದೇವಮತೋಷಯತ್ ।
ಯತ್ರ ವಿಷ್ಣುಸ್ತಪೋಽದ್ಯಾಪಿ ತಪಸೇ ಹರದರ್ಶನಂ ॥೧೭॥

ಕಂಪಿತಾನಿ ಭವಂತ್ಯೇವ ಪಾಪಾನಿ ಸಕಲಾನ್ಯಪಿ ।
ಕಂಪಾಸ್ನಾನೇನ ಚೈಕೇನ ನಾವಿನಾಶ್ಯಂ ತ್ವಘಂ ಕುತಃ ॥೧೮॥

---

(ವ್ಯಾಪಕನು) ಮೋಡದಂತೆ ಕೊರಲ ಕಾಂತಿಯುಳ್ಳವನು. ನಿನ್ನ ಅನುಗ್ರಹದಿಂದ ಆ ದಿವ್ಯಪ್ರಭೆಯು ನನ್ನ ಮನಸ್ಸಿನಲ್ಲಿ ಯಾವಾಗಲೂ ಅವಶ್ಯವಾಗಿ ಹರಡಲಿ ಎಂದು ಸುಂದರನು ಸ್ತೋತ್ರಮಾಡಿದನು. ॥೧೪॥

ಹೀಗೆ ಸುಂದರನು ನಿಯಮಬದ್ಧನಾಗಿ ಒಂದು ತಿಂಗಳುಕಾಲ ಸ್ಥಿರಮನಸ್ಸಿನಿಂದ ಪರಶಿವನನ್ನೇ ಸ್ತೋತ್ರಮಾಡುತ್ತಾ ಅನಂತರ ಕಾಲಹಸ್ತಿಯಿಂದ ಹೊರಟು ಕಾಂಚೀಕ್ಷೇತ್ರಕ್ಕೆ ಬಂದನು. ಅಲ್ಲಿ ಆ ಗಣಾಧಿಪನು ಪಾಪಗಳೆಂಬ ಬೆಟ್ಟಗಳನ್ನು ತನ್ನಲ್ಲಿ ಸ್ನಾನಮಾಡುವುದರಿಂದಲೇ ಹೋಗಲಾಡಿಸುವ ಕಂಪಾನದಿಯನ್ನು ನೋಡಿದನು. ಆಮೇಲೆ ಅದರಲ್ಲಿ ಸ್ನಾನಮಾಡಿ, ದಿವ್ಯಭಸ್ಮವನ್ನು ಶರೀರಕ್ಕೆಲ್ಲಾ ಲೇಪನಮಾಡಿಕೊಂಡು ಹಣೆಗೆ ದಿವ್ಯಭಸ್ಮತ್ರಿಪುಂಡ್ರವನ್ನು ಧಾರಣೆಮಾಡಿಕೊಂಡನು. ॥೧೫-೧೬॥

ಹಿಂದೆ ಕಾಮಾಕ್ಷೀದೇವಿಯು ಆ ಕಂಪಾನದಿಯ ದಡದಲ್ಲಿ ತಪಸ್ಸುಮಾಡಿ, ಮಹಾದೇವನಿಗೆ ಸಂತೋಷವನ್ನುಂಟುಮಾಡಿದ್ದಳು. ಅಲ್ಲಿ ವಿಷ್ಣುವು ಈಗಲೂ ಶಿವದರ್ಶನವನ್ನು ಬಯಸಿ ತಪಸ್ಸುಮಾಡುತ್ತಿರುವನು ಒಂದುಸಲ ಕಂಪಾನದಿಯಲ್ಲಿ ಸ್ನಾನಮಾಡುವುದರಿಂದ ಸಮಸ್ತ ಪಾಪಗಳೂ ಹೆದರಿ ನಡುಗಿಹೋಗುವುವು. ಹೀಗಿರುವಾಗ ಅಲ್ಲಿ ನಾಶವಾಗದಿರುವ ಪಾಪವೆಲ್ಲಿಂದ ಬರಬೇಕು? ॥೧೭-೧೮॥

ಪೂತಚೂತೋತ್ತಮಾಲೋಲಪಲ್ಲವಾಲಂಬಿಭೂತಲೇ ।
ಮೂಲೇ ರಸಾಲವೃಕ್ಷಸ್ಯ ಶೂಲಿಹಸ್ತಂ ನಿರೀಕ್ಷ್ಯ ಸಃ ॥೧೯॥

ಸಾಷ್ಟಾಂಗಲಗ್ನಭೂಪೃಷ್ಠಸ್ತುಷ್ಟಾವಾಷ್ಟಾಕೃತಿಂ ಹರಂ ॥೨೦॥

॥ ಸುಂದರ ಉವಾಚ ॥

ಶಂಭೋ ರಸಾಲವರಮೂಲಗ ಕಾಲಕಾಲ
ಹಾಲಾಹಲೋತ್ತಮಗಲಾಮಲ ಹಸ್ತ ಶೂಲ ।
ಫಾಲಾನಲಜ್ವಲಿತ ಕಾಮ ಸುದೇಹ ತೂಲ
ವ್ಯಾಲೋರುಮಾಲ ಪರಿಪಾಹಿ ಜಗತ್ಸುಮೂಲ ॥೨೧॥

ಕಾಮಾಕ್ಷೀಮಪಿ ತುಷ್ಟಾವ ಸುಂದರೋ ನಂದನೋದುರಃ ।
ಸಾಷ್ಟಾಂಗಪ್ರಣತೋ ಭೂಮೌ ಮೌಲಿಬದ್ಧಾಂಜಲಿಸ್ತದಾ ॥೨೨॥

---

ಪವಿತ್ರವಾದ ಒಳ್ಳೆಯ ಮಾವಿನ ಮರದ ಚಿಗುರುಗಳಿಂದ ತೂಗಾಡುತ್ತಿರುವ ಸಿಹಿಮಾವಿನಮರದ ಬುಡದಲ್ಲಿನ ಭೂಭಾಗದಲ್ಲಿರುವ ಶೂಲಾಯುಧಪಾಣಿಯನ್ನು ಕಂಡು ಆ ಸುಂದರನು ಸಾಷ್ಟಾಂಗಪ್ರಣಾಮಮಾಡಿ ಅಷ್ಟಮೂರ್ತಿಯಾದ ಪರಶಿವನನ್ನು ಹೀಗೆ ಸ್ತೋತ್ರಮಾಡಿದನು. ॥೧೯-೨೦॥

ಶ್ರೇಷ್ಠವಾದ ಸಿಹಿಮಾವಿನಮರದ ಬುಡದಲ್ಲಿ ನೆಲಸಿರುವ ಶಂಭುವೇ, ಯಮಾಂತಕನೂ, ಹಾಲಾಹಲವಿಷವನ್ನು ದಿವ್ಯಕಂಠದಲ್ಲಿ ಧರಿಸಿರುವವನೂ, ನಿರ್ಮಲವಾದ ತನ್ನ ಕೈಯಲ್ಲಿ ತ್ರಿಶೂಲವನ್ನು ಹಿಡಿದಿರುವವನೂ, ಹಣೆಗಣ್ಣಿನ ಬೆಂಕಿಯಿಂದ ಮನ್ಮಥನ ಶರೀರವೆಂಬ ಹತ್ತಿಯನ್ನು ಸುಟ್ಟವನೂ, ಸರ್ಪವನ್ನೇ ದೊಡ್ಡಹಾರವನ್ನಾಗಿ ಮಾಡಿಕೊಂಡಿರುವವನೂ ಪ್ರಪಂಚಗಳಿಗೆಲ್ಲಾ ಮೂಲಾಧಾರನೂ ಆದ ಸ್ವಾಮಿಯೇ, ನನ್ನನ್ನು ಕಾಪಾಡು, ಎಂದು ಸುಂದರನು ಅಲ್ಲಿ ಸ್ತೋತ್ರಮಾಡಿದನು. ॥೨೧॥

ಅದರಿಂದ ಆನಂದಪೂರ್ಣನಾದ ಆ ಸುಂದರನು ನೆಲದ ಮೇಲೆ ಕೈಮುಗಿದು ನಿಂತು ಸಾಷ್ಟಾಂಗ ಪ್ರಣಾಮಮಾಡಿ ಕಾಮಾಕ್ಷೀದೇವಿಯನ್ನೂ ಹೀಗೆ ಸ್ತೋತ್ರಮಾಡಿದನು. ॥೨೨॥

॥ ಸುಂದರ ಉವಾಚ ॥

ದೇವಿ ತ್ವಂ ಗಿರಿಪುತ್ರಿ ಸಾಗರಕುಲೋತ್ತುಂಗೋದಚಂದ್ರೋಜ್ವಲೇ
ನೀಲೇಂದೀವರಲೋಚನೋರುಯುಗಲೇ ನೀಲಾಲಕಾಲಂಕೃತೇ ।
ಪರ್ವೇಂದುದ್ಯುತಿಕಾಂತಿರಾಜಿತಮುಖೇ ಬಿಂಬಾಧರೇ ಕೆಂದಜ-
ಭ್ರಾಜತ್ಕೋರಕ ದಂತಪಂಕ್ತಿಮಧುರೇ ಕಾಮಾಕ್ಷಿ ತುಭ್ಯಂ ನಮಃ ॥೨೩॥

ಹೇ ಮತ್ತೇಭಮರಾಲರಾಜಗಮನೇ ಮತ್ತೇಭಕುಂಭಾಭಿಜಿ-
ತ್ಕಾಂತೋತ್ತುಂಗ ಕುಚದ್ವಯಿಾ ಪರಿಯುತೇ ವ್ಯಾಲಾಭವೇಣೀಸ್ಫುರತ್ ।
ರತ್ನಭ್ರಾಜಿತಪದ್ಮಪುಷ್ಪವಿಲಸನ್ನಾಸಾಜಸನ್ಮೌಕ್ತಿಕೇ
ಮಂಜೀರದ್ವಯಪಾದಪದ್ಮಜರಣತ್ಪದ್ಮಾಭಪಾದದ್ವಯೇ ॥೨೪॥

ಕಾಂಚೀಕಾಂಚಿತಸತ್ಕಟೀತಟಿಯುತೇ ಹಸ್ತೋಲ್ಲಸತ್ಕಂಕಣೇ ।
ಕೌಸುಂಭದ್ಯುತಿಚಂಚಲಾಂಗಲತಿಕೇ ಕಾಮಾಕ್ಷಿ ತುಭ್ಯಂ ನಮಃ ॥೨೫॥

---

ದೇವಿ, ನೀನು ಪರ್ವತರಾಜಕುಮಾರಿ, ಸಾಗರಸಮೂಹಗಳಲ್ಲಿ ಶ್ರೇಷ್ಠವಾದ ಕ್ಷೀರಸಮುದ್ರದಲ್ಲಿ ಹುಟ್ಟಿದ ಚಂದ್ರನಂತೆ ಪ್ರಕಾಶಮಾನಳಾಗಿರುವೆ. ಕನ್ನೈದಿಲೆಗಳಂತಿರುವ ನಿನ್ನ ಎರಡು ವಿಶಾಲವಾದ ಕಣ್ಣುಗಳೂ, ಕಪ್ಪುಮುಂಗುರುಳೂ ನಿನಗೆ ಅಲಂಕಾರಪ್ರಾಯವಾಗಿವೆ. ಪೂರ್ಣಿಮಾಚಂದ್ರನಂತೆ ನಿನ್ನ ಮುಖಕಾಂತಿಯು ಸದಾ ಶೋಭಿಸುತ್ತಿರುವುದು. ತೊಂಡೆಯ ಹಣ್ಣಿನಂತೆ ತುಟಿಯು ಕಂಗೊಳಿಸುತ್ತಿದೆ. ತಾವರೆಯ ಮೊಗ್ಗುಗಳಂತೆ ನಿನ್ನ ದಂತಸಮೂಹವು ಸಾಲಾಗಿ ವಿರಾಜಿಸುತ್ತಿರುವುದು. ಎಲೌ ಕಾಮಾಕ್ಷೀದೇವಿಯೇ, ಇಂತಹ ನಿನಗೆ ನಮಸ್ಕಾರಮಾಡುತ್ತೇನೆ. ॥೨೩॥

ಮದಗಜದಂತೆಯೂ, ರಾಜಹಂಸದಂತೆಯೂ, ಮಂದಗಮನವುಳ್ಳವಳೇ, ಕೊಬ್ಬಿದ ಆನೆಯ ಕುಂಭಸ್ಥಳವನ್ನೂ ಜಯಿಸಿರುವ ಮನೋಹರವಾದ ದೊಡ್ಡ ಸ್ತನಗಳುಳ್ಳವಳೇ, ಸರ್ಪದಂತೆ ಕಪ್ಪುಕಾಂತಿಯುಳ್ಳ ದೀರ್ಘವಾದ (ಉದ್ದವಾದ) ಜಡೆಯುಳ್ಳವಳೇ, ಪ್ರಕಾಶಿಸುತ್ತಿರುವ ರತ್ನಗಳಿಂದ ವಿರಾಜಮಾನಳಾಗಿ ತಾವರೆಯ ಹೂವುಗಳಂತೆ ಶೋಭಿಸುತ್ತಿರುವ ಮೂಗಿನ ಮೌಕ್ತಿಕವುಳ್ಳವಳೇ, ಎರಡು ಕಾಲು ಕಡಗಗಳಿಂದ ಶೋಭಿಸುತ್ತಾ ಧ್ವನಿಮಾಡುತ್ತಿರುವ ವೃದ್ಧವಾದ ಕಮಲದಂತೆ ವಿರಾಜಿಸುವ ಪಾದಪದ್ಮವುಳ್ಳ ದೇವಿಯೇ, ನಿನಗೆ ನಮಸ್ಕಾರಮಾಡುವೆನು. ॥೨೪॥

ಶ್ರೇಷ್ಠವಾದ ನಡುವಿನಲ್ಲಿ ದಿವ್ಯವಾದ ಒಡ್ಯಾಣವನ್ನು ಅಲಂಕರಿಸಿರುವವಳೇ,

ಏವಂ ಸಂಸ್ತುತ್ಯ ಹೃಷ್ಟಾತ್ಮಾ ನಿರ್ಜಗಾಮಾರುಣಾಚಲಂ ।
ಶಿವತೀರ್ಥೇ ತತಃ ಸ್ನಾತ್ವಾ ಭಸ್ಮರುದ್ರಾಕ್ಷಭೂಷಣಃ ॥೨೬॥

ಗತ್ವಾ ಶೋಣಾಚಲಾಧೀಶಂ ತರುಣೇಂದುಶಿಖಾಮಣಿಂ ।
ಅರುಣಾಧಿಪನೇತ್ರತ್ವಂ ಶರಣಂ ಸ ಯಯೌ ಗಣಃ ॥೨೭॥

ಅಸ್ತಾವೀತ್ಸ ತದಾ ದೇವಂ ದೇವ್ಯಾ ಮೌಲಿಕೃತಾಂಜಲಿಃ ॥೨೮॥

॥ ಸುಂದರ ಉವಾಚ ॥

ಭಗಣಾಧಿಪಚೂಡ ಮೌಳಿ ಶಂಭೋ
ಸುಖದಂ ತ್ವಾಂ ಗಣವೃಂದವಂದಿತಾಂಘ್ರಿಂ ।
ಅರುಣಾದ್ರ್ಯಧಿಪಾಧುನಾ ಪದಂ ತೇ
ಶರಣಂ ಯಾಮಿ ಶರಣ್ಯಮಿಂದುಮೌಲೇ ॥೨೯॥

---

ನಿನ್ನ ಕೈಗಳಲ್ಲಿ ರತ್ನಮಯವಾದ ಕಂಕಣಗಳು ಸದಾ ಶೋಭಿಸುತ್ತಿರುವುವು. ನೀನು ಕುಸುಮೇ ಹೂವಿನಂತೆ ಹೊಂಬಣ್ಣವಾದ ಕಾಂತಿಯುಳ್ಳವಳು. ಚಂಚಲವಾಗಿರುವ ಲತಾಸದೃಶವಾದ ದೇಹವುಳ್ಳವಳು. ಇಂತಹ ಕಾಂತಿಯುಳ್ಳ ಕಾಮಾಕ್ಷೀದೇವಿಯೇ, ನಿನಗೆ ನಮಸ್ಕಾರಮಾಡುವೆನು. ॥೨೫॥

ಹೀಗೆ ಆ ಸುಂದರನು ಕಾಮಾಕ್ಷೀದೇವಿಯನ್ನು ನಾನಾರೀತಿ ಸ್ತೋತ್ರಮಾಡಿ ಸಂತೋಷಚಿತ್ತನಾಗಿ, ಅನಂತರ ಅಲ್ಲಿಂದ ಹೊರಟು ಅರುಣಾಚಲಕ್ಷೇತ್ರಕ್ಕೆ ಬಂದನು. ಅಲ್ಲಿ ಶಿವತೀರ್ಥದಲ್ಲಿ ಸ್ನಾನಮಾಡಿ, ಭಸ್ಮರುದ್ರಾಕ್ಷಗಳನ್ನು ಧಾರಣೆಮಾಡಿಕೊಂಡು ಬಾಲಚಂದ್ರಶೇಖರನಾದ ಆ ಅರುಣಾಚಲೇಶ್ವರನಿಗೆ ನಮಸ್ಕಾರಮಾಡಿ, ಸೂರ್ಯ ನೇತ್ರನಾದ ಆ ದೇವನನ್ನು ಮೊರೆಹೊಕ್ಕು, ಆ ಗಣಪೋತ್ತಮನು ಕೈಮುಗಿದು ಕೊಂಡು ದೇವಿಯೊಡನೆ ಮಹಾದೇವನನ್ನು ಕುರಿತು ಹೀಗೆ ಸ್ತೋತ್ರಮಾಡಿದನು. ॥೨೬-೨೭-೨೮॥

ಚಂದ್ರಶೇಖರನಾದ ಪರಶಂಭುವೇ, ದೇವಗಣಗಳ ಗುಂಪಿನಿಂದ ನಮಸ್ಕರಿಸಲ್ಪಡುವ ಪಾದಗಳುಳ್ಳ ಮತ್ತು ಭಕ್ತರಿಗೆ ಅತ್ಯಂತ ಸುಖಪ್ರದನಾದ ನಿನ್ನನ್ನು ಈಗ ಮೊರೆಹೊಕ್ಕಿರುವೆನು. ಎಲೈ ಅರುಣಾಚಲೇಶ್ವರಸ್ವಾಮಿಯೇ, ಚಂದ್ರಚೂಡನಾದ ನೀನು ಶರಣಾಗತನಾಗಿರುವ ನನ್ನನ್ನು ಕಾಪಾಡು. ॥೨೯॥

ವರುಣಾಲಯಪಾರಣಾನತಂ ತೇ
ಪದಪದ್ಮಂ ಮರಣೇಽಪಿ ಯೇ ಸ್ಮರಂತಿ ।
ತರಣಂಕ್ಷಿಚ ಭವೇದ್ಭವಾಂಬುಧೇಃ
ಕರುಣಾಶಾಲಿ ಕಟಾಕ್ಷವೀಕ್ಷಣಂ ತೇ ॥೩೦॥

ಇತ್ಯುಕ್ತ್ವಾ ನಿರ್ಜಗಾಮಾಶು ನಿರ್ಜರೈಃ ಸೇವಿತಂ ಪುರಂ ।
ವೃದ್ಧಾಚಲಂ ತದಾ ಪುಣ್ಯಂ ಸುಂದರಃ ಶಿವಮಂದಿರಂ ॥೩೧॥

ಸ್ನಾತ್ವಾ ಸ ಮಣಿಮುಕ್ತಾಯಾಮಣಿಮಾದ್ಯಷ್ಟಸಿದ್ಧಯೇ ।
ಭಸ್ಮರುದ್ರಾಕ್ಷಧೃಗ್ಯೋಗೀ ವೃದ್ಧಾದ್ರೀಶಂ ಪ್ರಣಮ್ಯ ಚ ॥೩೨॥

ಸಾಷ್ಟಾಂಗಂ ಚಾಭಿತುಷ್ಟಾವ ಭಕ್ತಿನಿರ್ಭರಮಾನಸಃ ॥೩೩॥

॥ ಸುಂದರ ಉವಾಚ ॥

ವಿದ್ಯುತ್ಪಿಂಗಜಟೋತ್ತಮಾಂಗಸುಮಹಾಮಾತಂಗಚರ್ಮಾಂಬರ
ಗಂಗಾತುಂಗ ತರಂಗಸಂಗತ ಮಹಾಲಿಂಗಾಂಗಸಂಸ್ಥ ಪ್ರಭೋ ।

---

ಸಮುದ್ರಪಾನಮಾಡಿದ ಅಗಸ್ತ್ಯಮುನಿಯಿಂದ ನಮಸ್ಕರಿಸಲ್ಪಟ್ಟ ನಿನ್ನ ಪಾದಕಮಲವನ್ನು ಮರಣಕಾಲದಲ್ಲಿಯಾದರೂ ಯಾರು ಸ್ಮರಣೆಮಾಡುತ್ತಾರೆಯೋ ಅಂತಹವರು ಈ ಸಂಸಾರವೆಂಬ ಸಾಗರದಿಂದ ಉದ್ಧಾರರಾಗುವರಲ್ಲವೇ! ದೇವ, ನಿನ್ನ ಕಟಾಕ್ಷವೀಕ್ಷಣವು ಅಷ್ಟು ದಯಾಮಯವಾದುದು. ॥೩೦॥

ಹೀಗೆ ಸ್ತೋತ್ರಮಾಡಿ ಆ ಸುಂದರನು ಜಾಗ್ರತೆಯಾಗಿ ಅಲ್ಲಿಂದ ಹೊರಟು ಸಮಸ್ತ ದೇವತೆಗಳಿಂದಲೂ ಸೇವಿಸಲ್ಪಡುವ ವೃದ್ಧಾಚಲಕ್ಷೇತ್ರಕ್ಕೆ ಬಂದನು. ಅಲ್ಲಿ ಮಣಿಮುಕ್ತಾತೀರ್ಥದಲ್ಲಿ ಸ್ನಾನಮಾಡಿ, ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವಗಳೆಂಬ ಅಷ್ಟೈಶ್ವರ್ಯಸಿದ್ಧಿಗೋಸ್ಕರ ಭಸ್ಮರುದ್ರಾಕ್ಷಗಳನ್ನು ಧರಿಸಿ, ಚಿತ್ತಸ್ಥೈರ್ಯದಿಂದ ವೃದ್ಧಾಚಲೇಶ್ವರನ ದೇವಾಲಯಕ್ಕೆ ಹೋಗಿ, ಸಾಷ್ಟಾಂಗಪ್ರಣಾಮಮಾಡಿ ಭಕ್ತಿಪೂರ್ಣವಾದ ಮನಸ್ಸಿನಿಂದ ವೃದ್ಧಾಚಲೇಶ್ವರನನ್ನು ಹೀಗೆ ಸ್ತೋತ್ರಮಾಡಿದನು. ॥೩೧-೩೨-೩೩॥

ಮಿಂಚಿನಂತೆ ಹೊಂಬಣ್ಣವಾದ ಜಡೆಗಳಿಂದ ಶೋಭಿಸುವ ತಲೆಯುಳ್ಳವನೇ, ಶ್ರೇಷ್ಠವಾದ ದೊಡ್ಡ ಆನೆಯ ಚರ್ಮವನ್ನೇ ಬಟ್ಟೆಯನ್ನಾಗಿ ಧರಿಸಿರುವವನೇ,

ಉತ್ಸಾಂಗಸ್ಥಿತ ಕಾಮಿನೀವಿಲಸಿತಾದ್ಯರ್ಧಾಂಗಕೌರಂಗಸ
ಲ್ಲಕ್ಷ್ಮಾಲಂಕೃತಮೌಲಿವೀಕ್ಷಣಜ ಭವತ್ಪ್ಲತಂಗಸಂಗಾಂಗ ತೇ ॥೩೪॥

ಪಾದಾಬ್ಜಂ ದೃಗಪಾಂಗತೋದ್ಯ ಕಲಯೇ ಮೋಕ್ಷಶ್ರಿಯಾ ಸಂಗತಂ ॥೩೫॥

ಇತಿ ಸಂಸ್ತುತ್ಯ ತಂ ದೇವಂ ತಸ್ಮಾತ್ಸ್ಥಾನಾದಪಕ್ರಮೋ ।
ಗೋಪರ್ವತಂ ತತಃ ಪುಣ್ಯಂ ಪ್ರಾಪ್ಯ ತುಷ್ಟಾವ ಶಂಕರಂ ॥೩೬॥

ಭಸ್ಮರುದ್ರಾಕ್ಷಪೂತಾಂಗೋ ಗೋಪರ್ವತನಿವಾಸಿನಂ ॥೩೭॥

॥ ಸುಂದರ ಉವಾಚ ॥

ತ್ವಮದ್ರಿಯಾಣಾಂ ಪತಿರಿಂದುಮೌಲೇ
ಗಿರೀಶ ಇತ್ಯೇವ ಶ್ರುತೇರ್ಗಿರೇಡಿತಃ ।
ಕ್ವ ತೇ ಸ್ತುತಿರ್ವಾಙ್ಮನಸಾಮಗೋಚರಾ
ನ ಮೇನುಭಾವ್ಯಾ ಪದವೀಮಥಾಣು ॥೩೮॥

---

ಗಂಗಾನದಿಯ ದೊಡ್ಡ ದೊಡ್ಡ ಅಲೆಗಳಿಂದ ಕೂಡಿದವನೇ, ನೀನು ಶಿವಮಹಾ ಲಿಂಗಗಳಲ್ಲಿ ನೆಲಸಿರುವವನು. ಸರ್ವಸಮರ್ಥನು. ವೃಷಭದ ಮೇಲೆ ಕುಳಿತಿರುವವನು. ಸರ್ವಸಮರ್ಥನು. ವೃಷಭದ ಮೇಲೆ ಕುಳಿತಿರುವವನು. ಅರ್ಧನಾರೀಶ್ವರನು. ಚಂದ್ರನಿಂದ ಅಲಂಕೃತವಾದ ತಲೆಯುಳ್ಳವನು. ನಿನ್ನ ದೃಷ್ಟಿಯಿಂದ ಹುಟ್ಟಿದ ಅಗ್ನಿಯಿಂದಲೇ ಮನ್ಮಥನ ದೇಹವು ಸುಟ್ಟುಹೋಯಿತು. ದೇವದೇವನೇ, ಮೋಕ್ಷಸಂಪತ್ತಿನಿಂದ ಕೂಡಿದ ನಿನ್ನ ಪಾದಕಮಲವನ್ನು ಈಗ ನಾನು ಸೂಕ್ಷ್ಮ ದೃಷ್ಟಿಯಿಂದ ನೋಡುತ್ತಾ ಧ್ಯಾನಿಸುತ್ತಿರುವೆನು ಎಂದು ಸುಂದರನು ವೃದ್ಧಾಚಲೇಶ್ವರನನ್ನು ಸ್ತೋತ್ರಮಾಡಿದನು. ॥೩೪-೩೫॥

ಹೀಗೆ ಆ ವೃದ್ಧಾಚಲೇಶ್ವರನನ್ನು ಸ್ತುತಿಸಿ, ಅಲ್ಲಿಂದ ಹೊರಟು ಪುಣ್ಯಕರವಾದ ಗೋಪರ್ವತಕ್ಕೆ ಹೋಗಿ, ಭಸ್ಮರುದ್ರಾಕ್ಷಗಳಿಂದ ಪವಿತ್ರವಾದ ದೇಹವುಳ್ಳವನಾಗಿ ಆ ಗೋಪರ್ವತದಲ್ಲಿ ಶಿವಲಿಂಗರೂಪದಿಂದಿರುವ ಶಂಕರನನ್ನು ಇಂತು ಸ್ತೋತ್ರಮಾಡಿದನು. ॥೩೬-೩೭॥

ಚಂದ್ರಮೌಳಿಯೇ, ನೀನು ಸಮಸ್ತ ರೀತಿಯ ಪರ್ವತಗಳಿಗೂ ಒಡೆಯನೆನಿಸಿ ಗಿರೀಶನೆಂದು (ಬೆಟ್ಟಗಳಿಗೆಲ್ಲಾ ಒಡೆಯನೆಂದು) ನೀನು ವೇದವಾಕ್ಯಗಳಿಂದ

ಇತಿ ತತ್ರಾಪಿ ಸಂಸ್ತುತ್ಯ ದೇವದೇವಂ ಪ್ರಣಮ್ಯ ಚ ।
ಪುಂಡರೀಕಪುರಂ ಪ್ರಾಪ ಹೃದಯಂ ನೈ ತದಾ ಭುವಃ ॥೩೯॥

ಪ್ರಹೃಷ್ಟಹೃತ್ಪುಂಡರೀಕೋ ಪುಂಡರೀಕಾಕ್ಷಪೂಜಿತಂ ।
ಅಭ್ರಂಲಿಹೈರ್ಗೋಪುರೈಶ್ಚ ಶ್ರೀಮದಭ್ರಸಭಾಂ ತದಾ ॥೪೦॥

ಸ್ನಾತ್ವಾ ಸ ಶಿವಗಂಗಾಯಾಂ ಭಸ್ಮರುದ್ರಾಕ್ಷಭೂಷಣಃ ॥೪೧॥

ಪ್ರಾಣಂಸೀದವತಂಸಿತೇಂದುಮನಲಾಲಂಕಾರಫಾಲಾಕ್ಷಧೃ
ಗ್ಘಸ್ತೋತ್ತೇಜಿತಧಾಂಷು(?)ಮಾಧ್ವನಿಭೃತಾ ಸದ್ವಾಮಭಾಗಾಂಬಿಕಾಂ ।
ಪಶ್ಯನ್ಹೇಮಸಭಾವಿಭಾಸಿ ಚರಣಾಂಭೋಜಂ ಹಿ ರಕ್ಷೋಗಣಾ
ಧ್ಯಕ್ಷಸ್ವಾಸ್ಯಗತಿಪ್ರದಾನಕುಶಲಂ ವಿನ್ಯಸ್ತನೃತ್ತಂ ಸದಾ ॥೪೨॥

---

ಸ್ತೋತ್ರಮಾಡಲ್ಪಟ್ಟಿರುವೆ. ದೇವ, ನಿನ್ನನ್ನು ಸ್ತೋತ್ರಮಾಡಲು ನೀನು ವಾಕ್ಕು ಗಳಿಗೂ ಮತ್ತು ಮನಸ್ಸುಗಳಿಗೂ ಗೋಚರನಾಗದಿರುವೆಯಾದ್ದರಿಂದ ಸ್ವಲ್ಪವೂ ನನಗೆ ದಾರಿಯೇ ತೋರುತ್ತಿಲ್ಲ. ॥೩೮॥

ಎಂದು ಅಲ್ಲಿಯೂ ದೇವದೇವನನ್ನು ಸ್ತೋತ್ರಮಾಡಿ ಭಕ್ತಿಯಿಂದ ನಮಸ್ಕಾರಮಾಡಿ, ಭೂಮಿಗೆ ಹೃದಯದಂತೆ ಮಧ್ಯವೂ ಮುಖ್ಯವೂ ಆಗಿರುವ ಆ ಪುಂಡರೀಕಪುರಕ್ಕೆ ಬಂದನು. ಅಲ್ಲಿ ಸಂತುಷ್ಟಹೃದಯನಾಗಿ ಮಹಾವಿಷ್ಣುವಿನಿಂದ ಪೂಜಿಸಲ್ಪಟ್ಟ ಆ ಪುಂಡರೀಕಪುರದ ಗಗನಚುಂಬಿಗಳಾದ ಗೋಪುರಗಳನ್ನುಳ್ಳ ಶ್ರೀಮದಭ್ರಸಭೆಯನ್ನು ನೋಡಿ, ಅಲ್ಲಿದ್ದ ಶಿವಗಂಗೆಯಲ್ಲಿ ಸ್ನಾನಮಾಡಿ ಭಸ್ಮ ರುದ್ರಾಕ್ಷಗಳನ್ನು ಧರಿಸಿಕೊಂಡನು. ॥೩೯-೪೦-೪೧॥

ಅನಂತರ ಚಂದ್ರನನ್ನು ತಲೆಯಲ್ಲಿ ಧರಿಸಿರುವವನೂ, ಅಗ್ನಿಯನ್ನೇ ಹಣೆ ಗಣ್ಣಾಗಿ ಅಲಂಕರಿಸಿಕೊಂಡಿರುವವನೂ, ಧ್ವನಿಮಾಡುತ್ತಿರುವ ಚಾಮರಸೇನೆಯನ್ನು ಅಂಬಿಕೆಯಿಂದ ಸದಾ ಸ್ವೀಕರಿಸುತ್ತಿರುವವನೂ, ಸುವರ್ಣಮಂಟಪದಲ್ಲಿ ಪ್ರಕಾಶಿಸುತ್ತಿರುವ ಚರಣಕಮಲವುಳ್ಳವನೂ, ರಾಕ್ಷಸೋತ್ತಮರಿಗೂ ತತ್ಸದೃಶವಾದ ಸ್ಥಾನಗಳನ್ನು ಕೊಡುವುದರಲ್ಲಿ ನಿಪುಣನೂ, ನಾಟ್ಯವಿನ್ಯಾಸಮಾಡುತ್ತಿರುವವನೂ ಆದ ಶಿವನನ್ನು ಸುಂದರನು ನೋಡಿ ಶಿರಸಾವಂದಿಸಿ ನಮಸ್ಕಾರಮಾಡಿದನು. ಮತ್ತು ಮುಂದೆ ಈಶ್ವರನ ನಾಟ್ಯವನ್ನು ವರ್ಣಿಸುತ್ತಾ ಹೀಗೆ ಸ್ತುತಿಸಿದನು. ॥೪೨॥

ಕುರ್ವಂತಂ ಚಲಲೋಲಲಂಬಿತ ಜಟಾಸಾಮ್ರಾಜ್ಯವಿತ್ರಾಸಿತಾ
ನಕ್ಷತ್ರೋರುಪತತ್ಸವರ್ಷಣಝುಣತ್ಕಾರೋರುಸತ್ಕಂಕಣಂ ।
ಸವ್ಯಾಸವ್ಯಕರದ್ವಯಾರುಣಲತಾಭ್ರಾಜತ್ಸುಭೀತಿಂ ಹರ
ಲ್ಲೋಕಾನಾಮಭಯಪ್ರದಾನಕುಶಲಂ ಚಾನ್ಯೇನ ಚಾಲಂಬಿನಾ ॥೪೩॥

ಪಾದೇನೋರುನಿಕುಂಚಿತೇನ ಮಧುನಾ ಸಂಸಿಂಚತಾ ಸಿಂಚತಾ
ಲೋಲಲ್ಲಂಬಿತ ಪಾದಕಂಕಣಫಣೀ ಫೂತ್ಕಾರಲೋಲಸ್ರಜಾ ।
ಬ್ರಹ್ಮೋತ್ತುಂಗಕರಂ ಕರಂಡ ಸುಮಹಾರತ್ನೋರುಮಾಲಾಂಶುಕ
ಭ್ರಾಜದ್ವಕ್ತ್ರಸಮುಲ್ಲಸದ್ದ್ಯುತಿಭೃತಾ ಪರ್ವೇಂದು ಪೂರ್ಣಾಶ್ರಯಾಃ ॥೪೪॥

---

ಪರಶಿವನೇ, ನಿನ್ನ ನಾಟ್ಯಕಾಲದಲ್ಲಿ ಚಂಚಲವಾಗಿ ಅಲ್ಲಾಡುತ್ತಾ ಜೋಲು ಬಿದ್ದಿರುವ ನಿನ್ನ ಜಡೆಗಳೆಂಬ ವ್ಯೋಮರಾಜ್ಯದಲ್ಲಿದ್ದ ನಕ್ಷತ್ರಗಳು ನರ್ತನದಿಂದ ಭಯಗೊಂಡು ಮಳೆಯಂತೆ ಕೆಳಗೆ ಬೀಳುತ್ತಿರುವುವು. ಝುಣಝುಣವೆಂಬ ಧ್ವನಿ ಮಾಡುವ ನಿನ್ನ ದೊಡ್ಡ ಕೈಕಂಕಣವು ಕೈಯಲ್ಲಿ ಬಹು ಸುಂದರವಾಗಿ ಶೋಭಿಸುತ್ತಿರುವುದು. ಎಡಬಲರೂಪವಾದ ಎರಡು ಕೈಗಳೂ ಕೆಂಪಗೆ ಬಳ್ಳಿಯಂತೆ ಪ್ರಕಾಶಿಸುತ್ತಾ ಜನಗಳ ಭಯವನ್ನು ಹೋಗಲಾಡಿಸುವಂತಿವೆ. ಮತ್ತೊಂದು ಕೈ ಜನಗಳಿಗೆ ಅಭಯವನ್ನು ಕೊಡುವುದರಲ್ಲಿ ನಿಪುಣವಾಗಿ, ಅಭಯಮುದ್ರೆಯನ್ನು ಹೊಂದಿದೆ. ॥೪೩॥

ನಾಟ್ಯಕಾಲದಲ್ಲಿ ನಿನ್ನ ಒಂದು ಕಾಲನ್ನು ಕೊಂಚ ಮಡಿಸಿ ನೀನು ನಾಟ್ಯ ಭಂಗಿಯಿಂದ ನಿಲ್ಲುವೆ. ಹಾಗೆಯೇ ಧ್ವನಿಮಾಡುತ್ತಾ ಮಧುವನ್ನು ಸುರಿಸುತ್ತಿರುವುವೋ ಎಂಬಂತೆ ಚಂಚಲವಾಗಿ ಕಾಲಿನವರೆಗೂ ಜೋತುಬಿದ್ದಿರುವ ಹೂವಿನ ಹಾರಗಳು ಕೈಗಳಲ್ಲಿ ಧರಿಸಿರುವ ಸರ್ಪದ ಫೂತ್ಕಾರದಿಂದ ಅಲ್ಲಾಡುತ್ತಿರುವುವು. ಬ್ರಹ್ಮನ ತಲೆಯನ್ನು ಕೈಯ್ಯಲ್ಲಿ ಹಿಡಿದು, ಶ್ರೇಷ್ಠವಾದ ದೊಡ್ಡ ದೊಡ್ಡ ರತ್ನಗಳಿಂದ ರಚಿತವಾದ ದೊಡ್ಡಹಾರವನ್ನೂ ದಿವ್ಯವಸ್ತ್ರವನ್ನೂ ಧರಿಸಿ, ಅವುಗಳಿಂದ ಪ್ರಕಾಶಿಸುತ್ತಿರುವ ಮುಖದಿಂದ ಹೊರಳಿ ಏಳುತ್ತಿರುವ ದಿವ್ಯ ತೇಜಸ್ಸನ್ನು ಧರಿಸಿರುವ ಮಹಾದೇವನೇ, ನೀನು ಪೂರ್ಣಿಮಾ ಪೂರ್ಣಚಂದ್ರನಿಗೆ ಆಶ್ರಯನೋ ಎನ್ನುವಂತೆ ಕಂಡುಬರುವೆ. ॥೪೪॥

ಸೋಮಾನಲಾರ್ಕಸುಕಟಾಕ್ಷರಸಾವಲೋಕೈ-
ರಾಲೋಕ್ಯ ಲೋಕಮಖಿಲಂ ಶರದಿಂದುಕುಂದಂ ।
ಕಾಂತಾಪಿತಾಂಗಸುಭುಜಂಗಮಹೋರುಹಾರಂ
ಮಾತಂಗಕೃತ್ತಿವಸನಂ ಹೃದಯಾಂತರಂಗೇ ॥೪೫॥

ತತ್ಪಾರ್ಶ್ವಗಾಮಚಲರಾಜಸುತಾಂ ನತಾಂತ
ಪಾದಾಂಬುಜಾಂತರ ದೃಗಂಚಲತಾಂ ದಿದೃಕ್ಷೇ ।
ಉತ್ಫುಲ್ಲಪದ್ಮವದನೋತ್ಥಿತ ನೀಲನೀರ
ಜಾತೇಕ್ಷಣಾಂಚಿತ ಕಪೋಲತಲಾಯತಾಕ್ಷೀಂ ॥೪೬॥

ಕರ್ಣಾಂತರೋದ್ಧೃತ ಸುರತ್ನಜಕಾಂತಿಕಾಂತ-
ತಾಟಂಕಯುಗ್ಮವಿನಿವಾರಯಿತೇಂದುಬಿಂಬಾಂ ।
ಬಿಂಬಾಧರಾಂ ಚಿಕುರವೇಣಿಗರತ್ನಪದ್ಮ
ಶುಕ್ರೋಪಮೋರುನಸಲಂಬಿತ ಮೌಕ್ತಿಕಾಂತಾಂ ॥೪೭॥

ಚಂದ್ರಸೂರ್ಯಾಗ್ನಿರೂಪವಾದ ಮೂರು ಕಣ್ಣುಗಳಿಂದ ಸಕಲ ಲೋಕಗಳನ್ನೂ ನೋಡುತ್ತಾ, ಶರತ್ಕಾಲದ ಚಂದ್ರ ಮತ್ತು ಮಲ್ಲಿಗೆ ಹೂಗಳಂತೆ ಶುಭ್ರವರ್ಣವುಳ್ಳವನೂ, ಕಾಂತಿಯುಕ್ತವಾಗಿರುವ ಅವಯವವುಳ್ಳವನೂ, ಆದಿಶೇಷನನ್ನೇ ಹಾರವನ್ನಾಗಿ ಮಾಡಿಕೊಂಡಿರುವವನೂ, ಗಜಚರ್ಮವನ್ನು ಧರಿಸಿರುವವನೂ ಆದ ನಾಟ್ಯಕಾಲದ ಮಹಾದೇವನನ್ನು ನನ್ನ ಹೃದಯಮಧ್ಯದಲ್ಲಿ ಸದಾ ಭಾವಿಸುತ್ತೇನೆ. ॥೪೫॥

ಪರಶಿವನ ಪಾರ್ಶ್ವದಲ್ಲಿರುವ ಪರ್ವತರಾಜಕುಮಾರಿಯು ಪರಶಿವನಿಗೆ ನಮಸ್ಕಾರಮಾಡುತ್ತಾ, ಪರಶಿವನ ಅಡಿದಾವರೆಗಳ ಮಧ್ಯದಲ್ಲಿ ಚಂಚಲವಾದ ತನ್ನ ದೃಷ್ಟಿಯನ್ನು ಬೀರಿ ನಿಂತಿರುವಳು. ಅರಳಿದ ಮುಖಕಮಲದಿಂದ ಹೊರಟು ಕನ್ನೈದಿಲೆಗಳಂತೆ ಕಪೋಲದ ವರೆಗೂ ವಿಶಾಲವಾಗಿರುವ ಕಣ್ಣುಗಳುಳ್ಳ ಅಂತಹ ಪಾರ್ವತೀದೇವಿಯನ್ನು ಸುಂದರನು ನೋಡಿದನು. ॥೪೬॥

ದೇವಿಯು ಎರಡು ಕಿವಿಗಳಲ್ಲಿಯೂ ಧರಿಸಿಕೊಂಡಿರುವ ಶ್ರೇಷ್ಠವಾದ ರತ್ನಗಳ ಕಾಂತಿಯಿಂದ ಬೆಳಗುತ್ತಿರುವ ಬೆಂಡೋಲೆಗಳು ತಮ್ಮ ತೇಜಸ್ಸಿನಿಂದ ಚಂದ್ರಬಿಂಬವನ್ನೂ ಧಿಕ್ಕರಿಸುತ್ತಿರುವುವು. ತೊಂಡೆಯ ಹಣ್ಣಿನಂತೆ ಕೆಳದುಟಿಯುಳ್ಳವಳಾಗಿ ದೇವಿಯು ಜಡೆಯಲ್ಲಿ ದಿವ್ಯರತ್ನಾಭರಣಗಳನ್ನೂ ಪದ್ಮಗಳನ್ನೂ ಮುಡಿದು, ಶುಕ್ರನಿಗೆ

ಗ್ರೈವೇಯಕಾವಲಿಭವೋತ್ತಮ ಕಂಬುಕಂಠೀಂ
ಶ್ರೀನೀಲಕಂಠ ಹೃದಯಾಂಬುಜ ಕೇಲಿಭೃಂಗೀಂ ।
ಪಾಣಿಪ್ರಭಾವಿಜಿತ ತಾಮರಸೋರುನಾಲ
ಬಾಹುದ್ವಯೀಂವಿಧೃತಕಂಕಣನಿಸ್ಸ್ವನಾಂ ತಾಂ ॥೪೮॥

ಹೀರಾತ್ತಫಾಲಫಲಕಾಮಲಿಕಾತಲತತ್ಸರೇಖಾ-
ಸಿಂಧೂರವಿಂದುಸದನಾಂ ರದಶೋಭಿಕುಂದಾಂ ।
ಕೌಸುಂಭಚೇಲಗಕೃತಾಂಚಲಶಾತಕುಂಭ-
ಶಾಕೋತ್ತರೀಯ ವಿನಿಬದ್ಧ ಮದೇಭಕುಂಭಾಂ ॥೪೯॥

ತಂ ಭ್ರಾಜಿವಲ್ಲಿಕುಚವರ್ಣಕುಚಾನನಾಂಗ
ಬದ್ಧಪ್ರಭಾತ್ರಿವಲಿತೋದರಮಧ್ಯಭಾಗಾಂ ।

---

ಸಮಾನವಾಗಿ ಹೊಳೆಯುವ ದಪ್ಪ ರತ್ನದಿಂದ ನಿರ್ಮಿತವಾಗಿರುವ ಮೂಗುತಿಯನ್ನು ಎಳಸಾದ ಮೂಗಿನಲ್ಲಿ ಧರಿಸಿ, ಶಿವನ ನಾಟ್ಯವನ್ನು ನೋಡಿ ಹರ್ಷಿಸುತ್ತಿರುವಳು.॥೪೭॥

ಕೊರಳಹಾರದಿಂದ ಯುಕ್ತವಾಗಿ ಉತ್ತಮವಾದ ಶಂಖಕ್ಕೆ ಸಮಾನವಾದ ಕತ್ತುಳ್ಳವಳೂ, ಶ್ರೀ ಮಹಾದೇವನ ಹೃದಯಕಮಲದಲ್ಲಿ ವಿಹರಿಸುವುದರಲ್ಲಿ ದುಂಬಿಯಂತಿರುವವಳೂ, ತನ್ನ ಕೈಕಾಂತಿಯಿಂದ ಜಯಿಸಲ್ಪಟ್ಟ ಕಮಲದ ದೊಡ್ಡ ದಂಟುಳ್ಳವಳೂ, ಎರಡು ತೋಳುಗಳಲ್ಲಿಯೂ ಧರಿಸಿರುವ ಕಂಕಣಗಳ ಧ್ವನಿಯಿಂದ ಕೂಡಿರುವವಳೂ ಆದ ಜಗನ್ಮಾತೆಯನ್ನು ಸದಾ ಧ್ಯಾನಿಸುವೆನು. ॥೪೮॥

ಹೀರರತ್ನದಿಂದ ಖಚಿತವಾದ ಹಲಗೆಯಂತಿರುವ ಹಣೆಯುಳ್ಳವಳೂ, ಹಣೆಯಲ್ಲಿ ಚಂದ್ರದಿಂದ ಉತ್ತಮವಾದ ತಿಲಕವನ್ನಿಟ್ಟುಕೊಂಡು ಶೋಭಿಸುತ್ತಿರುವ ಚಂದ್ರಸಮಾನ ಮುಖವುಳ್ಳವಳೂ ಆದ ದೇವಿಯು ಮಲ್ಲಿಗೆಯಂತೆ ಶೋಭಿಸುವ ದಂತಕಾಂತಿಯುಳ್ಳವಳಾಗಿರುವಳು. ಕುಸುಮೇ ಹೂವಿನ ಬಣ್ಣದ ವಸ್ತ್ರವನ್ನಲಂಕರಿಸಿಕೊಂಡಿರುವವಳು. ಚಂಚಲವಾದ ಸುವರ್ಣದ ಕಲಶವನ್ನು ಧರಿಸಿ, ಉತ್ತರೀಯದಿಂದ ಆಚ್ಛಾದಿತವಾದ ಮದಗಜದ ಕುಂಭಸ್ಥಳದಂತಿರುವ ಸ್ತನಗಳುಳ್ಳವಳು. ಇಂತಹ ಮಹಾದೇವಿಯನ್ನು ನಾನು ಸದಾ ನೋಡುತ್ತಿರುವೆನು. ॥೪೯॥

ಪಾರ್ವತಿಯು ಪ್ರಕಾಶಿಸುತ್ತಿರುವ ಗಜನಿಂಬೆಯ ಬಣ್ಣದಂತಿರುವ ಸ್ತನಗಳ ಮುಂಭಾಗವುಳ್ಳವಳಾಗಿದ್ದಾಳೆ. ಕಾಂತಿಯುಕ್ತವಾದ ತ್ರಿವಲಿಗಳ ಪ್ರಭೆಗಳಿಂದ

ರತ್ನೋರುಹೇಮಖಚಿತೋತ್ತಮಚಾರುಚಕ್ರ-
ತ್ಕಾಂಚೀಲಸತ್ಕಟಿತಟಾಂಚಿತ ಮೌಲಿಕಾಂತಾಂ ॥೫೦॥

ರಂಭಾನಿಭೋರು ಕಮಠೀನಿಭಪೃಷ್ಠಲಗ್ನ-
ಲಾಕ್ಷಾರುಣಾಂಘ್ರಿಯುಗಲಾಂ ಮಣಿನೂಪುರಾಂ ತಾಂ ।
ಮತ್ವಾ ಹೃದಂಬುರುಹಮೋದವಿಕಾಸಿತಾರ್ಕಾಂ
ತುಷ್ಟಾವ ಸುಂದರಗಿರಾ ಸ ಚ ಸುಂದರೋ ಹಿ ॥೫೧॥

॥ ಸುಂದರ ಉವಾಚ ॥

ಶಂಭೋ ಬಾಲೇಂದುಚೂಡದ್ಯುತಿ ವಿಜಿತದಿಶಾಂ ಸ್ತೋಮಶೀಮಾನುರಾಗಂ
ಫುಲ್ಲೋಲ್ಲೇಖಾಮುಖೋತ್ತಮಾಂಗಕುಮುದಾಂ ಸ್ತೋಮಾನಿ
ಭೂಮಾನಿ ತೇ ।
ಸೋಮಸ್ತೋಮಗುಣಾಭಿರಾಮನಿತರಾಂ ಶ್ರೀವಾಮದೇವ ಪ್ರಭೋ
ಕಾಮಾಂಗೋತ್ಥಿತ ಭಸ್ಮರಂಜಿತತನೋ ಮಾಂ ಪಾಹಿ ಸಾಂಬಪ್ರಭೋ॥೫೨॥

---

ವಿರಾಜಿಸುವ ಉದರದ ಮಧ್ಯಭಾಗವುಳ್ಳವಳು, ದೊಡ್ಡ ದೊಡ್ಡ ರತ್ನಗಳಿಂದ ಖಚಿತ ವಾದ ಅಪರಂಜಿಯ ಡಾಬಿನಿಂದ ಬೆಳಗುತ್ತಿರುವಳು. ಅತ್ಯಂತ ಅಮೂಲ್ಯವಾದ ರತ್ನ ಗಳಿಂದ ಶೋಭಿಸುತ್ತಿರುವ ಕಿರೀಟದಿಂದ ಮನೋಹರಳು. ॥೫೦॥

ಬಾಳೆಯ ಕಂಬಗಳಿಗೆ ಸಮಾನವಾದ ತೊಡೆಗಳು, ಆಮೆಯಂತೆ ಉಬ್ಬಿರುವ ಎರಡು ಕಾಲುಗಳ ಮೇಲ್ಭಾಗಗಳು, ಅರಗಿನ ರಸದಿಂದ ಕೆಂಪಾಗಿ ಅಲಂಕರಿಸಲ್ಪಟ್ಟಿ ರುವ ಉಗುರುಗಳು, ರತ್ನದ ಕಾಲ್ಕಡಗಗಳು, ದವುಗಳಿಂದ ಮನಸ್ಸೆಂಬ ಕಮಲವನ್ನು ಸಂತೋಷಪಡಿಸಿ ಅರಳಿಸುವುದರಲ್ಲಿ ಸೂರ್ಯನಂತಿರುವವಳು. ಇಂತಹ ದೇವಿ ಯನ್ನು ಮೇಲೆ ಹೇಳಿದ ರೀತಿಯಲ್ಲಿ ಸುಂದರನು ಮನಸ್ಸಿನಲ್ಲಿ ಧ್ಯಾನಿಸಿ ಸುಂದರ ವಾದ ಮಾತುಗಳಿಂದ ಮತ್ತೆ ಈರೀತಿ ಸ್ತುತಿಸಿದನು. ॥೫೧॥

ಬಾಲಚಂದ್ರಶೇಖರನಾದ ಶಂಭುವೇ, ನಿನ್ನ ತೇಜಸ್ಸಿನಿಂದ ಸಕಲ ದಿಕ್ಕುಗಳ ಸಮೂಹವೂ ಕಾಂತಿಯುಕ್ತವಾಗಿದ್ದು, ಎಲ್ಲೆ ಎಲ್ಲೆಗಳಲ್ಲೂ ಅನುರಾಗವನ್ನು ಬೀರುತ್ತಿವೆ. ಅರಳಿದ ಕಮಲದಂತೆ ನಿನ್ನ ಮುಖಕಮಲವು ವಿಶಾಲವಾಗಿ ಕಾಣು ಬರುತ್ತಿದೆ. ನಿನ್ನ ತಲೆಯಲ್ಲಿ ಕನ್ನೈದಿಲೆಯ ಸಮೂಹಗಳು ಬಹಳವಾಗಿರುವುವು. ಎಲೈ ಉಮಾರಮಣನೇ, ಮಹಿಮಾಪೂರ್ಣಗಳಾದ ಗುಣಗಳ ಸಮೂಹದಿಂದ

ಕಾಲವ್ಯಾಲಮುಖಾನಲೋತ್ಥಿತ ಮಹಾಜ್ವಾಲಾದಿದಗ್ಧಂ ಜಗತ್
ತತ್ಸ್ನೇಮುತ್ತರಲೋಚನೇನ ನಿತರಾಂ ಪುಷ್ಣೇತ ತಿಷ್ಯೇಪಿ ಚ ।
ಪುಷ್ಪಂ ತೇ ಪದಪದ್ಮಸಂಯುತ ಮಹಾಮಂಜೀರಸಿಂಜದ್ಧ್ವನೋ
ದೂರೀಕರ್ತುಮಲಂ ಮಹಾಘಜನಿತಂ ಸಂತಾಪವೃಂದಂ ಹರ ॥೫೩॥

ಮಂದಾರವೃಂದಮಕುಟೀತಟಿ ಪಾದಪದ್ಮ-
ನಿರ್ಯನ್ಮರಂದರಸಲಗ್ನ ಮಧುವ್ರತೋಯಂ ।
ನಾನ್ಯದ್ಧ್ಯದೇಚ್ಛತಿ ಸುರಾಂತರಸಂವಿಲಗ್ನಂ
ಭುಗ್ನಂ ಸದಾ ಭಜತಿ ತೇ ಪದಪದ್ಮಲಗ್ನಃ ॥೫೪॥

---

ನೀನು ಮನೋಹರನಾಗಿರುವೆ. ಶ್ರೀ ಅರ್ಧನಾರೀಶ್ವರಪ್ರಭುವೇ, ಮನ್ಮಥನ ಸುಟ್ಟು ಹೋದ ದೇಹದ ಭಸ್ಮದಿಂದ ಶೋಭಿಸುತ್ತಿರುವ ದೇಹವುಳ್ಳ ಸ್ವಾಮಿಯೇ, ನನ್ನನ್ನು ಕಾಪಾಡು. ॥೫೨॥

ಓ ಉಮಾರಮಣನೇ, ಕಾಲಪುರುಷನೆಂಬ ದುಷ್ಟಸರ್ಪದ ಬಾಯೊಳಗಿನ ಬೆಂಕಿಯ ಮಹಾಜ್ವಾಲೆಗಳಿಂದ ಸುಟ್ಟುಹೋಗಿರುವ ಈ ಲೋಕವನ್ನು ಈ ಕಲಿಯುಗದಲ್ಲಿ ನಿನ್ನ ಕೃಪಾಕಟಾಕ್ಷದಿಂದ ಪದೇಪದೇ ನೋಡುತ್ತಾ ಪುನಃಪುನಃ ಚೈತನ್ಯಗೊಳಿಸುತ್ತಿರು. ಪರಮೇಶ್ವರನೇ, ನಿನ್ನ ಪಾದಕಮಲದಲ್ಲಿರುವ (ಮಂಜೀರಗಳ) ಕಾಲ್ಗಡಗಗಳ ಗಂಭೀರವಾದ ಧ್ವನಿಯೇ ಮಹಾಪಾಪಗಳಿಂದ ಉಂಟಾದ ದುಃಖರಾಶಿಗಳನ್ನು ಹೋಗಲಾಡಿಸಲು ಶಕ್ತವಾಗಿರುವುದು. ॥೫೩॥

ಪಾರಿಜಾತಪುಷ್ಪಗಳ ಸಮೂಹಗಳನ್ನು ಕಿರೀಟದಲ್ಲಿ ಧರಿಸಿರುವುದರಿಂದ, ಅವುಗಳ ಮಕರಂದಗಳು ಧಾರಾಕಾರವಾಗಿ ನಿನ್ನ ಪಾದಕಮಲಗಳಲ್ಲಿ ಹರಿಯುತ್ತಿವೆ. ಈ ಮಕರಂದರಸದಲ್ಲಿ ಮುಗ್ಧವಾಗಿರುವ ಮಧುಕರವು (ಮನಸ್ಸು) ಇತರ ದೇವತಾ ವಿಷಯಕವಾದ ರಸಗ್ರಹಣದಲ್ಲಿ (ಸೇವಾಸಕ್ತಿಯಲ್ಲಿ) ಎಂದಿಗೂ ಮನಃಪೂರ್ವಕವಾಗಿ ಇಚ್ಛೆಪಡುವುದಿಲ್ಲ. ಯಾವಾಗಲೂ ವಿನಯದಿಂದ ಬಾಗಿ ನಿನ್ನ ಪಾದಕಮಲದಲ್ಲಿಯೇ ನೆಟ್ಟ ಮನಸ್ಸುಳ್ಳವನಾದ ನಾನು ನಿನ್ನನ್ನು ಬಿಟ್ಟು ಅನ್ಯರನ್ನು ಎಂದೂ ಭಜಿಸುವುದಿಲ್ಲ. ॥೫೪॥

ಸಂಸಾರದರ್ಪೋದ್ಧತ ಸರ್ಪದಷ್ಟಾ
ದುಷ್ಟಾ ಅಪಿ ಪ್ರಮಥನಾಥ ತವೇಹ ಭಾವಾತ್ ।
ಶಿಷ್ಟಾಸ್ತ ಏವ ಜಗತೌ ಶಿಪಿವಿಷ್ಟನಿಷ್ಠಾ
ಕಾಷ್ಠಾಸು ತೇ ತನುಭೃತಾಂ ಸ್ವತ ಏವ ಹೃಷ್ಟಾಃ ॥೫೫॥

ವರಂ ರಂಕೋಽಪೀಶ ತ್ರಿಭುವನವನೇ ವಾಪಿ ಚ ನರೋ
ವರೋ ಘೋರೋ ವಾಪಿ ಪ್ರಮಥಪತಿನೃತ್ತಂ ಚ ಕಲಯನ್ ।
ಭವೇಚ್ಛಂಕಾತಂಕಾ ವಿರಹಿತಹೃದೈವಾಶು ಸ ಭವೇಚ್ಛ-
ಶಾಂಕಾಕ್ರಾಂತಂ ತೇ ವರಸದಸಿ ಉಮಾಕಾಂತ ಸತತಂ ॥೫೬॥

ಸುಮಂ ಬಿಲ್ವಂ ವಾಪಿ ಪ್ರಥಿತಯಶಸಾ ಸ್ಯೈವ ಸುಲಭಂ
ಲಭೇನ್ಮೋಕ್ಷಂ ಶಂಭೋ ತವ ಪದಯುಗೇ ಭಕ್ತಿಭಜನಾತ್ ।

---

ಪ್ರಮಥಗಣಾಧಿಪತಿಯೇ, ಈ ಸಂಸಾರವೆಂಬ ಭಯಂಕರವೂ, ದೃಪ್ತವೂ ಆದ ಸರ್ಪದಿಂದ ಕಚ್ಚಲ್ಪಟ್ಟ ದುಷ್ಟರೂ ಸಹ ಇಲ್ಲಿ ನಿನ್ನನ್ನು ಭಕ್ತಿಯಿಂದ ಭಜಿಸುವುದರಿಂದ ಅವರೇ ಪ್ರಪಂಚದಲ್ಲಿ ಮಹಾಮಹಿಮರೆನಿಸುವರು. ದೇವದೇವನೇ, ಶಿಪಿವಿಷ್ಟ (ಕಿರಣಸ್ವರೂಪಿಯಾದ) ನೆನಿಸಿದ ನಿನ್ನಲ್ಲಿ ಭಕ್ತಿಗೊಂಡವರು ಸಕಲ ದಿಕ್ಕುಗಳಲ್ಲಿರುವ ಪ್ರಾಣಿಗಳ ಮಧ್ಯದಲ್ಲಿಯೂ ತಾವೇ ಸ್ವತಃ ಆನಂದಮಯರಾಗಿ ಕಂಡುಬರುವರು. ॥೫೫॥

ಈಶ್ವರನೇ, ಮೂರುಲೋಕಗಳಲ್ಲಿಯೂ ಪ್ರಮಥಗಣಾಧಿಪನಾದ ನಿನ್ನ ನಾಟ್ಯವನ್ನು ಭಕ್ತಿಯಿಂದ ಭಾವಿಸುವವನು, ಮೂರ್ಖನಾಗಲೀ, ಭಯಂಕರನೇ ಆಗಿರಲಿ ಅವನು ಶ್ರೇಷ್ಠನೇ ಎನಿಸುವನು. ದೇವ, ಉಮಾಕಾಂತನಾದ ನಿನ್ನನ್ನು ಯಾವಾಗಲೂ ಧ್ಯಾನಿಸುವವನು ಯಾವ ಶಂಕೆ, ಆತಂಕಗಳೂ ಇಲ್ಲದೇ ಶುದ್ಧ ಮನಸ್ಸಿನಿಂದ ಜಾಗ್ರತೆಯಾಗಿ ನಿನ್ನ ಉತ್ತಮವಾದ ಸಭೆಯಲ್ಲಿ ನಿನ್ನ ಸಾರೂಪ್ಯವನ್ನು ಪಡೆದು ಚಂದ್ರಚೂಡನೆನಿಸುತ್ತಾನೆ. ॥೫೬॥

ಹೂವು ಅಥವಾ ಬಿಲ್ವದಳಗಳನ್ನಾಗಲೀ ಮಹಾದೇವನಿಗೆ ಸಮರ್ಪಿಸುವವನು ಪ್ರಖ್ಯಾತಕೀರ್ತಿಯುಳ್ಳವನಾಗಿ, ನಿನ್ನ ಪಾದಕಮಲಗಳಲ್ಲಿ ಭಕ್ತಿಪೂರ್ವಕವಾದ ಭಜನೆಯಿಂದ ಮೋಕ್ಷವನ್ನು ಸುಲಭವಾಗಿ ಹೊಂದುವನು. ಶಂಭೋ, ನಿನ್ನ ಪಾದಕಮಲ

ವಿಶೀಯೈರ್ನಾರ್ಯೋ ಭವತಿ ವಿನಿವಾರ್ಯೋ ಹಿ ಸ ಭವೇ-
ತ್ಸುರಾಣಾಂ ವೈ ವರ್ಯೋ ಪ್ರಭವತಿ ಸ ವಿಸ್ತೀರ್ಣತರವಾಕ್ ॥೫೭॥

ತ್ವಾಮಂಭೋರುಹಸಂಭವಪ್ರೋತ್ತಮ ಮಹಾವೀಣಾಗಣೈಃ ಸಂಸ್ತುತಂ
ಕಃ ಸ್ತೋಷ್ಯತ್ಯಚಿರಾಚ್ಚಿರಂ ಚಿರಗಿರಾಂ ಪ್ರಾಪ್ಯೋ ನ ಸರ್ವಾತ್ಮನಾ ।
ಕೋ ವಾ ಪೂಜಯಿತಾ ಭವೇ ಕುಸುಮತೋ ಯನ್ಮೌಲಮೌಲಿಂ ಹರಿ-
ರ್ಬ್ರಹ್ಮಾ ವಾಪ್ಯನುವಿಂತಿವಾನ್ತವ ವಿಭೋ ಕಸ್ತೇ ಸದೃಕ್ಷೋ ಗುಣಃ ॥೫೮॥

ಕಾಮಂ ಮೇ ಶಿವ ಕಾಮಸುಂದರಿ ಭೃಶಂ ಸಂಪೂರಯಾಥಾಂಬಿಕೇ
ಮದ್ಭಾವಂ ವಿನಿವೇದಯಾಶು ಗಿರಿಜೇ ಶ್ರೀವ್ಯೋಮಕೇಶಾಯ ತು ।
ತ್ವಂ ಮಾತಾ ಜಗತಾಂ ಜನಿತ್ರಿ ಸ ಪಿತಾ ವಿಶ್ವೇಶ್ವರೋ ಮೇಽಧುನಾ
ತಸ್ಮಾತ್ತೇ ಪದಭಕ್ತಿಭಾವಮತುಲಂ ತ್ವಂ ದೇಹಿ ಸರ್ವೇಶ್ವರಿ ॥೫೯॥

---

ಗಳಲ್ಲಿ ಹೂ, ಪತ್ರೆ ಮುಂತಾದುವುಗಳನ್ನು ಏರಚಿದ ಮಾತ್ರದಿಂದಲೇ ಅವನು ಪೂಜ್ಯನೆನಿಸಿ, ತಡೆಯಿಲ್ಲದವನಾಗಿ, ದೇವತೋತ್ತಮನೆನಿಸಿ, ಮಹಾವಾಗ್ಮಿಯೆನಿಸುವನು. ॥೫೭॥

ಬ್ರಹ್ಮನೇ ಮೊದಲಾದ ವೀಣಾಪಾಣಿಗಳಾದ ದೇವತೋತ್ತಮರಿಂದ ಸ್ತೋತ್ರ ಮಾಡಲ್ಪಟ್ಟಿರುವ ನಿನ್ನನ್ನು ಯಾರಿಂದ ತಾನೇ ಸ್ತೋತ್ರಮಾಡಲು ಸಾಧ್ಯವಾದೀತು? ದೇವ, ಹೇಗೆ ನೋಡಿದರೂ ಅಲ್ಪವಾದ ನಮ್ಮ ವಾಕ್ಯಗಳಿಗೆ ನೀನು ಹೊಂದಲ್ಪಡುವನಲ್ಲವೆಂದು ತೋರುವುದು. ಈ ಪ್ರಪಂಚದಲ್ಲಿ ಹೂವುಗಳಿಂದ ನಿನ್ನನ್ನು ಯಾರು ತಾನೇ ಪೂಜೆಮಾಡುವುದಿಲ್ಲ? ದೇವ, ನಿನ್ನ ಕಿರೀಟದ ಬುಡವನ್ನು ಹುಡುಕಲು ಬ್ರಹ್ಮ ಮತ್ತು ವಿಷ್ಣುಗಳು ಹೊರಟು ಸಾಧ್ಯವಿಲ್ಲದೇ ಹಿಂದಿರುಗಿದರು. ಪ್ರಭೋ, ನಿನಗೆ ಸಮಾನವಾದ ಗುಣವು ಬೇರೊಂದೆಲ್ಲಿರುವುದು? ॥೫೮॥

ಪರಶಿವನ ಕಾಮೇಶ್ವರಿಯೇ, ಅಂಬಿಕಾದೇವಿಯೇ, ನೀನು ನನ್ನ ಇಷ್ಟಾರ್ಥಗಳನ್ನು ಸಂಪೂರ್ಣವಾಗಿ ಈಡೇರಿಸುವಳಾಗು. ಎಲೌ ಗಿರಿರಾಜಪುತ್ರಿಯೇ, ಜಾಗ್ರತೆಯಾಗಿ ನನ್ನ ಭಕ್ತಿಯನ್ನು ಮಹೇಶ್ವರನಿಗೆ ಶ್ರುತಪಡಿಸು. ದೇವಿ, ನೀನು ಸಕಲ ಲೋಕಸೃಷ್ಟಿಕರ್ತಳಾದ ಜನನಿಯು. ಆ ವಿಶ್ವೇಶ್ವರನೇ ಪ್ರಪಂಚಕ್ಕೆ ತಂದೆಯು. ಸರ್ವೇಶ್ವರಿ, ಆದ್ದರಿಂದ ನಿನ್ನ ಪಾದಭಜನೆಯಲ್ಲಿಯೇ ನನಗೆ ಅಪರಿಮಿತವಾದ ಭಕ್ತಿಯುಂಟಾಗುವಂತೆ ನನ್ನನ್ನು ಅನುಗ್ರಹಿಸುವಳಾಗು. ॥೫೯॥

ಇತ್ಯುಕ್ತ್ವಾ ಪ್ರಣನಾಮ ಶಂಭುಪದಯೋಃ ಸಾನಂದವಾರ್ಧೌ ತದಾ
ಮಗ್ನಃ ಶಂಭುಸಲೀಲಲಾಸ್ಯ ವಿಲಸಲ್ಲೋಕೇಽನುಲೋಕೋತ್ತರಂ ।
ಸ್ಥಿತ್ವಾ ಚಾಭ್ರಸಭಾಂತರೇ ಚ ಸ ತದಾ ವರ್ಷನ್ ಸ್ತುವಂಛಂಕರಂ
ಯಾತೋಽಸೌ ಕಮಲಾವಿಲಾಸಸದನಂ ನೇತುಂ ಮಹೇಶಂ ಗಣಃ ॥೬೦॥

ಇತಿ ಶ್ರೀಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ ಸುಂದರಶಿವಸ್ಥಾನ-
ಗಮನವರ್ಣನಂ ನಾಮೈಕವಿಂಶೋಽಧ್ಯಾಯಃ

---

ಹೀಗೆ ಗಣಶ್ರೇಷ್ಠನಾದ ಆ ಸುಂದರನು ಪಾರ್ವತೀಪರಮೇಶ್ವರರನ್ನು ಸ್ತೋತ್ರಮಾಡಿ, ಶಂಭುವಿನ ಕಾಲುಗಳಿಗೆ ಭಕ್ತಿಯಿಂದ ವಂದಿಸಿದನು. ಆ ಅಭ್ರ ಸಭಾಸ್ಥಾನದಲ್ಲಿರುತ್ತಾ ಶಂಭುವಿನ ಲೀಲಾಮಯವಾದ ಮತ್ತು ಲೋಕೋತ್ತರವಾದ ನಾಟ್ಯವನ್ನು ನೋಡುತ್ತಾ ಆನಂದಸಾಗರದಲ್ಲಿ ಮುಳುಗಿದವನಾಗಿ ಒಂದು ವರ್ಷ ಕಾಲ ಅಲ್ಲಿಯೇ ಶಂಕರನನ್ನು ಸ್ತೋತ್ರಮಾಡುತ್ತಾ ಇದ್ದು, ಮುಂದೆ ಮಹೇಶ್ವರನನ್ನು ಸೇವಿಸಲು, ಆ ಸುಂದರನು ಕಮಲಾವಿಲಾಸಮಂದಿರಕ್ಕೆ ಪ್ರಯಾಣಮಾಡಿದನು ಎಂದು ಕುಮಾರನು ಜೈಗೀಷವ್ಯನಿಗೆ ಹೇಳಿದನು. ॥೬೦॥

ಇಲ್ಲಿಗೆ ಶ್ರೀ ಶಿವರಹಸ್ಯದ ಸದಾಶಿವಸಂಜ್ಞಕವಾದ
ಒಂಬತ್ತನೆಯ ಅಂಶದಲ್ಲಿ ಸುಂದರನ ಶಿವಸ್ಥಾನಗಮನವೆಂಬ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

### ನವಮಾಂಶೇ

## ದ್ವಾವಿಂಶೋಽಧ್ಯಾಯಃ

॥ ಮುನಿರುವಾಚ ॥

ಕಮಲಾಲಯಸಂಜ್ಞಾಸ್ಯ ಶಿವಕ್ಷೇತ್ರಸ್ಯ ಶಾಂಕರ ।
ಕಥಮಾಸೀತ್ತದಸ್ಮಾದ್ಯ ಸಮುತ್ಕಂಠತಿ ಮೇ ಮನಃ ॥೧॥

ನೀಲಕಂಠಚರಿತ್ರೇಷು ಕೇಕೀವ ಘನಗರ್ಜನಾತ್ ।
ಇತಿ ತದ್ವಚನಂ ಶ್ರುತ್ವಾ ಸ್ಕಂದಃ ಸೂದಿತತಾರಕಃ ॥೨॥

ಉವಾಚ ಮೋಚಾಮಧುರವಚಾ ಚಂದನಶೀತಯಾ ॥೩॥

---

## ಇಪ್ಪತ್ತೆರಡನೆಯ ಅಧ್ಯಾಯ

ಎಲೈ ಶಂಕರಪುತ್ರನೇ, ಆ ಶಿವಕ್ಷೇತ್ರಕ್ಕೆ ಕಮಲಾಲಯವೆಂಬ ಹೆಸರು ಹೇಗೆ ಬಂದಿತು? ಅದನ್ನು ತಿಳಿಯಬೇಕೆಂದು ನನ್ನ ಮನಸ್ಸು ಆಸೆಪಡುತ್ತಿರುವುದು. ಮೇಘಧ್ವನಿಯನ್ನು ಆಲಿಸುವ ನವಿಲಿನಂತೆ, ನೀಲಕಂಠನ ಚರಿತ್ರೆಗಳಲ್ಲಿ ನನ್ನ ಮನಸ್ಸು ಉತ್ಕಂಠಿತವಾಗಿರುವುದು. ಅದಕ್ಕಾಗಿ ನನಗೆ ಈ ವಿಷಯವನ್ನು ಹೇಳೆಂದು ಜೈಗೀಷವ್ಯನು ಕುಮಾರಸ್ವಾಮಿಯನ್ನು ಪ್ರಾರ್ಥಿಸಲು, ಆಗ ತಾರಕಾಸುರನನ್ನು ಕೊಂದ ಕುಮಾರಸ್ವಾಮಿಯು ದ್ರಾಕ್ಷಾಫಲದಂತೆ ಮಧುರವೂ ಚಂದನದಂತೆ ಶೀತಲವೂ ಆದ ಮಾತಿನಿಂದ ಹೀಗೆ ಉತ್ತರಕೊಟ್ಟನು. ॥೧-೨-೩॥

॥ ಶ್ರೀ ಸ್ಕಂದ ಉವಾಚ ॥

ಜೈಗೀಷವ್ಯ ಶೃಣುಷ್ವಾದ್ಯ ಕಮಲಾಲಯವಿಸ್ತರಂ ।
ಪುರಾ ಕಮಲಯಾ ತತ್ರ ತಪಸ್ತಪ್ತಂ ಶಿವಾಶ್ರಮೇ ॥೪॥

ಬಹುವರ್ಷಗಣಂ ತಾತ ವಲ್ಮೀಕೇಶಾರ್ಚನೇನ ಸಾ ।
ನಿನಾಯ ವಾಸರಾಂಸ್ತಸ್ಮಿನ್ಸೂಚ್ಯಗ್ರೇ ಸಂಸ್ಥಿತಾ ಸತೀ ॥೫॥

॥ ಮುನಿರುವಾಚ ॥

ತಸ್ಮಾತ್ಕಮಲಯಾ ತಪ್ತಂ ಕಾರಣಂ ಮೇ ವದಾಧುನಾ ।
ಕಮಲಾಯಾಃ ಪ್ರಸಾದೇನ ಸರ್ವೋಽಪಿ ವಿಮಲೋ ಭವೇತ್ ॥೬॥

ತಾದೃಶ್ಯಪಿ ಕಥಂ ಸ್ಥಾನೇ ತಪಸ್ತಪ್ತವತೀ ಪುರಾ ॥೭॥

॥ ಶ್ರೀ ಸ್ಕಂದ ಉವಾಚ ॥

ಅಪುತ್ರಸ್ತಪ್ಯಮಾನೋ ವೈ ಹರಿರ್ವಾರ್ಧೌ ಪುರಾ ಸ್ಥಿತಃ ।
ನಾಗಪರ್ಯಂಕಶಯನೇ ಶಿಷ್ಯೇ ಕಮಲಯಾ ಸಹ ॥೮॥

---

ಎಲೈ ಜೈಗೀಷವ್ಯನೇ, ಈಗ ಕಮಲಾಲಯಕ್ಷೇತ್ರದ ವಿಸ್ತಾರವಾದ ಕಥೆಯನ್ನು ಹೇಳುವೆನು ಕೇಳು. ಹಿಂದೆ ಲಕ್ಷ್ಮೀದೇವಿಯು ಅಲ್ಲಿಯೇ ಶಿವನ ಆಶ್ರಯದಲ್ಲಿ ಕುಳಿತು ತಪಸ್ಸುಮಾಡಿದಳು. ಮಹರ್ಷಿಯೇ, ಲಕ್ಷ್ಮಿಯು ವಲ್ಮೀಕೇಶ್ವರನನ್ನು ಪೂಜೆಮಾಡುತ್ತಾ ಅನೇಕ ವರ್ಷಗಳನ್ನೇ ಅಲ್ಲಿ ಕಳೆದುಬಿಟ್ಟಳು. ಕೆಲವು ದಿವಸಗಳಂತೂ ಸೂಜಿಯ ತುದಿಯಲ್ಲಿ ಕುಳಿತು ತಪಸ್ಸನ್ನಾಚರಿಸಿದಳು, ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೪-೫॥

ಕುಮಾರಸ್ವಾಮಿಯೇ, ಲಕ್ಷ್ಮಿಯು ಅಲ್ಲಿ ತಪಸ್ಸುಮಾಡಲು ಕಾರಣವೇನು ? ಪ್ರಪಂಚದಲ್ಲಿ ಆ ಲಕ್ಷ್ಮಿಯ ಅನುಗ್ರಹದಿಂದಲೇ ಎಲ್ಲವೂ ಪರಿಶುದ್ಧವಾಗುತ್ತದೆ. ಅಂತಹ ಲಕ್ಷ್ಮಿಯು ಹಿಂದೆ ಅಲ್ಲಿ ಹೇಗೆ ಏತಕ್ಕೋಸ್ಕರ ತಪಸ್ಸುಮಾಡಿದಳು ? ದಯವಿಟ್ಟು ನನಗೆ ಹೇಳಬೇಕೆಂದು ಪುನಃ ಜೈಗೀಷವ್ಯನು ಪ್ರಾರ್ಥಿಸಿದನು. ॥೬-೭॥

ಓ ಮುನಿಯೇ, ಕೇಳು. ವಿಷ್ಣುವು ಹಿಂದೆ ಸಂತಾನವಿಲ್ಲದೇ ಕ್ಷೀರಸಮುದ್ರದಲ್ಲಿ ಆದಿಶೇಷನೆಂಬ ಮಂಚದ ಮೇಲೆ ಲಕ್ಷ್ಮಿಯೊಡನೆ ಮಲಗಿ ಪುತ್ರಾರ್ಥಿಯಾಗಿ ಪರಶಿವನನ್ನು ಸ್ತುತಿಸಿದನು. ಆಗ ಆವನು ಅಂಬಿಕಾರಮಣನೂ, ಚಂದ್ರಕಲಾ

ಧ್ಯಾಯನ್ನಾಸ್ತೇ ಮಹಾದೇವಂ ಸಾಂಬಂ ಚಂದ್ರಕಲಾಧರಂ ।
ಮೃಗಟಂಕಧರಂ ಸೌಮ್ಯಂ ಲೋಚನತ್ರಯಭೂಷಿತಂ ॥೯॥

ನೀಲಕಂಠಂ ವಿರೂಪಾಕ್ಷಂ ರತ್ನಸಿಂಹಾಸನೇ ಸ್ಥಿತಂ ।
ಫುಲ್ಲಕಲ್ಹಾರಮಾಲಾಂಕಂ ದಿವ್ಯಪೀತಾಂಬರಾವೃತಂ ॥೧೦॥

ಅನಲ್ಪರತ್ನಾಕಲ್ಪೇನ ಶೋಭಮಾನಂ ಮಹತ್ತರಂ ।
ಸ್ವಹೃದುತ್ಫುಲ್ಲಪದ್ಮಸ್ಥಮೇವಂ ಧ್ಯಾಯೀತ ಶಂಕರಂ ॥೧೧॥

ಬಹುವರ್ಷಗಣಾಂ ವಿಪ್ರ ಸ್ವಪನ್ನೇವ ಹರಿಸ್ತದಾ ।
ಮಾನಸೈರುಪಚಾರೈಶ್ಚ ಪೂಜಯನ್ಸಾಂಬಮೀಶ್ವರಂ ॥೧೨॥

ತುಷ್ಟಾವ ವಾಗ್ಭಿರ್ಹೃಷ್ಟಾಭಿಃ ಶಿಪಿವಿಷ್ಟಂ ಮಹೇಶ್ವರಂ ॥೧೩॥

॥ ವಿಷ್ಣುರುವಾಚ ॥

ಸೋಮಸ್ಕಂದವಿಭೋ ತ್ವದೀಯವಿಮಲಂ ರೂಪಂ ಸುಧಾಂಶುಸ್ಫುರ-
ಜ್ಜೂಟಾಹಿಸ್ಫುಟಮೌಲಿಕಾಂಚಿತಮಣಿಸ್ಫಾರಾಂಗರಾಗೋದ್ಧತಂ ।

ಧರನೂ, ಜಿಂಕೆ, ಟಂಕಗಳನ್ನು ಹಿಡಿದಿರುವನೂ, ಸೌಮ್ಯಮೂರ್ತಿಯೂ, ಸೂರ್ಯ ಚಂದ್ರಾಗ್ನಿರೂಪವಾದ ಮೂರು ಕಣ್ಣುಗಳುಳ್ಳವನೂ ಆದ ಮಹಾದೇವನನ್ನು ಸದಾ ಧ್ಯಾನಮಾಡುತ್ತಿದ್ದನು. ಎಂದು ಸ್ಕಂದನು ಕಮಲಾಲಯಕ್ಷೇತ್ರವಿಷಯವನ್ನು ಮುಂದುವರಿಸಿದನು. ॥೮-೯॥

ಕಪ್ಪು ಕೊರಳುಳ್ಳವನೂ, ಮೂರು ಕಣ್ಣುಗಳಿಂದ ವಿರೂಪವಾದ ನೇತ್ರಗಳುಳ್ಳವನೂ, ರತ್ನಸಿಂಹಾಸನದಲ್ಲಿ ಮಂಡಿಸಿರುವವನೂ, ಅರಳಿದ ಕಲ್ಹಾರ (ಕೆಂಪು ನೈದಿಲೇಹೂಗಳು) ಪುಷ್ಪಗಳ ಮಾಲೆಯಿಂದ ಅಲಂಕೃತನಾದವನೂ, ಪೀತಾಂಬರವನ್ನು ಧರಿಸಿರುವವನೂ, ಅಪರಿಮಿತವಾದ ರತ್ನಗಳ ವೇಷಭೂಷಣಾದಿಗಳಿಂದ ವಿಶೇಷವಾಗಿ ಶೋಭಿಸುತ್ತಿರುವನೂ ಆಗಿ, ತನ್ನ ಮನಸ್ಸೆಂಬ ಅರಳಿದ ಕಮಲದಲ್ಲಿ ನೆಲಸಿರುವ ಶಂಕರನನ್ನು ವಿಷ್ಣುವು ಧ್ಯಾನಮಾಡಿದನು. ಅನೇಕ ವರ್ಷಗಳಕಾಲ ವಿಷ್ಣುವು ಮಲಗಿಯೇ ಮಾನಸಿಕವಾದ ಉಪಚಾರಗಳಿಂದ ಅಂಬಿಕಾರಮಣನಾದ ಈಶ್ವರನನ್ನು ಪೂಜಿಸುತ್ತಾ, ಸಂತೋಷಯುಕ್ತವಾದ ಮಾತುಗಳಿಂದ ಆ ಶಿಪಿವಿಷ್ಟನೆನಿಸಿದ ಮಹಾದೇವನನ್ನು ಇಂತು ಸ್ತೋತ್ರಮಾಡಿದನು. ॥೧೦-೧೧-೧೨-೧೩॥

ಚಂದ್ರಶೇಖರನಾದ ಪ್ರಭುವೇ, ನಿನ್ನ ನಿರ್ಮಲವಾದ ರೂಪವು ಚಂದ್ರನಿಂದ

ತ್ರ್ಯಕ್ಷಂ ಸೌಮ್ಯಸುಧಾಂಶುಕಾಂತಿವಿಲಸತ್ತಿರ್ಯಕ್ತ್ರಿಪುಂಡ್ರಾಂಕಿತಂ
ವೀಕ್ಷ್ಯೋಕ್ಷಾದಿವಿದೂರಗಂ ತವ ವಿಭೋ ವಕ್ತ್ರಂ ಕಟಾಕ್ಷೋದಯಂ॥೧೪॥

ತ್ವತ್ಪಾದಾಬ್ಜಮರಂದಸುಂದರಮಹಾವೀಚೀಸ್ಫುರನ್ಮೌಲಯೋ
ವೃಂದಾರದ್ಯುತಿವೃಂದವಂದಿತಮಹಾನಂದಾಂಬುಧಾರಾಸ್ಪದಂ ।
ಧ್ಯಾಯನ್ನಾಥ್ಯಯಮುಪಾಸ್ಮಹೇ ತವ ಮಹಾಪಾಪೌಘಭಿತ್ಕೇವಲಂ
ಮುಕ್ತ್ಯಾ ಕಿಂ ಮಮ ಸಾಂಪ್ರತಂ ತವ ವಿಭೋ ಭಕ್ತಿಂ ಹಿ ಯಾಚೇ ಸದಾ
॥೧೫॥

---

ಪ್ರಕಾಶಿಸುತ್ತಿರುವ ಜಡೆಯಿಂದಲೂ, ಜಟಾಮೌಲಿಯಲ್ಲಿರುವ ಆದಿಶೇಷನ ತಲೆಯ (ಹೆಡೆಗಳ) ರತ್ನಗಳ ಕಾಂತಿಯಿಂದಲೂ ವಿಸ್ತಾರವಾಗಿ ವ್ಯಾಪಿಸಿ, ದಿವ್ಯವಾದ ಶರೀರ ಕಾಂತಿಯಿಂದ ಕೂಡಿ ಎಲ್ಲೆಲ್ಲೂ ಹರಡಿರುವುದು. ಸೂರ್ಯ, ಚಂದ್ರ ಮತ್ತು ಅಗ್ನಿ ರೂಪವಾದ ಮೂರು ಕಣ್ಣುಗಳೂ, ಸೌಮ್ಯನಾದ ಚಂದ್ರನ ಕಾಂತಿಯಿಂದ ಶೋಭಿಸುತ್ತಿರುವ ತಿರ್ಯಕ್ಪುಂಡ್ರರೇಖೆಯೂ ಇರುವ ನಿನ್ನ ಮುಖಕಾಂತಿಯನ್ನು ನೋಡಿದರೆ ಪ್ರಭೋ, ವೃಷಭವಾಹನನಾದ ನಿನ್ನ ಮೊಗವು ಯಾವಾಗಲೂ ಕಟಾಕ್ಷವನ್ನು ಭಕ್ತರ ಮೇಲೆ ಬೀರುವಂತಿದೆ. ॥೧೪॥

ನಿನ್ನ ಅಡಿದಾವರೆಗಳಲ್ಲಿರುವ ಮಕರಂದಗಳ ಸುಂದರವಾದ ದೊಡ್ಡದೊಡ್ಡ ಅಲೆಗಳಲ್ಲಿ, ಪ್ರಕಾಶಿಸುತ್ತಿರುವ ಕಿರೀಟಗಳುಳ್ಳ ದೇವತೆಗಳ ಗುಂಪು ಕಾಂತಿಯುಕ್ತವಾಗಿ, ನಿನ್ನ ಪಾದಕಮಲಗಳಿಗೆ ಸದಾ ವಂದಿಸುತ್ತಾ ಆನಂದಭಾಗಿಯಾಗಿರುವುದು. ಸ್ವಾಮಿಯೇ, ದೇವತೆಗಳು ಗುಂಪುಗುಂಪಾಗಿ ಬಂದು ನಿನ್ನ ಪಾದಗಳಿಗೆ ನಮಸ್ಕಾರ ಮಾಡುತ್ತಿರುವರು. ಅವರ ತಲೆಯ ಮೇಲಿರುವ ಕಿರೀಟಗಳು ನಿನ್ನ ಪಾದಕಮಲಗಳಿಗೆ ಸೋಕಿ ಆ ರತ್ನಕಾಂತಿಯು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸುತ್ತಿರುವುದು. ಇದರಿಂದ ಆನಂದಭರಿತರಾಗಿ ದೇವತೆಗಳು ಸಂತುಷ್ಟರಾಗುತ್ತಿರುವರು ಸ್ವಾಮಿಯೇ, ಮಹಾಪಾಪಸಮೂಹಗಳನ್ನೂ ನಾಶಮಾಡುವ ನಿನ್ನ ಆ ಪಾದಕಮಲಗಳನ್ನೇ ಪದೇ ಪದೇ ಧ್ಯಾನಮಾಡುತ್ತಾ ಸೇವಿಸುತ್ತೇನೆ. ಪ್ರಭೋ, ನನಗೆ ಈಗ ಆ ಮೋಕ್ಷದಿಂದ ತಾನೇ ಏನು ಪ್ರಯೋಜನ? ಯಾವಾಗಲೂ ನಿನ್ನ ಭಕ್ತಿಯೊಂದಿದ್ದರೆ ಸಾಕೆಂದು ಪ್ರಾರ್ಥಿಸುತ್ತೇನೆಂದು ವಿಷ್ಣುವು ಶಿವನನ್ನು ಸ್ತೋತ್ರಮಾಡಿದನು. ॥೧೫॥

ಇತಿ ವಿಷ್ಣುವಚಃ ಶ್ರುತ್ವಾ ಸೋಮಸ್ಕಂದೋ ಮಹೇಶ್ವರಃ ।
ವಿಷ್ಣುಮಾಹ ತದಾ ದೇವೋ ವೃಣು ಕಾಮಂ ತವೇಪ್ಸಿತಂ ॥೧೬॥

ಶ್ರುತ್ವಾ ಶಂಭೋಶ್ಚ ವಚನಂ ತದಾ ವಿಷ್ಣುಃ ಪ್ರಹೃಷ್ಟಧೀಃ ।
ಯಯಾಚೇ ದೇವಮೀಶಾನಂ ಭಕ್ತಿಂ ತತ್ಪದಪಂಕಜೇ ॥೧೭॥

ಜೇತಾರಂ ಸರ್ವಲೋಕೇಷು ಪುತ್ರಮೇಕಮಯಾಚತ ।
ಸುಂದರಂ ಸುಂದರಾಣಾಂ ಚ ಕುಸುಮೇಷುಂ ಹರಿಸ್ತದಾ ॥೧೮॥

ವಿಷ್ಣೋಹೃತ್ಕಾಮಮತುಲಂ ಪೂರಯಾಮಾಸ ಶಂಕರಃ ।
ಪ್ರಹೃಷ್ಟಸ್ತ್ರ್ಯಕ್ಷಮೀಕ್ಷಿಷ್ಟ ದಕ್ಷಶಿಕ್ಷಂ ಸುರಾರಿಹಾ ॥೧೯॥

ತದಂತರೇ ಮಹಾದೇವೀ ಕೋಪಸಂರಕ್ತಲೋಚನಾ ।
ವಿಷ್ಣುಂ ಜಿಷ್ಣುಂ ತದಾವೀಕ್ಷ್ಯ ತಿರ್ಯಗೀಕ್ಷತ ಸಕ್ರುಧಂ ॥೨೦॥

॥ ದೇವ್ಯುವಾಚ ॥

ಮಾಮನಾದೃತ್ಯ ದೇವೇಶಂ ತ್ವಮಸ್ತಾವೀಃ ಚ ದರ್ಪತಃ ।
ತಸ್ಮಾತ್ತೇ ಶಿವದತ್ತೋಽಪಿ ಸುತೋ ನಾಶಮುಪೇಷ್ಯತಿ ॥೨೧॥

---

ಈ ರೀತಿಯಾದ ವಿಷ್ಣುವಿನ ಸ್ತೋತ್ರರೂಪವಾದ ಮಾತುಗಳನ್ನು ಕೇಳಿ, ಚಂದ್ರಚೂಡನಾದ ಆ ಮಹೇಶ್ವರನು, ಓ ವಿಷ್ಣುವೇ, ನಿನಗೆ ಇಷ್ಟವಾದ ವರವನ್ನು ಬೇಡೆಂದು ಹೇಳಿದನು. ಆಗ ವಿಷ್ಣುವು, ಶಂಭುವು ನುಡಿದ ಆ ಮಾತನ್ನು ಕೇಳಿ ಸಂತುಷ್ಟಚಿತ್ತನಾಗಿ ಈಶ್ವರನನ್ನು ಕುರಿತು ದೇವ, ನಿನ್ನ ಪಾದಕಮಲದಲ್ಲಿ ಯಾವಾಗಲೂ ನನಗೆ ಭಕ್ತಿಯಿರಲಿ. ಸಕಲ ಲೋಕಗಳನ್ನೂ ಜಯಿಸುವ ಅತಿ ಸುಂದರನೂ, ಪುಷ್ಪಬಾಣನೂ ಆದ ಮಗನನ್ನು ಅನುಗ್ರಹಿಸೆಂದು ಬೇಡಿದನು. ||೧೬-೧೭-೧೮||

ಕೂಡಲೇ ಶಂಕರನು ವಿಷ್ಣುವಿನ ಮನೋರಥವನ್ನು ಸಂಪೂರ್ಣವಾಗಿ ಸಲ್ಲಿಸಿದನು. ಆಗ ಸಂತುಷ್ಟನಾದ ಆ ದೈತ್ಯಾಂತಕನು ದಕ್ಷನಾಶಕನಾದ ಮುಕ್ಕಣ್ಣನನ್ನು ನೋಡಿದನು. ಈ ಮಧ್ಯದಲ್ಲಿ ಪಾರ್ವತೀದೇವಿಯು ಕೋಪದಿಂದ ಕೆಂಪಾದ ಕಣ್ಣುಳ್ಳವಳಾಗಿ ಜಯಶೀಲನಾದ ವಿಷ್ಣುವನ್ನು ಕೋಪದಿಂದ ವಕ್ರವಾಗಿ ನೋಡಿದಳು. ||೧೯-೨೦||

ಎಲೈ ವಿಷ್ಣುವೇ, ನೀನು ನನ್ನನ್ನು ಆದರಿಸದೇ ಆ ದೇವತೋತ್ತಮನೊಬ್ಬ

ಶಿವಫಾಲಾನಲಜ್ವಾಲಕೀಲತೂಲಾಯಿತೋ ಹರೇ ।
ದೇವೀ ವಾಗ್ವಜ್ರಮುತ್ಸೃಷ್ಟಂ ಶ್ರುತ್ವಾ ಚಿಂತಾಕುಲೋ ಹರಿಃ ॥೨೨॥

ಪ್ರಣಮ್ಯಾಹ ಸ ಸಾಷ್ಟಾಂಗಂ ಗಿರಿಜಾಮಶ್ರುಲೋಚನಃ ॥೨೩॥
ಕಥಂ ಶಾಪಾಸ್ತ್ರಪಾತ್ರಂ ಮಾಂ ಕೃತವತ್ಯಸಿ ಶೈಲಜೇ ।

॥ ಹರಿರುವಾಚ ॥

ಕ್ಷಂತವ್ಯೋಽಯಂ ಮಯಾಗೋಽಘ ಅಗಕನ್ಯೇ ಸುದಾರುಣಃ ॥೨೪॥

ಇತಿ ವಿಷ್ಣುವಚಃ ಶ್ರುತ್ವಾ ಶಂಕರಸ್ತಾಮಭಾಷತ ॥೨೫॥

॥ ಶ್ರೀ ಈಶ್ವರ ಉವಾಚ ॥

ಹರಿಃ ಕಂದರ್ಪಜನನೇ ನೈವ ದಪಾರ್ತ[illegible]ನ್ವೀಕ್ಷ್ಯ ಮಾಂ ।
ಮಮಾರ್ಧಗತಾಂ ತಾಂ ಚ ಮಾಸ್ಯಪಾನಸ್ತ್ವನೈಕ್ಯತಾಂ ॥೨೬॥

ನಾಸ್ಯ ಮಂತುಶ್ಚ ಮಂತವ್ಯೋ ತಂತುಭೂತೇ ಸುತೇಽಸ್ಯ ವೈ ।
ಮತ್ಫಾಲಾನಲದಗ್ಧೋಽಪಿ ಕಾಲೇನ ಮಹತಾ ತವ ॥೨೭॥

---

ನನ್ನೇ ಸ್ತೋತ್ರಮಾಡಿದುದರಿಂದ ನಿನಗೆ ಆ ಶಿವನು ಮಗನನ್ನು ಅನುಗ್ರಹಿಸಿದ್ದರೂ ಅವನೂ ನಾಶಹೊಂದುವನು. ಅವನು ಶಿವನ ಹಣೆಗಣ್ಣಿನ ಅಗ್ನಿಜ್ವಾಲೆಯ ಕಿಡಿಗಳಿಗೆ ಸಿಕ್ಕಿ ಹತ್ತಿಯಂತೆ ಭಸ್ಮನಾಗುವನು ಎಂದು ಶಾಪಕೊಡಲು, ಆ ಪಾರ್ವತೀದೇವಿಯ ವಜ್ರ (ಸಿಡಿಲಿಗೆ) ಸಮಾನವಾದ ಮಾತುಗಳನ್ನು ಕೇಳಿ, ವಿಷ್ಣುವು ಚಿಂತಾಕ್ರಾಂತನಾಗಿ, ಕಣ್ಣಿನಲ್ಲಿ ನೀರುಸುರಿಸುತ್ತಾ ಪರ್ವತರಾಜಕುಮಾರಿಗೆ ಸಾಷ್ಟಾಂಗನಮಸ್ಕಾರ ಮಾಡಿ, ಹೀಗೆ ಪ್ರಾರ್ಥಿಸಿದನು. ॥೨೧-೨೨-೨೩॥

ತಾಯೇ, ಗಿರಿರಾಜಕುಮಾರಿ, ನಿನ್ನ ಈ ಶಾಪವೆಂಬ ಬಾಣಕ್ಕೆ ನನ್ನನ್ನು ಗುರಿಮಾಡುವುದು ಉಚಿತವೇ? ಪಾರ್ವತೀದೇವಿ, ನನ್ನ ಭಯಂಕರವಾದ ತಪ್ಪನ್ನು ಕ್ಷಮಿಸುವಳಾಗೆಂದು ವಿಷ್ಣುವು ಪ್ರಾರ್ಥಿಸಲು ಆ ಮಾತನ್ನು ಕೇಳಿ ಮಹೇಶ್ವರನು ದೇವಿಗೆ ಹೀಗೆ ನುಡಿದನು. ॥೨೪-೨೫॥

ದೇವಿ, ಮನ್ಮಥನ ಜನನನಿಮಿತ್ತವಾಗಿ ಆ ವಿಷ್ಣುವು ಅಹಂಕಾರದಿಂದ ನನ್ನನ್ನು ಮೊದಲು ಸ್ತೋತ್ರಮಾಡಲಿಲ್ಲ. ನೀನೂ ನನ್ನ ಅರ್ಧಶರೀರಿಣಿಯೆಂದೂ,

ಮತ್ಕಟಾಕ್ಷಾಂಕುರೋದ್ಭೂತಃ ಪುನರುಜ್ಜೀವತಾಂ ಸ್ಮರಃ ।
ಇತ್ಯುಕ್ತ್ವಾ ವಿಷ್ಣುಹೃದಯೇ ಉವಾಸ ಸ ತದಾ ಹರಃ ॥೨೮॥

ತತಃ ಕಾಲೇನ ಮಹತಾ ಸುಷಾವ ಕಮಲಾ ಸ್ಮರಂ ।
ಮದನಂ ಸರ್ವದಮನಂ ಸುರಸಾಹಾಯ್ಯಕಾರಿಣಂ ॥೨೯॥

ಕುಸುಮೇಷುಂ ಸಮುತ್ಪನ್ನಂ ದೃಷ್ಟ್ವಾ ವಿಷ್ಣುಃ ಪ್ರಹೃಷ್ಟಧೀಃ ।
ಅತಿಷ್ಠದುತ್ಸುಕಃ ಪುತ್ರಂ ವೀಕ್ಷ್ಯತ್ರ್ಯಕ್ಷಪ್ರಸಾದಜಂ ॥೩೦॥

ತತಃ ಕಾಲೇನ ಮಹತಾ ಸುರಕಾರ್ಯಾರ್ಥಮುದ್ಯತಃ ।
ಶಿವಫಾಲಾನಲಜ್ವಾಲಾವಲೀಢೋ ಮದನಸ್ತದಾ ॥೩೧॥

ಶಂಭುನಾದಮಿತೇ ತತ್ರ ಮದನೇ ಸರ್ವಭೇದನೇ ।
ಚಿಂತಾಕುಲಾ ಸಾ ವೈಕುಂಠಾನ್ನೀಲಕಂಠಂ ಸಮಾಶ್ರಯತ್ ॥೩೨॥

ಕಮಲಾ ವಿಷ್ಣುನಾ ಸಾರ್ಧಂ ಕ್ರೋಧಾದ್ವಚನಮಬ್ರವೀತ್ ॥೩೩॥

---

ನನ್ನಲ್ಲಿಯೇ ಐಕ್ಯವಾಗಿದ್ದೀಯೆಂದೂ ತಿಳಿದು ನಿನ್ನನ್ನು ಸ್ತುತಿಸಿದನು. ಇದರಲ್ಲಿ ವಿಷ್ಣುವಿನ ಅಪರಾಧವೇನೂ ಇಲ್ಲ. ಮುಂದೆ ಅಂಕುರಿಸುವ ಇವನ ಮಗನಲ್ಲಿಯೂ ಯಾವ ತಪ್ಪೂ ಇರುವುದಿಲ್ಲ. ಓ ವಿಷ್ಣುವೇ, ನಿನ್ನ ಕುಮಾರನು ಮುಂದೆ ನನ್ನ ಫಾಲಾಗ್ನಿಯಿಂದ ಸುಡಲ್ಪಟ್ಟರೂ, ನನ್ನ ಕಟಾಕ್ಷದಿಂದ ಮತ್ತೆ ಉತ್ಪನ್ನನಾಗುವುದರಿಂದ ಕೊಂಚಕಾಲದಲ್ಲಿಯೇ ನನ್ನ ಅನುಗ್ರಹದಿಂದಲೇ ಪುನಃ ಬದುಕಲಿ ಎಂದು ವಿಷ್ಣುವಿಗೆ ಅಭಯವನ್ನು ಹೇಳಿ, ಪರಮೇಶ್ವರನು ವಿಷ್ಣುವಿನ ಮನಸ್ಸಿನಲ್ಲಿ ನೆಲಸಿಬಿಟ್ಟನು. ॥೨೬-೨೭-೨೮॥

ಹೀಗೆಯೇ ಕೆಲವುಕಾಲ ಕಳೆಯಲು ಲಕ್ಷ್ಮಿಯು ಎಲ್ಲರ ಮನಸ್ಸನ್ನೂ ಕದಡುವವನೂ, ದೇವತೆಗಳಿಗೆ ಸಹಾಯ ಮಾಡುವವನೂ ಆದ ಮನ್ಮಥನನ್ನು ಪಡೆದಳು. ಆಗ ಆ ವಿಷ್ಣುವು, ಪುಷ್ಪಬಾಣನಾದ ಮನ್ಮಥನು ಜನಿಸಿದುದನ್ನು ನೋಡಿ, ಸಂತೋಷಚಿತ್ತನಾಗಿ ಮೇಲೆದ್ದು ಪರಶಿವನ ಅನುಗ್ರಹದಿಂದ ಲಬ್ಧನಾದ ಆ ಕುಮಾರನನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದನು. ಹೀಗೆಯೇ ಬಹಳಕಾಲ ಕಳೆಯಲು, ಒಂದುಸಲ ಈ ಮನ್ಮಥನು ದೇವತೆಗಳ ಪ್ರಾರ್ಥನೆಯಂತೆ ತಪಸ್ಸು ಮಾಡುತ್ತಿದ್ದ ಶಿವನ ಮೇಲೆ ಪಾರ್ವತಿಯ ಸಂನಿಧಾನದಲ್ಲಿ ಬಾಣಪ್ರಯೋಗಮಾಡಿ,

॥ ಕಮಲಾ ಉವಾಚ ॥

ತವೈವಾನಯತೋ ವಿಷ್ಣೋ ಮದನೋಽನಂಗತಾಂ ಗತಃ ।
ನಾಹಂ ವಸಾಮಿ ವೈಕುಂಠೇ ಪುತ್ರಶೋಕಾಗ್ನಿದೀಪಿತಾ ॥೨೪॥

ದುಃಖೋಪಮರ್ದನಸ್ಥಾನಂ ಸಂಗಚ್ಛಾಮಿ ಕಪರ್ದಿನಃ ।
ಇತ್ಯುಕ್ತ್ವಾ ಸಾಥ ಕಮಲಾ ಕಮಲಾಲಯಮೇತ್ಯ ಚ ॥೨೫॥

ವಿಮಲಂ ಸಾ ತಪಸ್ತೇಪೇ ಶೂಲಹಸ್ತಾರ್ಚನೇನ ಚ ।
ವಲ್ಮೀಕೇಶಂ ಸಮಾರಾಧ್ಯ ದೇವಮೇವಮತೋಷಯತ್ ॥೨೬॥

॥ ಕಮಲೋವಾಚ ॥

ಶ್ರೀಬಿಲ್ವಿನೇ ಕವಚಿನೇ ಪರಸೋಮಧಾಮ
ಸಾಮಿ ಪ್ರಕಾಮಶಿರಸೇ ಮಮ ದುಃಖಹಂತ್ರೇ ।
ಪಾತ್ರೇ ಸಮಸ್ತ ಸುರತಾವನ ದೀಕ್ಷಿತಾಯ
ವಲ್ಮೀಕಮಧ್ಯನಿಲಯಾಯ ನಮಃಶಿವಾಯ ॥೨೭॥

---

ಮಹೇಶ್ವರನ ಉರಿಗಣ್ಣಿನ ಜ್ವಾಲೆಯಿಂದ ಬೂದಿಯಾದನು. ಎಲ್ಲರನ್ನೂ ನಿಗ್ರಹಿಸುತ್ತಿದ್ದ ಮನ್ಮಥನು ಹೀಗೆ ಶಂಕರನಿಂದ ಭಸ್ಮಮಾಡಲ್ಪಡಲು, ಆಗ ಲಕ್ಷ್ಮಿಯು ಯೋಚನಾಕ್ರಾಂತಳಾಗಿ ವೈಕುಂಠವನ್ನು ಬಿಟ್ಟು ವಿಷಕಂಠನಾದ ಶಿವನಿದ್ದೆಡೆಗೆ ಓಡಿ ಬಂದಳು. ಆಗ ಲಕ್ಷ್ಮಿಯು ವಿಷ್ಣುವಿನೊಡನೆ ಕೋಪದಿಂದ ಹೀಗೆ ಮಾತನಾಡಿದಳು. ॥೧೯-೨೦-೨೧-೨೨-೨೩॥

ಎಲೈ ವಿಷ್ಣುವೇ, ನಿನ್ನ ದುರ್ನಡತೆಯಿಂದಲೇ ನಮ್ಮ ಕುಮಾರನಾದ ಮನ್ಮಥನಿಗೆ ದೇಹವಿಲ್ಲದಂತಾಯಿತು. ಈ ಪುತ್ರಶೋಕದಿಂದ ಬಳಲುತ್ತಾ ನಾನು ಇನ್ನು ಈ ವೈಕುಂಠದಲ್ಲಿ ವಾಸಮಾಡುವುದಿಲ್ಲ. ಈ ದುಃಖವನ್ನು ನಾಶಮಾಡುವ ಆ ಜಟಾಧಾರಿಯಾದ ಶಿವನ ಸ್ಥಾನವನ್ನು ನಾನು ಸೇರುತ್ತೇನೆ ಎಂದು ಹೇಳಿ ಆ ಲಕ್ಷ್ಮಿಯು ನಿರ್ಮಲವಾದ ಕಮಲಾಲಯಕ್ಷೇತ್ರಕ್ಕೆ ಹೋಗಿ ತ್ರಿಶೂಲಪಾಣಿಯಾದ ದೇವದೇವನೆನಿಸಿದ ಆ ವಲ್ಮೀಕೇಶ್ವರನನ್ನು ಪೂಜಿಸಿ, ತಪಸ್ಸು ಮಾಡಿ, ಈರೀತಿ ಧ್ಯಾನಿಸಿದಳು. ॥೨೪-೨೫-೨೬॥

ಶ್ರೇಷ್ಠ ಬಿಲ್ವದಳವುಳ್ಳವನೇ, ಕವಚವುಳ್ಳವನೇ, ಉತ್ತಮನಾದ ಅರ್ಧಚಂದ್ರನಿಗೆ ಆಶ್ರಯನೇ, ಅರ್ಧಚಂದ್ರನಿಂದ ಶೋಭಿಸುವ ತಲೆಯುಳ್ಳವನೇ, ನನ್ನ ದುಃಖ

ಗೌರೀವಿಲಾಸಮುಖಪಂಕಜಭಾನುನೇತ್ರ
ಪ್ರೋದ್ಯತ್ಪ್ರಭಾಧವಲಿತಾಯ ಮಹೇಶ್ವರಾಯ ।
ಉದ್ಯತ್ಸುಧಾಂಶುಚಯವಾರ್ಧಿತರಂಗರಿಂಖ
ದ್ಗಂಗಾತರಂಗಕಲಿತೇಂದುಜಟಾಕಲಾಯ ॥೩೮॥

ಉದ್ದಂಡ ಚಂಡಕರ ಧಾರಿತ ಮೇರುಮಧ್ಯ-
ಕೋದಂಡಕಾಯ ಸತತಂ ಹರ ಶಂಕರಾಯ ॥೩೯॥

ಇತಿ ತತ್ಕಮಲಾಸ್ತುತ್ಯಾ ವಲ್ಮೀಕೇಶಃ ಪ್ರಹೃಷ್ಟಧೀಃ ।
ಮಾಭೈಷ್ಟೇತಿ ಶ್ರಿಯಂ ಚೋಕ್ತ್ವಾ ಕಾಲಾಂತೇ ಸ್ಯಾತ್ಸುತೋದಯಃ ॥೪೦॥

ದೇವ್ಯಾಃ ಪ್ರಸಾದಾದಚಿರಾತ್ಪುತ್ರಃ ಸಂಜೀವತಾಂ ರಮೇ ।
ಇತಿ ಶಂಭೋರ್ವಚಃ ಶ್ರುತ್ವಾ ಹರ್ಷೋನ್ಮೀಲದ್ಧೃಗಂತರಾ ॥೪೧॥

---

ವನ್ನು ಹೋಗಲಾಡಿಸುವವನೇ, ಜಗದ್ರಕ್ಷಕನೇ, ಸಕಲ ದೇವತೆಗಳ ರಕ್ಷಣೆಯಲ್ಲಿಯೂ ಬದ್ಧಕಂಕಣನಾಗಿರುವವನೇ, ಹುತ್ತದ ಮಧ್ಯದಲ್ಲಿ ನೆಲಸಿರುವವನೇ, ಮಹಾದೇವನೇ, ನಿನಗೆ ನಮಸ್ಕಾರ ಮಾಡುತ್ತೇನೆ. ॥೩೭॥

ಮಹೇಶ್ವರನೇ. ನೀನು ಗೌರೀದೇವಿಯ ವಿಲಾಸಕ್ಕೆ ಆಶ್ರಯವಾಗಿರುವ ಮುಖಕಮಲವುಳ್ಳವನು, ಸೂರ್ಯರೂಪವಾದ ಕಣ್ಣಿನ ಕಾಂತಿಯಿಂದ ಶುಭ್ರವರ್ಣವಾಗಿ ಮಾಡಲ್ಪಟ್ಟಿರುವ ದೇಹಕಾಂತಿಯುಳ್ಳವನು, ಮಹದೈಶ್ವರ್ಯಸಂಪನ್ನನು, ಹುಟ್ಟುತ್ತಿರುವ ಚಂದ್ರಕಿರಣಗಳ ಸಮೂಹದಿಂದ ಸಮುದ್ರದ ಆಲೆಗಳಂತೆ ಮೇಲೇಳುತ್ತಿರುವ ಗಂಗಾನದಿಯ ಅಲೆಗಳಿಂದ ಕೂಡಿರುವ ಜಡೆಗಳ ಸಮೂಹವುಳ್ಳವನು, ದೊಡ್ಡದಾದ ಮತ್ತು ಗಟ್ಟಿಯಾದ ತೋಳಿನಿಂದ ಧರಿಸಲ್ಪಟ್ಟ ಮೇರುಪರ್ವತವೆಂಬ ಬಿಲ್ಲುಳ್ಳವನು, ಯಾವಾಗಲೂ ಲೋಕಕ್ಕೆ ಮಂಗಳವನ್ನುಂಟುಮಾಡುತ್ತಿರುವವನು. ಇಂತಹ ಮಹೇಶ್ವರನೆನಿಸಿದ ನಿನಗೆ ನಮಸ್ಕಾರ ಮಾಡುತ್ತೇನೆಂದು ಲಕ್ಷ್ಮಿಯು ವಲ್ಮೀಕೇಶ್ವರನನ್ನು ಸ್ತೋತ್ರಮಾಡಿದಳು. ॥೩೮-೩೯॥

ಈ ರೀತಿಯಾದ ಲಕ್ಷ್ಮೀದೇವಿಯ ಸ್ತೋತ್ರದಿಂದ ವಲ್ಮೀಕೇಶ್ವರನು ಸಂತುಷ್ಟನಾಗಿ, "ಇನ್ನು ಸ್ವಲ್ಪಕಾಲದಲ್ಲಿಯೇ ನಿನಗೆ ಪುತ್ರಪ್ರಾಪ್ತಿಯಾಗುತ್ತದೆ. ದೇವಿಯ ಅನುಗ್ರಹದಿಂದ ಶೀಘ್ರವಾಗಿ ನಿನ್ನ ಮಗನು ಪುನಃ ಬದುಕುತ್ತಾನೆ. ಎಲೌ ಲಕ್ಷ್ಮೀ, ನೀನು ಭಯಪಡಬೇಡ" ಎಂದು ಲಕ್ಷ್ಮಿಗೆ ಪರಮೇಶ್ವರನು ವರ

ಸ್ಮರನ್ಪ್ರಾದುರ್ಭವಂಸ್ತತ್ರ ಪದ್ಮಾ ದೇವ್ಯಾಃ ಕಟಾಕ್ಷತಃ ।
ಉವಾಸ ತತ್ರ ನಿಯತಂ ಚಿಂತಯಂತೀ ಸ್ಮರೋದ್ಭವಂ ॥೪೨॥

ಚಿಂತಯಂತೀ ಮಹಾದೇವಂ ಮದನಾಂತಕರಂ ಶಿವಂ ।
ತದಾಪ್ರಭೃತಿ ತತ್ಕ್ಷೇತ್ರಂ ಕಮಲಾಲಯಸಂಜ್ಞಿತಂ ॥೪೩॥

ಪ್ರಥಿತಂ ಸರ್ವಲೋಕೇಷು ಮನ್ಮಥಾಂತಕರಸ್ಯ ಚ ।
ತ್ಯಕ್ತ್ವಾ ವಿಷ್ಣುಶ್ಚ ವೈಕುಂಠಂ ತದಾ ಶ್ರೀವಿರಹಾತುರಃ ॥೪೪॥

ಶ್ರೀವಾಂಛಾಸ್ಥಾನಮಗಮಚ್ಛ್ರಿಯಂ ವಾಂಛಂಸ್ತದಾ ಹರಿಃ ।
ಭಸ್ಮರುದ್ರಾಕ್ಷಧೃಙ್ನಿತ್ಯಂ ತ್ರಿಪುಂಡ್ರೋಜ್ಜ್ವಲಫಾಲಕಃ ॥೪೫॥

ತಪಸ್ತೇಪೇ ನಿರಾಹಾರಃ ಶತವರ್ಷಾಣ್ಯನನ್ಯಧೀಃ ।
ತಪೋ ಘೋರತರಂ ತೇಪೇ ಮುನೀನಾಂ ವಿಸ್ಮಯಾವಹಂ ॥೪೬॥

---

ವಿತ್ತನು. ಈ ರೀತಿಯಾದ ಶಂಭುವಿನ ಮಾತನ್ನು ಕೇಳಿ ಲಕ್ಷ್ಮಿಯು ಸಂತೋಷ ದಿಂದ ಅರಳಿದ ಕಣ್ಣುಗಳುಳ್ಳವಳಾಗಿ, ಪದ್ಮಾದೇವಿಯ ಕಟಾಕ್ಷವೀಕ್ಷಣೆಯಿಂದ ಉಂಟಾ ಗುವ ಪುತ್ರಪ್ರಾದುರ್ಭಾವವನ್ನು ಸ್ಮರಿಸುತ್ತಾ, ಮನ್ಮಥನ ಉತ್ಪತ್ತಿಯನ್ನೇ ಯಾವಾಗಲೂ ಚಿಂತಿಸುತ್ತಾ ಅಲ್ಲಿಯೇ ನಿಯಮದಿಂದ ವಾಸಮಾಡತೊಡಗಿದಳು. ॥೪೦-೪೧-೪೨॥

ಲಕ್ಷ್ಮಿಯು ಮನ್ಮಥಾಂತಕನೂ, ದೇವತೋತ್ತಮನೂ ಆದ ಶಿವನನ್ನು ಆ ಕ್ಷೇತ್ರದಲ್ಲಿ ಪುತ್ರಪ್ರಾಪ್ತಿಗಾಗಿ ಧ್ಯಾನಮಾಡುತ್ತಾ ವಾಸಮಾಡತೊಡಗಿದಳು. ಆದ್ದರಿಂದ ಮನ್ಮಥಾಂತಕನಾದ ಮಹಾದೇವನ ಈ ಕ್ಷೇತ್ರವು ಕಮಲಾಲಯವೆಂಬ ಹೆಸರಿನಿಂದ ಎಲ್ಲಾ ಲೋಕಗಳಲ್ಲಿಯೂ ಪ್ರಖ್ಯಾತವಾಯಿತು. ವಿಷ್ಣುವೂ ಲಕ್ಷ್ಮೀ ದೇವಿಯ ವಿಯೋಗದಿಂದ ಕಾತರನಾಗಿ ತಾನೂ ವೈಕುಂಠಲೋಕವನ್ನು ಬಿಟ್ಟು, ಲಕ್ಷ್ಮಿಯನ್ನಪೇಕ್ಷಿಸುತ್ತಾ ಆಗ ಶ್ರೀವಾಂಛಾಕ್ಷೇತ್ರಕ್ಕೆ ಬಂದನು. ॥೪೩-೪೪॥

ಅಲ್ಲಿ ವಿಷ್ಣುವು ಭಸ್ಮರುದ್ರಾಕ್ಷಗಳನ್ನು ಧರಿಸಿ, ನಿತ್ಯವೂ ಹಣೆಯಲ್ಲಿ ಉಜ್ವಲ ವಾದ ತ್ರಿಪುಂಡ್ರವುಳ್ಳವನಾಗಿ, ನೂರುವರ್ಷಗಳ ಕಾಲ ಆಹಾರವನ್ನೇ ತೆಗೆದು ಕೊಳ್ಳದೇ ಭಯಂಕರವಾಗಿ ತಪಸ್ಸುಮಾಡಿದನು. ಅನನ್ಯಮನಸ್ಕನಾಗಿ ಮುನಿ ಗಳಿಗೂ ಆಶ್ಚರ್ಯವುಂಟಾಗುವಂತೆ ವಿಷ್ಣುವು ತಪಸ್ಸು ಮಾಡಿದನು. ಮೂರ್

ತ್ರಿಕಾಲಮರ್ಚಯಂಛಂಭುಂ ಬಿಲ್ವಪತ್ರೈಶ್ಚ ಕೋಮಲೈಃ ।
ಪಂಚಾಮೃತೈಃ ಪಂಚಗವ್ಯೈರ್ಗಂಧಚಂದನವಾರಿಭಿಃ ॥೪೭॥

ಧೂಪೈರ್ದೀಪೈಶ್ಚ ನೈವೇದ್ಯೈರುಪಚಾರೈರನೇಕಶಃ ।
ಸ್ತುವನ್ದೇವಂ ಮಹಾದೇವಂ ಚಿಂತಯನ್ನಬ್ಧಿಕನ್ಯಕಾಂ ॥೪೮॥

ವಿರಹಾತ್ಸಶ್ರಿಯಾ ದೇವ್ಯಾ ಪಾರ್ಶ್ವಂ ಚಾಹರಹರ್ಯಯೌ ।
ವಾಂಛಿತಾರ್ಥಪ್ರದಂ ದೇವಂ ಶ್ರೀವಾಂಛೇಶಂ ವಿಚಿಂತಯನ್ ॥೪೯॥

॥ ವಿಷ್ಣುರುವಾಚ ॥

ವಾಂಛೇಶ ತುಚ್ಛಫಲದೇಷು ನ ಮೇ ಸ್ಪೃಹಾಸ್ಯಾ
ತ್ವಚ್ಛಂ ತ್ವಮೇವ ಶ್ರುತಿಮೌಳಿಗಿರಾಂ ಸದೈವ ।
ಇಚ್ಛಾ ಭವೇತ್ತವ ಪದೇಮಮ ಭಕ್ತಿಭಾವಂ
ತ್ವಚ್ಛಾಸನಂ ಕಲಯತೋ ಮಮ ಕಿಂ ಹಿ ಭೋಗೈಃ ॥೫೦॥

---

ಸಂಧ್ಯಾಕಾಲಗಳಲ್ಲಿಯೂ ಕೋಮಲವಾದ ಬಿಲ್ವದಳಗಳು, ಪಂಚಾಮೃತ, ಪಂಚಗವ್ಯ, ಗಂಧ, ಚಂದನ, ನೀರು, ಧೂಪ, ದೀಪ, ನೈವೇದ್ಯ ಮುಂತಾದುವುಗಳಿಂದಲೂ ಉಚಿತವಾದ ಉಪಚಾರಗಳಿಂದಲೂ ಪೂಜಿಸಿ, ಮುಂದೆ ಹೇಳುವಂತೆ ಮಹಾದೇವನನ್ನು ಸ್ತೋತ್ರಮಾಡುತ್ತಾ, ವಿರಹದಿಂದ ಲಕ್ಷ್ಮಿಯನ್ನೇ ಯಾವಾಗಲೂ ಚಿಂತಿಸುತ್ತಾ, ದಿನದಿನಕ್ಕೆ ವಿಷ್ಣುವು ಲಕ್ಷ್ಮಿಯ ಅಗಲುವಿಕೆಯಿಂದ ಕೃಶನಾಗುತ್ತಾ ಬಂದನು. ಆಗ ವಿಷ್ಣುವು ಇಷ್ಟಾರ್ಥಗಳನ್ನು ಕೊಡುವ ಶ್ರೀವಾಂಛೇಶ್ವರನನ್ನು ಕುರಿತು ಹೀಗೆ ಸ್ತೋತ್ರಮಾಡಿದನು. ॥೪೫-೪೬-೪೭-೪೮-೪೯॥

ಎಲೈ ವಾಂಛೇಶ್ವರಸ್ವಾಮಿಯೇ, ನೀಚಫಲಪ್ರದವಾದ ಸ್ಥಾನಗಳಲ್ಲಿ ನನಗೆ ಅಪೇಕ್ಷೆಯುಂಟಾಗಲಾರದು. ವೇದಾಂತವಾಕ್ಯಗಳಿಗೆ ಯಾವಾಗಲೂ ನೀನೇ ಗುರಿಯಾಗಿರುವೆ. ದೇವ, ನಿನ್ನ ಪಾದದಲ್ಲಿ ಯಾವಾಗಲೂ ನನಗೆ ಭಕ್ತಿಯುಂಟಾಗಲಿ. ಮಹೇಶ್ವರ, ನಿನ್ನ ಅಪ್ಪಣೆಯನ್ನು ನಡೆಸುವ ಸೇವಕರಾದ ನಮಗೆ ಭೋಗಭಾಗ್ಯಗಳಿಂದ ಏನುತಾನೇ ಪ್ರಯೋಜನ? ॥೫೦॥

ಇತ್ಯುಕ್ತಂ ಹರಿವಚನಂ ನಿಶಮ್ಯ ಶಂಭು
ಸ್ತಸ್ಮೈ ತಾಮಚಿರಾತ್ತದಾ ದದರ್ಶ ।
ಮೂರ್ತಿಂ ಸ್ವಾಂ ತ್ರಿನಯನೀಮಿಂದುಚೂಡಯುಕ್ತಾ
ಮಭ್ರೋದ್ಯಪ್ರಥಿತೋರುಚಾರುಬಿಂಬಾಂ ॥೫೦॥

ಸಂಪ್ರೋಚಿವಾಂತ್ಸ್ಮರರಿಪುಃ ಪ್ರಣತಂ ಮುರಾರಿಂ
ದೇವ್ಯಾಃ ಕಟಾಕ್ಷವಶತಸ್ತವ ಜನ್ಮ ಭೂಯಾತ್ ।
ಮಾರಸ್ಯ ತೇ ತನುಭುವಃ ಕಮಲಾವಶಾ ಸ್ಯಾ
ನ್ನಿರ್ಯಾಹಿ ಲೋಕಮಧುನಾ ತವ ಲೋಕಗುಪ್ತ್ಯೈ ॥೫೧॥

ಅಸವ್ಯಪಾಣಿಸ್ಥಿತಲಿಂಗಮೈಶಂ
ಮ್ಯದ್ವಚ್ಯ ಮೃದ್ನಾತಿ ಸ ಪಾಪಜಾಲಂ ।
ಯೋಗಾಲ್ಲಘಾದ್ಯಂ ವಿರಚಯ್ಯ ಭಕ್ತ್ಯಾ
ಮಲ್ಲೋಕಮೇವಾಶು ವಸೇತ್ಸಧನ್ಯಃ ॥೫೩॥

---

ಹೀಗೆ ನುಡಿದ ವಿಷ್ಣುವಿನ ಸ್ತುತಿವಾಕ್ಯಗಳನ್ನು ಕೇಳಿ ಶಂಭುವು ಕೂಡಲೇ ಮೂರು ಕಣ್ಣುಗಳು, ಚಂದ್ರಚೂಡಗಳಿಂದ ಕೂಡಿದ, ಅಂತರಿಕ್ಷದಂತೆ ಪ್ರಸಿದ್ಧವೂ ದೊಡ್ಡದೂ ಆದ ತನ್ನ ಮನೋಹರವಾದ ಮೂರ್ತಿಯನ್ನು ತೋರ್ಪಡಿಸಿದನು. ॥೫೦॥

ಮನ್ಮಥಶತ್ರುವಾದ ಆ ಶಂಕರನು ತನಗೆ ನಮಸ್ಕಾರ ಮಾಡಿರುವ ಮುರಾಂತಕನಾದ ವಿಷ್ಣುವನ್ನು ಕುರಿತು, ದೇವಿಯ ಕಟಾಕ್ಷದಿಂದ ನಿನ್ನ ಮಗನಾದ ಮನ್ಮಥನ ಜನ್ಮವು ಪುನಃ ಉಂಟಾಗಿ ಲಕ್ಷ್ಮಿಯ ಅಧೀನವಾಗುವುದು. ಈಗ ನೀನು ನಿನ್ನ ಲೋಕರಕ್ಷಣೆಗೋಸ್ಕರ ವೈಕುಂಠಕ್ಕೆ ತೆರಳು. ॥೫೧॥

ಎಡಗೈಯಲ್ಲಿ ಈಶ್ವರನ ಪಾರ್ಥಿವಲಿಂಗವನ್ನಿಟ್ಟು ಪೂಜಿಸಿದ ಮಾನವನು ಪಾಪರಾಶಿಗಳನ್ನೆಲ್ಲಾ ಕಳೆದುಕೊಳ್ಳುತ್ತಾನೆ. ಯೋಗಶಕ್ತಿಯಿಂದ ಶಿವನ ಅತಿಸೂಕ್ಷ್ಮ ರೂಪವನ್ನು ನನ್ನ ಭಕ್ತಿಯಿಂದ ಪಡೆದು ಜಾಗ್ರತೆಯಾಗಿ ನನ್ನ ಲೋಕವನ್ನು ಹೊಂದಿ ಅಲ್ಲಿ ವಾಸಮಾಡುತ್ತಾನೆ. ಅವನೇ ಧನ್ಯನು ಎಂದು ಶಿವನು ವಿಷ್ಣುವಿಗೆ ನುಡಿದನು. ॥೫೩॥

ನಿರಗಾದುರಗಾರಿಕೇತನಃ
ಶಿವವಾಕ್ಯಾಮೃತಸಾರವರ್ಷತರ್ಷಃ ।
ಸಮವಾಪ್ಯ ನಿಜಾಂ ಪ್ರಿಯಾಂ ತದಾನೀಂ
ಸ್ಮರಮುದ್ಬೋಧ್ಯ ತದಾಧಿಜಾಕಟಾಕ್ಷೈಃ ॥೫೪॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಕಮಲಾಲಯ
ಶ್ರೀ ವಾಂಛಮಹಿಮಾವರ್ಣನಂ ನಾಮ ದ್ವಾವಿಂಶೋಽಧ್ಯಾಯಃ

---

ಗರುಡಧ್ವಜನಾದ ವಿಷ್ಣುವು ಶಿವನ ವಾಕ್ಯಾಮೃತಗಳಿಂದ ಸಂತುಷ್ಟನಾಗಿ, ತನ್ನ ಪ್ರಿಯೆಯಾದ ಲಕ್ಷ್ಮಿಯನ್ನು ಹೊಂದಿ, ಪಾರ್ವತೀದೇವಿಯ ಕೃಪಾಕಟಾಕ್ಷಗಳಿಂದ ಮನ್ಮಥನನ್ನು ಎಚ್ಚರಗೊಳಿಸಿ ಪುನಃ ಪಡೆದನು, ಎಂದು ಜೈಗೀಷವ್ಯನಿಗೆ ಕುಮಾರಸ್ವಾಮಿಯು ಹೇಳಿದನು. ॥೫೪॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಶ್ರೀಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
'ಕಮಲಾಲಯ' 'ಶ್ರೀವಾಂಛ' ಕ್ಷೇತ್ರಗಳ ಪ್ರಭಾವವರ್ಣನೆಯೆಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ತ್ರಯೋವಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ತತಃ ಸ ಸುಂದರಃ ಪ್ರಾಪ್ಯ ಕಮಲಾಲಯಮುತ್ತಮಂ ।
ಹೃದಯಾನಂದಸಂದೋಹಂ ತಮುದ್ವಾಹಸ್ಥಲಂ ಉಮೇ ॥೧॥

ದೇವರ್ಷಿಸ್ಥಾಪಿತೋತ್ತುಂಗಲಿಂಗಸಂಘವಿರಾಜಿತಂ ।
ಆನಂದೇಶಾದಿಸಿದ್ಧೇಶಮಚಲೇಶಂ ಸ ಸುಂದರಃ ॥೨॥

ಹಾಟಕೇಶಂ ಚ ತುಷ್ಟಾವ ಶ್ರೀವಲ್ಮೀಕಮಹೇಶ್ವರಂ ।
ಸ್ನಾತ್ವಾ ದೇವೇಶಸರಸಿ ಭಸ್ಮರುದ್ರಾಕ್ಷಭೂಷಣಃ ॥೩॥

ಸಂಪ್ರಣಮ್ಯ ಮಹಾದೇವಂ ಸುಂದರಃ ಶಶಿಶೇಖರಂ ।
ಕ್ರಮೇಣ ಪಂಚಲಿಂಗಾನಿ ತುಷ್ಟಾವಾಥ ಸ ಸುಂದರಃ ॥೪॥

---

## ಇಪ್ಪತ್ತಮೂರನೆಯ ಅಧ್ಯಾಯ

ದೇವಿ, ಆನಂತರ ಸುಂದರನು ಮನಸ್ಸಿನ ಆನಂದಕ್ಕೆ ಆಶ್ರಯವಾಗಿರುವುದೂ ಉತ್ತಮವೂ ವಿವಾಹಸ್ಥಳವೂ ಆದ ಕಮಲಾಲಯಕ್ಷೇತ್ರಕ್ಕೆ ಬಂದನು. ಆ ದಿವ್ಯ ಸ್ಥಳವಾದರೋ ದೇವತೆಗಳಿಂದಲೂ, ಋಷಿಗಳಿಂದಲೂ ಸ್ಥಾಪಿಸಲ್ಪಟ್ಟ ಎತ್ತರವಾದ ಲಿಂಗಸಮೂಹಗಳಿಂದ ವಿರಾಜಿಸುತ್ತಿತ್ತು. ಆ ಸುಂದರನು ಅಲ್ಲಿದ್ದ ದೇವೇಶನ ಸರಸ್ಸಿನಲ್ಲಿ ಸ್ನಾನಮಾಡಿ ಭಸ್ಮರುದ್ರಾಕ್ಷಗಳನ್ನು ಅಲಂಕರಿಸಿಕೊಂಡು ಚಂದ್ರಚೂಡನಾದ ಮಹಾದೇವನ ಆನಂದೇಶ್ವರ, ಆದಿಸಿದ್ಧೇಶ್ವರ, ಅಚಲೇಶ್ವರ, ಹಾಟಕೇಶ್ವರ

॥ ಸುಂದರ ಉವಾಚ ॥

**ಆನಂದೇಶ ಸುನಂದಿತ ತ್ರಿಭುವನ ಮಂದಾರವೃಂದಾನತಂ**
**ಪಾದಾಬ್ಜೋತ್ಥಮರಂದಸುಂದರಮಹಾನಂದಾಂಬು ವೀಚೀಸ್ಥಿತಃ ।**
**ಮಚ್ಚಿತ್ತಾಖ್ಯಮಿಲಿಂದ ಏವ ನಿತರಾಂ ಪಾತುಂ ತವಾದ್ಯಾದರಾ-**
**ನ್ನಿಂದನ್ನರ್ಥಚತುಷ್ಟಯಂ ಕಲಯತೇ ಪುಣ್ಯೇಂದಿರಾಯಾಃ ಪುರೇ ॥೫॥**

**ಇತಿ ಸಂಸ್ತುತ್ಯ ಹೃಷ್ಟಾತ್ಮಾ ಸಿದ್ಧ್ಯಷ್ಟಕಗತಿಪ್ರದಂ ।**
**ಸಿದ್ಧೇಶಂ ಸಮ್ಯಗಾರಾಧ್ಯ ಪ್ರತುಷ್ಟಾವ ಸ ಸುಂದರಃ ॥೬॥**

॥ ಸುಂದರ ಉವಾಚ ॥

**ಸಿದ್ಧೇಶ ಸಿದ್ಧನಿಗಮೋತ್ತಮಮೌಳಿವಾಚಾಂ**
**ಮೋಚಾ ಸದೃಕ್ಷವಚಸಾಂ ತ್ವಯಿ ವಿದ್ಧಿ ಭಾವಂ ।**

---

ಮತ್ತು ವಲ್ಮೀಕೇಶ್ವರರೆಂಬ ಐದು ಲಿಂಗಗಳಿಗೂ ಪ್ರಣಾಮಮಾಡಿ ಕ್ರಮವಾಗಿ ಪಂಚಲಿಂಗಗಳನ್ನೂ ಸ್ತೋತ್ರಮಾಡಿದನು. ॥೧-೨-೩-೪॥

ಎಲೈ ಆನಂದೇಶ್ವರನೇ, ಮೂರುಲೋಕವನ್ನೂ ನೀನು ಆನಂದಗೊಳಿಸುವ ಸಾಮರ್ಥ್ಯವನ್ನು ಪಡೆದಿರುವೆ. ದೇವತೆಗಳ ಗುಂಪು ನಿನ್ನ ಪಾದಕಮಲಗಳಿಗೆ ಸದಾ ಬಾಗಿ ನಮಸ್ಕಾರ ಮಾಡುತ್ತಿರುವುದು. ದೇವದೇವನೇ, ನಿನ್ನ ಪಾದಕಮಲ ಗಳಿಂದುಂಟಾದ ಮಕರಂದವೆಂಬ ಸುಂದರವಾದ ಮಹಾನಂದೋದಕದ ಪ್ರವಾಹ ದಲ್ಲಿರುವ ನನ್ನ ಮನಸ್ಸೆಂಬ ಭ್ರಮರವು ಯಾವಾಗಲೂ ಆ ಮಕರಂದವನ್ನು ಪಾನಮಾಡಲು ಆಸಕ್ತಿಯುಳ್ಳದ್ದಾಗಿರುವುದು. ಅದರಿಂದಲೇ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಈ ಪುರುಷಾರ್ಥಚತುಷ್ಟಯುವನ್ನೂ ಅಪೇಕ್ಷಿಸದೆ ಮುಕ್ತಿ ಪ್ರದವಾದ ಈ ಕಮಲಾಲಯದಲ್ಲಿ ನಿಂತು ಯೋಚಿಸುತ್ತಿದ್ದೆ. ॥೫॥

ಹೀಗೆ ಸುಂದರನು ಆನಂದೇಶ್ವರನನ್ನು ಸ್ತೋತ್ರಮಾಡಿ ಸಂತುಷ್ಟಾಂತರಂಗ ನಾಗಿ ಅಣಿಮಾದ್ಯಷ್ಟೈಶ್ವರ್ಯಗಳನ್ನೂ ಕೊಡುವ ಸಿದ್ಧೇಶ್ವರನನ್ನು ಭಕ್ತಿಯಿಂದ ಪೂಜೆಮಾಡಿ ಸುಂದರನು ಈರೀತಿ ಸ್ತೋತ್ರಮಾಡಿದನು. ॥೬॥

ಸಿದ್ಧೇಶ್ವರನೇ, ಮಧುರವಾದ ಬಾಳೆಯ ಹಣ್ಣುಗಳಿಗೆ ಸಮಾನವಾಗಿ ಸಿದ್ಧಾಂತರೂಪದಿಂದಿರುವ ವೇದಾಂತವಚನಗಳಿಗೆಲ್ಲಾ ನಿನ್ನಲ್ಲೇ ತಾತ್ಪರ್ಯ

ಮುಗ್ಧೇಂದುಸಿದ್ಧ ಸುಲಲಾಮ ನಿಜಾಕ್ಷಸೋಮ-
ಮಾನುದ್ಯ ಪಾಹಿ ಭವ ಸಿದ್ಧಿಕರೋ ಮಹೇಶ ॥೭॥

ಇತಿ ಸಂಸ್ತುತ್ಯ ಸಿದ್ಧೇಶಮಚಲೇಶಂ ಯಯೌ ತದಾ ।
ವಿನಯಾವನತೋ ಭೂತ್ವಾ ಸ್ತುತ್ವಾನೀಂದುಭೂಷಣಂ ॥೮॥

॥ ಸುಂದರ ಉವಾಚ ॥

ಅಚಲಾಧಿಪರಾಜಕನ್ಯಾ
ಕುಚಲೀಲಾಯಿತ ವಕ್ಷಸಾ ವಿಶಾಲ ।
ಇಭಸಂಭವ ಚರ್ಮಚೇಲ ಫಾಲಾ
ನಲ ದಗ್ಧಸ್ಮರ ಮಾಂ ಹಿ ಪಾಹಿ ॥೯॥

ಅಚಲಾಧೀಶಜಾಜಾನೇ ತೇ ಪಾದಾಬ್ಜಂ ನಮಾಮ್ಯಹಂ ।
ನತ್ವಾ ಸಾ ಅಚಲಾಧೀಶಂ ದೃಷ್ಟ್ವಾ ತಂ ಹಾಟಕೇಶ್ವರಂ ॥೧೦॥

ಅಭಿತುಷ್ಟಾವ ಹೃಷ್ಟಾತ್ಮಾ ರಾಜರಾಜಕಲಾಧರಂ ॥೧೧॥

ವೇರ್ಪಟ್ಟಿರುವುದು. ಸುಂದರವಾದ ಚಂದ್ರನಿಂದ ಅಲಂಕೃತವಾದ ಹಣೆಯುಳ್ಳ ಸ್ವಾಮಿಯೇ, ಚಂದ್ರನೇತ್ರನಾದ ಮಹೇಶ್ವರನೇ, ನನಗೆ ಮುಕ್ತಿರೂಪವಾದ ಸಿದ್ಧಿಯನ್ನುಂಟುಮಾಡುತ್ತಾ ನನ್ನನ್ನು ಇಂದು ಕಾಪಾಡು. ॥೭॥

ಹೀಗೆ ಸಿದ್ಧೇಶ್ವರನನ್ನು ಸ್ತೋತ್ರಮಾಡಿ ಸುಂದರನು, ಅನಂತರ ಅಚಲೇಶ್ವರನ ಸನ್ನಿಧಿಗೈದಿ ವಿನಯದಿಂದ ತಲೆಬಾಗಿ ಚಂದ್ರಭೂಷಣನಾದ ಆ ಮಹೇಶನನ್ನು ಹೀಗೆ ಸ್ತುತಿಸಿದನು. ॥೮॥

ಪರ್ವತರಾಜಕುಮಾರಿಯ ಸ್ತನವಿಷಯಕ ಕ್ರೀಡೆಯಲ್ಲಿ ಆಸಕ್ತವಾದ ವಿಶಾಲ ವಕ್ಷಸ್ಥಳವುಳ್ಳವನೇ, ಗಜಚರ್ಮವನ್ನೇ ವಸ್ತ್ರವನ್ನಾಗಿ ಧರಿಸಿರುವವನೇ! ಹಣೆಗಣ್ಣಿನಿಂದ ಮನ್ಮಥನನ್ನು ಸುಟ್ಟ ಸ್ವಾಮಿಯೇ! ನನ್ನನ್ನು ಕಾಪಾಡು. ॥೯॥

ಪಾರ್ವತೀರಮಣನೇ! ನಿನ್ನ ಪಾದಕಮಲಗಳಿಗೆ ನಮಸ್ಕರಿಸುವೆನು, ಎಂದು ಸುಂದರನು ಅಚಲಾಧೀಶ್ವರನಿಗೆ ನಮಸ್ಕರಿಸಿ, ಅಲ್ಲಿಂದ ಮುಂದೆ ಬಂದು ಹಾಟಕೇಶ್ವರನನ್ನು ನೋಡಿ, ಚಂದ್ರಕಲಾಧಾರಿಯಾದ ಹಾಟಕೇಶ್ವರಲಿಂಗವನ್ನು ಸಂತುಷ್ಟ ಚಿತ್ತನಾಗಿ ಆರಾಧಿಸಿ ಹೀಗೆ ಪ್ರಾರ್ಥಿಸಿದನು. ॥೧೦-೧೧॥

|| ಸುಂದರ ಉವಾಚ ||

ಅಹಿಕಟಕಾಯಿತ ಪಾರ ದೇವಮೌಲಿಕೋಟಿ-
ವಿಲಸದ್ಗಂಗಾಜಟೋರುಜೂಟ ಪಾಹಿ-
ನಟನೇನ ನಿಮಗ್ನ ಭೂತಲ
ಕಟಿಚೇಲಕೃಕ್ಕೃತ ಹಾಟಕೇಶ ಪಾಹಿ ||೧೨||

ಏವಂ ಸ್ತುತ್ವಾ ಹಾಟಕೇಶಂ ಸುಂದರಃ ಪ್ರಯಯೌ ತತಃ ।
ವಲ್ಮೀಕೇಶಂ ತತೋ ನತ್ವಾ ಸ್ತುತ್ವೈವಂ ಭಕ್ತಿಭಾವಿತಃ ||೧೩||

|| ಸುಂದರ ಉವಾಚ ||

ಚಂದ್ರಾಪೀಡಕೃತೋರುಮೌಳಿ ಸುಜಟಾಜೂಟಾಹಿಮೌಲೀಮಣಿ-
ಭ್ರಾಜದ್ಗಾಂಗತರಂಗಸಂಭವಲಸದ್ರಕ್ತೋರುಸದ್ಧಲ್ಲಕಂ ।
ತತ್ರತ್ಯೋರು ಸಮೀರಲೋಲಿತ ಮಹಾಗಂಧಾನುಬಂಧೋದ್ಧತ-
ದಿಗ್ವಕ್ತ್ರಾಣಿ ಪರಾಜಿತಾನಿ ಹಿ ವಿಭೋ ಪಾಪಾಭಿಹಂತ್ರ್ಯಾಣಿ ತೇ ||೧೪||

---

ಕಾಲಿನಲ್ಲಿ ಸರ್ಪವನ್ನು ಕಂಕಣವನ್ನಾಗಿ ಧರಿಸಿಕೊಂಡಿರುವ ದೇವದೇವನೇ, ನಿನ್ನ ತಲೆಯ ತುದಿಯಲ್ಲಿ ಶೋಭಿಸುತ್ತಿರುವ ಜಟೆಯಲ್ಲಿ ಗಂಗೆಯು ಸ್ಥಿರವಾಗಿರುವಳು. ನಿನ್ನ ನಾಟ್ಯದಿಂದ ಈ ಭೂಮಿಯೇ ತಗ್ಗಾಗಿ ಹೋಗಿದೆ. ಹುಲಿಯ ಚರ್ಮವನ್ನು ಸೊಂಟದ ಬಟ್ಟೆಯನ್ನಾಗಿ ಧರಿಸಿರುವ ಹಾಟಕೇಶ್ವರ ಸ್ವಾಮಿಯೇ, ಕಾಪಾಡು. ||೧೨||

ಚಂದ್ರಮಂಡಲವನ್ನೇ ಶಿರೋಭೂಷಣವನ್ನಾಗಿ ಮಾಡಿಕೊಂಡಿರುವ ಮಹಾಮಹಿಮನೇ, ಉತ್ತಮವಾದ ಜಡೆಗಳ ಭಾರದಲ್ಲಿ ಕಟ್ಟಲ್ಪಟ್ಟಿರುವ ಸರ್ಪದ ಹೆಡೆಯ ರತ್ನಗಳಿಂದ ನೀನು ಶೋಭಿಸುತ್ತಿರುವೆ. ನಿನ್ನ ಜಡೆಯಲ್ಲಿರುವ ಗಂಗಾನದಿಯ ಅಲೆಗಳಲ್ಲಿ ಹುಟ್ಟಿ ಶೋಭಿಸುತ್ತಿರುವ ಕೆಂಪುತಾವರೆಗಳು ಸುಗಂಧವನ್ನು ಬೀರುತ್ತಿರುವುವು. ಅಲ್ಲಿರುವ ಬಿರುಗಾಳಿಯಿಂದ ಅಲ್ಲಾಡಿಸಲ್ಪಟ್ಟು ಆ ಹೂಗಳ ಗಂಧಕ್ಕೆ ಅನುಗುಣವಾಗಿರುವ ದಿಙ್ಮುಖಗಳು ಪರಾಗಗಳಿಂದ ಸರ್ವತ್ರ ವ್ಯಾಪ್ತವಾಗಿರುವುವು. ವಿಭುವೇ, ಅವೆಲ್ಲವೂ ನಿನ್ನ ಸಂಬಂಧದಿಂದ ಪಾಪನಾಶಕಗಳೆನಿಸಿವೆ. ||೧೪||

ತ್ವಂ ಶಂಭುಃ ಕಾಲ್ಮಲೀಕಿಃ ಶ್ರುತಿಗದಿತಯಶಾ ಬಿಲ್ವನಿರ್ಬಿಲ್ವಪೂಜ್ಯೋ
ವಲ್ಮೀಕೋರುಸುಮಧ್ಯ ಸಂಸ್ಥಿತಮಹಾಲಿಂಗಂ ತ್ವದದ್ರಾಕ್ಷಿಷಂ ।
ಧನ್ಯಸ್ತೇನ ಸುರಾದಿಮಾನ್ಯಪದವೀಂ ಪ್ರಾಪ್ತಂ ಚ ಮನ್ಯೇ ವಿಭೋ
ಕೋಽನ್ಯೋ ಮಾಪಮುಜೀಷುರೇವ ಭಗವನ್ಸಂಸಾರ ಸಂತಾರಣೇ ॥೧೫॥

ಭವ ಭೂತಪತೇ ಭವೋದ್ಭವ
ವಿಭವಂ ಭಾವುಕಮೇವ ತೇಽಸುಭಾವಂ ।
ಭವಸಂತಾರಣಾಯ ಸಂಭವೇ
ಹರ ಭರ್ಗಾಮಲ ಭೀಮ ಭವ್ಯ ಪಾಹಿ ॥೧೬॥

ಭರ್ಗಾನಂಗವಿಲೋಪಿಲೋಚನ ವಿಭೋ ಗಂಗಾವತಂಸೋಜ್ಜ್ವಲ
ಜ್ವಾಲಾಕ್ವಾತುಲಜ್ವಾಲಕೀಲಿತಪುರಂ ಸಂಮಿಾಲಿತಂ ತೇಕ್ಷರಾತ್ ।

---

ಶಂಭುವೇ, ನೀನು ಪ್ರಜ್ವಲಿಸುವ ಸರ್ವಮಲವನ್ನೂ ನಾಶಪಡಿಸುವಂತಹ ತೇಜೋರೂಪಿಯು (ಜ್ವಲಂತಂ ಕಲಯತಿ ಅಪಗಮಯತಿ ಮಲಮಿತಿ ಕಲ್ಮಲೀಕಂ ತೇಜಃ ತದ್ವಾನ್ ರುದ್ರಃ ಕಲ್ಮಲೀಕಿಃ) ವೇದೋಕ್ತನಾದ ಕೀರ್ತಿಯುಳ್ಳವನು. ಬಿಲ್ವದಳ ಮತ್ತು ಪುಷ್ಪಾದಿಗಳಿಂದ ಪೂಜಾರ್ಹನು. ದೊಡ್ಡ ಹುತ್ತದ ಮಧ್ಯದಲ್ಲಿ ಶಿವಲಿಂಗರೂಪದಿಂದಿರುವ ನಿನ್ನನ್ನು ನಾನು ಈಗ ಕಂಡೆನು. ಪ್ರಭುವೇ, ನಾನೇ ಧನ್ಯನು. ದೇವತೆಗಳೇ ಮೊದಲಾದವರಿಂದ ಮಾನ್ಯವಾದ ಪದವಿಯು ನನಗೆ ಈಗ ಬಂದಂತೆಯೇ ಭಾವಿಸುತ್ತೇನೆ. ಭಗವಂತನೇ, ನೀನಲ್ಲದೇ ಮತ್ತಾರು ನನ್ನನ್ನು ಈ ಸಂಸಾರದಿಂದ ದಾಟಿಸಲು ಸಮರ್ಥನಿರುವನು? ನಿನ್ನ ಅನುಗ್ರಹದಿಂದ ಈಗ ನಾನಲ್ಲದೆ ಮತ್ತಾರು ಈ ಭವಸಾಗರವನ್ನು ದಾಟಬಲ್ಲರು? ॥೧೫॥

ಪ್ರಪಂಚದ ಉತ್ಪತ್ತಿಗೆ ಕಾರಣಭೂತನಾದವನೇ, ಸಕಲ ಭೂತಗಳಿಗೂ ನೀನು ಒಡೆಯನು. ಜಗದುದ್ಭವ ಹೇತುವು. ನಿನ್ನ ಮಂಗಳಕರವಾದ ಮತ್ತು ಭಕ್ತಿರೂಪವಾದ ವೈಭವವೇ ಈ ಸಂಸಾರಬಂಧನದಿಂದ ದಾಟಿಸಲು ಸಹಾಯವಾಗುತ್ತದೆ ಶಿವ. ಮನ್ಮಥ ಮತ್ತು ಯಮಾದಿಗಳನ್ನು ನಿಗ್ರಹಿಸಿದ ನಿರ್ಮಲನೂ, ಶತ್ರುಭಯಂಕರನೂ ಆದ ಮಂಗಳಸ್ವರೂಪನೇ, ನನ್ನನ್ನು ಕಾಪಾಡು. ॥೧೬॥

ಯಮನನ್ನು ನಿಗ್ರಹಿಸಿದ ಸ್ವಾಮಿಯೇ! ನೀನು ಮನ್ಮಥನನ್ನು ಭಸ್ಮ ಮಾಡಿದ ಕಣ್ಣುಳ್ಳವನು, ವಿಭುವೇ! ನೀನು ಗಂಗೆಯನ್ನು ಶಿರೋಭೂಷಣವನ್ನಾಗಿ

ಘೂರ್ಣಂತಿ ತ್ರಿದಶೋರುಘೋರಪಟಲೀಭೂರ್ಣಿರ್ದಶಾ ತೇ ವಿಭೋ
ಸಂಪೂರ್ಣಂ ಪುನರೇಧತಾಂ ಹರ ವಿಭೋಃಪರ್ಣಾಪತೇ ಪಾಹಿ ಮಾಂ॥೧೭॥

ಇತಿ ಸಂಸ್ತುತ್ಯ ದೇವೇಶಂ ಸೋಮಾಸ್ಕಂದಂ ಮಹೇಶ್ವರಂ ।
ರತ್ನಸಿಂಹಾಸನಾಸೀನಂ ವಲ್ಮೀಕೇಶಸ್ಯ ದಕ್ಷಿಣೇ ॥೧೮॥

ರತ್ನಪ್ರಭಾಸುವಿಲಸತ್ಪೂರ್ಣೇಂದು ವಿಜಿತಾನನಂ ।
ಸೋಮಸೂರ್ಯಾಗ್ನಿನಯನಂ ಗಂಗಾಚಂದ್ರಕಲಾಧರಂ ॥೧೯॥

ವರದಾಭಯಹಸ್ತಂ ಚ ನಾಗಪಾದವಿರಾಜಿತಂ ।
ತ್ಯಾಗರಾಜಂ ಮಹಾದೇವಮುಗಜಾಕಾಂತಮೀಶ್ವರಂ ॥೨೦॥

---

ಧರಿಸಿ ಶೋಭಿಸುತ್ತಿರುವ ಸ್ವಾಮಿಯು. ನಿನ್ನ ಜ್ವಾಲಾನೇತ್ರದಿಂದ ಹೊರಟ ಅಪರಿಮಿತವಾದ ಜ್ವಾಲೆಗಳೇ ಆ ತ್ರಿಪುರರನ್ನು ಧ್ವಂಸಮಾಡಿದುವು ಕ್ಷಣಕಾಲ ತೆರೆದ ನಿನ್ನ ಉರಿಗಣ್ಣಿನಿಂದ, ದೇವತೆಗಳ ದೊಡ್ಡ ಹಾಹಾಕಾರದಿಂದ ಭೂವ್ಯಾಕಾಶಗಳೆಲ್ಲವೂ, ಅಲ್ಲೋಲಕಲ್ಲೋಲವಾದುವು. ಪ್ರಭೋ! ನಿನ್ನ ಅನುಗ್ರಹದಿಂದ ಸಕಲಲೋಕವೂ ಸಂಪೂರ್ಣ ಸುಖಮಯವಾಗಿ ಪುನಃ ಅಭಿವೃದ್ಧಿಪಡೆಯಲಿ, ಸ್ವಾಮಿಯೇ! ನನ್ನನ್ನು ಕಾಪಾಡು. ॥೧೭॥

ಹೀಗೆ ಸುಂದರನು ವಲ್ಮೀಕೇಶ್ವರನನ್ನು ಸ್ತೋತ್ರಮಾಡಿ ಅನಂತರ, ವಲ್ಮೀಕೇಶ್ವರನಿಗೆ ದಕ್ಷಿಣದಿಕ್ಕಿನಲ್ಲಿ ರತ್ನಮಯವಾದ ಸಿಂಹಾಸನದಲ್ಲಿ ಕುಳಿತು, ರತ್ನಕಾಂತಿಗಳಿಂದ ಶೋಭಿಸುತ್ತಿರುವ ಪೂರ್ಣಿಮಾಚಂದ್ರನಿಂದ ಜಯಿಸಲ್ಪಟ್ಟ ಮುಖವುಳ್ಳವನೂ, ಚಂದ್ರಸೂರ್ಯಾಗ್ನಿ ನೇತ್ರನೂ, ಗಂಗೆ, ಮತ್ತು ಚಂದ್ರಕಲೆಗಳನ್ನು ತಲೆಯಲ್ಲಿ ಧರಿಸಿರುವವನೂ, ವರದ, ಮತ್ತು ಅಭಯಹಸ್ತಗಳನ್ನುಳ್ಳವನೂ, ಸರ್ಪವನ್ನು ಪಾದಾಭರಣವನ್ನಾಗಿಮಾಡಿಕೊಂಡು ಶೋಭಿಸುತ್ತಿರುವವನೂ, ಉಮೆಯಿಂದ ಆಲಿಂಗನಮಾಡಲ್ಪಟ್ಟ ಭುಜವುಳ್ಳವನೂ, ಪಾರ್ವತೀರಮಣನೂ, ಐಶ್ವರ್ಯಸಂಪನ್ನನೂ, ದೇವತೋತ್ತಮನೂ, ಜಿಂಕೆ ಮತ್ತು ಟಂಕಗಳನ್ನು ಧರಿಸಿದವನೂ, ಸೌಮ್ಯನೂ, ವಿಕಾಸರೂಪಿಯೂ (ಮೂರುಕಣ್ಣುಗಳಾದ) ಅಂಬಿಕಾರಮಣನೂ, ಆದ ತ್ಯಾಗರಾಜೇಶ್ವರನನ್ನು ದರ್ಶನಮಾಡಿದನು. ॥೧೮-೧೯-೨೦॥

ಮೃಗಟಂಕಧರಂ ಸೌಮ್ಯಂ ವಿಕಟಂ ಸಾಂಬಮಿಶ್ವರಂ।
ಇಂದ್ರಾಯ ವಿಷ್ಣುನಾ ದತ್ತಂ ಸೋಮಾಸ್ಕಂದಂ ಮಹೇಶ್ವರಂ॥೨೧॥

ಇಂದ್ರೇಣಾಪಿ ಪುರಾ ದತ್ತೋ ಮುಚುಕುಂದಾಯ ಭೂಭುಜೇ।
ಸುರಾಧ್ಯಕ್ಷೋರುಸಾಹಾಯ್ಯೇ ತದಾಜೌ ದಿತಿಜಾರ್ದನೇ ॥೨೨॥

ತೇನ ಚೈತ್ರರಥೇನೈವ ಸಮಾನೀತಾಃ ಮಹೇಶ್ವರಾಃ।
ಸಪ್ತ ತೇಷಾಮಾದಿಮೋಽತ್ರ ಸ್ಥಾಪಿತಃ ಕಮಲಾಲಯೇ ॥೨೩॥

ತಂ ನತ್ವಾ ದೇವದೇವೇಶಂ ಸೋಮಂ ಸೋಮಾರ್ಧಶೇಖರಂ।
ಫುಲ್ಲಕಲ್ಹಾರಮಾಲಾಂತಂ ಶಶಾಂಕದ್ಯುತಿದೇಹಕಂ ॥೨೪॥

ಪ್ರಾಂಜಲಿರ್ಭಕ್ತಿಪರಮಾ ತಥಾಸ್ತಾವೀನ್ಮಹೇಶ್ವರಂ ॥೨೫॥

॥ ಸುಂದರ ಉವಾಚ ॥

ಗಂಗಾತುಂಗತರಂಗಸಂಗಸುಮಹಾಮೌಲೇ ಕುರಂಗಾಂತಧೃ-
ಜ್ಜ್ಯೋತಂಗತ್ವಗಲಂಕೃತಾಂಗ ಭುಜಗಾಭೋಗಾಂಗಸಂಗಪ್ರಭೋ।

ಅಲ್ಲಿರುವ ಪಾರ್ವತೀದೇವಿ ಮತ್ತು ಕುಮಾರಸ್ವಾಮಿಯಿಂದ ಕೂಡಿದ ಮಹೇಶ್ವರಲಿಂಗವನ್ನು ಹಿಂದೆ ವಿಷ್ಣುವು ಇಂದ್ರನಿಗೆ ಕೊಟ್ಟನು. ಇಂದ್ರನು ದೈತ್ಯಸಂಹಾರಕಾಲದಲ್ಲಿ ದೇವತೆಗಳಿಗೆ ಯುದ್ಧದಲ್ಲಿ ಸಹಾಯಮಾಡಿದ ಮುಚುಕುಂದ ನೆಂಬ ರಾಜನಿಗೆ ಕೊಟ್ಟನು. ಜಯಶೀಲವಾದ ರಥವುಳ್ಳ ಆ ಮುಚುಕುಂದನು ಅದನ್ನು ಭೂಲೋಕಕ್ಕೆ ತಂದು, ಏಳುಸ್ಥಳಗಳಲ್ಲಿ ಪ್ರತಿಷ್ಠೆಮಾಡಿದನು. ಅವುಗಳಲ್ಲಿ ಮೊದಲನೆಯ ಶಿವಲಿಂಗವು ಈ ಕಮಲಾಲಯಕ್ಷೇತ್ರದಲ್ಲಿ ಸ್ಥಾಪಿಸಲ್ಪಟ್ಟಿತು. ಸುಂದರನು ದೇವತೋತ್ತಮನೂ, ಉಮಾರಮಣನೂ, ಚಂದ್ರಶೇಖರನೂ, ಅರಳಿದ ಕೆಂದಾವರೆಯ ಮಾಲೆಯನ್ನು ಧರಿಸಿರುವವನೂ, ಚಂದ್ರನ ತೇಜಸ್ಸಿನಂತೆ ಹೊಳೆಯುವ ದೇಹವುಳ್ಳವನೂ, ಆದ ಆ ಮಹೇಶ್ವರನನ್ನು ಭಕ್ತಿಯಿಂದ ವಂದಿಸಿ ವಿನಯಪೂರಿತನಾಗಿ ಇಂತು ಸ್ತೋತ್ರಮಾಡಿದನು. ॥೨೧-೨೨-೨೩-೨೪-೨೫॥

ಗಂಗಾನದಿಯ ದೊಡ್ಡ ದೊಡ್ಡ ಅಲೆಗಳ ಸಂಬಂಧದಿಂದ ಶೋಭಿಸುವ ದೊಡ್ಡ ತಲೆಯುಳ್ಳವನೇ! ಚಂದ್ರನನ್ನು ಶಿರೋಭೂಷಣವನ್ನಾಗಿ ಧರಿಸಿರುವವನೇ! ನೀನು ಆನೆಯಚರ್ಮವನ್ನು ದೇಹಕ್ಕೆ ಅಲಂಕಾರಮಾಡಿಕೊಂಡಿರುವೆ, ಆದಿಶೇಷ

ಉಕ್ಷಾಂಗಸ್ಥಿತ ದಿವ್ಯಭಸ್ಮಸುಮಿಲದ್ಗಂಧಾಂಗರಾಗೋಲ್ಲಸ-
ತ್ತ್ಯಾಗಾಧೀಶ ಮದಾಗಜಾಮುಖಕೃಪಾಂಗಂ ಭಜೇ ಶಂಕರಂ ॥೨೬॥

ಮಾತಂಗಾನಂಗಭಂಗಂ ಮುರರಿಪುಹೃದಯಾನಂದಸಂದೋಹಕಂದಂ ।
ಕುಂದೇಂದುದ್ಯುತಿರಂಜಿತಾಂಗಮಸಕೃತ್ಪಶ್ಯಾಮಿ ತ್ಯಾಗಾಧಿಪಂ ॥೨೭॥

ಮದ್ಭಾಗಧೇಯಮಗಜಾರ್ಧಕೃತಾಂಗಸಂಗಂ
ಸಾರಂಗರಂಜಿತಕರಂ ವರಲಿಂಗಸಂಗಂ ।
ಆಗಸ್ಕರಾಂತಕಹರಂ ಗರನೀಲಕಂಠಂ
ತ್ಯಾಗಾಧಿಪಂ ಹೃದಿ ಭಜಾಮಿ ಮಹಾಘನಾಶಂ ॥೨೮॥

ಉತ್ಫುಲ್ಲಹಲ್ಲಕಲಸತ್ಕಮನೀಯಮಾಲಂ
ವ್ಯಾಲಾನಲಾಕ್ಷಕರಧಾರಿತತೇಜಶೂಲಂ ।

---

ನನ್ನು ಹಾರವನ್ನಾಗಿ ಮಾಡಿಕೊಂಡಿರುವೆ. ವೃಷಭವಾಹನನೇ! ದಿವ್ಯವಾದ ಭಸ್ಮವನ್ನು ಧರಿಸಿ, ಅದರಮೇಲೆ ಗಂಧದ ಲೇಪದಿಂದ ಶೋಭಿಸುತ್ತಿರುವೆ. ತ್ಯಾಗಾಧೀಶ್ವರ ಸ್ವಾಮಿಯೇ! ಪರ್ವತರಾಜಕುಮಾರಿಯ ಕಟಾಕ್ಷವೀಕ್ಷಣಕ್ಕೆ ಪಾತ್ರನಾಗಿರುವ ಜಗನ್ಮಂಗಳಕರನಾದ ನಿನ್ನನ್ನು ಸಂತೋಷದಿಂದ ಭಜಿಸುತ್ತೇನೆ. ॥೨೬॥

ಗಜಾಸುರನನ್ನು ಮನ್ಮಥನನ್ನೂ ಧ್ವಂಸಮಾಡಿದವನೂ, ವಿಷ್ಣುವಿನ ಹೃದಯದ ಆನಂದಸಮೂಹಕ್ಕೆ ಮೊಳಕೆಯಂತಿರುವವನೂ, ಮಲ್ಲಿಗೆ ಮತ್ತು ಚಂದ್ರರ ಕಾಂತಿಯಂತೆ ಶೋಭಿಸುವ ಅವಯವವುಳ್ಳವನೂ, ಆದ ತ್ಯಾಗರಾಜೇಶ್ವರನನ್ನು ಆನಂದದಿಂದ ಪದೇಪದೇ ದರ್ಶನಮಾಡುತ್ತಿರುವೆನು. ॥೨೭॥

ನನ್ನ ದೈವವೂ, ಪಾರ್ವತಿಯಿಂದಲಂಕೃತವಾದ ಅರ್ಧ ದೇಹವುಳ್ಳವನೂ, ಒಂದುಕೈಯಲ್ಲಿ ಜಿಂಕೆಯನ್ನು ಹಿಡಿದು ಶೋಭಿಸುತ್ತಿರುವವನೂ, ಶ್ರೇಷ್ಠವಾದ ಲಿಂಗಗಳಲ್ಲಿ ನೆಲಸಿರುವವನೂ, ಅಪರಾಧಮಾಡಿದ ಯಮನನ್ನು ನಿಗ್ರಹಿಸಿದವನೂ, ವಿಷಭಕ್ಷಣದಿಂದ ಕಪ್ಪಾದ ಕೊರಳುಳ್ಳವನೂ, ಮಹಾಪಾಪಗಳನ್ನು ಹೋಗಲಾಡಿಸುವವನೂ ಆದ ತ್ಯಾಗಾಧಿಪನನ್ನು ಮನಸ್ಸಿನಲ್ಲಿ ಭಜಿಸುತ್ತೇನೆ. ॥೨೮॥

ಅರಳಿದ ಕೆಂದಾವರೆಗಳಿಂದ ಶೋಭಿಸುತ್ತಿರುವ ಮನೋಹರವಾದ ಹಾರವುಳ್ಳವನೂ, ಭಯಂಕರವಾದ ಅಗ್ನಿಯನ್ನೇ ಹಣೆಗಣ್ಣಾಗಿ ಧರಿಸಿರುವವನೂ, ಕೈಯಲ್ಲಿ ಪ್ರಕಾಶಮಾನವಾದ ಶೂಲವನ್ನು ಧರಿಸಿರುವವನೂ, ಅರಳಿದ ನನ್ನ

ಉಲ್ಲಾಸಿತಾಬ್ಜಹೃದಯೇ ತವ ಪದ್ಮಪಾದ-
ಮುಲ್ಲಾಸಿತಂ ಹಿ ಭವೇತ್ಕುರು ತ್ಯಾಗರಾಜ ॥೨೯॥

ರತ್ನಪ್ರಭಾಪರಿಲಸತ್ಕುಮುದೋರುಮಾಲಾ
ಜಾಲೋತ್ತಮಾಂಗ ಕುಸುಮಾತ್ತಸುಗಂಧಗಂಧಂ ।
ಉದ್ಯಚ್ಛಶಾಂಕಧವಳಂ ಗಿರಿಜಾರ್ಧಗಾತ್ರಂ
ಪಶ್ಯೇ ತ್ರಿನೇತ್ರಮಧುನಾ ಸುಪವಿತ್ರಗಾತ್ರಂ ॥೩೦॥

॥ ಶ್ರೀ ಸ್ಕಂದ ಉವಾಚ ॥

ಇತ್ಥಂ ತ್ಯಾಗಾಧಿಪಂ ಸ್ತುತ್ವಾ ಅಗಜಾನಾಯಕಂ ತದಾ ।
ಸಾನಂದಾಶ್ರುಲಸದ್ವಕ್ತ್ರೋ ಹೃಷ್ಟರೋಮಾಂಚಕಂಚುಕಃ ॥೩೧॥

ಶಿಪಿವಿಷ್ಟಾಗ್ರತಸ್ತಸ್ಥೌ ನಿಷ್ಠಾಯುಕ್ತೇನ ಚೇತಸಾ ।
ತಸ್ಮೈ ಪ್ರಸನ್ನೋ ಭಗವಾನಿಂದುಚೂಡಃ ಸಸುಂದರಂ ॥೩೨॥

---

ಹೃದಯಕಮಲದಲ್ಲಿ ನಿನ್ನ ಪದ್ಮದಂತಿರುವ ಕಾಲುಗಳನ್ನು ನಿಲ್ಲಿಸಿಕೊಂಡಿರುವವನೂ, ಭಗವಂತನೂ ಆದ ತ್ಯಾಗರಾಜಸ್ವಾಮಿಯೇ! ನನ್ನ ಮನಸ್ಸು ಮತ್ತೂ ಸಂತೋಷ ಭರಿತವಾಗುವಂತೆ ಮಾಡು. ॥೨೯॥

ರತ್ನಗಳ ಪ್ರಭೆಯಿಂದ ಶೋಭಿಸುತ್ತಿರುವ ಕನ್ನೈದಿಲೆಗಳ ದೊಡ್ಡ ಮಾಲೆಗಳ ಸಮೂಹದಿಂದಲಂಕೃತವಾದ ತಲೆಯುಳ್ಳವನೂ, ಹೂವುಗಳಸಂಬಂಧದಿಂದುಂಟಾದ ಸುಗಂಧಪರಿಮಳವುಳ್ಳವನೂ, ಉದಯಿಸುತ್ತಿರುವ ಚಂದ್ರನಂತೆ ಶುಭ್ರವರ್ಣನೂ, ಅರ್ಧನಾರೀಶ್ವರನೂ, ಮೂರುಕಣ್ಣುಗಳುಳ್ಳವನೂ, ಅತಿ ಪವಿತ್ರವಾದ ದೇಹವುಳ್ಳವನೂ ಆದ ತ್ಯಾಗರಾಜೇಶ್ವರನನ್ನು ಭಕ್ತಿಯಿಂದ ದರ್ಶನಮಾಡುತ್ತೇನೆ. ಎಂದು ಸುಂದರನು ತ್ಯಾಗರಾಜೇಶ್ವರನನ್ನು ಸ್ತೋತ್ರಮಾಡಿದನು. ॥೩೦॥

ಹೀಗೆ ಸುಂದರನು ಪಾರ್ವತೀರಮಣನಾದ ತ್ಯಾಗರಾಜಸ್ವಾಮಿಯನ್ನು ಸ್ತುತಿಸಿ ಆಗ ಆನಂದಬಾಷ್ಪದಿಂದ ಶೋಭಿಸುತ್ತಿರುವ ಮುಖವುಳ್ಳವನೂ ಸಂತೋಷದಿಂದ ರೋಮಾಂಚವೆಂಬ ಕವಚವುಳ್ಳವನೂ ಆಗಿ ಪರಮೇಶ್ವರನ ಮುಂದೆ ಭಕ್ತಿಯುಕ್ತವಾದ ಮನಸ್ಸಿನಿಂದ ನಿಂತುಕೊಂಡನು. ಆಗ ಚಂದ್ರಶೇಖರನೆನಿಸಿದ ಭಗವಂತನು ಸುಂದರನಲ್ಲಿ ಪ್ರಸನ್ನನಾಗಿ, ಭಸ್ಮರುದ್ರಾಕ್ಷಿಗಳಿಂದಲಂಕೃತದೇಹವುಳ್ಳವನೂ, ಶಿವನಲ್ಲಿಟ್ಟಿರುವ ಅಂತರಂಗವುಳ್ಳವನೂ ಆದ ಆ ಸುಂದರನನ್ನು ನೋಡಿ, ದೇವಿ

ಭಸ್ಮರುದ್ರಾಕ್ಷಯುಕ್ತಾಂಗಂ ಹರಸಂಗಿಹೃದಂತರಂ ।
ಉವಾಚ ದೇವೀಮಾಲೋಕ್ಯ ಪ್ರಹೃಷ್ಟಶ್ಚಾಭ್ಯುವಾಚ ತಂ ॥೩೩॥

॥ ಮಹೇಶ್ವರ ಉವಾಚ ॥

ಸುಂದರಾಗಚ್ಛ ಭದ್ರಂ ತೇ ಭಕ್ತ್ಯಾ ಸುಂದರ ಏವ ಹಿ ।
ಮಮ ದಾಸ್ಯೇ ನಿಯುಕ್ತೋ ಹಿ ಭಕ್ತೋಽಸಿ ತ್ವಂ ಮಮಾಧುನಾ ॥೩೪॥

ವಸ ತ್ವಂ ಕಮಲಾವಾಸೇ ವಿಮಲೇ ಮುಕ್ತಿದಾಯಿನಿ ।
ದೇವತೀರ್ಥೇಽನಿಶಂ ಸ್ನಾಹಿ ಭಸ್ಮರುದ್ರಾಕ್ಷಭೂಷಣಃ ॥೩೫॥

ವಸ ತ್ವಂ ನಿಯತಂ ಭಕ್ತ್ಯಾ ಕ್ಷೇತ್ರೇಽಸ್ಮಿನ್ಸರ್ವಕಾಮದೇ ।
ಪಶ್ಯ ಮಾಂ ಸತತಂ ಭಕ್ತ್ಯಾ ನಿತ್ಯಮುಕ್ತೋ ಭವಿಷ್ಯಸಿ ॥೩೬॥

ಅವಿಮುಕ್ತಶರೀರಃ ಸನ್ಮದಂಗೇ ಲಯಮೇಷ್ಯಸಿ ।
ಯಾ ಸಾ ಪೂರ್ವಂ ಕಮಲಿನೀ ತರುಣೀ ವಿಾಲಿತೇಕ್ಷಣಾ ॥೩೭॥

---

ಯನ್ನು ನೋಡುತ್ತಾ ಸಂತೋಷದಿಂದ ಅವನಿಗೆ ಹೀಗೆ ಹೇಳಿದನು. ॥೩೧-೩೨-೩೩॥

ಅಯ್ಯ ಸುಂದರನೇ, ಸಮೀಪಕ್ಕೆ ಬಾ. ನಿನಗೆ ಮಂಗಳವಾಗಲಿ. ಭಕ್ತಿಯಲ್ಲಿ ನೀನು ನಿಜವಾಗಿಯೂ ಸುಂದರನೇ ಸರಿ. ನನ್ನ ಸೇವಾವೃತ್ತಿಯಲ್ಲಿ ನಿಯುಕ್ತನಾಗಿದ್ದ ನೀನು ಈಗ ನನ್ನ ಭಕ್ತನಾಗಿರುವೆ. ಇನ್ನು ನೀನು ನಿರ್ಮಲವಾದ ಮೋಕ್ಷವನ್ನು ಕೊಡುವ ಈ ಕಮಲಾಲಯಕ್ಷೇತ್ರದಲ್ಲಿ ವಾಸಮಾಡು. ನಿತ್ಯವೂ ದೇವತೀರ್ಥದಲ್ಲಿ ಸ್ನಾನಮಾಡಿ, ಭಸ್ಮರುದ್ರಾಕ್ಷಗಳನ್ನಲಂಕರಿಸಿಕೊಂಡು, ಸಕಲ ಇಷ್ಟಾರ್ಥಗಳನ್ನೂ ಕೊಡುವ ಈ ಕ್ಷೇತ್ರದಲ್ಲಿ ಭಕ್ತಿಯಿಂದ ನಿಯಮಪೂರ್ವಕವಾಗಿ ವಾಸಿಸು. ಭಕ್ತಿಯಿಂದ ಯಾವಾಗಲೂ ನನ್ನ ದರ್ಶನ ಮಾಡುತ್ತಿರು. ನೀನು ನಿತ್ಯಮುಕ್ತನೆನಿಸುವೆ. ॥೩೪-೩೫-೩೬॥

ಕೊನೆಗೆ ಈ ಶರೀರಸಹಿತವಾಗಿಯೇ ನನ್ನ ದೇಹದಲ್ಲಿ ಐಕ್ಯವನ್ನು ಪಡೆಯುತ್ತೀಯೆ. ಎಲೈ ಸುಂದರನೇ, ಹಿಂದೆ ನಿನ್ನಿಂದ ನೋಡಲ್ಪಟ್ಟ ತರುಣಿಯಾದ ಕಮಲಿನಿಯೂ ಭಕ್ತಿಯಿಂದ ನನ್ನನ್ನು ಧ್ಯಾನಿಸಿ, ಈಗ ನನ್ನ ಅನುಗ್ರಹಕ್ಕೆ ಪಾತ್ರಳಾಗಿ ನನ್ನ ಅಪ್ಪಣೆಯಿಂದ, ವೇಶ್ಯೆಯರ ಕುಲಕ್ಕೆ ಅಂಕುರ (ಮೊಳಕೆ) ಪ್ರಾಯಳಾಗಿ

ಸಂಜಾತಾ ಸಾ ಮದಾದೇಶಾದ್ವೃತ್ಯಂ ವೇಶ್ಯಾಕುಲಾಂಕುರಾ ।
ತಸ್ಯಾಃ ಪಾಣಿಗ್ರಹಂ ತೇಽದ್ಯ ಕಾರಯಾಮ್ಯಧುನಾ ಗಣ ॥೩೮॥

ಕಲ್ಯಾಣಕಲ್ಪಿತಂ ತ್ವಾಂ ಚ ಸಂಪಶ್ಯಾಮಿ ದಿನೇದಿನೇ ।
ಮಮಾದೇಶಂ ಕುರುಷ್ವೇತಿ ತಮುವಾಚ ಮಹೇಶ್ವರಃ ॥೩೯॥

॥ ಸೂತ ಉವಾಚ ॥

ಇತ್ಥಂ ತ್ಯಾಗಾಧಿಪಸ್ಯ ಪ್ರಿಯವಚನಮಹೋ ಸುಂದರಃ ಶಂಬರಾಂಕೋ-
ಪ್ರೋದ್ಯನ್ಮೌಳಿಪದಾಂಬುಜಂ ಸುರಸದೃಷ್ಟ್ಯಾ ವಿಲೋಕ್ಯಾದರಾತ್ ।
ತಸ್ಮಿನ್ವೈ ಕಮಲಾವಿಲಾಸಸದನೇ ದೇವಂ ಹಿ ಪಶ್ಯನ್ಸದಾ
ಭಕ್ತ್ಯಾ ನಿರ್ಭರಮಾನಸೇನ ಸುಮಹತ್ಕಾಲಂ ಸ ನಿನ್ಯೇ ದ್ವಿಜಃ ॥೪೦॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ
ಕಮಲಾಲಯಕ್ಷೇತ್ರೇ ಸುಂದರಭಕ್ತಕೃತಪಂಚಲಿಂಗತ್ಯಾಗರಾಜಸ್ತುತಿ
ವರ್ಣನಂ ನಾಮ ತ್ರಯೋವಿಂಶೋಽಧ್ಯಾಯಃ

---

ಅವತರಿಸುವಳು. ಎಲೈ ಗಣಮುಖ್ಯನೇ, ಈಗ ಅವಳೊಡನೆ ನಿನಗೆ ಪಾಣಿಗ್ರಹಣ ವನ್ನು ಮಾಡಿಸುವೆನು. ವಿವಾಹದೀಕ್ಷಿತನಾದ ನಿನ್ನನ್ನು ಪ್ರತಿದಿನವೂ ನೋಡು ತ್ತೇನೆ. ಎಲೈ ಸುಂದರನೇ, ನಾನು ಹೇಳಿದಂತೆ ನಡೆಸೆಂದು ಮಹೇಶ್ವರನು ಸುಂದರ ನಿಗೆ ಅಪ್ಪಣೆಮಾಡಿದನು. ॥೩೭-೩೮-೩೯॥

ಹೀಗೆ ಸುಂದರನು ತ್ಯಾಗರಾಜೇಶ್ವರನ ಪ್ರಿಯವಾದ ಮಾತುಗಳನ್ನು ಕೇಳಿ ಚಂದ್ರಶೇಖರನೆನಿಸಿದ ಶಂಕರನ ಪಾದಕಮಲವನ್ನು ದಿವ್ಯ ಭಕ್ತಿರಸಭರಿತವಾದ ದೃಷ್ಟಿಯಿಂದ ನೋಡಿ, ಕಮಲಾವಿಲಾಸಕ್ಕೆ ಮನೆಯಾಗಿರುವ ಆ ಕ್ಷೇತ್ರದಲ್ಲಿ ಯಾವಾಗಲೂ ಉಮಾಮಹೇಶ್ವರನನ್ನೇ ಭಕ್ತಿಪೂರ್ಣವಾದ ಮನಸ್ಸಿನಿಂದ ದರ್ಶನ ಮಾಡುತ್ತಾ ಬಹಳಕಾಲ ವಾಸಮಾಡಿದನು. ॥೪೦॥

ಇಲ್ಲಿಗೆ ಶ್ರೀಶಿವರಹಸ್ಯದ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಕಮಲಾಲಯಕ್ಷೇತ್ರದಲ್ಲಿ ಸುಂದರನೆಂಬ ಭಕ್ತನು ಮಾಡಿದ
ಪಂಚಲಿಂಗಸ್ತುತಿ ಮತ್ತು ತ್ಯಾಗರಾಜೇಶ್ವರ ಸ್ತುತಿವರ್ಣನೆಯೆಂಬ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಚತುರ್ವಿಂಶೋಽಧ್ಯಾಯಃ

॥ ಮುನಿರುವಾಚ ॥

ತಸ್ಯೋದ್ವಾಹಃ ಕಥಮಭೂತ್ಸುಂದರಸ್ಯ ಗಣಾಗ್ರಣೇಃ ।
ತನ್ಮೇ ವಿಸ್ತರತೋ ಬ್ರೂಹಿ ಶ್ರವಣೇ ವಿಧೃತೋಽಸ್ಮಿ ತೇ ॥೧॥

॥ ಸ್ಕಂದ ಉವಾಚ ॥

ಶೃಣು ತೇ ವಿಪ್ರವರ್ಯಾದ್ಯ ವದಾಮಿ ಚ ವಿಶೇಷತಃ ।
ಕಮಲಿನ್ಯಾಸ್ತಥೋತ್ಪತ್ತಿಂ ಕಮಲಾಲಯಮಧ್ಯಮೇ ॥೨॥

ತತಃ ಪೂರ್ವಪುರೇ ತಸ್ಮಿನ್ನಾಮ್ನಾ ಶೃಂಗಾರನಾಯಿಕಾ ।
ವಿದ್ಯತೇ ಚಂದ್ರಗಣಿಕಾ ಸೌಂದರ್ಯಾವೃತಸೀಮಭೂಃ ॥೩॥

---

## ಇಪ್ಪತ್ತುನಾಲ್ಕನೆಯ ಅಧ್ಯಾಯ

ಓ ಕುಮಾರಸ್ವಾಮಿಯೇ, ಗಣಮುಖ್ಯನಾದ ಆ ಸುಂದರನ ವಿವಾಹವು ಹೇಗೆ ನೆರವೇರಿತು ಎಂಬುದನ್ನು ನನಗೆ ವಿಸ್ತಾರವಾಗಿ ಹೇಳು. ಅದನ್ನು ಕೇಳಬೇಕೆಂದು ನಾನು ನನ್ನ ಎರಡು ಕಿವಿಗಳನ್ನು ಸ್ವಾಧೀನದಲ್ಲಿಟ್ಟುಕೊಂಡು ಸ್ಥಿರಮನಸ್ಸುಳ್ಳವನಾಗಿರುವೆನು ಎಂದು ಜೈಗೀಷವ್ಯನು ಸ್ಕಂದಸ್ವಾಮಿಯನ್ನು ಪ್ರಾರ್ಥಿಸಿದನು. ॥೧॥

ಬ್ರಾಹ್ಮಣಶ್ರೇಷ್ಠನೇ, ಈಗ ನಾನು ಕಮಲಾಲಯಮಧ್ಯದಲ್ಲಿ ಕಮಲಿನಿಯ ಉತ್ಪತ್ತಿಯನ್ನೂ ಮತ್ತು ಅವಳ ಸಂಬಂಧವಾದ ಎಲ್ಲಾ ಕಥೆಯನ್ನೂ ವಿಸ್ತಾರವಾಗಿ ಹೇಳುತ್ತೇನೆ ಕೇಳು. ಕಮಲಾಲಯಕ್ಕೆ ಪೂರ್ವದಿಕ್ಕಿನಲ್ಲಿರುವ ಒಂದು ಪಟ್ಟಣದಲ್ಲಿ

ದಿವ್ಯವಲ್ಮೀಕರಂಧ್ರೇಶಂ ಸಾ ಸುತಾಜನನೋತ್ಸುಕಾ ।
ಅರ್ಚಯಚ್ಛಿವಭಕ್ತಾಂಶ್ಚ ದೇವ್ಯೈತತ್ತನ್ಮನೋಹರೈಃ ॥೪॥

ಕನ್ಯಾಶ್ಚ ಪೂಜಯಾಮಾಸ ಹರಿದ್ರಾವಸನಾದಿಭಿಃ ।
ಗೌರೀಂ ಚ ಪಟ್ಟವಸನಮಾಲಾಕುಂಕುಮಭೂಷಣೈಃ ॥೫॥

ಅಸಕೃತ್ಪೂಜನಾತ್ತುಷ್ಟೌ ಜ್ಞಾತತದ್ಭಾವಿನೌ ಶಿವೌ ।
ವರಂ ದದತುರೇತಸ್ಯೈ ದುಹಿತಾ ತೇ ಭವತ್ವಿತಿ ॥೬॥

ತದಾ ಕೈಲಾಸನಾಥಸ್ಯ ದೇವ್ಯಾಃ ಶ್ರೀ ಪರಿಚಾರಿಕಾ ।
ನಾಮ್ನಾ ಕಮಲಿನೀ ಯಾ ಸಾ ತಸ್ಯಾಃ ಕುಕ್ಷಿಮವಾತರತ್ ॥೭॥

ತಸ್ಯಾಶ್ಚಕಾರ ದುಹಿತುರ್ನಾಮ ಶೃಂಗಾರನಾಯಿಕಾ ।
ಕಾಂತಿಶೃಂಗಾರವೇಲಾಯಾಸ್ತದಾ ಸಾಗರಿಕೇತಿ ಚ ॥೮॥

---

ಶೃಂಗಾರನಾಯಿಕೆಯೆಂಬ ಪ್ರಖ್ಯಾತಳಾದ ಚಂದ್ರಗಣಿಕೆ (ವೇಶ್ಯೆ) ಯೊಬ್ಬಳು ಇದ್ದಳು ಇವಳು ಸೌಂದರ್ಯವೆಂಬ ಅಮೃತಕ್ಕೆ ಎಲ್ಲೆಯಂತಿದ್ದು ಅತಿಸುಂದರಿಯೆನಿಸಿದ್ದಳು. ||೨-೩||

ಅವಳು ಪುತ್ರೀರತ್ನವನ್ನು ಪಡೆಯಬೇಕೆಂದು ಉತ್ಸಾಹಭರಿತಳಾಗಿ ದಿವ್ಯವಾದ ಶ್ರೀ ವಲ್ಮೀಕರಂಧ್ರೇಶ್ವರನ ಶಿವಲಿಂಗವನ್ನು ಪೂಜೆಮಾಡಿದಳು. ಆದಕ್ಕಾಗಿ ಅನೇಕ ಶೈವಶ್ರೇಷ್ಠರನ್ನು ಸತ್ಕರಿಸಿದಳು. ಅಲ್ಲದೇ ಪಾರ್ವತೀದೇವಿಯ ಪ್ರೀತಿಗೋಸ್ಕರ ಮನೋಹರವಾದ ಅರಿಸಿನ, ಕುಂಕುಮ, ಬಟ್ಟೆಬರೆಗಳೇ ಮೊದಲಾದುವುಗಳಿಂದ ಕನ್ಯೆಯರನ್ನು ಪೂಜೆಮಾಡಿದಳು. ಅನಂತರ ರೇಷ್ಮೆಯ ಬಟ್ಟೆ, ಹಾರ, ಕುಂಕುಮ ಮತ್ತು ಒಡವೆಗಳಿಂದ ಗೌರೀದೇವಿಯನ್ನೂ ಪೂಜಿಸಿದಳು. ಈ ಶೃಂಗಾರನಾಯಿಕೆಯ ಅನೇಕಬಾರಿಯ ಅಂತಹ ಪೂಜೆಗಳಿಂದ ಸಂತುಷ್ಟರಾಗಿ, ಇವಳ ಮನೋಭಿಪ್ರಾಯವನ್ನರಿತ ಪಾರ್ವತೀಪರಮೇಶ್ವರರು ಅವಳನ್ನು ಅನುಗ್ರಹಿಸಿ, ನಿನಗೆ ಸತ್ಪುತ್ರಿಯು ಜನಿಸಲೆಂದು ವರವನ್ನು ಕೊಟ್ಟರು. ||೪-೫-೬||

ಆಗ ಕೈಲಾಸೇಶ್ವರನ ಅರ್ಧಾಂಗಿಯಾದ ಪಾರ್ವತಿಯ ಪರಿಚಾರಿಕೆಯೆನಿಸಿದ ಕಮಲಿನಿಯು ಆ ಶೃಂಗಾರನಾಯಿಕೆಯ ಹೊಟ್ಟೆಯಲ್ಲಿ ಅವತರಿಸಿದಳು. ಆ ಶೃಂಗಾರನಾಯಿಕೆಯೆಂಬ ವೇಶ್ಯೆಯು ಶಿವಾನುಗ್ರಹದಿಂದ ಮಗಳನ್ನು ಪಡೆದು ತನ್ನ ಮಗಳ

ಮಾತುರ್ಮೂರ್ತಿಮಿವಾನಂದನೈಕಲಕ್ಷ್ಯಂ ಪ್ರಿಯಾದೃಶಾ ।
ಪುಪೋಷ ಸಾ ಸಾಗರಿಕಾ ಸೌಂದರ್ಯನಿಲಯಂ ವಪುಃ ॥೯॥

ಕಿಮಿಯಂ ತರುಣೀ ಮುಗ್ಧಾ ಕಿಮಿಯಂ ತರುಣಂ ಮಧು ।
ಪ್ರತಿಪಚ್ಚಂದ್ರಲೇಖಾ ಕಿಮಿಯಮಾನಂದಕಂದಲೀ ॥೧೦॥

ಕಾರಣೇನಾವತೀರ್ಣಾ ಕಿಂ ಕಮಲಾ ಕಮಲಾಲಯೇ ।
ಇತಿ ವಾರವಿಲಾಸಿನ್ಯಸ್ತಾಂ ವೀಕ್ಷ್ಯ ಜಗದುರ್ಮಿಥಃ ॥೧೧॥

ಪಾಂಸುಪದ್ಮಾದಿಕೃತಕಪುತ್ರಿಕಾಕಂದುಕಾದಿಭಿಃ ।
ನಿನಾಯ ಸಾ ತದಾ ಬಾಲ್ಯಂ ಮೂರ್ತೇವಾಜ್ಞಾ ಮನೋಭುವಃ ॥೧೨॥

ಬಾಲ್ಯೋಚಿತಾಸು ಲೀಲಾಸು ತಾಸು ತಾಸು ಚ ಬಾಲಿಕಾ ।
ಅಗಾಯದಾತ್ಮಸ್ವಾಮಿನ್ಯಾ ಗೌರ್ಯಾ ಗೀತಸ್ತವಾವಲೀಂ ॥೧೩॥

---

ಕಾಂತಿ, ಶೃಂಗಾರ ಇವುಗಳ ಪ್ರವಾಹದಂತಿರುವುದನ್ನು ನೋಡಿ ಇವಳಿಗೆ ‘ಸಾಗರಿಕಾ’ ಎಂದು ಹೆಸರಿಟ್ಟಳು. ಈ ಸಾಗರಿಕೆಯು ಆನಂದಪ್ರದವಾದ ತಾಯಿಯ ಆಕೃತಿಯನ್ನೇ ಮುಖ್ಯ ಗುರಿಯನ್ನಾಗಿಟ್ಟುಕೊಂಡಿರುವಳೋ ಎಂಬಂತೆ ಹಿತಕರವಾದ ನೋಟದಿಂದ ಸೌಂದರ್ಯಕ್ಕೆ ಬೀಡಾಗಿರುವ ತನ್ನ ದೇಹವನ್ನು ಪುಷ್ಟಿಗೊಳಿಸಿಕೊಂಡಳು. ॥೭-೮-೯॥

ಇವಳೇನು ಸುಂದರಿಯಾದ ತರುಣಿಯೋ! ರಸಭರಿತವಾದ ಜೇನೋ! ಅಥವಾ ಪಾಡ್ಯಮಿಯ ಚಂದ್ರಲೇಖೆಯೋ! ಅಲ್ಲವೇ ಆನಂದದಂಕುರವೋ! ಒಂದು ವೇಳೆ ಯಾವುದೋ ಕಾರಣದಿಂದ ಈ ಕಮಲಾಲಯದಲ್ಲಿ ಅವತರಿಸಿರುವ ಸಾಕ್ಷಾಲ್ಲಕ್ಷ್ಮೀದೇವಿಯೋ ಏನೋ! ಎಂಬುದಾಗಿ ವೇಶ್ಯೆಯರು ಆ ಸಾಗರಿಕೆಯ ಸೌಂದರ್ಯವನ್ನು ನೋಡಿ ತಮ್ಮ ತಮ್ಮಲ್ಲಿಯೇ ಪರಸ್ಪರವಾಗಿ ಹೀಗೆ ಮಾತನಾಡಿಕೊಂಡರು. ॥೧೦-೧೧॥

ಮರಳು, ತಾವರೆಹೂವು, ಕೃತಕವಾದ ಬೊಂಬೆ ಮತ್ತು ಚಂಡು ಇವೇ ಮುಂತಾದುವುಗಳ ಆಟದಿಂದ ಅವಳು ಮನ್ಮಥನ ಮೂರ್ತಿಮತ್ತಾದ ಕಲೆಯೋ ಎಂಬಂತೆ ತನ್ನ ಬಾಲ್ಯವನ್ನು ಲೀಲೆಯಿಂದ ಕಳೆದಳು. ಆ ಸಾಗರಿಕೆಯು ಬಾಲ್ಯಯೋಗ್ಯಗಳಾದ ಆಯಾ ವಿಹಾರಗಳಲ್ಲಿ ನಿರತಳಾಗಿ, ಆಗಲೇ ತನ್ನ ಒಡತಿಯಾದ ಗೌರೀದೇವಿಯ ಸ್ತೋತ್ರಮಾಲಿಗಳನ್ನು ಆಗಾಗ ಹಾಡುತ್ತಿದ್ದಳು. ॥೧೨-೧೩॥

ಗಾಯಂತ್ಯಾಂ ಮಧುರಂ ತಸ್ಯಾಂ ವೀಣಾಭೂತ್ಪರಿನಾದಿನೀ ।
ಶುಕಾನಾಂ ಕೋಕಿಲಾನಾಂ ಚ ಶರಣಂ ವರುಣಾಲಯಂ ॥೧೪॥

ನಾಚಿ ವಕ್ರೋಕ್ತಿತಾ ತಸ್ಯಾಶ್ಚಂಚಲತ್ವದೃಶಾಭವತ್ ।
ತಾಲಾಕಾರಃ ಸಮುನ್ಮೇಷಃ ಕಾಂತಿಸಾರ ಉರಸ್ಯಭೂತ್ ॥೧೫॥

ಏಕದಾ ವಂದಿತುಂ ನಾಥಂ ವಲ್ಮೀಕನಿಲಯಂ ಶಿವಂ ।
ಸಮುತ್ಸುಕಾ ಸಾಗರಿಕಾ ಸ್ವನಿವೇಶಾದ್ವಿನಿರ್ಯಯೌ ॥೧೬॥

ಸಮರೂಪವಯೋಭಿಃ ಸಾ ಸಖಿಭಿರ್ನಿರ್ಗತಾ ಬಭೌ ।
ಆಜ್ಞಾಶಕ್ತಿಚಮೂಯುಕ್ತಾ ದೇಹಬಂಧೇವ ಮಾನ್ಮಥೀ ॥೧೭॥

ಯದಾ ಸಾಗರಿಕಾ ಪ್ರಾಪ ದೇವಶ್ರೀಮಂದಿರಾಂತಕಂ ।
ತದಾ ಸುಂದರನಾಥೋಽಪಿ ತಂ ದೇವಂ ವಂದಿತುಂ ಯಯೌ ॥೧೮॥

---

ಆ ಸಾಗರಿಕೆಯು ಹಾಗೆ ಇಂಪಾಗಿ ಹಾಡುತ್ತಿದ್ದರೆ, ಅವಳ ಧ್ವನಿಯಿಂದ ವೀಣೆಯೇ ತಿರಸ್ಕೃತವಾಗುತ್ತಿತ್ತು. ಆ ಇಂಚರದಿಂದ ಗಿಣಿಗಳೂ, ಕೋಗಿಲೆಗಳೂ ತಮಗೆ ಉಳಿಗಾಲವಿಲ್ಲದೇ ನಮಗೆ ಇನ್ನು ಸಮುದ್ರವೇ ಗತಿಯೆಂದು ಅಲ್ಲಿ ನಿಲ್ಲದೆ ಹಾರಿಹೋಗುತ್ತಿದ್ದುವು. ಅವಳಿಗೆ ಮಾತುಗಳಲ್ಲಿ ವಕ್ರೋಕ್ತಿಯೂ, ಕಣ್ಣುಗಳಲ್ಲಿ ಚಂಚಲತ್ವವೂ ಸ್ವಭಾವವಾಗಿಯೇ ಉಂಟಾಯಿತು. ಅವಳ ಆಕೃತಿಯು ದಿನದಿನಕ್ಕೆ ತಾಳೆಯಮರದಂತೆ ಬೆಳೆಯುತ್ತಿತ್ತು. ವಕ್ಷಸ್ಥಳವು (ಎದೆಯು) ಕಾಂತಿಗೆ ಸಾರಭೂತ ಆಶ್ರಯಸ್ಥಾನವೋ ಎಂಬಂತೆ ಕಂಗೊಳಿಸುತ್ತಿತ್ತು. ॥೧೪-೧೫॥

ಒಂದುದಿನ ಆ ಸಾಗರಿಕೆಯು ವಲ್ಮೀಕೇಶ್ವರನಾದ ಶಿವನಿಗೆ ನಮಸ್ಕಾರ ಮಾಡಬೇಕೆಂದು ಉತ್ಸಾಹಭರಿತಳಾಗಿ ತನ್ನ ಮನೆಯಿಂದ ಹೊರಹೊರಟಳು. ಅವಳು ಹೀಗೆ ಸಮಾನವಾದ ಸೌಂದರ್ಯ ಮತ್ತು ವಯಸ್ಸುಗಳಿಂದ ಶೋಭಿಸುವ ತನ್ನ ಗೆಳತಿಯರೊಂದಿಗೆ ಹೋಗುತ್ತಿದ್ದರೆ, ಮೂರ್ತಿಮತ್ತಾಗಿ ಮನ್ಮಥನ ಹೆಂಡತಿಯಾದ ರತಿಯು ಶಕ್ತಿಯುತವಾದ ತನ್ನ ಸೈನ್ಯಸಮೇತಳಾಗಿ ತನ್ನ ಸ್ವಾಮಿಯ ಅಪ್ಪಣೆಯಂತೆ ಬರುತ್ತಿರುವಳೋ ಎಂಬಂತೆ ಪ್ರಕಾಶಿಸುತ್ತಿದ್ದಳು. ॥೧೬-೧೭॥

ಸಾಗರಿಕೆಯು ಮಹಾದೇವನ ಶ್ರೀಮಂಟಪದ ಹತ್ತಿರಕ್ಕೆ ಬಂದ ಸಮಯದಲ್ಲೇ, ಸುಂದರನಾಥನೂ ಸಹ ವಲ್ಮೀಕೇಶ್ವರನಿಗೆ ನಮಸ್ಕರಿಸಲು ಅಲ್ಲಿಗೆ

ತಸ್ಮಿನ್ನೇವ ಸಮುದ್ದೇಶೇ ತರುಣೀನಾಂ ಶಿಖಾಮಣಿಂ ।
ಸುಜಾತಹಸಿತಜ್ಯೋತ್ಸ್ನಾಂ ಚಾರುಸಂಧ್ಯಾರುಣಾಧರಾಂ ॥೧೯॥

ಭ್ರೂವಲ್ಲೀವಿಭ್ರಮಾಕೃಷ್ಟವೀರಕಂದರ್ಪಕಾರ್ಮುಕಾಂ ।
ವಿಷಮಾಯುಧಜೈತ್ರಾಸ್ತ್ರವೀರಾಯುತವಿಲೋಚನಾಂ ॥೨೦॥

ಅಚಕ್ರಂ ಭವನಿರ್ಧೂತಮದಕುಂಜರಮಸ್ತಕಾಂ ।
ಪ್ರಾಗ್ಜನ್ಮಭಾಗ್ಯಯೋಗೇನ ತಾಂ ದದರ್ಶ ತಲೋದರೀಂ ॥೨೧॥

ಮನೋಭವೇಂದ್ರಜಾಲಾಸ್ತ್ರಮಾಯಾಮಾಯೂರಪಿಂಛಿಕಾಂ ।
ತಾಂ ದೃಷ್ಟ್ವಾ ತನುರೂಪಾಂಗೀಂ ತಸ್ಯಾಭೂತ್ತರಲಂ ಮನಃ ॥೨೨॥

ಕಿಂ ಕಲ್ಪಭೂರುಹಸ್ಯೇಯಂ ಪ್ರಸೂನನವಶಾಖಿಕಾ ।
ಕಿಂ ಕಾಮಸ್ಯ ಮಹಾಸ್ತ್ರಂ ಯತ್ಪುಣ್ಯಪಣ್ಯಂ ಸ ಕಿಂ ಫಲಂ ॥೨೩॥

ಕಿಮದ್ಭುತಂ ಕಿಮಾತ್ಮೇಶಃ ಶಿವಃ ತಾರುಣ್ಯಸಾರಿಣೀಂ ।
ನ ವೇತ್ತೀತಿ ಸಖಾ ಶಂಭೋಃ ರಸಾತಿಶಯಮಾನಭೂತ್ ॥೨೪॥

---

ಬಂದನು. ಅದೇ ಮಾರ್ಗದಲ್ಲಿ ಯುವತಿಯರಿಗೆ ಚೂಡಾಮಣಿಪ್ರಾಯಳೂ, ಮುಗುಳುನಗೆಯೆಂಬ ಬೆಳದಿಂಗಳಿಂದ ಮನೋಹರಳಾಗಿರುವವಳೂ, ಸಂಜೆಗೆಂಪಿನಂತಿರುವ ಕೆಳದುಟಿಯುಳ್ಳವಳೂ, ಹುಬ್ಬೆಂಬ ಬಳ್ಳಿಯ ವಿಲಾಸಗಳಿಂದ ಸೆಳೆಯಲ್ಪಟ್ಟ ಮದನಧನುವುಳ್ಳವಳೂ, ಕುಸುಮಬಾಣನ ವಿಜಯಪ್ರಾಪ್ತಿಸಾಧಕವಾದ ಸಾವಿರಾರು ಸುಂದರಾಂಗಿಯರನ್ನೊಳಗೊಂಡವಳೂ, ಚಕ್ರವಿಲ್ಲದೇನೇ ಯೌವನಮದವೆಂಬ ಆನೆಯ ತಲೆಯನ್ನು ಕತ್ತರಿಸಿದವಳೂ ಆದ ಆ ಕೃಶಾಂಗಿಯನ್ನು ಹಿಂದಿನ ಜನ್ಮದ ಭಾಗ್ಯಯೋಗದಿಂದ ಆ ಸುಂದರನು ಆದಿನ ಕಂಡನು. ॥೧೮-೧೯-೨೦-೨೧॥

ಮನ್ಮಥನ ಇಂದ್ರಜಾಲಾಸ್ತ್ರದ ಮಾಯೆಯನ್ನೊಳಗೊಂಡ ನವಿಲುಗರಿಯಂತೆಯಂತಿರುವ ಕೃಶಾಂಗಿಯಾದ ಆ ನಾಗರಿಕೆಯನ್ನು ನೋಡಿ ಸುಂದರನ ಮನಸ್ಸು ಕದಡಿತು. ಆಗ ಅವನು, "ಇವಳು ಕಲ್ಪವೃಕ್ಷದ ಹೊಸ ಚಿಗುರುಗಳಿಂದ ಕೂಡಿದ ಕೊಂಬೆಯೋ, ಅಥವಾ ಮನ್ಮಥನ ದೊಡ್ಡ ಬಾಣರೂಪಳೋ, ಹೇಗಾದರೂ ಇರಲಿ, ಕೇವಲ ಅಪಾರ ಪುಣ್ಯವನ್ನೇ ಪಣವಾಗಿಟ್ಟವರಿಗೆ ಲಭ್ಯಳು, ಚಿಂತಿಸಿ ಪ್ರಯೋಜನವೇನು, ಈದೇನಾಶ್ಚರ್ಯವು! ಮನಸ್ಸಿನಲ್ಲಿ ಒಡೆಯನಾದ ಪರಶಿವನು ಇದ್ದಾಗೂ

**ಸಾ ಚ ಸಾಗರಿಕಾ ದೃಷ್ಟ್ವಾ ಕಾಂತಂ ಸುಂದರನಾಯಕಂ ।**
**ತತ್ಸೌಂದರ್ಯಮಹಾಪೂರಮಗ್ನದೃಷ್ಟಿರಭೂತ್ತದಾ ॥೨೫॥**

**ಕೋಽಯಂ ಕುಮಾರೋ ಮಾರಃ ಕಿಂ ಸೌಂದರ್ಯಾಮೃತಸಾಗರಃ ।**
**ಕಿಮು ವಿದ್ಯಾಧರಃ ಶಂಭುಕರುಣಾರಸವರ್ಧಿತಃ ॥೨೬॥**

**ಕೋಽಯಂ ಹಂತ ಮಮಾಪ್ಯೇವಂ ಮಾನಸಾಕರ್ಷಣೋನ್ಮುಖಃ ।**
**ಇತಿ ಚಿಂತಾಕುಲಾ ತತ್ರ ಶ್ರೀ ವಲ್ಮೀಕಪತಿಂ ಯಯೌ ॥೨೭॥**

**ತಾಂ ಯಾಂತೀಂ ಸುಂದರೋ ದೃಷ್ಟ್ವಾ ಪ್ರಾಹ ರಥ್ಯಾಚರಾನ್ಜನಾನ್ ।**
**ಕಾನ್ವಿಯಂ ಕಾಂತಿಸೀಮಾಭೂರಿತಿ ಪ್ರಾಹುರಿಮಾಂ ಜನಾಃ ॥೨೮॥**

**ಸೇಯಂ ಸಾಗರಿಕಾಖ್ಯೇಯಮಿತಿ ಸಂಚಿಂತ್ಯ ಸುಂದರಃ ।**
**ವಲ್ಮೀಕರಂಧ್ರದೇವೇಶಂ ವಂದಿತುಂ ಶಿವಮಾಯಯೌ ॥೨೯॥**

---

ಶಂಭುವಿನ ಸಖನಾದ ಸುಂದರನು ಅದನ್ನು ತಿಳಿಯಲಾರದೇ ಹೋದನಲ್ಲಾ" ಎಂದು ಯೋಚಿಸುತ್ತಾ ಮತ್ತೆ ಪರಮೇಶ್ವರನ ಭಕ್ತಿರಸದಲ್ಲಿ ಆಸಕ್ತನಾಗಿ ಮನಸ್ಸನ್ನು ನಿಗ್ರಹಿಸಲು ಯತ್ನಿಸಿದನು. ॥೨೨-೨೩-೨೪॥

ಇತ್ತ ಆ ಸಾಗರಿಕೆಯೂ ಸಹ ಮನೋಹರನಾದ ಸುಂದರನಾಯಕನನ್ನು ನೋಡಿ, ಅವನ ಸೌಂದರ್ಯವೆಂಬ ದೊಡ್ಡ ಪ್ರವಾಹದಲ್ಲಿ ಸಿಲುಕಿದ ದೃಷ್ಟಿಯುಳ್ಳ ವಳಾದಳು. ಆಗ ಅವಳೂ ; ಈ ಕುಮಾರನಾರು ? ಸೌಂದರ್ಯವೆಂಬ ಅಮೃತಕ್ಕೆ ಸಾಗರ ನಾಗಿರುವ (ಆಶ್ರಯನಾಗಿರುವ) ಮನ್ಮಥನೇ ಆಗಿರಬಹುದೆ! ಅಥವಾ ಶಂಕರನ ದಯಾದೃಷ್ಟಿಯಿಂದ ಅಭಿವೃದ್ಧಿಹೊಂದಿರುವ ವಿದ್ಯಾಧರನೇ, ಇದೇನಾಶ್ಚರ್ಯವು! ನನ್ನ ಮನಸ್ಸನ್ನೂ ಹೀಗೆ ತನ್ನ ಕಡೆಗೆ ಸೆಳೆದುಕೊಂಡು ಹೋಗುತ್ತಿರುವನಲ್ಲಾ! ಎಂದು ಮುಂತಾಗಿ ಯೋಚನಾಕ್ರಾಂತಳಾಗಿ ಅಲ್ಲಿ ಶ್ರೀವಲ್ಮೀಕೇಶ್ವರನನ್ನು ನಮಸ್ಕರಿಸಲು ಹೊರಟಳು. ॥೨೫-೨೬ ೨೭॥

ಹೀಗೆ ಪರಿವಾರದೊಡನೆ ಹೋಗುತ್ತಿರುವ ಅವಳನ್ನು ನೋಡಿ, ಸುಂದರನು ಅಲ್ಲಿಯೇ ಸಂಚರಿಸುತ್ತಿದ್ದ ಜನಗಳನ್ನು ಕುರಿತು ಕಾಂತಿಗೆ ನೆಲೆವೀಡಾಗಿರುವ ಇವಳಾರೆಂದು ಪ್ರಶ್ನೆಮಾಡಲು, ಆ ಜನಗಳು ಇವಳು ಸಾಗರಿಕೆಯೆಂಬುವಳೆಂದು ತಿಳಿಸಿದರು. ಆಗ ಸುಂದರನು ಅವಳನ್ನೇ ದೃಷ್ಟಿಸಿ ನೋಡುತ್ತಾ ವಲ್ಮೀಕರಂಧ್ರೇಶ್ವರನಿಗೆ ನಮಸ್ಕಾರಮಾಡಲು ತಾನೂ ಹೊರಟನು. ॥೨೮-೨೯॥

ಸಾ ಚ ಸಾಗರಿಕಾ ದೇವಂ ನತ್ವಾ ವಲ್ಮೀಕನಾಯಕಂ ।
ಕೃತ್ವಾ ಪ್ರದಕ್ಷಿಣಂ ಭೂಯೋ ದ್ವಾರೇಣೈಕೇನ ನಿರ್ಯಯೌ ॥೩೦॥

ಗತ್ವಾ ಸೋಽಪಿ ಹರಂ ಸ್ತುತ್ವಾ ಪ್ರಿಯಾ ಸಾಗರಿಕಾಸ್ತು ಮೇ ।
ಇತಿ ಸಂಚಿಂತ್ಯ ದೇವೇಶಮಭ್ಯವಂದತ ಸುಂದರಃ ॥೩೧॥

ತಥಾಭಿವಂದ್ಯ ಸ್ತುತ್ವಾ ಚ ಕಮಲಾಲಯಶಂಕರಂ ।
ನಿರ್ಯಯೌ ಮನಸಾ ಬಿಭ್ರತ್ಸ ತಾಂ ಸಾಗರಿಕಾಂ ಶುಭಾಂ ॥೩೨॥

ಮತ್ಪ್ರಾಣರಾಜಹಂಸೀ ಸಾ ಕ್ವ ಯಾತಾ ಮನಸಃ ಪ್ರಿಯಾ ।
ಇತಿ ತಾಂ ಸಸ್ಮಿತಮುಖೀಂ ಕಾಂತಾಂ ಮೃಗಯತೇ ಸ್ಮರಃ ॥೩೩॥

ಮೃಗೀವೋನ್ಮೀಲ್ಯ ನಯನೇ ಸ್ಮಿತ್ವಾ ವಕ್ತುಮಿವೋನ್ಮುಖೀ ।
ಪುನಃ ಕೇನ ಪಥಾ ಯಾತಾ ಪುಣ್ಯನಾಥಸ್ಯ ಮೇ ದಯಾ ॥೩೪॥

ತೇಜೋಮಯಮನಾಪ್ಯೇವಂ ಮೋಹಯಿತ್ವಾ ಸ್ಥಿರಂ ಮನಃ ।
ಪುನಃ ಕೇನ ಪಥಾ ಯಾತಾ ಪುಣ್ಯನಾಥಸ್ಯ ಮೇ ದಯಾ ॥೩೫॥

---

ಆ ಸಾಗರಿಕೆಯೂ ಸಹ ವಲ್ಮೀಕೇಶ್ವರನಿಗೆ ನಮಸ್ಕರಿಸಿ, ಪದೇ ಪದೇ ಪ್ರದಕ್ಷಿಣೆ ಮಾಡಿ ಒಂದು ಬಾಗಿಲಿನಿಂದ ಹೊರಹೊರಟಳು. ಆ ಸುಂದರನೂ, ಈಶ್ವರನಿಗೆ ನಮಸ್ಕಾರಮಾಡಿ ' ಆ ಸಾಗರಿಕೆಯೇ ನನಗೆ ಪ್ರಿಯೆಯಾಗಲಿ ' ಎಂದು ಪ್ರಾರ್ಥಿಸಿ, ಪುನಃ ಆ ದೇವೇಶ್ವರನಿಗೆ ಪ್ರಣಾಮಮಾಡಿದನು. ॥೩೦-೩೧॥

ಸುಂದರನು ಆ ರೀತಿಯಲ್ಲಿ ವಲ್ಮೀಕೇಶ್ವರನಿಗೆ ನಮಸ್ಕಾರಮಾಡಿ, ಆ ಕಮಲಾಲಯದ ಶಿವಲಿಂಗವನ್ನು ಸ್ತುತಿಸಿ, ಮನಸ್ಸಿನಲ್ಲಿ ಶುಭಕರಳಾದ ಆ ಸಾಗರಿಕೆಯನ್ನೇ ಚಿಂತಿಸುತ್ತಾ ಅಲ್ಲಿಂದ ಹೊರಟನು. ತನ್ನ ಪ್ರಾಣಗಳಿಗೆ ರಾಜಹಂಸಪ್ರಾಯಳಾದ ಆ ಮನೋಹಾರಿಣಿಯು ಎಲ್ಲಿ ಹೋದಳು ಎಂದು ಮಂದಹಾಸಯುಕ್ತವಾದ ಮುಖವುಳ್ಳ ಆ ಕಾಂತೆಯನ್ನೇ ಮನ್ಮಥಸದೃಶನಾದ ಸುಂದರನು ಹುಡುಕುತ್ತಾ ಹೊರಟನು. ॥೩೨-೩೩॥

ಹೆಣ್ಣುಜಿಂಕೆಯಂತೆ ಕಣ್ಣುಗಳನ್ನು ಅರಳಿಸಿ, ಮುಗುಳುನಗೆ ನಕ್ಕು ಏನನ್ನೋ ಹೇಳುವುದರಲ್ಲಿ ಉದ್ಯುಕ್ತಳಾಗಿದ್ದಳೋ ಎಂಬಂತಿದ್ದ ಆ ಪುಣ್ಯನಾಥನ ದಯಾಸ್ವರೂಪಿಣಿಯಾದ ಸುಂದರಿಯು, ನನಗೆ ಕಾಣದೇ ಎಲ್ಲಿ ಯಾವ ಮಾರ್ಗ

ಇತಿ ಕಾಮಮಸಾರೀಣಃ ಸೋಢುಂ ಸುಂದರನಾಯಕಃ ।
ತಾಮನ್ವೇಷ್ಟುಂ ತದೌತ್ಸುಕ್ಯಾದ್ದೇವಾಶ್ರಮಮುಪಾಗಮತ್ ॥೩೬॥

ತಸ್ಮಿನ್ಕ್ಷಣೇ ಸುಂದರೇಶಃ ಪ್ರಿಯಾಂ ಸಾಗರಿಕಾಮಿವ ।
ಗಂತುಮೈಚ್ಛತ್ತದಾ ರಾಗೀ ಭಾನುಃ ಪಶ್ಚಿಮದಿಗ್ವಧೂಂ ॥೩೭॥

ಗತೇ ಜ್ಞಾನ ಇವಾಲೋಕೇ ಭಾಸ್ಕರಸ್ಯ ನಭೋಽಭವತ್ ।
ಸಾಗರಂ ಚ ತಮೋಯುಕ್ತಂ ಸುಂದರಸ್ಯ ಮನೋ ಯಥಾ ॥೩೮॥

ಸ್ತ್ರಿಯಂ ನಿರೀಕ್ಷ್ಯ ವಿಕೃತಃ ಶಿವಭಕ್ತೋಽಪ್ಯಸಾವಿತಿ ।
ಹಾಸಶ್ರೀರಿವ ಯಾಮಿನ್ಯಾಂ ಚಂದ್ರಿಕಾ ದದೃಶೇ ತದಾ ॥೩೯॥

ಮಚ್ಚಿತ್ತನಿರ್ಗತಂ ಜ್ಞಾತ್ವಾ ದೇವಂ ಪ್ರಾಯೋ ಮನೋಭವಃ ।
ಬಾಧತೇ ಮಾಂ ಶಶಾಂಕೋಽಪಿ ತನ್ಮೌಲಿಸ್ಥೋಽನಲಾಯತೇ ॥೪೦॥

---

ದಿಂದ ಹೋದಳು. ತೇಜೋಮಯವಾದ ಅಪೂರ್ವ ದೇಹವನ್ನು ಪಡೆದು ಶಿವನಲ್ಲಿ ಸ್ಥಿರವಾಗಿದ್ದ ಈ ನನ್ನ ಮನಸ್ಸನ್ನೂ ಕಲಕಿ ಆ ಪುಣ್ಯನಾಥನ ದಯಾ ರೂಪಿಣಿಯಾದ ನಲ್ಲೆಯು ಪುನಃ ಯಾವ ದಾರಿಯಲ್ಲಿ ಹೋದಳೋ ತಿಳಿಯದಲ್ಲಾ! ||೩೪-೩೫||

ಹೀಗೆಂದು ಸುಂದರನಾಯಕನು ಆ ಸಾಗರಿಕೆಯಿಂದುಂಟಾದ ಕಾಮವಿಕಾರವನ್ನು ಸಹಿಸಲು ಸಾಧ್ಯವಿಲ್ಲದೇ, ಅವಳನ್ನು ಹುಡುಕಲು ಉತ್ಸಾಹದಿಂದ ಮಹಾದೇವನ ಆಶ್ರಮಕ್ಕೆ ಹೋದನು. ಅದೇ ಕ್ಷಣದಲ್ಲಿ ಸುಂದರೇಶನು ತನ್ನ ಪ್ರಿಯೆಯಾದ ಸಾಗರಿಕೆಯನ್ನು ಹೊಂದಲು ಹುಡುಕಿಕೊಂಡು ಹೋದಂತೆ ಅನುರಾಗಿಯಾದ (ಕೆಂಪಾದ) ಸೂರ್ಯನು ಪಶ್ಚಿಮದಿಕ್ಕೆಂಬ ಅಂಗನೆಯೊಡಗೂಡಲು ಇಚ್ಛಿಸಿದನು. (ಅಂದರೆ ಸೂರ್ಯನು ಮುಳುಗಿದನೆಂದು ಭಾವವು.) ||೩೬-೩೭||

ಅಜ್ಞಾನದಿಂದ ಜ್ಞಾನವು ಕಣ್ಮರೆಯಾಗುವಂತೆ, ಸೂರ್ಯನ ಪ್ರಕಾಶವು ಕತ್ತಲೆಯಿಂದ ಮುಚ್ಚಿ, ಆಕಾಶವೂ ಮತ್ತು ಸಾಗರವೂ ಅಂಧಕಾರಯುಕ್ತವಾಗಿ ಸುಂದರನ ಮನಸ್ಸಿನಂತಾಯಿತು. ತಾನು ಈಶ್ವರಾರಾಧಕನಾಗಿದ್ದರೂ ಒಬ್ಬಳು ಹೆಂಗಸನ್ನು ನೋಡಿ ವಿಕಾರಹೊಂದಿದೆನಲ್ಲಾ ಎಂದು ಪರಿಹಾಸದೇವತೆಯು ರಾತ್ರಿಯಲ್ಲಿ ಹಾಸ್ಯ ಮಾಡುತ್ತಿರುವಳೋ ಎಂಬಂತೆ ಆಗ ಬೆಳದಿಂಗಳು ಕಾಣಿಸಿಕೊಂಡಿತು. ||೩೮-೩೯||

ತನ್ನ ಮನಸ್ಸಿನಲ್ಲಿ ಶಿವನನ್ನು ಧ್ಯಾನಿಸದೇ ಈ ಸಾಗರಿಕೆಯನ್ನೇ ಚಿಂತಿಸು

ವಾಸಂತಿಕಂ ಪುಷ್ಪರಜಃ ಕಿಮುವಾಂಮಾರಚೂರ್ಣವತ್ ।
ಮನ್ಮಥಂ ಜ್ವಲಯತ್ಯುಚ್ಚೈರನಲಂ ಮಲಯಾನಿಲಃ ॥೪೧॥

ಏವಂ ಸ್ಮರಾತುರಃ ಸೋಽಭೂತ್ಸುಂದರೇಶೋಽಪಿ ಮಂದಧೀಃ ।
ಮೃದ್ವ್ಯಾಃ ಸಾಗರಿಕಾಯಾಸ್ತು ಸ್ಮರಾರ್ತಿಃ ಕೇನ ವರ್ಣ್ಯತೇ ॥೪೨॥

ಸಾ ಚ ಸುಂದರಸೌಂದರ್ಯದರ್ಶನೋತ್ಥಸ್ಮರಾಂಕುರಾ ।
ಆವಿಷ್ಟೇವ ಗೃಹಂ ಪ್ರಾಪ ಮಂದಮಂದಪದಕ್ರಮಾ ॥೪೩॥

ಸಖೀಜನೇನಾಪಿ ಸಮಂ ಸಲ್ಲಾಪಮಪಿ ತನ್ವತೀ ।
ಸೌಧೋತ್ಸೇಧಂ ಸಮಾರೋಹದ್ಧ್ಯಾನೋಹವಿವಶಾಶಯಾ ॥೪೪॥

ತಾರಮುಕ್ತಾಯುತ ಜ್ಯೋತ್ಸ್ನಾಸ್ವಚ್ಛಾಂಬರವಿತಾನಕೇ ।
ತಸ್ಮಿನ್ ಪುಷ್ಪಮಯೇ ತಲ್ಪೇ ನಿಷಸಾದ ನಿವೃತ್ತಿವತ್ ॥೪೫॥

---

ತ್ತಿರುವುದನ್ನು ನೋಡಿ, ಪ್ರಾಯಶಃ ಮನ್ಮಥನು ಇದೇ ಸಮಯವೆಂದು ನನ್ನನ್ನು ಬಾಧಿಸುತ್ತಿರುವನೋ ಏನೋ, ತನ್ನ ಪ್ರಭುವಿನ ಧ್ಯಾನವನ್ನು ಇವನು ಬಿಟ್ಟನಲ್ಲಾ ಎಂದು ಶಂಕರನ ಶಿರೋಭೂಷಣನಾಗಿದ್ದ ಚಂದ್ರನೂ ಕೂಡ ಬೆಂಕಿಯಂತೆ ನನ್ನನ್ನು ಸುಡುತ್ತಿರುವನು. ವಸಂತಕಾಲದ ಹೂಪರಾಗಗಳು ಮದನಚೂರ್ಣಗಳಂತೆ ನನ್ನನ್ನು ಬಾಧಿಸುತ್ತಿರುವುವಲ್ಲಾ! ಈ ಮಲಯವಾತವು ಬೆಂಕಿಯನ್ನೆಬ್ಬಿಸಿ, ನನ್ನಲ್ಲಿಯೇ ಆ ಮನ್ಮಥನನ್ನು ಉರಿಸುತ್ತಿರುವುದೋ ಏನೋ, ಎಂಬುದಾಗಿ ಮನ್ಮಥವಿಕಾರಕ್ಕೀಡಾದ ಸುಂದರೇಶ್ವರನೂ ಬುದ್ಧಿಮಾಂದ್ಯವುಳ್ಳವನಾದನು. ॥೪೦-೪೧॥

ಮೃದುಸ್ವಭಾವದವಳಾದ ಸಾಗರಿಕೆಗೆ ಉಂಟಾದ ಮನ್ಮಥಪೀಡೆಯನ್ನು ಯಾರಿಂದತಾನೇ ವರ್ಣಿಸಲು ಸಾಧ್ಯವಾದೀತು ? ಅವಳೂ ಸುಂದರನ ಸೌಂದರ್ಯವನ್ನು ನೋಡುವುದರಿಂದುಂಟಾದ ಮನ್ಮಥಪ್ರಾದುರ್ಭಾವವುಳ್ಳವಳಾಗಿ ಗ್ರಹಚೇಷ್ಟೆಯಿಂದ ಆವೇಶಹೊಂದಿರುವಳೋ ಎಂಬಂತೆ ಮೆಲ್ಲಮೆಲ್ಲಗೆ ಹೆಜ್ಜೆಯನ್ನಿಡುತ್ತಾ ಮನೆಯನ್ನು ಸೇರಿದಳು. ॥೪೨-೪೩॥

ಆ ಸಾಗರಿಕೆಯು ತನ್ನ ಗೆಳತಿಯರೊಡನೆಯೂ ಸರಿಯಾಗಿ ಸಲ್ಲಾಪಮಾಡದೇ ಕೇವಲ ಆ ಸುಂದರನ ಧ್ಯಾನದಿಂದಲೇ ಪ್ರಜ್ಞಾಶೂನ್ಯಳಾಗಿ ಒಂದು ಎತ್ತರವಾದ ಉಪ್ಪರಿಗೆಯನ್ನೇರಿದಳು. ಅಲ್ಲಿ ದೊಡ್ಡ ರತ್ನಗಳಿಂದ ನಿರ್ಮಿತವಾಗಿ ಬೆಳದಿಂಗಳಂತೆ

ತತೋಽಂತಿಕಸ್ಥಿತಾಂ ಕಾಂಚಿಚ್ಚೇಟಿಕಾಮಬ್ರವೀದ್ವಚಃ ।
ನಿತರಾಂತರ್ಯನಿಶ್ವಾಸಗ್ಲಪಿತಾಧರಪಲ್ಲವಾ ॥೪೬॥

ನಿಷೇವಿತುಂ ನೀಲಕಂಠಂ ಮಯಾ ಯಾಂತ್ಯಾ ನಿರೀಕ್ಷಿತಃ ।
ಕುಮಾರಃ ಕೋಟಿಮಾರಾಭಃ ಕಿಂ ತ್ವಯಾ ವಿದಿತಃ ಪುರಾ ॥೪೭॥

ತಯೈವಮುಕ್ತಾ ಸಾ ಪ್ರಾಹ ಸ ನಾಮ್ನಾ ಸುಂದರಃ ಕಿಲ ।
ಶಂಕರಸ್ಯ ಸಖಾ ತೇನ ಬಲವತ್ಕಿಂಕರೀಕೃತಃ ॥೪೮॥

ಇತ್ಯುಕ್ತಾ ಸಾ ಚ ತಂ ಸ್ಮೃತ್ವಾ ಗುಣಪ್ರೇಮ್ಣಾತಿವಿಹ್ವಲಾ ।
ಕೃತಶೀತೋಪಚಾರಾಪಿ ಸ್ಮರಾರ್ತಾ ಪರ್ಯತಪ್ಯತ ॥೪೯॥

ಹಿಮಾಂಬುಚಂದನರಸೈಃ ಪ್ರೇರಿತೈಃ ಸುಸಖೀಜನೈಃ ।
ತಸ್ಯಾಃ ಸ್ಮರಾಗ್ನಿಜ್ವಾಲಾಯಾಃ ಪ್ರಾಚ್ಯೈರಾಜ್ಯಾಯಿತಂ ತದಾ ॥೫೦॥

---

ಸ್ವಚ್ಛವಾದ ಬಟ್ಟೆಯ ಮೇಲ್ಕಟ್ಟುಳ್ಳ ಪುಷ್ಪಮಯವಾದ ಹಾಸಿಗೆಯಲ್ಲಿ,ಶ್ರಾಂತಳಾದಂತೆ ಕುಳಿತುಕೊಂಡಳು. ಅನಂತರ ತನ್ನ ಸಮೀಪದಲ್ಲಿದ್ದ ಒಬ್ಬ ಚೇಟಿಯನ್ನು ಕರೆದು ಅತಿರಹಸ್ಯವಾಗಿ ತನ್ನ ಮನಸ್ಸಿನ ಅಭಿಪ್ರಾಯವನ್ನು ಸೂಚಿಸುವ ನಿಟ್ಟುಸುರಿನಿಂದ ನಡುಗುತ್ತಾ ಕಾಂತಿಗುಂದಿ ಚಿಗುರಿನಂತಿರುವ ತುಟಿಯುಳ್ಳವಳಾಗಿ ಇಂತೆಂದಳು. ||೪೪-೪೫-೪೬||

ಸಖಿ, ನಾನು ಆ ಮಹೇಶ್ವರನನ್ನು ಸೇವೆಮಾಡಲು ಹೋಗುತ್ತಿದ್ದಾಗ ದಾರಿಯಲ್ಲಿ ಕಂಡ ಕೋಟಿಮನ್ಮಥಸಮಾನಕಾಂತಿಯುಳ್ಳ ಕುಮಾರನನ್ನು ಮತ್ತೆ ನೀನು ಎಲ್ಲಾದರೂ ನೋಡಿದೆಯಾ? ಎಂದು ನಾಗರಿಕೆಯು ಸಖಿಯನ್ನು ಕೇಳಲು, ಆಗ ಆ ಮಾತನ್ನು ಕೇಳಿದ ಸಖಿಯು, ಅವನ ಹೆಸರು ಸುಂದರನೆಂದೂ, ಅವನು ಶಂಕರನ ನಿಜವಾದ ಭಕ್ತನೆಂದೂ, ಅವನು ಶಿವನಿಂದ ಬಲಾತ್ಕಾರವಾಗಿ ಸೇವಕನಾಗಿ ಮಾಡಲ್ಪಟ್ಟಿದ್ದಾನೆಂದೂ ಹೇಳಿದಳು. ||೪೭-೪೮||

ಹೀಗೆ ಸಖಿಯಿಂದ ಹೇಳಲ್ಪಟ್ಟ ಆ ನಾಗರಿಕೆಯು ಸುಂದರನನ್ನು ಸ್ಮರಿಸಿಕೊಂಡು ಅವನ ಗುಣಗಳಲ್ಲಿನ ಪ್ರೇಮದಿಂದ ಕಾತರಳಾಗಿ ಅನೇಕ ಶೈತ್ಯೋಪಚಾರವನ್ನು ಪಡೆದಾಗ್ಯೂ, ಮನ್ಮಥಪೀಡಿತಳಾದ ಅವಳು ಹೆಚ್ಚಿನ ಪರಿತಾಪ ಹೊಂದಿದಳು. ಅವಳ ಸಖಿಯರು ಹಿಮದ ನೀರು, ಚಂದನರಸಗಳನ್ನು ಅವಳ ಮೇಲೆ ಎರಚಿ

ತಸ್ಯಾಂ ಹಿಮಾಂಬುಸಿಕ್ತಾನಿ ಕುಸುಮಾನಿ ಸಖೀಜನಃ ।
ಅವಾಕಿರಂಚಾನ್ನಭೂವನ್ಮನೋಭವವಿಷಾಶುಗಾಃ ॥೫೧॥

ಉತ್ಥಾಯ ಸಾ ಮಯೂರೀವ ಶ್ಲಥಕೇಶಕಲಾಪಿನೀ ।
ಮುಖಂ ನಮಯ್ಯ ಬಿಂಬೋಷ್ಠಂ ವಚೋ ನಿರ್ಲಕ್ಷ್ಯಮಬ್ರವೀತ್ ॥೫೨

ಕಿಮಿದಂ ಮಮ ಶೀತಾಂಶುಃ ಸಖ್ಯಃ ಕಲ್ಪಾನಲಾಯತೇ ।
ಮಂದಾನಿಲಾಂಕುರಸ್ತಸ್ಯ ಸಹಾಯೋ ಭವತಿ ಸ್ವಯಂ ॥೫೩॥

ಏವಂ ವಿಧಾಂ ನ ಮಾಂ ವೇತ್ತಿ ಚಂದ್ರಶೇಖರ ಕಿಂಕರಃ ।
ಕಿಂ ಕರೋಮಿ ದಯಾನಾಥ ಸ ಕರೋತಿ ದಯಾನಿಧಿಃ ॥೫೪॥

ಇತಿ ಬ್ರುವಾಣಾ ತಾಂ ತ್ಯಕ್ತ್ವಾ ಶಯನಾನ್ಮುಹುರುತ್ಥಿತಾ ।
ಪತಂತೀ ನಿಶ್ವಸಂತೀ ಚ ಕಾಮಾರ್ತಿಂ ಸೋಢುಮಕ್ಷಮಾ ॥೫೫॥

---

ದಾಗ್ಯೂ ಅವಳ ಮನ್ಮಥಾಗ್ನಿಯ ಜ್ವಾಲೆಗೆ ಹೆಚ್ಚುತುಪ್ಪ ಸುರಿದಂತಾಯಿತೇ ವಿನಾ ಪ್ರಯೋಜನವಾಗಲಿಲ್ಲ. ಗೆಳತಿಯರು ಮಂಜಿನ ನೀರಿನಲ್ಲಿ ನೆನಸಿ ಎಸೆದ ಹೂಗಳು ಆ ಸಾಗರಿಕೆಗೆ ಮನ್ಮಥನ ವಿಷಸಿಕ್ತವಾದ ಬಾಣಗಳಂತೆ ತುಂಬಾ ವ್ಯಥೆಯನ್ನುಂಟು ಮಾಡಿದವು. ॥೪೯-೫೦-೫೧॥

ಆ ಸಾಗರಿಕೆಯು ಮೇಲೆದ್ದು ಗರಿಗೆದರಿದ ಹೆಣ್ಣುನವಿಲಿನಂತೆ ಬಿಚ್ಚಿಹೋದ ತಲೆಗೂದಲುಳ್ಳವಳಾಗಿ, ತೊಂಡೆಹಣ್ಣಿನಂತಿರುವ ತುಟಿಯುಳ್ಳ ತನ್ನ ಮುಖವನ್ನು ತಗ್ಗಿಸಿ ನಿರ್ಲಕ್ಷ್ಯವಾಗಿ ತನ್ನ ಸಖಿಯೊಡನೆ ಹೀಗೆ ಮಾತನಾಡಿದಳು. ಎಲೌ ಸಖಿಗಳಿರಾ, ಇದೇನಾಶ್ಚರ್ಯ! ಅಮೃತಕಿರಣನಾದ ಚಂದ್ರನು ನನಗೆ ಕಲ್ಪಕಾಲದ ಅಗ್ನಿಯಂತೆ ಸುಡುತ್ತಿರುವನಲ್ಲಾ! ಮಲಯಮಾರುತನೂ ಸಹ ಅವನಿಗೆ ಸಹಾಯಕನಾಗಿ ನನ್ನನ್ನು ಪೀಡಿಸುತ್ತಿರುವನು. ಆ ಚಂದ್ರಚೂಡನ ಸೇವಕನಾದ ಸುಂದರನು ನಾನು ಈ ಅವಸ್ಥೆಯಲ್ಲಿರುವುದನ್ನು ಹೇಗೆ ತಿಳಿಯಬಲ್ಲನು? ಎಲೈ ದಯಾನಾಥ ಸ್ವಾಮಿಯೇ, ಏನುಮಾಡಲಿ, ಕೃಪಾನಿಧಿಯಾದ ನೀನೇನೂ ನನ್ನ ವಿಷಯದಲ್ಲಿ ದಯೆ ತೋರಿಸುವುದಿಲ್ಲವೇ? ॥೫೨-೫೩-೫೪॥

ಎಂದು ಹೇಳುತ್ತಾ ಸಖಿಯನ್ನು ಬಿಟ್ಟು ಹಾಸಿಗೆಯಿಂದ ಮೇಲಕ್ಕೆ ಪದೇ ಪದೆ ಏಳುತ್ತಲೂ ಕೆಳಗೆ ಬೀಳುತ್ತಲೂ, ನಿಟ್ಟುಸುರನ್ನು ಬಿಡುತ್ತಲೂ, ಮನ್ಮಥಪೀಡೆ

ತ್ರಿಯಾಮಾ ಸಾ ತಯೋರೇವಂ ಸಾಭವದ್ವಿರಹಾರ್ತಯೋಃ ।
ತಸ್ಯಾಃ ಸಾಗರಿಕಾಯಾಶ್ಚ ಸುಂದರೇಶಸ್ಯ ತಸ್ಯ ಚ ॥೫೬॥

ತಯೋಸ್ತು ಚರಮೇ ಯಾಮೇ ಕ್ಷಣಸಂಜಾತನಿದ್ರಯೋಃ ।
ಸ್ವಪ್ನೇ ಪ್ರಾಹ ಶಿವೋಽಸ್ಯಸ್ತು ವಿವಾಹೋ ಯುವಯೋರಪಿ ॥೫೭॥

ಸೇಯಂ ಸಾಗರಿಕಾ ಕನ್ಯಾ ಮದ್ಭಕ್ತಾಯ ಮಹಾತ್ಮನೇ ।
ಸುಂದರೇಶಾಯ ದೇಯೇತಿ ಸ್ವಪ್ನೇ ಪೌರಾನ್ ಜಗಾದ ಚ ॥೫೮॥

ತರುಣೇಂದುಧರಃ ಸ್ವಪ್ನೇ ಕರುಣಾಖ್ಯಾರುಣೋದಯಾತ್ ।
ವಿರರಾಮ ತಯೋರೀಷದ್ವಿರಹಪ್ರಭವಂ ತಮಃ ॥೫೯॥

ಪೂರ್ವಂ ವಿಘ್ನಿತಸೌಮ್ಯೇಶ ವಿವಾಹಾಲೋಕನಾದರಃ ।
ತಂ ದ್ರಷ್ಟುಮಿವ ನಿರ್ವಿಘ್ನಮುದಿಯಾಯ ದಿವಾಕರಃ ॥೬೦॥

ತತಃ ಪ್ರಭಾತೇ ಪೌರಾಸ್ತೇ ಜ್ಞಾತ್ವಾ ಸ್ವಪ್ನಂ ಶಿವೋದಿತಂ ।
ಮುಹೂರ್ತಂ ಕಲ್ಪಯಾಮಾಸುರ್ಮೌಹೂರ್ತಿಕವರೋದಿತಂ ॥೬೧॥

ಯನ್ನು ಸಹಿಸಲಾರದೇ ಇದ್ದಳು. ವಿರಹಿತರಾದ ಆ ಸುಂದರ ಮತ್ತು ಸಾಗರಿಕೆಯು ರಿಬ್ಬರಿಗೂ ಇದೇ ಅವಸ್ಥೆಯಿಂದ ರಾತ್ರಿಯಲ್ಲಿ ಮೂರು ಜಾವಗಳು ಕಳೆದುವು. ಅನಂತರ ನಾಲ್ಕನೆಯ ಜಾವದಲ್ಲಿ ಅವರಿಬ್ಬರೂ ಕ್ಷಣಕಾಲ ನಿದ್ರಾಸುಖವನ್ನು ಪಡೆ ಯುತ್ತಿದ್ದಾಗ ಅವರಿಬ್ಬರಿಗೂ ಕನಸಿನಲ್ಲಿ ಪರಶಿವನು, 'ನಿಮ್ಮಿಬ್ಬರಿಗೂ ವಿವಾಹ ವಾಗಲಿ' ಎಂದು ಹೇಳಿದಂತಾಯಿತು. ||೫೫-೫೬-೫೭||

ಅಲ್ಲದೆ ಈ ಸಾಗರಿಕೆಯೆಂಬ ಕನ್ಯೆಯನ್ನು ನನ್ನ ಭಕ್ತನೂ ಮಹಾತ್ಮನೂ ಆದ ಸುಂದರೇಶನಿಗೆ ಕೊಟ್ಟು ವಿವಾಹಮಾಡಬೇಕೆಂದು ಆ ಪಟ್ಟಣದ ಜನಗಳಿಗೂ ಸ್ವಪ್ನದಲ್ಲಿ ಹೇಳಿದಂತಾಯಿತು. ಕನಸಿನಲ್ಲಿ ಬಾಲಚಂದ್ರಚೂಡನಾದ ಆ ಮಹಾದೇವನ ದಯೆಯೆಂಬ ಅರುಣನು ಉದಯಿಸಲು, ಆ ಸುಂದರ ಮತ್ತು ಸಾಗರಿಕೆಯರಿಗೆ ಕೂಡಲೆ ವಿರಹವೆಂಬ ಅಂಧಕಾರವು ತೊಲಗಿತು. ಹಿಂದೆ ಸೌಮ್ಯಸ್ವರೂಪನಾದ ಈ ಸುಂದ ರೇಶನ ವಿವಾಹವನ್ನು ನೋಡಲು ಅಡಚಣೆಹೊಂದಿ ಅಸ್ತಮಿತನಾಗಿದ್ದ ಸೂರ್ಯನು ಆಗ ನಿರ್ವಿಘ್ನವಾಗಿ ನೋಡಲು ಆದರವುಳ್ಳವನೋ ಎಂಬಂತೆ ಮತ್ತೆ ಉದಯಿಸಿದನು. ||೫೮-೫೯-೬೦||

ಬೆಳಗಾದ ಮೇಲೆ ಆ ಪಟ್ಟಣಿಗರೆಲ್ಲರೂ ಶಿವನಿಂದ ಆಜ್ಞಾಪಿಸಲ್ಪಟ್ಟ ಕನಸಿನ

ತಸ್ಯಾಃ ಸಾಗರಿಕಾಯಾಶ್ಚ ಸುಂದರೇಶಸ್ಯ ತಸ್ಯ ಚ ।
ವಿವಾಹಂ ಕಾರಯಾಮಾಸುರ್ವಿಭವೇನ ಮಹೀಯಸಾ ॥೬೨॥

ಕೃತೋದ್ವಾಹೋ ಯಥಾ ಕಾಮಂ ಸುಂದರೇಶಸ್ತಯಾ ಸಹ ।
ರತ್ಯಾ ಕಾಮ ಇವಾನೇಕಾನ್ವಿಷಯಾನನ್ವಭೂತ್ತದಾ ॥೬೩॥

ಶಿವಂ ಸ್ತುವಂಸ್ತದಾ ಚಿತ್ತೇ ಧೃತತತ್ಪಾದಪಂಕಜಃ ।
ಸೌಮ್ಯಃ ಸಾಗರಿಕೋಪೇತೋ ವಿಜಹಾರ ವಿಲಾಸವಾನ್ ॥೬೪॥

ಕದಾಚಿದ್ದೇವದೇವೇಶಂ ಸರ್ವದೇವನಮಸ್ಕೃತಂ ।
ನಮಸ್ಕರ್ತುಂ ಮನಶ್ಚಕ್ರೇ ಸಭಕ್ತೈಃ ಸಹ ಸುಂದರಃ ॥೬೫॥

ಪರಿಧಾಯ ನವಂ ವಾಸೋ ಮಾನನೀಯಃ ಸುರೈರಪಿ ।
ಚರ್ಚಿತಃ ಕುಂಕುಮರಸೈರತಃ ಕಲ್ಹಾರಚೂಲಿಕಃ ॥೬೬॥

---

ಅಭಿಪ್ರಾಯವನ್ನು ತಿಳಿದು ಪ್ರಸಿದ್ಧರಾದ ಜ್ಯೌತಿಷಿಕರಿಂದ ನಿಷ್ಕರ್ಷಿಲ್ಪಟ್ಟ ಒಳ್ಳೆಯ ಮುಹೂರ್ತದಲ್ಲಿ ಆ ಸಾಗರಿಕೆ ಮತ್ತು ಸುಂದರೇಶರಿಗೆ ಅತ್ಯಂತ ವೈಭವದಿಂದ ವಿವಾಹಕರ್ಮವನ್ನು ನೆರವೇರಿಸಿದರು. ॥೬೧-೬೨॥

ಹಾಗೆ ವಿವಾಹಿತನಾದ ಆ ಸುಂದರನು ಸಾಗರಿಕೆಯೊಡನೆ ಯಥೇಚ್ಛವಾಗಿ ವಿಹರಿಸುತ್ತಾ, ರತಿಯೊಡನೆ ವಿಹರಿಸುವ ಮನ್ಮಥನಂತೆ, ಅನೇಕವಿಷಯಭೋಗಗಳನ್ನನುಭವಿಸಿದನು. ಮತ್ತು ಪ್ರತಿದಿನವೂ ಪರಶಿವನನ್ನು ಮನಸಾ ಸ್ತೋತ್ರ ಮಾಡುತ್ತಾ ಮನಸ್ಸಿನಲ್ಲಿ ಆ ಪರಶಿವನ ಪಾದಕಮಲಗಳನ್ನಿರಿಸಿಕೊಂಡು, ಸೌಮ್ಯ ಸ್ವರೂಪನೂ ವಿಲಾಸಿಯೂ ಆದ ಸುಂದರನು ಸಾಗರಿಕೆಯೊಡನೆ ಸುಖವಾಗಿ ಸಂಚರಿಸಿದನು. ಒಂದು ದಿನ ಸಕಲ ದೇವತೆಗಳಿಂದಲೂ ನಮಸ್ಕೃತನಾಗಿರುವ ದೇವತೋತ್ತಮನೆನಿಸಿದ ಪರಶಿವನಿಗೆ ಭಕ್ತಿಯಿಂದ ನಮಸ್ಕಾರಮಾಡಲು ತನ್ನ ಭಕ್ತರೊಡನೆ ಮನಸ್ಸುಮಾಡಿದನು. ॥೬೩-೬೪-೬೫॥

ಆಗ ದೇವತೆಗಳಿಗೂ ಮಾನನೀಯನಾದ ಆ ಸುಂದರನು ಹೊಸ ಬಟ್ಟೆಯನ್ನು ಧರಿಸಿ, ಕುಂಕುಮಚಂದನ ರಸಗಳಿಂದ ಲೇಪಿತನಾಗಿ, ಕಲ್ಹಾರಪುಷ್ಪವನ್ನು ತಲೆಯಲ್ಲಿ ಅಲಂಕರಿಸಿಕೊಂಡು ಕೈಯಲ್ಲಿ ಚಿನ್ನದ ಬೆತ್ತವನ್ನು ಹಿಡಿದು ಹಣೆಯಲ್ಲಿ ಸ್ಫುಟವಾಗಿರುವ ಭಸ್ಮತ್ರಿಪುಂಡ್ರಾಂಕಿತನಾಗಿ, ಅಲುಗಾಡುತ್ತಿರುವ ಚಿನ್ನದ ಕರ್ಣಾಭರಣವುಳ್ಳವ

ಕರೇ ವಹನ್ಹೇಮವೇತ್ರಂ ಫಾಲೋತ್ಕೀರ್ಣತ್ರಿಪುಂಡ್ರಕಂ ।
ಚಂಚತ್ಕಾಂಚನತಾಟಂಕೋ ವಕ್ಷಃ ಶ್ಲಕ್ಷ್ಣಗುಣತ್ರಯಃ ॥೬೭॥

ಆಪ್ತೈಃ ಪರಿವೃತೋ ಭಕ್ತೈಃ ಕಮಲಾಲಯ ಶಂಕರಃ ।
ಸರ್ವತೋಮುಖಮಾಹಾತ್ಮ್ಯೋ ನಿರಗಾಯ ನಿಕೇತನಾತ್ ॥೬೮॥

ಗೌರವಾದ್ಬಲವದ್ದಾಸೀ ಭೂಸುರಾಣಾಂ ಪುರಸ್ಸರಃ ।
ಇತಿ ಸಾಗರಿಕಾನಾಥಂ ಪ್ರಶಂಸನ್ಪ್ರಣಮನ್ ಜನಃ ॥೬೯॥

ವೀಥ್ಯಾಂ ಸ್ಥಿತ್ವಾ ಮುಹುಃ ಶೃಣ್ವನ್ಜನಕೋಲಾಹಲಂ ಪರಂ ।
ಕಪಿಕುಕ್ಕುಟಮೇಷಾದಿರಣಕರ್ಮ ವಿಲೋಕಯನ್ ॥೭೦॥

ವೃತಃ ಕದಾಚಿತ್ತಾಂಬೂಲಂ ಛತ್ರಚಾಮರಕಾದಿಭಿಃ ।
ಹಯಮುಖ್ಯೇನ ಚಾಯಾತಸ್ವರ್ಣಪರ್ಯಂಕಚಾರುಣಾ ॥೭೧॥

ಕವಿರಾಜಕಲಾನಾಥಃ ಶಿವಶ್ರೀಪಾದಶೇಖರಃ ।
ಆದಿದೇಶಿಕಶೈವಾನಾಂ ಶೈವಾಗಮಧುರಂಧರಃ ॥೭೨॥

---

ನಾಗಿ, ವಕ್ಷಸ್ಥಳದಲ್ಲಿ ಸತ್ವರಜಸ್ತಮೋಗುಣಗಳೆಂಬ (ಮೂರು) ತ್ರಿವಳಿಗಳಿಂದ ಶೋಭಿಸುತ್ತಾ, ಕಮಲಾಲಯಕ್ಕೆ ಮಂಗಳವನ್ನುಂಟುಮಾಡುವ ಆ ಸುಂದರೇಶನು ಆಪ್ತರಾದ ಭಕ್ತರೊಡನೆ ಎಲ್ಲರಿಂದಲೂ ಶ್ಲಾಘಿಸಲ್ಪಡುವ ಮಹಿಮೆಯುಳ್ಳವನಾಗಿ ತನ್ನ ಮನೆಯಿಂದ ಹೊರಟನು. ||೬೬-೬೭-೬೮||

ಗೌರವ ಪೂರ್ವಕವಾಗಿ, ದಾಸದಾಸಿಯರಿಂದಲೂ ಬ್ರಾಹ್ಮಣರೊಡನೆಯೂ ಹೊರಹೊರಟ ಆ ಸಾಗರಿಕಾರಮಣನಾದ ಸುಂದರನನ್ನು ಜನಗಳು ಹೊಗಳುತ್ತಾ ನಮಸ್ಕಾರಮಾಡುತ್ತಿದ್ದರು. ಸುಂದರನು ಪ್ರಯಾಣಮಾಡುವಾಗ ಮಾರ್ಗಮಧ್ಯದಲ್ಲಿ ಅಲ್ಲಲ್ಲೇ ನಿಂತುಕೊಂಡು ಜನಗಳ ಕೋಲಾಹಲವನ್ನು ಕೇಳುತ್ತಾ, ಕಪಿ, ಕೋಳಿ ಮತ್ತು ಆಡುಗಳ ಕಾಳಗಗಳನ್ನು ಉತ್ಸಾಹದಿಂದ ಅವಲೋಕನಮಾಡುತ್ತಾ ಮುಂದುವರಿಯುತ್ತಿದ್ದನು. ||೬೯-೭೦||

ಒಂದೊಂದುಸಾರಿ ತಾಂಬೂಲವನ್ನು ಹಾಕಿಕೊಳ್ಳುತ್ತಲೂ, ಛತ್ರಿ ಚಾಮರ ಮುಂತಾದುವುಗಳಿಂದ ಪರಿವೃತನಾಗಿ, ಉತ್ತಮವಾದ ಕುದುರೆಯ ಮೇಲೆ ಹಾಕಿರುವ ಚಿನ್ನದಬಣ್ಣದ ಜೀನಿನ ಮೇಲೆ ಮಂಡಿಸಿ ಪ್ರಯಾಣಮಾಡುವನು. ಆಗ ಸುಂದರನು

ಶ್ರೀಮಜ್ಜಂಬುಪುರಾಕಲ್ಪಕೆಮಲಾಲಯಶಂಕರಃ ।
ಜಯೇತಿ ಪುರತಃ ಶಶ್ವತ್ಸ್ಫೂರ್ಜದ್ವಿರುತಕಾಹಲಃ ॥೭೩॥

ಕಾಂತ್ಯಾ ನೇತ್ರೋತ್ಸವಂ ಕುರ್ವನ್ಸುಂದರೀಣಾಂ ಸ ಸುಂದರಃ ।
ಪರಿತಃ ಸೇವಿತೋ ವಿಪ್ರಃ ಶಂಭೋಃ ಶ್ರೀಗೋಪುರಂ ಯಯೌ ॥೭೪॥

ತಂ ನತ್ವಾ ಪ್ರಾವಿಶದ್ಭಕ್ತಃ ಪ್ರಾಪ್ಯ ದೇವಾಶ್ರಯಸ್ಥಿತಾನ್ ।
ನತ್ವಾನನ್ಯಸಮಾನ್ಭಕ್ತಾನ್ತದ್ವೈಷಾಂ ಕಿಂಕರೋಽಸ್ಮ್ಯಹಂ ॥೭೫॥

ಸ್ಯಾದ್ಭೃತ್ಯಭೃತ್ಯ ಇತ್ಯೇತ್ಯ ದ್ವಾರಂ ಗರ್ಭಗೃಹಸ್ಯ ಸಃ ।
ಸುರಾರ್ಚಿತಂ ತದಭ್ಯರ್ಚ್ಯ ಶಂಭೋರಭ್ಯಂತರಂ ಯಯೌ ॥೭೬॥

ಪೂರ್ವಂ ದೃಷ್ಟ ಇತಿ ದೃಷ್ಟ್ವಾ ಸಾತ್ಮೇಶಂ ಚಂದ್ರಶೇಖರಂ ।
ಸಾನಂದಬಾಷ್ಪರೋಮಾಂಚಃ ಪ್ರಾಣಂಸೀತ್ಪಾದಯೋಃ ಪ್ರಭೋಃ ॥೭೭॥

---

ಕವಿರಾಜರ ಕಲೆಗಳಿಗೆಲ್ಲಾ ಒಡೆಯನಂತೆಯೂ, ಶಿವನ ಶೋಭಾಯಮಾನವಾದ ಪಾದಗಳನ್ನು ತಲೆಯಲ್ಲಿರಿಸಿದವನಂತೆಯೂ, ಶೈವರಿಗೆಲ್ಲಾ ಆದಿಗುರುವಾಗಿಯೂ, ಶೈವಾಗಮಪಾರೀಣನಾಗಿಯೂ, ಶ್ರೀಮಜ್ಜಂಬುಪುರಕ್ಕೆ ಸಮಾನವಾದ ಕಮಲಾಲಯ ಕ್ಷೇತ್ರಾಧಿಪತಿಯಾದ ಶಿವನಂತೆಯೂ ಕಂಗೊಳಿಸುತ್ತಿದ್ದನು. ಇಂತಹ ಆ ಸುಂದರನು ತನ್ನ ಮುಂದುಗಡೆ ಪದೇ ಪದೇ ಜಯಜಯಧ್ವನಿಮಾಡುತ್ತಾ ಎಲ್ಲೆಡೆಗಳಲ್ಲಿಯೂ ವ್ಯಾಪಿಸಿದ ಕೋಲಾಹಲಧ್ವನಿಯುಳ್ಳವನಾಗಿ ತನ್ನ ದೇಹಕಾಂತಿಯಿಂದ ಸುಂದರಿಯರಿಗೆಲ್ಲಾ ನೇತ್ರಾನಂದವನ್ನುಂಟುಮಾಡುತ್ತಾ, ಸುತ್ತಲೂ ಜನಗಳಿಂದ ಪರಿವೃತನಾಗಿ ಆ ಶಂಭುವಿನ ಶ್ರೀಗೋಪುರಕ್ಕೆ ಪ್ರಯಾಣಮಾಡಿದನು. ॥೭೧-೭೨-೭೩-೭೪॥

ಅಲ್ಲಿ ಪರಮೇಶ್ವರನಿಗೆ ನಮಸ್ಕಾರ ಮಾಡಿ, ಆ ಭಕ್ತನು ಮಹಾದೇವನ ತೇಜಸ್ಸಿನಿಂದ ಶೋಭಿಸುತ್ತಿದ್ದ ತತ್ಸಮಾನರಾದ ಭಕ್ತರನ್ನೆಲ್ಲಾ ಪುನಃಪುನಃ ವಂದಿಸಿ, ಯಾವಾಗ ನಾನು ಇವರಿಗೆ ಸೇವಕನಾಗುತ್ತೇನೋ, ಮಹಾದೇವನ ಭಕ್ತರೆನಿಸಿದ ಶೈವವರ್ಯರ ಸೇವೆ, ಎಂದು ನನಗೆ ಲಭಿಸುವುದೋ ಎಂದು ಚಿಂತಿಸುತ್ತಾ, ಗರ್ಭಗುಡಿಯ ಬಾಗಿಲಿಗೆ ಬಂದು ಸಕಲ ಸುರಪೂಜಿತನಾದ ಪರಶಿವಲಿಂಗಕ್ಕೆ ನಮಸ್ಕರಿಸಿ, ಆ ಶಂಭುವಿನ ಗರ್ಭಗುಡಿಯ ಬಳಿಗೆ ಹೋದನು. ॥೭೫-೭೬॥

ಎಲ್ಲಕ್ಕೂ ಮೊದಲು ಮನಸಾ ಅನುಸಂಧಾನಮಾಡಿರುವ ಯೋಗಿಯಂತೆ ಸುಂದರನು ತನ್ನ ಮನಸ್ಸಿಗೆ ಒಡೆಯನಾದ ಚಂದ್ರಶೇಖರನನ್ನು ನೋಡುತ್ತಾ,

ನತ್ವಾ ಚ ನಿಹಿತಾತ್ಮಾ ಚ ಸೌಮ್ಯೋಽಸ್ತಾವೀಚ್ಚ ತತ್ಪದೇ ।
ಯದ್ದೇವತಾವೃತಂ ತಸ್ಮೈ ಪಾದಾಬ್ಜಾಯ ನಮೋಽಸ್ತು ತೇ ॥೭೮॥

ಯತ್ತಾಂಡವೋತ್ಸವಂ ತೇನ ಮಹಾಹೇಮ ಸಭಾಂತರೇ ।
ತಸ್ಮೈ ಕಾಲಸ್ಯ ಸಂಹರ್ತ್ರೇ ಪಾದಪದ್ಮಾಯ ತೇ ನಮಃ ॥೭೯॥

ದೇವ್ಯಾ ಸಂವಾಹ್ಯಮಾನಂ ಯತ್ಪುಣ್ಯಂ ಚ ಹೃದಿ ಯೋಗಿನಾಂ ।
ಅಂತರ್ಜ್ಯೋತಿರ್ಜ್ಯೋತಿಷಾಂ ಚ ಪಾದಪದ್ಮಾಯ ತೇ ನಮಃ ॥೮೦॥

ಯದವೀಕ್ಷಿತಮಾದ್ಯೇನ ಹಂಸೇನಾಪಿ ಚ ಪತ್ರಿಣಾ ।
ನಮಸ್ತೇ ಪಾದಪದ್ಮಾಯ ಶ್ರುತಿಮಾತಂಗಶೀರ್ಷಗ ॥೮೧॥

ನಾಥ ಷೋಢಾಪರಾಧಾನಾಂ ಯೋ ಮೇ ಮೋಹಾತ್ತಮೋಪಹಃ ।
ನಮಸ್ತೇ ಪಾದಪದ್ಮಾಯ ನಾವಂ ಸಂಸಾರವಾರಿಧೇಃ ॥೮೨॥

---

ಆನಂದಬಾಷ್ಪದಿಂದ ರೋಮಾಂಚಿತನಾಗಿ ಪ್ರಭುವಿನ ಪಾದಗಳಿಗೆ ಮತ್ತೆ ಮತ್ತೆ ನಮಸ್ಕಾರಮಾಡಿದನು. ನಮಸ್ಕರಿಸಿದ ಮೇಲೆ ಅವನಲ್ಲಿಯೇ ಮನಸ್ಸಿಟ್ಟು, ಅವನ ಪಾದದಲ್ಲಿ ಮಗ್ನನಾಗಿ, ಸೌಮ್ಯಮೂರ್ತಿಯೇ, ದೇವತೆಗಳಿಂದ ನಮಸ್ಕರಿಸಲು ವ್ಯಾಪ್ತವಾದ ಈ ನಿನ್ನ ಪಾದಕಮಲಗಳಿಗೆ ನಮಸ್ಕಾರ ಮಾಡುತ್ತೇನೆಂದು ಹೀಗೆ ಸ್ತೋತ್ರಮಾಡಿದನು. "ಮಹಾದೇವನೇ, ಮಹಾಹೇಮಸಭೆಯೊಳಗೆ (ಸುವರ್ಣ ಮಂಟಪದೊಳಗೆ) ತಾಂಡವನಾಟ್ಯವನ್ನು ನಡೆಸಿ, ಯಮನನ್ನೂ ನಿಗ್ರಹಿಸಿದ ನಿನ್ನ ಈ ಪಾದಕಮಲಗಳಿಗೆ ಪ್ರಣಾಮಮಾಡುತ್ತೇನೆ. ॥೭೭-೭೮-೭೯॥

ಪರಮ ಭಕ್ತಿಯುತಳಾದ ಪಾರ್ವತೀದೇವಿಯಿಂದ ಸೇವಿಸಲ್ಪಡುತ್ತಾ, ಯೋಗಿಗಳ ಮನಸ್ಸಿನಲ್ಲಿ ಸತ್ಯಸ್ವರೂಪವೆನಿಸಿರುವುದೂ, ಸಕಲ ತೇಜಸ್ಸುಗಳಿಗೂ ಅಂತರ್ಜ್ಯೋತಿಸ್ವರೂಪವೂ ಆದ ನಿನ್ನ ಪಾದ ಕಮಲಗಳಿಗೆ ನಮಸ್ಕಾರ. ಹಂಸ ವಾಹನನಾದ ಆದಿಬ್ರಹ್ಮನಿಂದ ಯಾವುದು ಪ್ರಥಮದಲ್ಲಿ ದರ್ಶನಮಾಡಲ್ಪಟ್ಟಿತೋ ಅಂತಹ ವೇದಗಳೆಂಬ ಆನೆಗಳ ತಲೆಯಮೇಲೆ ಸಂಚರಿಸುವ ನಿನ್ನ ಪಾದಪದ್ಮಗಳಿಗೆ ನಮಸ್ಕಾರ ಮಾಡುತ್ತೇನೆ. ಸ್ವಾಮಿ! ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯರೂಪವಾದ ನನ್ನಿಂದ ಮಾಡಲ್ಪಟ್ಟ ಅಜ್ಞಾನಜನ್ಯವಾದ ನನ್ನ ಅಪರಾಧಗಳನ್ನು ಕ್ಷಮಿಸು. ಸಂಸಾರಸಮುದ್ರವನ್ನು ದಾಟಿಸುವುದರಲ್ಲಿ ದೋಣಿ ಯಂತಿರುವ ನಿನ್ನ ಪಾದಕಮಲಗಳಿಗೆ ನಮಸ್ಕಾರ ಮಾಡುತ್ತೇನೆ" ॥೮೦-೮೧-೮೨॥

ಇತಿ ತೇನ ಸ್ತುತಃ ಪ್ರೀತಸ್ತಸ್ಯ ಜ್ಞಾತ್ವಾ ಮನೋಗತಂ ।
ತದ್ದಾತುಕಾಮಃ ಸೌಮ್ಯೇಶಂ ಪ್ರಾಹ ತಂ ಪಾರ್ವತೀಪತಿಃ ॥೮೩॥

ದದಾಮ್ಯಭಿಮತಂ ತೇ ಮದ್ಭೃತ್ಯಾನಾಂ ವ್ರಜ ಭೃತ್ಯತಾಂ ।
ತೇ ಧ್ಯಾತ್ವಾ ಸದೃಶಾತ್ಮಾನೋ ಲಬ್ಧ್ವಾ ಮಾಮಪಿ ನಿರ್ಮನಾಃ ॥೮೪॥

ನ್ಯೂನತಾದೋಷರಹಿತಾ ಮದ್ಧ್ಯಾನವಿಲಸತ್ಸುಖಾಃ ।
ವ್ರಜತಾಂ ಭರಣಂ ಜ್ಞಾನಂ ಮಯಾದತ್ತಂ ಸ್ತುತಿಕ್ಷಮಂ ॥೮೫॥

ಪರಂಪರಾತ್ವಂ ಭಕ್ತಾನಾಂ ಶ್ರದ್ಧಾಭಿಸ್ಸ್ತುಹಿ ಸೂಕ್ತಿಭಿಃ ।
ಇತ್ಯುಕ್ತಃ ಸುಂದರಸ್ತೇನ ಪುನಃ ಪ್ರಾಹ ಮಹೇಶ್ವರಂ ॥೮೬॥

ಆರಭ್ಯ ಸ್ತೌಮಿ ಕಿಂ ನಾಮ ಪ್ರಕಾರೇಣ ತು ಕೇನ ವಾ ।
ಕೋಽಹಮಿತ್ಯುದಿತೋ ದೇವಃ ಪ್ರಾಹೈನಂ ಪಂಚಭಿರ್ಮುಖೈಃ॥೮೭॥

---

ಹೀಗೆ ಸುಂದರನಿಂದ ಸ್ತೋತ್ರಮಾಡಲ್ಪಟ್ಟು ಸುಪ್ರೀತನಾದ ಪಾರ್ವತೀರಮಣನು ಅವನ ಅಭಿಪ್ರಾಯವನ್ನು ತಿಳಿದು, ಅದನ್ನು ಪೂರ್ಣಗೊಳಿಸಲು ಇಷ್ಟಪಟ್ಟು ಆ ಸೌಮ್ಯೇಶ್ವರನನ್ನು ಕುರಿತು ಇಂತೆಂದನು. ಎಲೈ ಸುಂದರನೇ ! ಈಗ ನಿನ್ನ ಇಷ್ಟಾರ್ಥವನ್ನು ಪೂರ್ಣಗೊಳಿಸುವೆನು. ನೀನು ನನ್ನ ಭಕ್ತರಿಗೆ ಸೇವಕನಾಗು ; ಇವರೆಲ್ಲರೂ ನನ್ನನ್ನು ಧ್ಯಾನಮಾಡಿ, ನನಗೆ ಸಮಾನವಾದ ರೂಪವನ್ನೇ ಹೊಂದಿ, ಅನನ್ಯಮನಸ್ಕರಾಗಿರುವರು ಯಾವ ನ್ಯೂನತೆ, ದೋಷಾದಿಗಳೂ ಇಲ್ಲದೆ ನನ್ನ ಧ್ಯಾನದಿಂದ ಸುಖಿಗಳಾಗಿ ಶೋಭಿಸುತ್ತಿರುವರು. ಈರೀತಿ ಸಂಚರಿಸುವವರಿಗೆ ನಾನು ಸ್ತೋತ್ರಯೋಗ್ಯವಾದ ಜ್ಞಾನವನ್ನೇ ರಕ್ಷಣೆಯನ್ನಾಗಿ ಅನುಗ್ರಹಿಸಿರುವೆನು. ||೮೩-೮೪-೮೫||

ನೀನೇ ಭಕ್ತರ ಪರಂಪರೆಗೆ ಆಶ್ರಯಭೂತನಾದವನು ; ಆದ್ದರಿಂದ ಶ್ರದ್ಧಾಯುಕ್ತವಾದ ಹಿತನುಡಿಗಳಿಂದ ಮಧುರವಚನಗಳಿಂದ ಸ್ತೋತ್ರಮಾಡು ; ಎಂದು ಪರಶಿವನು ಸುಂದರನಿಗೆ ಹೇಳಲು, ಸುಂದರನು ಮಹೇಶ್ವರನನ್ನು ಕುರಿತು ಪುನಃ ಇಂತೆಂದನು. ' ದೇವದೇವನೇ, ಯಾವರೀತಿ ಆರಂಭಿಸಿ, ಯಾವಪ್ರಕಾರದಿಂದ ನಿನ್ನ ನಾಮಗಳನ್ನು ನಾನು ಸ್ತೋತ್ರಮಾಡಲಿ? ನಿನ್ನನ್ನು ಸ್ತೋತ್ರಮಾಡಲು ನಾನು ಹೇಗಿರಬೇಕು ? ' ಎಂದು ಕೇಳಿಕೊಂಡಮೇಲೆ ಮಹಾದೇವನು ತನ್ನ ಐದು ಮುಖಗಳಿಂದಲೂ ಸುಂದರನನ್ನು ಕುರಿತು ಇಂತೆಂದನು. ||೮೬-೮೭||

ಶ್ರೀಮತ್ತಿಲ್ಲಪುರೀಭೂಷ್ಣುದ್ವಿಜಕಿಂಕರ ಕಿಂಕರಃ ।
ಅಸ್ಮೀತ್ಯಾರಭ್ಯ ನಿಃಸೀಮಮಹಾತ್ಮ್ಯಾನ್ ಸ್ತುತಿಮತ್ಪರಾನ್ ॥೮೮॥

ಇತ್ಯಾಜ್ಞಾಂ ದೇವದೇವಸ್ಯ ಸುಂದರಃ ಶಿರಸಾ ವಹನ್ ।
ತದ್ಭಕ್ತಾನ್ದೂರತೋ ದೃಷ್ಟ್ವಾ ಪ್ರಣನಾಮ ಪ್ರಹೃಷ್ಟಧೀಃ ॥೮೯॥

ತ್ವದ್ಭೃತ್ಯಭೃತ್ಯಭೃತ್ಯೋಽಸ್ಮೀತ್ಯಸ್ತಾವೀತ್ತಾನ್ಪೃಥಕ್ಪೃಥಕ್ ।
ಅಸ್ಮಾತ್ಸಂಘಾತರಂಗಸ್ಯ ಇತ್ಯಾಹಸ್ತೇಽಸ್ತು(?)ಶಾಶ್ವತೇ ॥೯೦॥

ಇತಿಸ್ತುತೋಽಸ್ತುತ ಏವ ಸುಂದರಃ
ಪುರೇ ಪುರಾರೇಃ ಕಮಲಾಲಯಾಹ್ವಯೇ ।
ಪ್ರಣಮ್ಯ ಗಾಯನ್ನನಿಶಂ ಸ ಭಕ್ತಿಮಾ
ನಿಹಾವಸತ್ಸಾಗರಿಕಾಸಖಃ ಸುಖೀ ॥೯೧॥

---

ಎಲೈ ಸುಂದರನೇ ! ಶ್ರೀಮತ್ತಿಲ್ಲಪುರಿಯಲ್ಲಿರುವ ಬ್ರಾಹ್ಮಣಸೇವಕರ ಕಿಂಕರನು ನಾನಾಗಿರುವೆನೆಂದು ಹೇಳುತ್ತಾ, ನನ್ನ ಸ್ತೋತ್ರದಲ್ಲಿ ಆಸಕ್ತರಾದ ಆ ಭಕ್ತವರ್ಯರನ್ನು ಎಲ್ಲೆಯಿಲ್ಲದ ಮಹಿಮೆಯುಳ್ಳವರೆಂದು ತಿಳಿದು ಸ್ತೋತ್ರಮಾಡೆಂದು ಪರಮೇಶ್ವರನು ಅಪ್ಪಣೆಕೊಡಲು, ಸುಂದರನು ದೇವದೇವನ ಅಪ್ಪಣೆಯನ್ನು ತಲೆಯಲ್ಲಿ ಹೊತ್ತು ನನ್ನ ಭಕ್ತರನ್ನು ದೂರದಿಂದಲೇ ನೋಡಿ, ಸಂತುಷ್ಟಾಂತರಂಗನಾಗಿ ನಮಸ್ಕರಿಸಿದನು. ಅನಂತರ ನನ್ನ (ಶಿವನ) ಭಕ್ತರ ಸಮೂಹವನ್ನು ಕಂಡು ಅವರನ್ನೆಲ್ಲಾ ಪ್ರತ್ಯೇಕ ಪ್ರತ್ಯೇಕವಾಗಿ ನಿಮ್ಮ ಭೃತ್ಯರ ಸೇವಕರಿಗೆ ನಾನು ಸೇವಕನಾಗಿರುವೆನೆಂದು ಭಕ್ತಿಯಿಂದ ಸ್ತೋತ್ರಮಾಡಿದನು. ಅನಂತರ ಅವರೂ ನಿನಗೆ ಶಾಶ್ವತವಾದ ಸ್ಥಿತಿಯುಂಟಾಗಲಿ ಎಂದು ಹರಸಿದರು. ॥೮೮-೮೯-೯೦॥

ಹೀಗೆ ಪರಶಿವಭಕ್ತರನ್ನು ಸ್ತುತಿಸಿ ತಾನೂ ಅವರಿಂದ ಸ್ತುತಿಸಲ್ಪಟ್ಟು, ಆ ಸುಂದರನು ತ್ರಿಪುರಾಂತಕನ ಕಮಲಾಲಯಕ್ಷೇತ್ರದಲ್ಲಿ ಮಹಾದೇವನಿಗೆ ಅನವರತವೂ ಭಕ್ತಿಯಿಂದ ನಮಸ್ಕರಿಸಿ, ಹಾಡುತ್ತಾ, ಸಾಗರಿಕೆಯೊಡನೆ ಸುಖವಾಗಿ ವಾಸಮಾಡತೊಡಗಿದನು. ॥೯೧॥

ನೈವಾರಿಮುಕ್ತಂ ಸಮವಾಪ್ಯ ಚಾಂತೇ
ಶಂಭೋಃ ಪದಾಬ್ಜೇ ಸ ವಿಲೀನ ಏವ ।
ತಯಾ ಸಹಾಯುಂ ಗಣಿಕಾಸಖಃ ಸುಖೀ
ಸ ಸುಂದರಃ ಸ್ವಸ್ಯ ನಿಜಂ ಕಲೇಬರಂ ॥೯೨॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಸುಂದರಭಕ್ತ
ಚರಿತ್ರವರ್ಣನೇ ಚತುರ್ವಿಂಶೋಽಧ್ಯಾಯಃ

---

ಹೀಗೆಯೇ ಕಮಲಾಲಯದಲ್ಲಿ ಶಿವನನ್ನು ಸೇವಿಸುತ್ತಾ ವೇಶ್ಯೆಯಾದ ನಾಗರಿಕೆಯೊಡನೆ ಸುಖವಾಗಿದ್ದು, ಆ ಸುಂದರನು ಕೊನೆಗಾಲದಲ್ಲಿ ತನ್ನ ನಿಜಶರೀರವನ್ನು ಬಿಡದೇ ತನ್ನ ಪ್ರೇಯಸಿಯೊಡನೆ ಆ ಶಂಭುವಿನ ಪಾದಕಮಲದಲ್ಲಿ ಐಕ್ಯನಾದನು, ಎಂದು ಜೈಗೀಷವ್ಯನಿಗೆ ಕುಮಾರಸ್ವಾಮಿಯು ಹೇಳಿದನು. ॥೯೨॥

ಇಂತು ಶ್ರೀಶಿವರಹಸ್ಯದ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ಸುಂದರ
ಭಕ್ತನ ಚರಿತ್ರೆಯ ವರ್ಣನೆಯಲ್ಲಿ ಇಪ್ಪತ್ತುನಾಲ್ಕನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಪಂಚವಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಪುನರನ್ಯತ್ಪ್ರವಕ್ಷ್ಯಾಮಿ ಚರಿತ್ರಂ ತೇ ಸಮಾಸತಃ ।
ಶೃಣು ತ್ವಂ ಶ್ರವಣಾನಂದಂ ಶಿವಭಕ್ತಮಹೋತ್ಸವಂ ॥೧॥

ಅಸ್ತಿ ಚೋಲಮಹೀಕಾಂತಾಕರ್ಪೂರತಿಲಕಾಯಿತಂ ।
ಪುಂಡರೀಕಪುರಂ ನಾಮ ಪುರಂ ಪುರಭಿದೋ ಮಹತ್ ॥೨॥

ಹೃತ್ಪುಂಡರೀಕಕಮಲಂ ವಿರಜಂ ಪುಷ್ಕರಸ್ಯ ಯತ್ ।
ದಹರೋಪಾಸನಾದಕ್ಷಧ್ಯೇಯತೇಜಃಕರಂಬಿತಂ ॥೩॥

---

## ಇಪ್ಪತ್ತೈದನೆಯ ಅಧ್ಯಾಯ

ಎಲೈ ಜೈಗೀಷವ್ಯನೆ, ಈಗ ಮತ್ತೊಂದು ಪುಣ್ಯಪ್ರದವಾದ ಪರಮೇಶ್ವರನ ಚರಿತ್ರೆಯನ್ನು ನಿನಗೆ ಸಂಗ್ರಹವಾಗಿ ಹೇಳುತ್ತೇನೆ. ಶ್ರವಣಾನಂದಕರವಾದ ಈಶ್ವರ ಭಕ್ತರ ಮಹೋತ್ಸವವನ್ನು ನೀನು ಸಾವಧಾನವಾಗಿ ಕೇಳು, ಚೋಲದೇಶವೆಂಬ ಕಾಂತೆಗೆ ಕರ್ಪೂರದ ತಿಲಕದಂತಿರುವ ತ್ರಿಪುರಾಸುರಸೂದಕನಾದ ಮಹಾದೇವನ ನೆಲೆಮನೆಯಾದ ಪುಂಡರೀಕಪುರವೆಂಬ ಒಂದು ದೊಡ್ಡ ಪಟ್ಟಣವಿರುವುದು. ॥೧-೨॥

ರಜಸ್ಸಿಲ್ಲದ ಹೃದಯವೆಂಬ ಕಮಲವು, ಎಲ್ಲಿ ದಹರಾಕಾಶವನ್ನು ಉಪಾಸನೆ ಮಾಡುವುದರಲ್ಲಿ ಸಮರ್ಥರಾದ ಜನಗಳಿಂದ ಧ್ಯಾನಯೋಗ್ಯವಾದ ತೇಜಸ್ಸಿನಿಂದ ಯುಕ್ತವಾಗಿರುವುದೋ, ಪ್ರಶಸ್ತವಾದ ಮಲ್ಲಿಕಾಬಳ್ಳಿಗಳಿಂದ ವ್ಯಾಪ್ತವಾದ ಸಮೀಪದ

ಮಲ್ಲೀವಲ್ಲೀಮತಲ್ಲೀಭಿರ್ವಲಿತೋಽಸಾಂತಕಾನನೇ ।
ಯಸ್ಮಿನ್ನಾತನುತಂ ನಾಟ್ಯಂ ಕ್ರೀಡಾನಟಶಿಖಾಮಣಿಃ ॥೪॥

ದರ್ಶಂ ದರ್ಶಂ ತದಾ ಶಂಭೋಃ ಪರಮಾನಂದತಾಂಡವಂ ।
ಆಸಾತೇ ಯತ್ರ ಶೃಣ್ವಂತೌ ವ್ಯಾಘ್ರಪಾದಪತಂಜಲೀ ॥೫॥

ಶ್ರೀಮದ್ಧೇಮಸಭಾಮಧ್ಯೇ ನೃತ್ಯಂತಂ ಚಂದ್ರಶೇಖರಂ ।
ವೇದಪಾದಾನ್ವಿತೈಃ ಸ್ತೋತ್ರೈರ್ಯತ್ರ ತುಷ್ಟಾವ ಜೈಮಿನಿಃ ॥೬॥

ಯತ್ರಾಸ್ತೇ ಜಗದಾಧಾರವಟಸ್ಯ ಸವಿಧಂ ಹರಃ ।
ಶ್ರೀಮೂಲಸ್ಥಾನಲಿಂಗಾತ್ಮಾ ಭವಪಾಶವಿಮೋಚಕಃ ॥೭॥

ತ್ರಿಕೂಟಸ್ಯ ಗಿರೇಃ ಶೃಂಗೇ ಕ್ವಚಿದ್ಧೇಮಸಭಾಸ್ತಿ ಚ ।
ತತ್ರ ಬ್ರಹ್ಮಾದಯಃ ಕ್ವಾಪಿ ಶ್ರೀಮೂಲಸ್ಥಾನನಾಯಕಃ ॥೮॥

---

ಕಾಡಿನಲ್ಲಿ ನಾಟ್ಯಶಿಖಾಮಣಿಯಾದ ಶಂಕರನು ಎಲ್ಲಿ ನಾಟ್ಯವಾಡಿದನೋ, ಪರಮಾನಂದಕರವಾದ ಶಂಭುವಿನ ತಾಂಡವನಾಟ್ಯವನ್ನು ನೋಡುತ್ತಾ ನೋಡುತ್ತಾ ಎಲ್ಲಿ ವ್ಯಾಘ್ರಪಾದ ಮತ್ತು ಪತಂಜಲಿ ಮುನಿಗಳು ಮಹೇಶನ ಸ್ತೋತ್ರಗಳನ್ನು ಕೇಳುತ್ತಿರುವರೋ, ಅಂತಹ ಪುಂಡರೀಕಪುರವು ಕ್ಷೇತ್ರಶ್ರೇಷ್ಠವೆಂದು ಪ್ರಸಿದ್ಧವಾಗಿದ್ದಿತು. ||೩-೪-೫||

ಸಂಪತ್ಕರವಾದ ಹೇಮಸಭೆಯ ಮಧ್ಯದಲ್ಲಿ ನಾಟ್ಯವಾಡುತ್ತಿದ್ದ ಚಂದ್ರಶೇಖರನನ್ನು ವೇದವಾಕ್ಯಗಳ ಪಾದಗಳಿಂದ ಕೂಡಿದ ವೇದಪಾದಸ್ತವಗಳಿಂದ ಜೈಮಿನಿಮುನಿಯು ವಿಧವಿಧವಾಗಿ ಸ್ತೋತ್ರಮಾಡಿದನು. ಎಲ್ಲಿ ಪ್ರಪಂಚಕ್ಕೇ ಆಧಾರಭೂತವಾದ ಆಲದಮರದ ಬುಡದಲ್ಲಿ ಈಶ್ವರನು ಶ್ರೀ ಮೂಲಸ್ಥಾನಲಿಂಗರೂಪಿಯಾಗಿ ಸಂಸಾರಬಂಧನರೂಪವಾದ ಪಾಶವನ್ನು ಬಿಡಿಸುತ್ತಿರುವನೋ, ಅಂತಹ ತ್ರಿಕೂಟಪರ್ವತದ ಶಿಖರದಲ್ಲಿಯೂ, ಕೆಲವು ಸಲ ಹೇಮಸಭೆಗಳಲ್ಲಿಯೂ ಆ ಶ್ರೀ ಮೂಲಸ್ಥಾನನಾಯಕನಾದ ಶಂಕರನು ಸದಾ ನೆಲಸಿರುವನು. ಅವನಿದ್ದೆಡೆ ಬ್ರಹ್ಮಾದಿ ದೇವತೆಗಳೆಲ್ಲರೂ ಭಯಭಕ್ತಿಯಿಂದ ಶಂಕರಧ್ಯಾನಾಸಕ್ತರಾಗಿ ವಾಸಿಸುವರು. ||೬-೭-೮||

ಯತ್ರ ವ್ಯಾಕುಲೀ ದೇವೇಂದ್ರಃ ಗಿರೀನ್ ಛೇತ್ತುಂ ಪುರಾದ್ಯತಂ ।
ಅಶೂನ್ಯಶಯನಂ ಚಕ್ರೇ ರಕ್ಷಿತಃ ಶೇಷಶಾಯಿನಾ ॥೯॥

ಶಿವಗಂಗಾತಟೇ ಯತ್ರ ಶಿವಕಾಮಾರಿಸುಂದರೀ ।
ತ್ರೈಲೋಕ್ಯರಕ್ಷಾಂ ಕುರುತೇ ತರುಣೋರ್ಮಿತರಂಗಿತೇ ॥೧೦॥

ಕೃಪಾಪಾಂಗೇನ ತದ್ದೇವ್ಯಾ ಅನಂಗೋಜ್ಜೀವಚಾರುಣಾ ।
ಸಂತಿ ತಿಲ್ಲವನೇ ತತ್ರ ಸಮುಲ್ಲಸಿತಧೂಲಿಕಾಃ ॥೧೧॥

ಹಿರಣ್ಯವರ್ಣಾನೀತಾಭೂ ಭೂಸುರಾ ಭಾಸುರಾಃ ಪುರಾ ।
ಸಮಧೀತೇ ಚತುರ್ವೇದಾಃ ಷಡಂಗಾಧ್ಯಾಪನೋತ್ಸುಕಾಃ ॥೧೨॥

ಅಬ್ಬಾಬ್ದಜ್ಞಾನಕುಶಲಾ ನೋಚಾಪೇಶಲವಾಕ್ಕಲಾಃ ।
ಪುರಾಣಜ್ಞಾನಭೂತಾರ್ಥಾ ಧರ್ಮಶಾಸ್ತ್ರಪ್ರವರ್ತಕಾಃ ॥೧೩॥

---

ಹಿಂದೆ ಇದೇ ಕ್ಷೇತ್ರದಲ್ಲಿ ದೇವೇಂದ್ರನು ತನ್ನ ವಜ್ರಾಯುಧದಿಂದ ಪರ್ವತಗಳ ರೆಕ್ಕೆಗಳನ್ನು ಕತ್ತರಿಸಲು ಅಸಮರ್ಥನಾಗಿ, ಕೊನೆಗೆ ವಿಷ್ಣುವಿನಿಂದ ಉಪದೇಶ ಪಡೆದು, ಪರಶಿವಾನುಗ್ರಹಲಾಭಾರ್ಥವಾಗಿ ಅಶೂನ್ಯಶಯನವ್ರತವನ್ನು ಕೈಕೊಂಡನು. ಅಂದರೆ ಪ್ರಾಯೋಪವೇಶವ್ರತದಿಂದ ಪರಶಿವನನ್ನು ತೃಪ್ತಿಗೊಳಿಸಿದನು. ಅಲ್ಲಿಯೇ ಸಮೀಪದಲ್ಲಿ ಕಿರಿದಾದ ಅಲೆಗಳಿಂದ ವ್ಯಾಪ್ತವಾದ ಶಿವಗಂಗಾನದಿಯ ದಡದಲ್ಲಿ ಪಾರ್ವತಿಯು ಶಿವಕಾಮಾರಿಸುಂದರಿಯೆಂಬ ಹೆಸರಿನಿಂದ ನೆಲಸಿ ಮೂರುಲೋಕದ ರಕ್ಷಣೆಯನ್ನೂ ತಪ್ಪದೆ ಮಾಡುತ್ತಿರುವಳು. ॥೯-೧೦॥

ಮನ್ಮಥನನ್ನು ತನ್ನ ಮನೋಹರವಾದ ದಯಾಪೂರ್ಣವಾದ ಕಡೆಗಣ್ಣಿನ ನೋಟದಿಂದ ಬದುಕಿಸಿದ ಆ ಶಿವಕಾಮೇಶ್ವರೀದೇವಿಯ ಅನುಗ್ರಹಪ್ರಾಪ್ತಿಗಾಗಿ ಆ ತಿಲ್ಲವನದಲ್ಲಿ ಮನೋಹರವಾದ ಜಟಾಕಲಾಪಗಳಿಂದ ಶೋಭಿಸುತ್ತಿರುವ ವಿಪ್ರರು ವಾಸಿಸುತ್ತಿರುವರು. ಹಿಂದೆ ಆ ಬ್ರಾಹ್ಮಣರನ್ನು ಅಗ್ನಿಯು ಅಲ್ಲಿಗೆ ಕರೆತಂದು ಅಗ್ನಿಹೋತ್ರಾದಿ ಕರ್ಮಗಳನ್ನು ನಡೆಸುವಂತೆ ಬಿಟ್ಟನು. ಆ ಬ್ರಾಹ್ಮಣರು ಸದಾಚಾರ ಸಂಪನ್ನರಾಗಿ ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಗಳನ್ನು ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪಗಳೆಂಬ ಆರು ಅಂಗಗಳೊಡನೆ ಶಿಷ್ಯರಿಗೆ ಅಧ್ಯಯನಮಾಡಿಸುತ್ತಿರುವರು. ॥೧೧-೧೨॥

ವರ್ಷಾಂತರಗಳಲ್ಲಿ ನಡೆಯುವ ಭವಿಷ್ಯ ವಿಷಯವನ್ನು ತಿಳಿಯುವುದರಲ್ಲಿ

ಪ್ರಾಪ್ತಸ್ನಾನಾಃ ಕೃತೋದ್ವಾಹಾ ವಿಧಿನಾಹಿತವಹ್ನಯಃ ।
ಪಾಕಯಜ್ಞ[1] ಹವಿರ್ಯಜ್ಞ[2] ಸೋಮಸಂಸ್ಥಾ[3] ಧುರಂಧರಾಃ ॥೧೪॥

ವಾಜಪೇಯಾರ್ಜಿತಶ್ವೇತಚ್ಛತ್ರಸ್ಥಗಿತದಿಕ್ತಟಾಃ ।
ತ್ರಿಸಹಸ್ರದ್ವಾದಶಾಹಪೌಂಡರೀಕವಿಧಾಯಿನಃ ॥೧೫॥

ಯೈರಧ್ವರೇ ಸಮಾಹೂತೇ ಪುರುಹೂತೇ ಚಿರಂ ಶಚೀ ।
ಶ್ವಾಸೈರುಷ್ಣಮಯಾಂ ಚಕ್ರೇ ಮರುದುದ್ಯಾನಮಾರುತಾನ್ ॥೧೬॥

---

ಕುಶಲರೂ, ರಸಬಾಳೆ ಹಣ್ಣಿನಂತೆ ಮೃದುವಾಗಿಯೂ ರಸಭರಿತವಾಗಿಯೂ ಮಾತನಾಡುವವರೂ, ಪುರಾಣಗಳಲ್ಲಿ ವಿಶೇಷವಾದ ತಿಳುವಳಿಕೆಯುಳ್ಳವರೂ, ಭೂತವರ್ತಮಾನವನ್ನರಿತವರೂ, ಧರ್ಮಶಾಸ್ತ್ರಗಳಿಗೆ ಪ್ರವರ್ತಕರೂ, ಉಚಿತ ಕಾಲಗಳಲ್ಲಿ ಸ್ನಾನಾಹ್ನಿಕತತ್ಪರರೂ, ವಿವಾಹಿತರೂ, ವಿಧಿಪೂರ್ವಕವಾಗಿ ಔಪಾಸನಾದಿಗಳಿಂದ ಅಗ್ನಿಯನ್ನು ತೃಪ್ತಿಪಡಿಸುವವರೂ, ಆಗಿ ಸಪ್ತಪಾಕಯಜ್ಞ, ಹವಿರ್ಯಜ್ಞ ಮತ್ತು ಸೋಮಸಂಸ್ಥಾ ಮುಂತಾದವುಗಳನ್ನು ಆಯಾ ಕಾಲಗಳಲ್ಲಿ ನಡೆಸುತ್ತಾ ವಾಜಪೇಯಯಾಗಗಳನ್ನು ನಿರ್ವಹಿಸಿ, ಶ್ವೇತಚ್ಛತ್ರಿಗಳನ್ನು ಹಿಡಿದಿರುವ ರಾಜಾಧಿರಾಜರಿಂದಲೂ ಸೇವಿತರಾಗಿದ್ದರು. (ವಾಜಪೇಯಯಾಗದಲ್ಲಿ ರಾಜರು ಯಾಗದೀಕ್ಷಿತನಿಗೆ ಛತ್ರಿ ಹಿಡಿಯಬೇಕೆಂಬ ನಿಯಮವಿದೆ) ಸತ್ರಯಾಗಕ್ಕೆ ಅಂಗಭೂತವಾದ ತ್ರಿಸಹಸ್ರ, ದ್ವಾದಶಾಹ ಎಂಬ ಕ್ರತುಗಳನ್ನು ವಿಧಿಪೂರ್ವಕವಾಗಿ ನಡೆಸುತ್ತಲೂ, ಹಾಗೆಯೇ ಪೌಂಡರೀಕಾದಿ ಯಾಗಗಳನ್ನು ಮಾಡುತ್ತಲೂ ಅಲ್ಲಿ ತೋರಿಬರುತ್ತಿದ್ದರು. ॥೧೩-೧೪-೧೫॥

ಅಲ್ಲಿ ಯಾಗ ದೀಕ್ಷಿತರಾದ ಬ್ರಾಹ್ಮಣೋತ್ತಮರು ಯಾಗದಲ್ಲಿ ಇಂದ್ರನನ್ನು ಆಹ್ವಾನಿಸಿದರೆ, ಇಂದ್ರನು ಅಲ್ಲಿಗೆ ಬಂದು ಪುನಃ ಯಾಗ ಸಮಾಪ್ತಿಯಾಗುವವರೆಗೂ ಹಿಂದಿರುಗುತ್ತಿರಲಿಲ್ಲ. ಅತ್ತ ಅವನ ಪ್ರಿಯೆಯಾದ ಶಚೀದೇವಿಯು ಸ್ವರ್ಗದಲ್ಲಿ ಪತಿವಿರಹದಿಂದ ಬಳಲಿ ತನ್ನ ಉದ್ಯಾನದಲ್ಲಿ ಶೋಕಪೂರಿತವಾದ ನಿಟ್ಟುಸಿರನ್ನು

---

೧) ಪಾಕಯಜ್ಞಗಳು (2)—ಶ್ರವಣಾಕರ್ಮ, ಸರ್ಪಬಲಿ, ಆಶ್ವಯುಜೀ, ಆಗ್ರಹಾಯಣ, ಪ್ರತ್ಯವರೋಹಣ, ಅಷ್ಟಕ, ಅನ್ವಷ್ಟಕ.

೨) ಹವಿರ್ಯಜ್ಞಗಳು (2)—ಆಗ್ನ್ಯಾಧೇಯ, ಅಗ್ನಿಹೋತ್ರ, ದರ್ಶಪೌರ್ಣಮಾಸ, ಆಗ್ರಯಣ, ಚಾತುರ್ಮಾಸ್ಯ, ನಿರೂಢಪಶುಬಂಧ, ಸೌತ್ರಾಮಣ.

೩) ಸೋಮಸಂಸ್ಥೆಗಳು (2)—ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ವಾಜಪೇಯ, ಅತಿರಾತ್ರ, ಅಪ್ತೋರ್ಯಾಮ.

ತೇ ಸತ್ರಿಣಃ ಸದಾ ಶಂಭೋರರ್ಚಕಾಃ ಕರ್ಮಕರ್ಮಠಾಃ ।
ತೀವ್ರಶಕ್ತಿನಿಪಾತೇನ ಶಿವಾನುಗ್ರಹಗೋಚರಾಃ ॥೧೭॥

ಸಮಯೇನ ವಿಶೇಷೇಣ ದೀಕ್ಷಾಭೇದೇನ ಸಂಸ್ಕೃತಾಃ ।
ನಿರ್ವಾಣದೀಕ್ಷಾನಿಷ್ಣಾತಾಃ ಕೃತಚರ್ಯಾಭಿಷೇಚನಾಃ ॥೧೮॥

ಕ್ರಿಯಾತತ್ತ್ವವಿದಶ್ಚರ್ಯಾ ಪ್ರವರ್ತನಪರಾಯಣಾಃ ।
ತ್ರಿಪ್ರಮಾಣಪರಿಪ್ರಾಪ್ತತ್ರಿಪದಾರ್ಥವಿವೇಚನಾಃ ॥೧೯॥

ಸಶಿಷ್ಯಜ್ಞಾನ ಷಟ್ತ್ರಿಂಶತ್ತತ್ತ್ವಬುದ್ಧಾಧ್ವಭೂತಯಃ ।
ದೀಕ್ಷಾಚ್ಛನ್ನಮಲಾಟೋಪಾ ದೀಕ್ಷಯಂತೋ ನತಾನಪಿ ॥೨೦॥

ನಿತ್ಯಾನಿತ್ಯವಿವೇಕಾಢ್ಯಾಃ ಸರ್ವತ್ರ ವಿಗತಸ್ಪೃಹಾಃ ।
ಶಾಂತಿದಾಂತಿಮಹಾದೀಕ್ಷಾ ಉಪರತ್ಯಾ ಸಮಾಧಿನಾ ॥೨೧॥

---

ಬಿಟ್ಟು ಉದ್ಯಾನದಲ್ಲಿ ಬೀಸುವ ವಾಯುವನ್ನೆಲ್ಲಾ ಹಬೆಯಿಂದ ಮುಚ್ಚಿಸಿಬಿಡುತ್ತಿದ್ದಳು. (ಪತಿಯು ಯಾಗದಲ್ಲಿ ಸೇರಿ ಬಹಳ ದಿವಸವಾದರೂ ಬರದಿರುವುದನ್ನು ನೋಡಿ ವಿರಹದಿಂದ ನಿಟ್ಟುಸುರನ್ನು ಶಚೀದೇವಿಯು ಬಿಡುತ್ತಿದ್ದಳೆಂದು ಭಾವವು. ಹಾಗೆ ಬಹುಕಾಲಪರ್ಯಂತವಾಗಿ ನಡೆಯುವ ದೊಡ್ಡ ಯಾಗಗಳನ್ನು ಇವರು ಮಾಡುತ್ತಿದ್ದರು.) ಅಂತಹ ಯಜ್ಞಶೀಲರೆಲ್ಲರೂ ಆ ಕ್ಷೇತ್ರದಲ್ಲಿ ಶಂಕರನ ಪೂಜಕರಾಗಿ ಕರ್ಮಾನುಷ್ಠಾನಸಿದ್ಧರಾಗಿದ್ದರು. ತೀವ್ರವಾದ ತಮ್ಮ ಶಕ್ತಿಗಳನ್ನು ಪಯೋಗಿಸಿ (ಮಂತ್ರಶಕ್ತಿಯನ್ನು) ಶಿವನ ಅನುಗ್ರಹಕ್ಕೆ ಸುಲಭವಾಗಿ ಪಾತ್ರರಾಗುತ್ತಿದ್ದರು. ಆಯಾ ಸಮಯದಲ್ಲಿ ವಿಶೇಷವಾಗಿ ದೀಕ್ಷಾಬದ್ಧರಾಗಿಯೂ, ದೀಕ್ಷೆಯನ್ನು ಕಾರ್ಯಾನಂತರ ತ್ಯಜಿಸಿ ಸುಸಂಸ್ಕೃತರಾಗಿಯೂ ಇರುತ್ತಿದ್ದರು. ವಿಶೇಷವಾಗಿ ಮೋಕ್ಷಪ್ರಾಪ್ತ್ಯರ್ಥವಾಗಿ ಚಿತ್ತಲೆಯಾಗಿರುವ ದೀಕ್ಷೆಯನ್ನು ಸ್ವೀಕರಿಸುವುದರಲ್ಲಿ ಉತ್ಸಾಹಭರಿತರಾಗಿ ಅದಕ್ಕೋಸ್ಕರ ಆಚರಿಸಬೇಕಾದ ಅಭಿಷೇಕಾದಿಗಳನ್ನು ಸ್ವೀಕರಿಸುತ್ತಾ ಸದಾಚಾರತತ್ಪರರಾಗಿದ್ದರು ॥೧೬-೧೭-೧೮॥

ಮತ್ತು ಅಲ್ಲಿನ ಭೂಸುರರು ಕರ್ತವ್ಯರಹಸ್ಯವನ್ನರಿತವರಾಗಿಯೂ, ನಿತ್ಯಕರ್ಮಾನುಷ್ಠಾನತತ್ಪರರಾಗಿಯೂ, ಪ್ರತ್ಯಕ್ಷ, ಅನುಮಾನ, ಶಬ್ದಗಳೆಂಬ ಮೂರು ಪ್ರಮಾಣಗಳಿಂದುಂಟಾದ ಪಶು, ಪತಿ ಮತ್ತು ಪಾಶಗಳೆಂಬ ಮೂರು ಪದಾರ್ಥಗಳನ್ನು ಸದಾ ವಿವೇಚನಮಾಡುವವರಾಗಿಯೂ, ಶಿಷ್ಯರೊಡನೆ ಶೈವಸಿದ್ಧಾಂತದ

ವಿಶ್ವಾಸೇನ ಸಮಾಯುಕ್ತಾ ಮುಮುಕ್ಷೋಲ್ಲಾಸಿಮಾನಸಾಃ ।
ಅಧೀತಬ್ರಹ್ಮಮೀಮಾಂಸಾಃ ಶಿವಧ್ಯಾನೈಕತತ್ಪರಾಃ ॥೨೨॥

ಚಿದಂಬರನಟೇಶಾನಪೂಜೋತ್ಸವವಿಧಾಯಿನಃ ।
ಪಶ್ಯಂತಃ ಸರ್ವದಾ ಶಂಭೋಃ ಪರಮಾನಂದತಾಂಡವಂ ॥೨೩॥

ಸದಾಪ್ರಾಪ್ತಸಮಸ್ತಾರ್ಥಾ ದ್ವಿಜಾಃ ಸ್ವಾತ್ಮನಿ ಸಂಸ್ಥಿತಾಃ ॥೨೪॥

ತೇ ವರ್ಣನೀಯಾಃ ಕಥಮಸ್ಮದಾದ್ಯೈ
ರ್ಮನುಷ್ಯಕೀಟೈರ್ಮಹಿತಾನುಭಾವಾಃ ।
ಯೇ ಸೌಮ್ಯಭಕ್ತಿಸ್ತುತಿಸಾಧನೇನ
ದೇವೇಶ್ವರಸ್ಯೈವ ಮುಖೇನ ಸಂಸ್ತುತಾಃ ॥೨೫॥

---

ಮೂವತ್ತಾರು ತತ್ವಗಳನ್ನರಿತು ಶೈವಮಾರ್ಗದರ್ಶಕರಾಗಿಯೂ ಇದ್ದರು. ಅವರ ದೀಕ್ಷಾಧಾರಣೆಯಿಂದ ಜನ್ಮಾಂತರಗತವಾಗಿ ಬಂದ ಅಜ್ಞಾನಾಡಂಬರಗಳು ನಾಶವಾಗಿದ್ದುವು. ತಮಗೆ ವಿನಯದಿಂದ ತಲೆಬಾಗುವವರಿಗೂ, ದೀಕ್ಷೆಕೊಡುವ ಸಾಮರ್ಥ್ಯವು ಅವರಲ್ಲಿತ್ತು. ನಿತ್ಯ ಮತ್ತು ಅನಿತ್ಯರೂಪವಾದ ಪ್ರಪಂಚಸ್ವರೂಪವನ್ನರಿತು ಅದರಿಂದ ಎಲ್ಲಾಕಡೆಯಲ್ಲಿಯೂ ನಿಸ್ಪೃಹರೆನಿಸಿಕೊಂಡು, ಶಾಂತಿ, (ಸಮಾಧಾನ) ಇಂದ್ರಿಯನಿಗ್ರಹ, ಉಪರತಿ (ಸಂನ್ಯಾಸ) ಗಳಿಂದ ದೀಕ್ಷಾಬದ್ಧರೂ ಎನಿಸಿ ಮಹಾತಪಸ್ವಿಗಳಾಗಿ ಅಲ್ಲಿ ಕಾಲಕಳೆಯುತ್ತಿದ್ದರು. ||೧೯-೨೦-೨೧||

ಆಸ್ತಿಕಶ್ರೇಷ್ಠರೆನಿಸಿ ಮೋಕ್ಷಪ್ರಾಪ್ತೀಚ್ಛೆಯಿಂದ ಉಲ್ಲಾಸಹೊಂದಿದ ಮನಸ್ಸುಳ್ಳವರೂ, ವೇದಾಂತವನ್ನು ಅಧ್ಯಯನ ಮಾಡಿದವರೂ, ಶಿವನ ಧ್ಯಾನದಲ್ಲಿಯೇ ನಿರತರಾಗಿರುವವರೂ, ಚಿದಂಬರಕ್ಷೇತ್ರವಾಸಿಯಾದ ನಟೇಶ್ವರನ ಪೂಜೆ, ಉತ್ಸವ ಮುಂತಾದುವುಗಳನ್ನು ನೆರವೇರಿಸುವವರೂ, ಯಾವಾಗಲೂ ಪರಶಿವನ ಅತ್ಯಾನಂದಪ್ರದವಾದ ತಾಂಡವನೃತ್ಯವನ್ನು ನೋಡುವವರೂ, ಅನವರತವೂ ಸಕಲ ಇಷ್ಟಾರ್ಥಗಳನ್ನೂ ಪಡೆದು, ಯಾವಾಗಲೂ ಪರಮಾತ್ಮನನ್ನು ತಮ್ಮ ಮನಸ್ಸಿನಲ್ಲಿ ಭಾವಿಸುವವರೂ ಆಗಿ ಆ ಬ್ರಾಹ್ಮಣರು ಅಲ್ಲಿ ವಿಶೇಷವಾಗಿ ಕಂಗೊಳಿಸುತ್ತಿದ್ದರು. ||೨೨-೨೩-೨೪||

ಹುಳುಗಳಿಗೆ ಸಮಾನರಾದ ನಮ್ಮಂತಹ ಮಾನವರಿಂದ ಮಹಾನುಭಾವರಾದ ಅವರು ಹೇಗೆ ವರ್ಣಿಸಲ್ಪಡಲು ಸಾಧ್ಯರಾದಾರು? ಸೌಮ್ಯವಾದ ಮತ್ತು ಭಕ್ತಿರೂಪ

ರುದ್ರಾಕ್ಷಮಾಲಾಭರಣಾ ವಿಭೂತ್ಯಾ
ಶಶ್ವತ್ಸಮುದ್ಧೂಳಿತಸರ್ವಗಾತ್ರಾಃ ।
ವರ್ಣ್ಯಾಃ ಕಥಂ ತೇ ಶತರುದ್ರಮಂತ್ರ
ಪಾರಾಯಣೈಕಪ್ರವಣಾ ಮಹಾಂತಃ ॥೨೬॥

ಕ್ರಿಯಾಸುಚರ್ಯಾಸು ಪಚೇಲಿಮಶ್ರಮಾಃ
ಪ್ರಬೋಧಮಾರ್ಗೇ ಪಟವೋಽತಿಯೋಗಿನಃ ।
ಕೃತತ್ರಿಸಾಹಸ್ರಮುಖಾಃ ಸಭಾಪತೇ
ರ್ಜಯಂತಿ ಭಕ್ತಾಸ್ತ್ರಿಸಹಸ್ರಭೂಸುರಾಃ ॥೨೭॥

ಅಜಟಾಫಾಲಚಂದ್ರೇಣ ಅಫಾಲಾಂತರಚಕ್ಷುಷಃ ।
ಅವಾಮಾ ವಾಮಭಾಗೇನ ವಪುಷಾ ಶಂಭುಮೂರ್ತಯಃ ॥೨೮॥

---

ವಾದ ಸ್ತೋತ್ರವೆಂಬ ಸಾಧನೆಯಿಂದ ಅವರು ದೇವಾಧಿಪನೆನಿಸಿದ ಮಹಾದೇವನ ಬಾಯಿಂದಲೇ ಅವರು ಸ್ತೋತ್ರಮಾಡಲ್ಪಟ್ಟರೆಂದರೆ ಅದು ಅಷ್ಟು ಅತಿಶಯೋಕ್ತಿಯಲ್ಲ. ॥೨೫॥

ರುದ್ರಾಕ್ಷಮಾಲಾಲಂಕೃತರೂ, ವಿಭೂತಿಯಿಂದ ಪದೇಪದೇ ತಮ್ಮ ದೇಹಕ್ಕೆ ಉದ್ಧೂಳನಮಾಡಿಕೊಳ್ಳುವವರೂ, ಶತರುದ್ರಮಂತ್ರಪಾರಾಯಣದಲ್ಲೇ ಮುಖ್ಯವಾಗಿ ನಿರತರಾದವರೂ ಆದ ಆ ಮಹಾತ್ಮರನ್ನು ಹೇಗೆ ತಾನೆ ವರ್ಣನೆಮಾಡಲು ಸಾಧ್ಯವಾದೀತು? ॥೨೬॥

ಕರ್ಮಗಳಲ್ಲಿಯೂ, ನಿತ್ಯಚರ್ಯೆಯಲ್ಲಿಯೂ ಪರಿಪಕ್ವವಾದ ಶ್ರಮವುಳ್ಳವರಾಗಿ (ಫಲಪ್ರಾಪ್ತಿಯಿಂದ ಸಾರ್ಥಕವಾದ ಕರ್ಮಾಚರಣೆಯುಳ್ಳವರಾಗಿ) ಜ್ಞಾನಮಾರ್ಗದಲ್ಲಿ ಮುಂದುವರಿದವರೆನಿಸಿ, ಯೋಗಶೀಲರಾಗಿ, ತ್ರಿಸಹಸ್ರ, ದ್ವಾದಶಾಹಗಳೆಂಬ ಅಂಗಕ್ರತುಗಳನ್ನು ಮಾಡಿದವರೂ, ಹೇಮಸಭಾಧಿಪನ ಭಕ್ತರೂ ಆಗಿ ಅಲ್ಲಿ ವಾಸಿಸುತ್ತಿದ್ದ ಮೂರುಸಾವಿರಮಂದಿ ಬ್ರಾಹ್ಮಣರು ಅವರ್ಣನೀಯರು. ಮಹಾಮಹಿಮರು. ॥೨೭॥

ದೊಡ್ಡ ಜಡೆ, ಹಣೆಯಲ್ಲಿ ಚಂದ್ರ, ಹಣೆಗಣ್ಣು ಮತ್ತು ಎಡಭಾಗದಲ್ಲಿ ಸ್ತ್ರೀಶರೀರ ಇವುಗಳು ಮಾತ್ರ ಇಲ್ಲದೆ, ಅವರು ತಮ್ಮ ಉಳಿದ ಅಂಶಗಳಿಂದ ಪರಮೇಶ್ವರನ ಮೂರ್ತಿಗಳಂತೆಯೇ ಕಾಣುತ್ತಿದ್ದರು. ॥೨೮॥

|| ಶ್ರೀ ಸ್ಕಂದ ಉವಾಚ ||

**ಅಥ ತಿಲ್ಲವನಾವಾಸಿ ತ್ರಿಸಾಹಸ್ರಮಹೀಸುರಾನ್ ।**
**ನತ್ವಾ ಶ್ರೀನೀಲಕಂಠಸ್ಯ ಕಥಾಂ ವಕ್ಷ್ಯಾಮಿ ಪಾವನೀಂ ॥೨೯॥**

**ನಿರ್ಮಾಲ್ಯಪುಷ್ಪನಿರ್ಮುಕ್ತಮಾಧ್ವೀತುಂದಿಲಷಟ್ಪದಃ ।**
**ಆಸೀತ್ತಿಲ್ಲವನೇ ಕಶ್ಚಿತ್ಕುಲಾಲಕುಲಶೇಖರಃ ॥೩೦॥**

**ಭಕ್ತಾಗ್ರಗಣ್ಯಶ್ರೀಕಂಠಪೂಜಾಮೃತ್ಪಾತ್ರಿಕಾಕರಃ ।**
**ಮಾಹೇಶ್ವರಜನಾಭೀಷ್ಟ ಭಿಕ್ಷಾಪಾತ್ರಪ್ರದಾಯಕಃ ॥೩೧॥**

**ಸದಾ ಶಂಭುಪದಾಸಜ್ಜಮಾನಸಃ ಶಿವಕರ್ಮಸು ।**
**ನಿಷ್ಣಾತಧೀರ್ನಿರಾಘಾತಕೈಂಕರ್ಯೋದ್ಘಾಟನೋದ್ಭವಃ ॥೩೨॥**

**ವೀಕ್ಷ್ಯ ವೀಕ್ಷ್ಯ ವಿಭೋಃ ಕ್ಷ್ವೇಲಂ ನೀಲಕಂಠಸಮಾಕುಲಂ ।**
**ನೀಲಕಂಠಪದೋಚ್ಚಾರೀ ನೀಲಕಂಠ ಇತೀರಿತಃ ॥೩೩॥**

---

ಎಲೈ ಜೈಗೀಷವ್ಯನೇ, ಆ ತಿಲ್ಲವನ (ತಿರುನಲ್ವೇಲಿ) ದಲ್ಲಿ ವಾಸಿಸುತ್ತಿದ್ದ ಅಂತಹ ಮೂರುಸಾವಿರ ವಿಪ್ರರಿಗೂ ನಮಸ್ಕರಿಸಿ, ಪವಿತ್ರವಾದ ಶ್ರೀ ನೀಲಕಂಠನ ಕಥೆಯನ್ನು ಹೇಳುತ್ತೇನೆ ಕೇಳು; ನಿರ್ಮಾಲ್ಯದ ಹೂವಿನಿಂದ ಬಿಡಲ್ಪಟ್ಟ ಮಧುವಿನಿಂದಲೇ ಆನಂದಪೂರ್ಣವಾಗುವ ಭ್ರಮರದಂತೆ ಆ ತಿಲ್ಲವನದಲ್ಲಿ ಕುಂಬಾರ ವಂಶಕ್ಕೆ ತಿಲಕಪ್ರಾಯನಾದ ಕುಂಭಕಾರನೊಬ್ಬನಿದ್ದನು. ||೨೯-೩೦||

ಭಕ್ತಾಗ್ರೇಸರನೂ, ಮಹೇಶ್ವರನ ಪೂಜಕನೂ, ಮಹಾದೇವನ ಪೂಜೆಗುಪಯೋಗವಾಗುವ ಮಣ್ಣಿನ ಪಾತ್ರೆಗಳನ್ನು ಮಾಡಿಕೊಡುವವನೂ, ಈಶ್ವರಭಕ್ತರೆನಿಸಿದವರಿಗೆ ಬೇಕಾದ ಪಾತ್ರೆಗಳನ್ನು ಒದಗಿಸುವವನೂ ಆಗಿ ಯಾವಾಗಲೂ ಶಂಭುವಿನ ಪಾದಾಸಕ್ತವಾದ ಮನಸ್ಸಿನಿಂದ ವಾಸಿಸುತ್ತಿದ್ದನು. ಆತನು ಶೈವರಲ್ಲಿ ದೃಢಭಕ್ತಿಯುಳ್ಳವನಾಗಿ ... ನ್ನಿಟ್ಟಿದ್ದನು. ನಿರ್ವಿಘ್ನವಾಗಿ ಆ ಮಹಾದೇವನ ಕೈಂಕರ್ಯವನ್ನು ನೆರವೇರಿಸುವವನಾಗಿದ್ದನು. ಅವನ ಹೆಸರು ಶ್ರೀಕಂಠನೆಂಬುದಾಗಿದ್ದಿತು. ||೩೧-೩೨||

ವಿಷಜ್ವಾಲೆಯನ್ನು ಸಮುದ್ರಮಥನಕಾಲದಲ್ಲಿ ಭಕ್ಷಿಸಿದುದರಿಂದ ಕಪ್ಪಾಗಿರುವ ಆ ಪ್ರಭುವಿನ ಕೊರಳನ್ನು ನೋಡಿ ನೋಡಿ, ಯಾವಾಗಲೂ ಆ ನೀಲಕಂಠನ ಪಾದಧ್ಯಾನವನ್ನೇ ಮಾಡುತ್ತಾ ಆ ಶ್ರೀಕಂಠನೆಂಬುವನು ಪ್ರಸಿದ್ಧನಾಗಿದ್ದನು.

ಸ ಜನ್ಮನಃ ಪ್ರಭೃತ್ಯೇವ ತ್ಯಕ್ತ್ವಾನ್ಯದ್ದೇವತಾಂತರಂ ।
ಸೇವ್ಯಮಾನೋ ಮಹಾದೇವಂ ವಯಃ ಕೌಮಾರಮತ್ಯಗಾತ್ ॥೩೪॥

ಪಂಚಬಾಣಭುಜಾಟೋಪ ಪರಿಪಾಟೀಪಟೀಯಸಾ ।
ಪ್ರಸೀಯಸಾ ಮಹೋಲ್ಲಾಸೈಃ ಪಸ್ಪೃಶೇ ವಯಸಾ ತತಃ ॥೩೫॥

ತಸ್ಯಾಸೀಲ್ಲಲನಾನೂನಂ ಕೇಲಿಕಲ್ಪನಶಿಲ್ಪಿನಾ ।
ಶೃಂಗಾರರಸಸರ್ವಸ್ವವೇಧಸಾ ವಯಸಾಂಚಿತಾ ॥೩೬॥

ಪಾತಿವ್ರತ್ಯಾದರುಂಧತ್ಯಾ ಮಾಹಾತ್ಮ್ಯಮನುರುಂಧತೀ ।
ಕಂದರ್ಪವೈಜಯಂತೀ ಸಾ ತಸ್ಯ ಸಾರಸಮಾವಹತ್ ॥೩೭॥

ಸವ್ಯಾಘ್ರಪಾದಲಿಂಗಸ್ಯ ಕುರ್ವಾಣೋ ದರ್ಶನಂ ವ್ರತೀ ।
ಚಿದಂಬರಪತೇರ್ನಾಟ್ಯಂ ವೀಕ್ಷ್ಯಮಾಣೋತಿಕೌತುಕೀ ॥೩೮॥

---

ಅವನು ಹುಟ್ಟಿದ ಮೊದಲುಗೊಂಡು ಇತರ ದೇವತೆಗಳನ್ನು ಬಿಟ್ಟು ಮಹಾದೇವನನ್ನೇ ಸೇವೆಮಾಡುತ್ತಾ ತನ್ನ ಕೌಮಾರಾವಸ್ಥೆಯನ್ನು ಆದೇರೀತಿ ಕಳೆದನು. ॥೩೩-೩೪॥

ಹಾಗೆಯೇ ಮನ್ಮಥನ ಬಾಹುಬಲಕ್ಕೆ ಸಮಾನವಾದ ಸಾಮರ್ಥ್ಯವನ್ನು ಪಡೆಯುವ, ಅತ್ಯಂತ ಉಲ್ಲಾಸವನ್ನುಂಟುಮಾಡುವ ಶ್ರೇಷ್ಠವಾದ ಯೌವನಾವಸ್ಥೆಯನ್ನು ಪಡೆದನು. ಆ ಶ್ರೀಕಂಠನಿಗೆ ರತಿಕೇಳಿಯನ್ನು ಕಲ್ಪಿಸುವುದರಲ್ಲಿ ಚತುರನಾದ ಬ್ರಹ್ಮನು ಶೃಂಗಾರರಸಕ್ಕೆ ನಿಧಿಯಂತೆ ಸುಂದರಿಯಾಗಿ ನಿರ್ಮಿಸಿದ ಒಬ್ಬಳು ರಮಣಿಯಿದ್ದಳು. ॥೩೫-೩೬॥

ಅವಳು ಪಾತಿವ್ರತ್ಯಧರ್ಮದಲ್ಲಿ ಸಾಕ್ಷಾದರುಂಧತೀದೇವಿಯನ್ನು ಹೋಲುತ್ತಿದ್ದಳು. ಮನ್ಮಥನ ವಿಜಯಪತಾಕೆಯಂತೆ ಅವಳು ಪತಿಗೆ ಉಲ್ಲಾಸವನ್ನುಂಟುಮಾಡುತ್ತಿದ್ದಳು. ಶ್ರೀಕಂಠನಾದರೋ ನಿತ್ಯವೂ ನಿಯಮಬದ್ಧನಾಗಿ ವ್ಯಾಘ್ರಪಾದೇಶ್ವರನ ಲಿಂಗವನ್ನು ದರ್ಶನಮಾಡುತ್ತಾ, ಚಿದಂಬರೇಶ್ವರನ ನಾಟ್ಯವನ್ನು ನಿತ್ಯವೂ ಕುತೂಹಲದಿಂದ ನೋಡುವುದರಲ್ಲಿ ತತ್ಪರನಾಗಿದ್ದನು. ॥೩೭-೩೮॥

ಸ ಕದಾಚನ ಶರ್ವರ್ಯಾಮಂಧಕಾರೇತಿದಂತುರೇ ।
ಧರಾಲೀಂ ಮೇಘಘೋಷಾಸು ತಥಾ ದಿಕ್ಷು ವಿದಿಕ್ಷು ಚ ॥೩೯॥

ಸೇವಿತ್ವಾ ತಾಂಡವೇಶಾನಂ ವ್ಯಾಘ್ರಪಾದೇಶ್ವರಂ ತಥಾ ।
ಪ್ರತ್ಯಾಗಚ್ಛನ್ಪಯಃ ಪೂರಂ ಕಂಠದಘ್ನೇನ ವರ್ತ್ಮನಾ ॥೪೦॥

ಆಸಾರವಾತಪಾತೇನ ಲೇಪವಾನಕಲೇವರಃ ।
ಝಲ್ಲಝಲ್ಲಿತ ಕೇಶಾಗ್ರಃ ಸಾರ್ಧಸಾರ್ದ್ರತರಾಂಬರಃ ॥೪೧॥

ಸ ನೀಲಕಂಠಃ ಕಸ್ಯಾಶ್ಚಿದ್ವೇಶ್ಯಾಯಾ ವೇದಿಕಾಂ ಯಯೌ ।
ನೀಲಕಂಠ ಪದೋಚ್ಚಾರಾನ್ನೀಲಕಂಠಮುಪಾಗತಂ ॥೪೨॥

ಬುದ್ಧ್ವಾಸೀದ್ದೀಪಿಕಾಹಸ್ತಾ ಝಟಿತ್ಯಾಗತ್ಯ ತತ್ವತಃ ।
ತತ್ಕಥಂಚಿದುಪಚ್ಛಂದಂ ಸಾ ನೀತ್ವಾ ಭವನಾಂತರಂ ॥೪೩॥

---

ಅವನು ಒಂದು ದಿನ ಗಾಢಾಂಧಕಾರವ್ಯಾಪ್ತವಾದ ರಾತ್ರಿಯಲ್ಲಿ ಎಲ್ಲ ದಿಕ್ಕುಗಳಲ್ಲಿಯೂ ಮೋಡಗಳು ಗುಂಪುಗುಂಪಾಗಿ ಧ್ವನಿಮಾಡುತ್ತಿರಲು ಶಿವದರ್ಶನಾರ್ಥವಾಗಿ ಹೊರಟು ತಾಂಡವೇಶ್ವರನನ್ನೂ, ವ್ಯಾಘ್ರಪಾದೇಶ್ವರನನ್ನೂ ಸೇವಿಸಿ ಹಿಂತಿರುಗಿ ಬರುವಾಗ, ಮಳೆಯಿಂದ ಮಾರ್ಗವೆಲ್ಲಾ ಕುತ್ತಿಗೆಯ ಉದ್ದ ನೀರಿನಿಂದ ತುಂಬಿ ಹೋಗಿದ್ದಿತು. ಅದೇ ಜಲರಾಶಿಯಲ್ಲಿ ಬರುತ್ತಾ ಮೇಲೆ ಧಾರಾಕಾರವಾಗಿ ಸುರಿಯುತ್ತಿರುವ ಮಳೆಯ ನೀರಿನ ಹನಿಯಿಂದ ನೆನೆದು ನಡುಗುತ್ತಿರುವ ದೇಹವುಳ್ಳವನಾಗಿ, ಜರ್ಜರಿತವಾದ ಕೂದಲಿನ ತುದಿಯಿಂದಲೂ, ಕೆಸರಿನಿಂದ ಅರ್ಧ ತೊಯ್ದುಹೋದ ಬಟ್ಟೆಯಿಂದಲೂ ಯುಕ್ತನಾಗಿ, ಸದಾಶ್ರಯವನ್ನು ಅರಸುತ್ತಾ ಬಂದು, ಕೊನೆಗೆ ಆ ನೀಲಕಂಠನು ಯಾವಳೋ ಒಬ್ಬಳು ವೇಶ್ಯೆಯ ಮನೆಯ ಜಗಲಿಯನ್ನು ಸೇರಿದನು. ||೩೯-೪೦-೪೧||

ಅವನು ಅಲ್ಲಿ ನೀಲಕಂಠನೆಂಬ ಪದವನ್ನು ಉಚ್ಚಾರಣಮಾಡಿದುದರಿಂದಲೇ ತನ್ನ ಸಮೀಪಕ್ಕೆ ನೀಲಕಂಠನು ಬಂದನೆಂದು ತಿಳಿದು ಆ ವೇಶ್ಯೆಯು, ದೀಪವನ್ನು ಹಿಡಿದುಕೊಂಡು ಹೊರಗೆ ಬಂದು, ಅನೇಕ ಉಪಚಾರೋಕ್ತಿಗಳಿಂದ ಅವನನ್ನು ಬಲಾತ್ಕಾರವಾಗಿ ಒಳಗೆ ಕರೆದುಕೊಂಡುಹೋಗಿ, ಮನೆಯ ಒಳಗಡೆ ಕೂರಿಸಿ ಪಟ್ಟೆವಸ್ತ್ರದಿಂದ ಅವನ ಅವಯವಗಳನ್ನು ಒರೆಸಿ ಅನಂತರ ಶೀತಬಾಧೆಯನ್ನು ನಿವಾರಿಸಿ

ಸಂಪ್ರೃಜ್ಯಾಂಗಂ ದುಕೂಲೇನ ಹಸಂತೀಮುಪರ್ಯತ್ತತಃ ।
ಝುಡಿತ್ಯಂಬರಮಾಸ್ತೀರ್ಯ ತತ್ರ ತೂಲಾಪಟೀಂ ಪುನಃ ॥೪೪॥

ಪ್ರಸಾರ್ಯ ಹೇಮಪರ್ಯಂಕೇ ಮಣಿಶೃಂಖಲಿಕಾಂಚಿತೇ ।
ಸ್ವಾಪಯಿತ್ವಾ ಮರುದ್ವೃಷ್ಟಿಬಾಧಮುದ್ಧಾಯ ಸಾ ಕ್ರಮಾತ್ ॥೪೫॥

ಚಂದನಾಗರುಕಸ್ತೂರೀ ಮಿಲನ್ಮೃಗಮದಾದಿಭಿಃ ।
ವಿಲಿಪ್ಯಾಂಗಂ ಕೃತಾಹಾರಂ ತಿಲ್ಲೇಶಾಯ ಪತಿಸ್ಮೃತಂ ॥೪೬॥

ತತೋ ಮಾಹೇಶ್ವರಪ್ರೀತ್ಯಾ ತಂ ರಂತುಂ ವಾಂಛತಿ ಸ್ಮ ಸಾ ।
ದುರ್ವಾರತ್ವಾದ್ರತೀಶಸ್ಯ ತಸ್ಯಾಂ ದಾಕ್ಷಿಣ್ಯತೋಽಪಿ ಸಃ ॥೪೭॥

ತರುಣಸ್ತದ್ಗತಿಂ ಪ್ರಾಪ್ತುಮನುಮೇನೇತಿಕೌತುಕೀ ।
ತಸ್ಯಾಂ ವಿಧ್ಯನುಸಾರೇಣ ಕಿಂಚಿತ್ಕಾಲಂ ಮನೋಭುವಃ ॥೪೮॥

ಸಾಮ್ರಾಜ್ಯಮನುಭೂಯಾಸೌ ನಿಜಾಲಯಮುಪಾವಿಶತ್ ।
ತತ್ರಾಲೋಕ್ಯ ನಿಜಾಂ ಕಾಂತಾಂ ಶಂಬರಾರಾತಿಸುಂದರೀಂ ॥೪೯॥

---

ಕೊಳ್ಳಲು ಒಣಬಟ್ಟೆಗಳನ್ನು ಕೊಟ್ಟು, ಜಾಗ್ರತೆಯಾಗಿ ರತ್ನದ ಸರಪಳಿಗಳಿಂದ ಶೋಭಿಸುತ್ತಿರುವ ಚಿನ್ನದ ಮಂಚದಮೇಲೆ ಹತ್ತಿಯ ಸುಪ್ಪತ್ತಿಗೆಯನ್ನೂ ಅದರ ಮೇಲೆ ಬಟ್ಟೆಯನ್ನೂ ಹಾಸಿ, ಅವನನ್ನು ಅದರ ಮೇಲೆ ಮಲಗುವಂತೆ ಹೇಳಿ ಕ್ರಮ ಕ್ರಮವಾಗಿ ಗಾಳಿ ಮಳೆಯ ಬಾಧೆಯನ್ನು ಹೋಗಲಾಡಿಸಿದಳು. ||೪೨-೪೩-೪೪-೪೫||

ಸ್ವಲ್ಪ ಹೊತ್ತಿನ ಮೇಲೆ ಉಚಿತವಾದ ಆಹಾರಗಳನ್ನು ಕೊಟ್ಟು ಅವನೇ ಪತಿಯೆಂದೂ ಸಾಕ್ಷಾತ್ ತಿಲ್ಲೇಶ್ವರನೆಂದೂ ಭಾವಿಸಿ ಅವನ, ಅವಯವಗಳಿಗೆ ಚಂದನ, ಅಗರು ಮತ್ತು ಕಸ್ತೂರೀ ಮುಂತಾದ ಸುಗಂಧದ್ರವ್ಯಗಳನ್ನು ಲೇಪನ ಮಾಡಿ, ಆ ಮಹೇಶ್ವರನ ಭಕ್ತನಿಗೆ ಪ್ರೀತಿಯುಂಟುಮಾಡುವುದಕ್ಕೋಸ್ಕರ ಅವನೊಡನೆ ರತಿಕ್ರೀಡೆಯಾಡಲು ಅಪೇಕ್ಷಿಸುತ್ತಿದ್ದಳು ಆ ತರುಣನೂ ಸಹ ಮನ್ಮಥ ಬಾಧೆಗೆ ಈಡಾಗಿ ಅವಳಲ್ಲಿನ ದಾಕ್ಷಿಣ್ಯದಿಂದಲೂ, ಅವಳಿಚ್ಛೆಯಂತೆಯೂ ಅವಳೊಡನೆ ಸಂಭೋಗಮಾಡಲು ಒಪ್ಪಿಕೊಂಡನು. ||೪೬-೪೭||

ಕೊನೆಗೆ ಅವಳ ಇಷ್ಟಾನುಸಾರವಾಗಿ ಕೊಂಚ ಹೊತ್ತು ಮನ್ಮಥಸಾಮ್ರಾಜ್ಯ ಸುಖವನ್ನನುಭವಿಸಿ, ಅವನು ತನ್ನ ಸ್ವಂತ ಮನೆಗೆ ಬಂದನು. ಅಲ್ಲಿ ರತಿಯಂತಿ

ಪುನರುದ್ದೀಪಿತಾನಂಗಸ್ಸ ರಂತುಮುಪಚಕ್ರಮೇ ॥೫೦॥

ಸಾಮ್ರಾಜ್ಯಮಾತ್ರೇಷು ಪಟೀರಚರ್ಚಾ
ಮುಚ್ಛಾಚ್ಛಲೇಶಾಚಲತೋರತಾಂತಾಂ ।
ಸಂಪ್ರೀಣಯನ್ ಚಾಟುಪರಂಪರಾಭಿ
ಸ್ತದೀಯಶಯ್ಯಾಂ ಶನಕೈಃ ಪ್ರಪೇದೇ ॥೫೧॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ನೀಲಕಂಠಭಕ್ತ
ಚರಿತ್ರವರ್ಣನೇ ಪಂಚವಿಂಶೋಽಧ್ಯಾಯಃ

---

ಸುಂದರಿಯಾಗಿರುವ ತನ್ನ ಸ್ವಂತ ಪತ್ನಿಯನ್ನು ನೋಡಿ ಪುನಃ ಕಾಮೋದ್ದೀಪಿತನಾಗಿ ಅವಳೊಡನೆಯೂ ಕ್ರೀಡಿಸಲುದ್ಯುಕ್ತನಾದನು. ||೪೮-೪೯-೫೦||

ಹೀಗೆ ಮನ್ಮಥನ ಸಾಮ್ರಾಜ್ಯಸುಖದಲ್ಲಿ ನಿರತನಾಗಿ ಚಂದನದಿಂದ ಲೇಪಿಸಲ್ಪಟ್ಟವಳೂ, ಅತಿ ಶುಭ್ರವೂ ಸಣ್ಣ ಬೆಟ್ಟಗಳಂತೆ ದಪ್ಪವಾದ ಕುಚವುಳ್ಳವಳೂ ಆದ ಪ್ರಿಯೆಯನ್ನು ಚಾಟೂಕ್ತಿಗಳ ಪರಂಪರೆಗಳಿಂದ ಸಂತೋಷಪಡಿಸುತ್ತಾ ಮೆಲ್ಲಮೆಲ್ಲಗೆ ಅವಳ ಹಾಸಿಗೆಯನ್ನು ಹೊಂದಿದನು. ||೫೧||

ಇಲ್ಲಿಗೆ ಶ್ರೀಶಿವರಹಸ್ಯದ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ನೀಲಕಂಠನೆಂಬ ಭಕ್ತನ ವರ್ಣನೆಯಲ್ಲಿ ಇಪ್ಪತ್ತೈದನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಷಡ್ತ್ರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ತಯಾ ಸ ನೀಲಕಂಠೋಽಸೌ ನೀಲಕಂಠಪದಾಶ್ರಯಃ ।
ತದಾ ಪರಿಮಳೋಲ್ಲಾಸ್ಯೈಃ ಸಾರ್ಧಂ ವಾರಸ್ತ್ರಿಯಾ ರತಿಂ ॥೧॥

ಅನ್ವಭುಂಕ್ತೇತಿ ಚೇಟೀಭ್ಯೋ ನೀಲಕಂಠೋಸ್ಯಯಂ ಶ್ರುತಃ ।
ತದಾ ಚಂದ್ರಮುಖೀ ರಾತ್ರೌ ವಾರಸ್ತ್ರೀಕೃತಸಂಗತಿಂ ॥೨॥

ಪತಿಂ ದೃಷ್ಟ್ವಾ ತು ತಲ್ಪೇನ ಸ್ಪರ್ಶಂ ಸ್ನೇಹೇನ ಖಂಡಿತಾ ।
ಭವತಃ ಶ್ರೀನೀಲಕಂಠಃ ಪ್ರಮಾಣಂ ಚೇದಿಮಾಂ ಸ್ಪೃಶ ॥೩॥

---

### ಇಪ್ಪತ್ತಾರನೆಯ ಅಧ್ಯಾಯ

ಮಹಾದೇವನ ಪಾದಸೇವಕನಾದ ಈ ನೀಲಕಂಠನೆಂಬ ತನ್ನ ಪತಿಯು ದೇಹದಿಂದ ಬರುವ ಪರಿಮಳಭರಿತವಾದ ಸುವಾಸನೆಯಿಂದಲೂ, ಇನ್ನು ಕೆಲವು ಸಖಿಯರ ಸಹಾಯದಿಂದಲೂ, ಆತನು ಸೂಳೆಯೊಡನೆ ರತಿಕ್ರೀಡೆಯನ್ನು ಅನುಭವಿಸಿರಬಹುದೆಂದು ತಿಳಿದು ಪತ್ನಿಯಾದ ಚಂದ್ರಮುಖಿಯು, ವೇಶ್ಯಾಸ್ತ್ರೀಸಂಗವು ಮಾಡಿದ ಗಂಡನ ಅಭಿಪ್ರಾಯವನ್ನರಿತು ಹಾಸಿಗೆಯಲ್ಲಿ ತನ್ನನ್ನು ಆಲಿಂಗನಮಾಡಿಕೊಳ್ಳಲು ಬರುತ್ತಿದ್ದ ಅವನ ಸ್ನೇಹವನ್ನು ಬಿಟ್ಟು, ರತಿಕ್ರೀಡೆಗೆ ಅವಕಾಶಕೊಡದೆ ಶ್ರೀ ನೀಲಕಂಠನ ಸಾಕ್ಷಿಯಾಗಿಯೂ ನೀನು ಇನ್ನುಮುಂದೆ ವಾರಸ್ತ್ರೀಸಹವಾಸ ಮಾಡುವುದಿಲ್ಲವೆಂದು ಪ್ರತಿಜ್ಞೆಮಾಡಿದರೆ ನಿನ್ನೊಡನೆ ನಾನು ಕ್ರೀಡಿಸುವೆನು, ಎಂದು ಕೋಪದಿಂದಲೇ ನುಡಿದಳು. ॥೧-೨-೩॥

॥ ಶ್ರೀ ನೀಲಕಂಠ ಉವಾಚ ॥

ಇತ್ಯಾಹ ಸಾ ರುಷಾ ನಾಥಂ ತಮಾಲಿಂಗನಲಾಲಸಂ ।
ಇತ್ಯುಕ್ತಃ ಶ್ರೀನೀಲಕಂಠೋ ರುಷಾವಿಷ್ಟ ಉವಾಚ ತಾಂ ॥೪॥

ಮನಸಾ ತ್ವಾಂ ಸ್ತ್ರಿಯಶ್ಚಾನ್ಯಾಂ ನ ಸ್ಪೃಕ್ಷ್ಯಾಮ್ಯದ್ಯ ಚೇತಸಾ ।
ವಿನಾಯೋನ್ಯಂಗಸಂಸ್ಪರ್ಶಮನಂಗೋದ್ವೇಗವರ್ಜಿತಂ ॥೫॥

ಸಾಪಿ ಚಕ್ರೇ ವ್ರತಂ ಭರ್ತುರಿಷ್ಟಂ ತನ್ವೀ ವಿತನ್ವತೀ ।
ಗಾರ್ಹಸ್ಥ್ಯಧರ್ಮಂ ಸಾ ಚಕ್ರೇ ಪರೈರಜ್ಞಾತಸಂಗರಾ ॥೬॥

ತಾವೇವ ದಂಪತೀ ತಾದೃಗಸಿಧಾರಾವ್ರತಸ್ಥಿತೌ ।
ನಿನ್ಯತುಃ ಕಿಲ ತಾರುಣ್ಯಂ ಶಿವಕಾರುಣ್ಯಭಾಜನೌ ॥೭॥

ಪ್ರವೃದ್ಧಶಿವಭಕ್ತೀ ತೌ ವೃದ್ಧಾ ಶಿಥಿಲವಿಗ್ರಹೌ ।
ಚಕ್ರತುಃ ಶಿವಕೈಂಕರ್ಯಂ ತಥಾಪಿ ತರುಣಾವಿವ ॥೮॥

ತತಸ್ತಯೋರ್ಮತಂ ಜ್ಞಾತುಂ ಶಿವಸ್ತಾಪಸವೇಷಭೃತ್ ।
ದೀರ್ಘಪಿಂಗಜಟಾಧಾರೀ ಕೌಪೀನಾದಂಡವಸ್ತ್ರಧೃಕ್ ॥೯॥

---

ಹೀಗೆ ಪತ್ನಿಯು ನುಡಿಯಲು, ಆಗ ನೀಲಕಂಠನೂ ಕೋಪಾವಿಷ್ಟನಾಗಿ ಅವಳಿಗೆ, ಇನ್ನುಮುಂದೆ ಪುನಃಪೂರ್ವಕವಾಗಿಯೂ ಮನ್ಮಥವಿಕಾರಕ್ಕೆ ಆಶ್ರಯವಾದ ಯೋನ್ಯಾದಿ ಅವಯವಸಂಬಂಧವುಳ್ಳ ಇತರ ಸ್ತ್ರೀಯರನ್ನು ಈ ಶರೀರದಿಂದ ಮುಟ್ಟುವುದಿಲ್ಲವೆಂದು ಪತ್ನಿಯ ಇಷ್ಟದಂತೆ ಪ್ರತಿಜ್ಞೆಮಾಡಿದನು. ॥೪-೫॥

ಅವಳೂ ಸಹ ಅಲ್ಲಿಂದ ಮುಂದೆ ಗಂಡನ ಇಷ್ಟದಂತೆ ನಡೆದುಕೊಳ್ಳುತ್ತಾ ಮತ್ತೊಬ್ಬರಿಗೆ ತಮ್ಮ ಅಂತರಂಗವು ತಿಳಿಯದಂತೆ ಗೃಹಸ್ಥಧರ್ಮವನ್ನು ನಡೆಸುತ್ತಿದ್ದಳು. ಹೀಗೆ 'ಅಸಿಧಾರಾವ್ರತದಲ್ಲಿ' ನಿರತರಾದ ಅಂದರೆ ಕಠಿಣವಾದ ನಿಯಮಮಗ್ನರಾದ ಆ ದಂಪತಿಗಳು ತಮ್ಮ ಯೌವ್ವನವನ್ನೆಲ್ಲಾ ಶಿವನ ದಯಾಭಾಗಿಗಳಾಗಿಯೇ ಕಳೆದರು. ॥೬-೭॥

ಹಾಗೆಯೇ ಹೆಚ್ಚಾದ ಶಿವಭಕ್ತಿಯುಳ್ಳವರಾಗಿ ವಾರ್ಧಕ್ಯದಿಂದ ಸಡಿಲವಾದ ದೇಹಕಟ್ಟುಳ್ಳವರಾದರೂ ಆ ದಂಪತಿಗಳೂ ತರುಣರಂತೆಯೇ ಪರಮೇಶ್ವರನ ಸೇವೆ ಮಾಡುತ್ತಿದ್ದರು. ಹೀಗೆ ಕಾಲಕಳೆಯುತ್ತಿರಲು ಒಂದು ದಿನ ಪರಶಿವನು ಇವರ

ಯಜ್ಞಸೂತ್ರೋಲ್ಲಸದ್ವಕ್ಷಾ ಭಸ್ಮಾಂಗಶ್ರೀತ್ರಿಪುಂಡ್ರಕಃ ।
ಸ್ಮೇರಾನನಃ ಪಾತ್ರಪಾಣಿರ್ನೀಲಕಂಠಾಲಯಂ ಯಯೌ ॥೧೦॥

ಶ್ರೀ ನೀಲಕಂಠಸ್ತಂ ದೃಷ್ಟ್ವಾ ಹೃಷ್ಟಾಂಗಃ ಶಿವಯೋಗಿನಂ ।
ಶಿವಯೋಗೀ ಮಹಾನೇಷ ಇತ್ಯಪೂಜಯದಾದೃತಃ ॥೧೧॥

ನಾಥ ಕಿಂ ಕರವಾಣೀತಿ ಭಕ್ತ್ಯಾ ತೇನೇರಿತಃ ಶಿವಃ ।
ತಮೇನಮಾಹ ಮೇ ಪಾತ್ರಮಿದಮಾದಾಯ ರಕ್ಷ್ಯತಾಂ ॥೧೨॥

ಅಸ್ತ್ಯಸ್ಯ ನ ಸಮಂ ಪಾತ್ರಂ ಪುನಾತ್ಯಂತರತರ್ಪಿತಂ ।
ರತ್ನಾದ್ಯಾದಪಿರಕ್ಷ್ಯಂ ಸ್ಯಾದ್ಭೂಯೋ ಮೇ ರಕ್ಷ್ಯತಾಮಿತಿ ॥೧೩॥

ತತಃ ಶ್ರೀನೀಲಕಂಠಸ್ತು ಪಾತ್ರಮಾದಾಯ ತತ್ಕ್ಷಣಾತ್ ।
ಗೃಹೇ ತನ್ನ್ಯಸ್ಯ ತದ್ರಕ್ಷಾಂ ಕೃತ್ವಾ ಭೂತ್ಯೈಸ್ತದಾ ಸ್ವಯಂ ॥೧೪॥

---

ಅಭಿಪ್ರಾಯವನ್ನು ತಿಳಿಯಬೇಕೆಂದು ತಪಸ್ವಿಯ ವೇಷಧರಿಸಿ, ಉದ್ದವೂ, ಹೊಂಬಣ್ಣವೂ ಆದ ಜಟೆ, ಕೌಪೀನ, ದಂಡ, ವಸ್ತ್ರಗಳನ್ನು ಧರಿಸಿದವನಾಗಿ, ಯಜ್ಞೋಪವೀತದಿಂದ ಶೋಭಿಸುತ್ತಿರುವ ವಕ್ಷಸ್ಥಳವುಳ್ಳವನೂ, ವಿಭೂತಿತ್ರಿಪುಂಡ್ರ ಗಳಿಂದ ಶೋಭಿಸುತ್ತಿರುವ ಹಣೆಯುಳ್ಳವನೂ ಆಗಿ ನಗುಮುಖದಿಂದ ಕೈಯ್ಯಲ್ಲಿ ಒಂದು ಪಾತ್ರೆಯನ್ನು ಹಿಡಿದು ಆ ನೀಲಕಂಠನ ಮನೆಗೆ ಬಂದನು. ॥೮-೯-೧೦॥

ಆಗ ಆ ನೀಲಕಂಠನು ಬಂದಿರುವ ಶಿವಯೋಗಿಯನ್ನು ನೋಡಿ ಸಂತುಷ್ಟಾಂ ತರಂಗನಾಗಿ, "ಶಿವಯೋಗಿಯಾದ ಈತನು ಮಾನ್ಯನು ಮತ್ತು ಪೂಜ್ಯನು" ಎಂದು ಆದರಿಸಿ ಪೂಜಿಸಿದನು. ಅನಂತರ ಸ್ವಾಮಿ, ತಮಗೆ ನನ್ನಿಂದೇನಾಗಬೇಕು? ಏನು ಮಾಡಲಿ? ಎಂದು ಭಕ್ತಿಯಿಂದ ನೀಲಕಂಠನು ಕೇಳಲು, ಆಗ ಶಿವನು ಈ ನನ್ನ ಪಾತ್ರೆಯನ್ನಿಟ್ಟುಕೊಂಡು ಕಾಪಾಡು. ಇದಕ್ಕೆ ಸಮಾನವಾದ ಪಾತ್ರೆಯು ಬೇರೊಂದು ಯಾರಿಗೂ ದೊರೆಯಲಾರದು. ಇದರೊಳಗಿಟ್ಟ ಪದಾರ್ಥಗಳಿಂದ ತೃಪ್ತಿ ಹೊಂದಿದವನು ಪವಿತ್ರನಾಗುವನು. ರತ್ನಗಳೇ ಮೊದಲಾದುವುಗಳಿಗಿಂತಲೂ ಹೆಚ್ಚಾಗಿ ಎಚ್ಚರಿಕೆಯಿಂದ ಇದನ್ನು ರಕ್ಷಿಸು ಎಂದು ಹೇಳಿದನು. ॥೧೧-೧೨-೧೩॥

ಆಗ ಅದರಂತೆಯೇ ಆ ನೀಲಕಂಠನು ಆ ಪಾತ್ರೆಯನ್ನು ಕೂಡಲೇ ತೆಗೆದು ಕೊಂಡು, ತನ್ನ ಮನೆಯಲ್ಲಿರಿಸಿ, ಇತರ ಯಾವ ಪ್ರಾಣಿಗಳಿಂದಲೂ ತೊಂದರೆಯಾಗ

ತಂ ಯಾಂತಮನುಸೃತ್ಯಾಸೌ ನಿವೃತ್ತೋಽಭೂತ್ತದಾಜ್ಞಯಾ ।
ದೇವದೇವೋಽಪಿ ತಾಂ ದಿವ್ಯಾಂ ಪ್ರಾವಿಶತ್ಕಾಂಚನೀಂ ಸಭಾಂ ॥೧೫॥

ಗತೇ ಕಾಲೇ ಶಿವಃ ಪಾತ್ರಂ ಯಾಪಯಿತ್ವಾ ಸ್ವಮಾಯಯಾ ।
ಭೃತ್ಯಾಚ್ಚ ಪುನರಾದಿತ್ಸುಸ್ತಮಾಗಾತ್ಪೂರ್ವವೇಷವಾನ್ ॥೧೬॥

ತಮಾಗತಂ ಪ್ರಣಮ್ಯಾಸೌ ಕುಲಾಲಕುಲಸಂಭವಃ ।
ಆಗತಃ ತವ ಮದ್ಭಾಗ್ಯಾದಿತ್ಯಾಸೀತ್ ತನ್ಮುಖೇಕ್ಷಣಃ ॥೧೭॥

॥ ಶ್ರೀ ಶಿವ ಉವಾಚ ॥

ಪಾತ್ರಂ ಪುರಾ ತ್ವಯಿ ನ್ಯಸ್ತಂ ಸಹಸಾ ತತ್ಪ್ರದಾಯ ಮೇ ।
ತಿಷ್ಠೇತ್ಯುವಾಚ ತಂ ಶರ್ವಃ ಸರ್ವದಾನಾಧಿಪಃ ಶಿವಃ ॥೧೮॥

ತಚ್ಛ್ರುತ್ವಾ ನೀಲಕಂಠೋಽಪಿ ಪ್ರವಿಶ್ಯಾಂತರ್ಗೃಹಂ ಕ್ವಚಿತ್ ।
ಮುಹುರನ್ವಿಷ್ಯ ತತ್ಪಾತ್ರಮದೃಷ್ಟ್ವಾ ದುಃಖಮಾಶ್ರಿತಃ ॥೧೯॥

---

ದಂತೆ ತಾನೇ ಅದನ್ನು ರಕ್ಷಣೆಮಾಡಲು ಹೋದನು. ಅನಂತರ ಶಿವನು ಹೊರಡಲು, ತನ್ನನ್ನನುಸರಿಸಿ ಹಿಂಬಾಲಿಸುತ್ತಿರುವ ನೀಲಕಂಠನು ಆ ಬ್ರಾಹ್ಮಣವೇಷಧಾರಿಯಾದ ಶಿವನ ಅಪ್ಪಣೆಯಿಂದ ಹಿಂದಿರುಗಿದನು. ಅನಂತರ ದೇವದೇವನಾದ ಆ ಶಿವನೂ ದಿವ್ಯವಾದ ಹೇಮಸಭೆಯನ್ನು ಪ್ರವೇಶಿಸಿದನು. ॥೧೪-೧೫॥

ಕೊಂಚಕಾಲ ಕಳೆಯಲು ಶಿವನು ತನ್ನ ಮಾಯೆಯಿಂದ ಆ ಪಾತ್ರೆಯನ್ನು ಅದೃಶ್ಯವನ್ನಾಗಿ ಮಾಡಿ, ಪುನಃ ಭಕ್ತನಾದ ನೀಲಕಂಠನಿಂದ ಅದನ್ನು ತೆಗೆದುಕೊಳ್ಳುವ ಇಚ್ಛೆಯುಳ್ಳವನಾಗಿ, ಹಿಂದಿನಂತೆಯೇ ವೇಷ ಹಾಕಿಕೊಂಡು ಅಲ್ಲಿಗೆ ಬಂದನು. ಆಗ ಕುಂಬಾರನ ಮನೆತನದಲ್ಲಿ ಹುಟ್ಟಿದ ನೀಲಕಂಠನು ಮತ್ತೆಬಂದ ಆತನಿಗೆ ಪ್ರಣಾಮ ಮಾಡಿ, ಸ್ವಾಮಿ, ನನ್ನ ಭಾಗ್ಯೋದಯದಿಂದ ಪುನಃ ತಾವು ಇಲ್ಲಿಗೆ ದಯಮಾಡಿಸಿದಿರಿ, ಬಂದ ಉದ್ದೇಶವೇನು? ಎಂದು ಕೇಳಿ, ಅವರ ಮುಖವನ್ನೇ ನೋಡುತ್ತಾ ನಿಂತುಕೊಂಡನು. ॥೧೬-೧೭॥

"ಎಲೈ ನೀಲಕಂಠನೇ, ಹಿಂದೆ ನಾನು ನಿನ್ನಲ್ಲಿರಿಸಿದ್ದ ಆ ಪಾತ್ರೆಯನ್ನು ಜಾಗ್ರತೆಯಾಗಿ ಈಗ ನನಗೆ ತಂದುಕೊಡು. ಹೊರಡು" ಎಂದು ಸಕಲ ದಾನಗಳಿಗೂ ಒಡೆಯನೂ, ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ಸಂಹಾರಮಾಡು

ಅಂತಸ್ಥೋಽಸಿ ನ ನಿರ್ಯಾಸಿ ಕೋಽ ವಿಲಂಬ ಇತೀರಿತಃ ।
ಸ ತದಾ ನಿರ್ಗತೋಽ ಮಂದವಚಃ ಪ್ರಾಹ ವಿಷಾದವಾನ್ ॥೨೦॥

॥ ಸೂತ ಉವಾಚ ॥

ಜಟಾಜೂಟೋರುಶೋಭಾಂಕಮಸ್ತಕಂ ಭೂತಿಭೂಷಿತಂ ।
ರುದ್ರಾಕ್ಷಸ್ರಗ್ಭಿರಾಕೀರ್ಣಂ ತ್ರಿಪುಂಡ್ರಾವಲಿಭೂಷಿತಂ ॥೨೧॥

ಸ ಕುಲಾಲಃ ಕುಲಾಲೇಶಂ ಪ್ರಣಮ್ಯ ವಿನಯಾನತಃ ।
ಪ್ರಾಂಜಲಿರ್ವಿನಯೇನಾಹ ನೀಲಕಂಠಃ ಸದಾಶಿವಂ ॥೨೨॥

॥ ಕುಲಾಲ ಉವಾಚ ॥

ತನ್ನ ಪಶ್ಯಾಮಿ ತೇ ಪಾತ್ರಂ ದದಾಮ್ಯನ್ಯಚ್ಚ ತನ್ನಿಭಂ ।
ಮನ್ನಾಥಕೋಽಪರಾಧೋ ಮೇ ಕ್ಷಮ್ಯತಾಂ ಭವತಾ ಪ್ರಭೋ ॥೨೩॥

ಕೃತಪ್ರಣಾಮಂ ತಂ ಪ್ರಾಹ ಕೋಪಪ್ರಸ್ಫುರಿತಾಧರಃ ॥೨೪॥

---

ವವನೂ ಆದ ಶಿವನು ಹೇಳಿದನು. ಆ ಮಾತುಗಳನ್ನು ಕೇಳಿ ನೀಲಕಂಠನು ಒಳಗೆ ಹೋಗಿ, ಮನೆಯ ಒಳಭಾಗದಲ್ಲೆಲ್ಲಾ ಸುತ್ತಿ ಹುಡುಕುತ್ತಾ ಎಲ್ಲಿಯೂ ಆ ಪಾತ್ರೆಯನ್ನು ಕಾಣದೇ ದುಃಖಿತನಾದನು. ಆಗ ಈಶ್ವರನು ಹೊರಗೆ ಬರದಿರುವ ಆ ನೀಲಕಂಠನನ್ನು ಕುರಿತು, ಒಳಗೆ ಹೋದವನು ಇನ್ನೂ ಬರದೇ ಹೀಗೆ ವಿಲಂಬ ಮಾಡಲು ಕಾರಣವೇನೆಂದು ಕೂಗಲು, ಆಗ ಅವನು ಬಂದು ಮೆಲ್ಲಗೆ ದುಃಖದಿಂದ ಇಂತೆಂದನು. ॥೧೮-೧೯-೨೦॥

ದೊಡ್ಡ ಜಡೆಯ ಕಾಂತಿಯಿಂದ ಪ್ರಕಾಶಿತವಾದ ತಲೆಯುಳ್ಳವನೂ, ವಿಭೂತಿಯನ್ನು ಲೇಪನಮಾಡಿಕೊಂಡಿರುವವನೂ, ರುದ್ರಾಕ್ಷಮಾಲೆಗಳನ್ನು ಹಾಕಿಕೊಂಡಿರುವವನೂ, ಭಸ್ಮತ್ರಿಪುಂಡ್ರಗಳ ಸಮೂಹಗಳಿಂದ ಅಲಂಕೃತನೂ, ಲೋಕದ ಕುಂಬಾರರಿಗೆ ಒಡೆಯನೂ ಆದ ಸದಾಶಿವನಿಗೆ ಆ ನೀಲಕಂಠನೆಂಬ ಕುಂಬಾರನು ವಿನಯದಿಂದ ಕೈಮುಗಿದು ನಮಸ್ಕಾರಮಾಡಿ ಅವನೊಡನಿಂತೆಂದನು. ॥೨೧-೨೨॥

" ನನ್ನೊಡೆಯನಾದ ಪ್ರಭುವೇ, ನಿನ್ನ ಪಾತ್ರೆಯು ಎಲ್ಲಿಯೂ ಕಾಣುವುದಿಲ್ಲ. ಅದಕ್ಕೆ ಸಮಾನವಾದ ಬೇರೊಂದು ಪಾತ್ರೆಯನ್ನು ಕೊಡುತ್ತೇನೆ. ಸ್ವಾಮಿ, ಈ ನನ್ನ ತಪ್ಪನ್ನು ಕ್ಷಮಿಸಬೇಕು " ಎಂದು ನಮಸ್ಕರಿಸಿ ಬೇಡುತ್ತಿರುವ ಕುಲಾಲನನ್ನು

॥ ಶಿವಯೋಗ್ಯುವಾಚ ॥

ಘೋರಂ ತ್ವಯೋಕ್ತಂ ಕಿಂ ನಾಮ ಯತ್ಪಾತ್ರಂ ತದ್ವದಸ್ವ ಮೇ ।
ಅಪಿ ರತ್ನಸ್ವರ್ಣಮಯಮನ್ಯನ್ನಾದಾತುಮುತ್ಸಹೇ ॥೨೫॥

ಇತ್ಯುಕ್ತಃ ಸೋಽಬ್ರವೀದ್ಭೂಯಃ ಪ್ರಮಾದೋ ಮೇ ಮಹಾನಭೂತ್ ।
ಕಿಂ ತೇಽನ್ನಪಾತ್ರಂ ಸ್ಥಾಪ್ಯನ್ಯದ್ದದಾಮೀತ್ಯವದತ್ತತಃ ॥೨೬॥

ನ್ಯಾಯವತ್ಸ್ತುತಿಗುಹ್ಯಾಂ ತ್ವಂ ಭಕ್ತಿಮುದ್ಭಾವ್ಯ ಶುದ್ಧವತ್ ।
ಕಿಂಚಿನ್ನ ಲಜ್ಜಸೇ ವಾಚಾ ನ ಯಾಹ್ಯದ್ಯ ಪದಾತ್ಪದಂ ॥೨೭॥

ಲೋಕಃ ಪಶ್ಯತು ರುದ್ಧ್ವಾ ತ್ವಾಮನಾದಾಯ ಚ ಪಾತ್ರಿಕಾಂ ।
ನಯಾಮೀತ್ಯುದ್ಧಟಾಲಾಪಂ ಕುಲಾಲಃ ಪ್ರಾಹ ತಂ ದ್ವಿಜಂ ॥೨೮॥

---

ಕುರಿತು ಕೋಪದಿಂದ ನಡುಗುತ್ತಿರುವ ತುಟಿಯುಳ್ಳವನಾಗಿ ಆ ಶಿವಯೋಗಿಯು ಇಂತೆಂದನು. ||೨೩-೨೪||

ನೀನು ಹೇಳುತ್ತಿರುವುದು ಕೇವಲ ಮೋಸದ ಮಾತಾಗಿದೆ. ಏನು ಯಾವ ಬೇರೆ ಪಾತ್ರೆಯನ್ನು ಕೊಡಬೇಕೆಂದಿರುವೆ? ಅದನ್ನು ನನಗೆ ಹೇಳು. ಅದೇನು ರತ್ನ ಮತ್ತು ಸುವರ್ಣಮಯವಾದದ್ದೇ? ಇದಲ್ಲದೆ ಬೇರೆಯದನ್ನು ನಾನು ತೆಗೆದು ಕೊಳ್ಳಲಿಚ್ಛಿಸುವುದಿಲ್ಲವೆಂದು ಶಿವಯೋಗಿಯು ಹೇಳುತ್ತಿರಲು, ಆಗ ಕುಲಾಲನು, ಅಯ್ಯ ಭಕ್ತವರ್ಯನೇ, ನನ್ನಿಂದ ದೊಡ್ಡ ಪ್ರಮಾದವಾಯಿತು. ನೀನು ಕೊಟ್ಟ ಅನ್ನದ ಪಾತ್ರೆಯನ್ನು ನಾನಿಟ್ಟುಕೊಂಡು ನಿನಗೆ ಬೇರೆ ಕೊಡುತ್ತಿರುವೆನೆಂದು ತಿಳಿದೆಯೋ! ಹಾಗೆಂದಿಗೂ ತಿಳಿಯಬೇಡವೆಂದು ಪುನಃ ಹೇಳಿದನು. ||೨೫-೨೬||

ನೀನು ಬಹಳ ಪರಿಶುದ್ಧನಂತೆ ನಟಿಸುತ್ತಿರುವೆ. ಇದು ನ್ಯಾಯವಲ್ಲ. ಮತ್ತು ಸ್ತೋತ್ರಕ್ಕೆ ಅನರ್ಹವಾದ ಭಕ್ತಿಯನ್ನು ಪ್ರಕಟಿಸುತ್ತಿರುವೆ. ಮಾತನಾಡಲು ನಿನಗೆ ಕೊಂಚವೂ ನಾಚಿಕೆಯಾಗುವುದಿಲ್ಲವೇ? ಇಲ್ಲಿಂದ ಒಂದು ಹೆಜ್ಜೆಯನ್ನೂ ಮುಂದಿಡ ಬೇಡ. ಜನಗಳೆಲ್ಲರೂ ನೋಡಲಿ. ನಿನ್ನನ್ನು ತಡೆದು ನನ್ನ ಪಾತ್ರೆಯನ್ನು ತೆಗೆದು ಕೊಳ್ಳದೇ ನಾನು ಹೋಗುವುದೇ ಇಲ್ಲವೆಂದು ಹಟಮಾಡುತ್ತಿರುವ ಆ ದ್ವಿಜನನ್ನು ಕುರಿತು ಕುಂಬಾರನು ಇಂತೆಂದನು. ||೨೭-೨೮||

ಪಾತ್ರಂ ನ ವಂಚಿತಂ ಭಕ್ತ ಚೌರ್ಯಂ ನಾಸ್ತ್ಯಲ್ಪಕಂ ಮಯಿ ।
ಕಿಂ ವಾತ್ರ ಕುರ್ಯಾಮಿತ್ಯುಕ್ತೋ ದೇವಸ್ತಂ ಪುನರಬ್ರವೀತ್ ॥೨೯॥

॥ ಶಿವಯೋಗ್ಯುವಾಚ ॥

ಯದ್ಯೇವಂ ತನಯಂ ಹಸ್ತೇ ಗೃಹೀತ್ವಾ ದೀರ್ಘಿಕಾಂಭಸಿ ।
ನಿಮಜ್ಜ ತ್ವಂ ವಿಶುದ್ಧಾತ್ಮಾ ಪುನರ್ಯಾಹಿ ಗೃಹಾನಿತಿ ॥೩೦॥

ತಚ್ಛ್ರುತ್ವಾ ನೀಲಕಂಠೋಽಪಿ ತಮಾಹ ಕಪಟದ್ವಿಜಂ ।
ಕಿಂ ಕರ್ತವ್ಯಂ ಸುತೋ ನೈವ ಮಮಾಸ್ತೀತಿ ಭಯಾಕುಲಃ ॥೩೧॥

ಯದ್ಯೇವಂ ಮಹಿಲಾಂ ಹಸ್ತೇ ಗೃಹೀತ್ವಾ ವಾಪಿಕಾಜಲೇ ।
ನಿಮಜ್ಯೋನ್ಮಜ್ಯ ಗಚ್ಛೇತಿ ವ್ಯಾಜವಿಪ್ರೋ ಬಭಾಷ ತಂ ॥೩೨॥

ಇತ್ಯುಕ್ತಃ ಶಂಕರೇಣಾಸೌ ಶಂಕರೇಣಾನಯಾ ಸಹ ।
ನಿಮಜ್ಜನಂ ಮಮಾಯುಕ್ತಮಹಮೇಕಃ ಪುರಸ್ತವ ॥೩೩॥

---

ಅಯ್ಯ ಈಶ್ವರಭಕ್ತನೇ, ನಾನು ನಿನಗೆ ವಂಚನೆಮಾಡುವುದಿಲ್ಲ. ನನ್ನಲ್ಲಿ ಕೊಂಚವೂ ಕಳ್ಳತನವನ್ನೆಣಿಸಬೇಡ. ಈಗ ಮುಂದೆ ನಾನೇನು ಮಾಡಲಿ ಎಂಬುದನ್ನು ತಿಳಿಸು ಎಂದು ಕುಂಬಾರನು ಹೇಳಲು ಆತನನ್ನು ಕುರಿತು ಮಹಾದೇವ ನಿಂತೆಂದನು. ॥೨೯॥

ಎಲೈ ಕುಂಬಾರನೇ, ಈಗ ನಿನ್ನ ಮಗನನ್ನು ಜೊತೆಯಲ್ಲಿ ಕರೆದುಕೊಂಡು ಈ ಕೊಳದ ನೀರಿನಲ್ಲಿ ಮುಳುಗಿ ಪರಿಶುದ್ಧನಾಗಿ ಅನಂತರ ಮನೆಗೆ ಹೋಗು, ಎಂದು ಹೇಳಲು ಆ ಮಾತನ್ನು ಕೇಳಿ ಶ್ರೀಕಂಠನು ಆ ಕಪಟವೇಷಧಾರಿಯಾದ ಬ್ರಾಹ್ಮಣನಿಗೆ ಅಯ್ಯಾ ಭಕ್ತನೇ, ಏನುಮಾಡಲಿ, ನೀನು ಹೇಳಿದಂತೆ ಮಾಡೋಣವೆಂದರೆ ನನಗೆ ಮಗನೇ ಇಲ್ಲವೆಂದು ಭಯಾತುರನಾಗಿರಲು, ಪುನಃ ಶಿವಯೋಗಿಯು ಹಾಗಾದರೆ ನಿನ್ನ ಹೆಂಡತಿಯನ್ನು ಹಿಡಿದು ಭಾವಿಯ ನೀರಿನಲ್ಲಿ ಮುಳುಗಿ ಮುಳುಗಿ ಪುನಃ ಬಾ, ಎಂದು ಮಾಯಾಬ್ರಾಹ್ಮಣನು ಕುಂಬಾರನಿಗೆ ಆಜ್ಞೆಮಾಡಿದನು. ॥೩೦-೩೧-೩೨॥

ಶಂಕರನಿಂದ ಹೀಗೆ ಹೇಳಲ್ಪಟ್ಟ ಕುಂಬಾರನು ಮತ್ತೆ ಶಂಕರನೊಡನೆ ಸ್ವಾಮಿ, ನನ್ನ ಪತ್ನಿಯೊಡನೆ ನಾನು ಕೊಳದಲ್ಲಿ ಮುಳುಗುವುದು ಯುಕ್ತವಲ್ಲ;

ದೀರ್ಘಿಕಾಂ ಸಕಲಾಂ ಮತ್ವಾ ಪ್ರಾಗುನ್ಮಜ್ಯ ನಿಮಜ್ಜ್ಯತೇ ।
ಇತ್ಯವಾದೀತ್ಕುಲಾಲಾಗ್ರ್ಯೋ ಭಾವನಾಬ್ರಾಹ್ಮಣಸ್ತದಾ ॥೩೪॥

ಯದ್ಯೇವಂ ಚೋರಿತಂ ನೈವ ದಿತ್ಸಸಿ ಸ್ತ್ರೀಕರಂಕರೇ ।
ಕ್ವವೇಚ್ಛಸಿ ನ ವಾ ಮಂತುಂ ಯಾಹಿ ತಿಲ್ಲವನಂ ದ್ವಿಜಾನ್ ॥೩೫॥

ಅಹಂ ಯಾಸ್ಯಾಮಿ ತೈರುಕ್ತೋ ಕರಿಷ್ಯಾಮಿ ಮಹಾತ್ಮಭಿಃ ।
ಇತ್ಯುಕ್ತ್ವಾ ಸಹ ತೇನೇಶೋ ಯಾಹಿ ತಿಲ್ಲವನಂ ದ್ವಿಜಾನ್ ॥೩೬॥

ಮದ್ದತ್ತಾ ಪಾತ್ರಿಕಾ ನೈಷಾ ದಾನೇ ಮಹಿಲಯಾ ಸಹ ।
ನ ನಿಮಜ್ಜತ್ಯತೀವೇಶೋ ವ್ಯಾಹರದ್ದ್ವಿಜಸನ್ನಿಧೌ ॥೩೭॥

ಬ್ರೂಹೀತಿ ತೈರ್ದ್ವಿಜೈರುಕ್ತೋ ಸ ಕುಲಾಲವರೋಽಬ್ರವೀತ್ ॥೩೮॥

---

ನಾನೊಬ್ಬನೇ ನಿನ್ನ ಮುಂದೆ ಈ ಬಾವಿಯಲ್ಲೆಲ್ಲಾ ಎಲ್ಲಿಬೇಕಾದರೂ ಮುಳುಗಿಬರುತ್ತೇನೆಂದು ನುಡಿಯಲು ಆಗ ಮಾಯಾಬ್ರಾಹ್ಮಣನು, ॥೩೩-೩೪॥

ಎಲೈ ಕುಂಬಾರನೇ, ಈ ರೀತಿ ನೀನು ನಿನ್ನ ಪತ್ನಿಯ ಕೈಯನ್ನು ಹಿಡಿಯದೇ, ಅಪಹರಿಸಿರುವ ನನ್ನ ಪದಾರ್ಥವನ್ನೂ ಕೊಡಲಿಚ್ಛಿಸುವುದಿಲ್ಲವಾದರೆ, ಮತ್ತೆ ಹೇಗೆ ಈ ತಪ್ಪನ್ನು ಕಳೆದುಕೊಳ್ಳಲು ಬಯಸುತ್ತೀಯೆ ? ತಿಲ್ಲವನಕ್ಕೆ ನಡೆ. ಅಲ್ಲಿರುವ ಬ್ರಾಹ್ಮಣರನ್ನು ಸೇವಿಸು, ಎಂದು ಹೇಳಿದನು. ॥೩೫॥

ಆಗ ಅವನು ಅದಕ್ಕೆ ಒಪ್ಪಿಕೊಂಡನು. ಅಲ್ಲಿ ಹೋಗಿ ಆ ಮಹಾತ್ಮರು ಹೇಳಿದಂತೆಯೇ ಮಾಡುವೆನೆಂದು ಹೇಳಿ ಈಶ್ವರನೊಡನೆ ಅಲ್ಲಿಗೆ ಹೊರಟನು. ಆಗ ಈಶ್ವರನು ಆ ತಿಲ್ಲವನದಲ್ಲಿದ್ದ ಬ್ರಾಹ್ಮಣರನ್ನು ಕುರಿತು, ಈತನು ನಾನು ಕೊಟ್ಟ ಪಾತ್ರೆಯನ್ನು ಕೊಡದೇ, ನಾನು ಹೇಳಿದಂತೆ ತನ್ನ ಹೆಂಡತಿಯೊಡನೆ ಕೊಳದಲ್ಲಿ ಮುಳುಗದೆ ಅವಿನೀತನಾಗಿರುವನೆಂದು ಬ್ರಾಹ್ಮಣರ ಸಂಮುಖದಲ್ಲಿ ಹೇಳಲು ವಿಶೇಷವೇನು ಹೇಳೆಂದು ಆ ಬ್ರಾಹ್ಮಣರಿಂದ ಕೇಳಲ್ಪಟ್ಟ ಆ ಕುಂಬಾರ ಶ್ರೇಷ್ಠನು ಇಂತೆಂದನು. ॥೩೬-೩೭-೩೮॥

॥ ಕುಲಾಲ ಉವಾಚ ॥

**ಏತದ್ದತ್ತಂ ಮಯಾ ಗುಪ್ತಂ ಪಾತ್ರಂ ನೈವ ಪ್ರದೃಶ್ಯತೇ ।**
**ತದಾಕರ್ಣ್ಯ ದ್ವಿಜಃ ಪ್ರಾಹ ಯದ್ಯೇವಂ ಭಾರ್ಯಯಾ ಸಹ ॥೩೯॥**

**ನಿಮಜ್ಜ ತ್ವಂ ಜಲೇ ತೇನ ಯಥೋಕ್ತಂ ನೀತಿರೀದೃಶೀ ।**
**ತದಾಕರ್ಣ್ಯ ಕುಲಾಲಾಗ್ರ್ಯೋ ಯದ್ಯೇವಂ ಕ್ರಿಯತೇ ಮಯಾ ॥೪೦॥**

**ಪ್ರತಿವಾದ್ಯನುಮಿತ್ಯೇಽಪಿ ಭಣಿತ್ವಾ ಭವನಂ ಯಯೌ ।**
**ಭವನಂ ಪ್ರಾಪ್ಯ ಗೇಹಿನ್ಯಾ ದೇಹಿನ್ಯೇವ ನವಶ್ರಿಯಾ ॥೪೧॥**

**ಸಹಾಗತ್ಯ ಸಭಾಮೇವಂಸಾರವಾಚಮುವೋಚ ತಂ ।**
**ಉಭಯೋರಂತರೇ ಕಾಮಮಾವಾಭ್ಯಾಂ ದಂಡಮಜ್ಜನೇ ॥೪೨॥**

**ಪಾಣಿಭ್ಯಾಂ ದಂಡಮಾಲಭ್ಯ ನಿಮಜ್ಜತ ಇತೀರಯನ್ ।**
**ತಥಾ ನಿಮಂಕ್ತುಮುದ್ಯೋಗಮತಾನೀದ್ವಾಪಿಕಾಜಲೇ ॥೪೩॥**

**ತಂ ತಥಾವಿಧಮಾಲೋಕ್ಯ ದ್ವಿಜಾ ಏವಮವಾದಿಷುಃ ॥೪೪॥**

---

ಎಲೈ ಬ್ರಾಹ್ಮಣೋತ್ತಮರೇ, ಈತನು ನನಗೆ ಕೊಟ್ಟಿದ್ದ ಪಾತ್ರೆಯನ್ನು ನಾನು ಗುಟ್ಟಾಗಿ ಕಾಪಾಡುತ್ತಿದ್ದೆನು. ಆದರೆ ಈಗ ಅದನ್ನು ನೋಡಿದರೆ, ಅಲ್ಲಿ ಕಾಣದಂತಾಗಿದೆ ಎಂದು ನಾನು ಹೇಳಿದೆನು. ಆಗ ಈ ಬ್ರಾಹ್ಮಣನು, ಹಾಗಾದರೆ ನೀನು ನಿನ್ನ ಹೆಂಡತಿಯೊಡನೆ ಕೈಹಿಡಿದು ನೀರಿನಲ್ಲಿ ಮುಳುಗಿ ಪುನಃ ಬಾ ಎಂದೂ ಇದೇ ನೀತಿಯೆಂದೂ ನುಡಿದನು. ಈಗ ನಾನು ಅದಕ್ಕಾಗಿ ನಿಮ್ಮಲ್ಲಿಗೆ ಬಂದಿರುವೆನು. ಈಗ ನಿಮ್ಮೆದುರಿಗೆ ಪ್ರತಿವಾದಿಯು ಅಭಿಪ್ರಾಯದಂತೆ ಮಾಡುತ್ತೇನೆಂದು ಹೇಳಿ, ಮನೆಗೆ ಹೋಗಿ ಹೊಸ ಲಕ್ಷ್ಮಿಯಂತಿರುವ ಪತ್ನಿಯೊಡನೆ ಬಂದು ಅಲ್ಲಿದ್ದವರೊಡನೆ ಹೀಗೆ ನುಡಿದನು. ॥೩೯-೪೦-೪೧॥

ಎಲೈ ವಿಪ್ರರೇ, ನೀರಿನಲ್ಲಿ ಮುಳುಗುವಾಗ ನಮ್ಮಿಬ್ಬರ ಮಧ್ಯದಲ್ಲಿ ಒಂದು ದಂಡವನ್ನು ಕೈಯ್ಯಲ್ಲಿ ಹಿಡಿದು ಮುಳುಗುತ್ತೇವೆಂದು ಹೇಳುತ್ತಾ ಹಾಗೆಯೇ ಬಾವಿಯ ನೀರಿನಲ್ಲಿ ಮುಳುಗಲು ಉದ್ಯುಕ್ತನಾಗುತ್ತಿರುವುದನ್ನು ನೋಡಿ ಆ ಬ್ರಾಹ್ಮಣರು ಹೀಗೆ ಮಾತನಾಡಿದರು. ॥೪೨-೪೩-೪೪॥

॥ ದ್ವಿಜಾ ಊಚುಃ ॥

ನೈವಂ ನಿಮಜ್ಜನಂ ಕಾರ್ಯಂ ಪ್ರತ್ಯರ್ಥೀ ನಾನುಮನ್ಯತೇ ।
ಕರೇಣ ಕರಮಾಲಂಬ್ಯ ತಯಾಸಹ ನಿಮಜ್ಯತಾಂ ॥೪೫॥

ಇತ್ಯುಕ್ತೋ ನೀಲಕಂಠಸ್ತೈರ್ವ್ಯಾಘ್ರಪಾದೇಶಸನ್ನಿಧೌ ।
ಪ್ರಕಾಶ್ಯ ಸಂವಿಧಂ ಯೂಪಂ ನಿಮಮಜ್ಜ ತಥೈವ ಸಃ ॥೪೬॥

ಉನ್ಮಜ್ಯ ಸ ತಯಾ ಸಾರ್ಧಂ ದದೃಶೇ ಸಹತೈರ್ದ್ವಿಜೈಃ ।
ತರುಣಾಕೃತಿರುತ್ಥಾಯ ವಾರ್ಧಕೇ ತರುಣೀವ ಸಾ ॥೪೭॥

ನಾ ದೃಶ್ಯತ ತದಾ ವ್ಯಾಜಬ್ರಾಹ್ಮಣಸ್ತತ್ರ ರೋಧಸಿ ।
ವ್ಯಾಲೋಕಿ ವೃಷಭಾರೂಢೋ ಮೃಡಸ್ತತ್ರ ಸಹೋಮಯಾ ॥೪೮॥

ದಂಪತೀ ತೌ ಸರಸ್ತೋಯೇ ನಿಮಜ್ಜಂತೌ ಯುವಾಕೃತೀ ।
ದೇವಪ್ರಸೂನವೃಷ್ಟ್ಯಾಕೌ ನಿಮಗ್ನಾಂಗೌ ಬಭೂವತುಃ ॥೪೯॥

ತುಷ್ಟಾವ ತೇ ತದಾ ಶಂಭುಂ ಕುಲಾಲೌ ತೌ ಚ ದಂಪತೀ ॥೫೦॥

---

ಎಲೈ ಕುಂಬಾರನೇ, ಹೀಗೆ ನೀನು ಸ್ನಾನಮಾಡಬೇಡ. ಪ್ರತಿವಾದಿಯು ಈ ರೀತಿಯ ಸ್ನಾನವನ್ನೊಪ್ಪುವುದಿಲ್ಲ. ನಿನ್ನ ಹೆಂಡತಿಯ ಕೈಯನ್ನು ನಿನ್ನ ಕೈಯಿಂದ ಹಿಡಿದು ಮುಳುಗೆಂದು ಹೇಳಲು, ಆ ನೀಲಕಂಠನು ಆ ಬ್ರಾಹ್ಮಣ ರೊಡನೆ ವ್ಯಾಘ್ರಪಾದೇಶ್ವರನ ಸಂಮುಖದಲ್ಲಿ ಎಲ್ಲರೆದುರಿಗೆ ಆ ಕಂಬವನ್ನು ಪ್ರಕಟ ಪಡಿಸಿ, ಅವರು ಹೇಳಿದಂತೆಯೇ ಮುಳುಗಿದನು. ಹೀಗೆ ತನ್ನ ಪತ್ನಿಯ ಕೈಹಿಡಿದು ಮುಳುಗಿ ಮೇಲೆದ್ದು ಬಂದ ಆ ಕುಲಾಲನು ಮುಪ್ಪಿನ ವಯಸ್ಸಿನಿಂದ ಶೋಭಿಸುತ್ತಿದ್ದವನು ಕೇವಲ ತರುಣನಾಗಿಯೂ ಮತ್ತು ಆತನ ಹೆಂಡತಿಯು ಪ್ರಾಯದವಳಾಗಿರುವುದನ್ನೂ ಆ ಬ್ರಾಹ್ಮಣರು ನೋಡಿದರು. ॥೪೫-೪೬-೪೭॥

ದಡದಲ್ಲಿ ನಿಂತಿದ್ದ ಮಾಯಾಬ್ರಾಹ್ಮಣನು ಅವರಿಗೆ ಕಾಣಿಸಲಿಲ್ಲ. ಅದಕ್ಕೆ ಬದಲಾಗಿ ವೃಷಭಾರೂಢನಾದ ಶಂಕರನು ಪಾರ್ವತಿಯೊಡನೆ ಅಲ್ಲಿ ಕಾಣಿಸಿಕೊಂಡನು. ನೀರಿನಲ್ಲಿ ಮುಳುಗುತ್ತಿರುವ ಆ ಯುವಕದಂಪತಿಗಳ ಮೇಲೆ, ದೇವತೆಗಳು ಪುಷ್ಪವೃಷ್ಟಿಯನ್ನು ಕರೆದರು. ಆಗ ಅಲ್ಲಿದ್ದ ಬ್ರಾಹ್ಮಣರೂ ಮತ್ತು ಕುಲಾಲ ದಂಪತಿಗಳೂ ಸಹ ಶಂಕರನನ್ನು ಈ ರೀತಿ ಸ್ತೋತ್ರಮಾಡಿದರು. ॥೪೮-೪೯-೫೦॥

॥ ಕುಲಾಲಾವೂಚತುಃ ॥

ನಮೋಽಸ್ತು ತೇ ದೇವ ದಯಾನಿಧೇ ಹರ
ಪ್ರಪನ್ನಪಾಲಾವ್ಯಯ ಸಾಮಿಮೌಲೇ ।
ವ್ಯಾಲೋಲಮಾಲಾಮಲಹಸ್ತಶೂಲ
ಮಾಂ ಪಾಹಿ ಸರ್ವೇಶ್ವರ ಕಾಲಕಾಲ ॥೫೧॥

ಶಿವಸ್ತುತಸ್ತಿಲ್ಲವನದ್ವಿಜೇಂದ್ರೈ
ರ್ಜಾಯಾಪತೀ ತೌ ಪ್ರಣತೌ ಸ್ತುವಂತೌ ।
ಸಂಪ್ರಾಪ್ಯ ಭೋಗಾನಿಹ ಯಾತಮಂತೇ
ಮದೀಯಧಾಮೇತಿ ತದಾತಿರೋಽಭೂತ್ ॥೫೨॥

ಸ ನೀಲಕಂಠಸ್ತರುಣೀಸಮೇತೋ
ಭೋಗಾನ್ಬುಭುಜನ್ವೈ ತರುಣೇಂದುಮೌಲೇಃ ।
ನಿಧಾಯ ಪೂಜಾಂ ವ್ರತವೈಭವೇನ
ಕ್ರಮಾದಯಾಸೀದ್ರಜತಾದ್ರಿಶೃಂಗಂ ॥೫೩॥

---

ದಯಾಸಮುದ್ರನಾದ ಶಂಕರನೇ, ನಿನಗೆ ನಮಸ್ಕಾರಮಾಡುತ್ತೇನೆ. ಶರಣಾಗತರನ್ನು ಕಾಪಾಡುವವನೂ ನಾಶರಹಿತನೂ ಅರ್ಧಚಂದ್ರಮೌಳಿಯೂ, ಸರ್ಪಹಾರನೂ, ಶೂಲಪಾಣಿಯೂ, ಸರ್ವರಿಗೂ ಒಡೆಯನೂ, ಯಮಾಂತಕನೂ ಆದ ಶಂಭುವೇ, ನನ್ನನ್ನು ಕಾಪಾಡು. ॥೫೧॥

ಆ ತಿಲ್ಲವನದಲ್ಲಿರುವ ಬ್ರಾಹ್ಮಣೋತ್ತಮರಿಂದ ನಾನಾ ರೀತಿ ಸ್ತೋತ್ರಮಾಡಲ್ಪಟ್ಟ ಶಿವನು ತನಗೆ ನಮಸ್ಕಾರಮಾಡಿ ಸ್ತೋತ್ರಮಾಡುತ್ತಿರುವ ಕುಲಾಲದಂಪತಿಗಳನ್ನು ಕುರಿತು, ನೀವು ಈ ಲೋಕದಲ್ಲಿ ಸಕಲ ಭೋಗಗಳನ್ನೂ ಅನುಭವಿಸಿ ಕೊನೆಗೆ ನನ್ನ ಸ್ಥಾನಕ್ಕೆ ಬನ್ನಿರೆಂದು ಹೇಳಿ ಮರೆಯಾದನು. ॥೫೨॥

ಆ ನೀಲಕಂಠನಾಪರೋ ತನ್ನ ಹೆಂಡತಿಯೊಡನೆ ಈ ಲೋಕದಲ್ಲಿ ಆ ಬಾಲಚಂದ್ರಚೂಡನ ಅನುಗ್ರಹದಿಂದ ಎಲ್ಲಾ ಭೋಗಗಳನ್ನೂ ಅನುಭವಿಸಿ, ಶಿವನ ಪೂಜೆಯನ್ನೂ ನಡೆಸಿ ಕ್ರಮವಾಗಿ ಆ ರಜತಾಚಲಶಿಖರವನ್ನೈದಿದನು. ॥೫೩॥

**ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ನೀಲಕಂಠಭಕ್ತಚರಿತ್ರ ಪರೀಕ್ಷಾವರಪ್ರದಾನಂ ನಾಮ ಷಡ್ವಿಂಶೋಽಧ್ಯಾಯಃ**

---

ಇಂತು ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ನೀಲಕಂಠನೆಂಬ ಭಕ್ತನ ಪರೀಕ್ಷೆ ಮತ್ತು ಅವನಿಗೆ ವರಪ್ರದಾನ ಇವುಗಳ ವರ್ಣನೆಯೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಸಪ್ತವಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಸ್ವಭಾವರಿಪುಸಂಜ್ಞಸ್ಯ ಕಥಯಾಮಿ ಕಥಾಂ ಶುಭಾಂ ।
ಮೇರುಮುದ್ರಿತಶಾರ್ದೂಲಲಾಲಿತೇನ ಜಗಜ್ಜಿತಾಂ ॥೧॥

ನೃಪೇಣಾಭಂಗಚೋಲೇಂದ್ರನಾಮ್ನಾ ಕಾರ್ನ್ವಯಜನ್ಮನಾ ।
ಕಾವೇರೀವಾರಿಭರಿತೇ ಪಾಲಿತೇ ಚೋಲಮಂಡಲೇ ॥೨॥

ಕವೇರಪುಷ್ಪಪುರೀತ್ಯಸ್ತಿ ದೇವಪುರೀಸಮಾ ।
ತಸ್ಯಾಮಾಸೀದ್ವೈಶ್ಯವರ್ಯಃ ಸ್ವಭಾವರಿಪುಸಂಜ್ಞಕಃ ॥೩॥

---

## ಇಪ್ಪತ್ತೇಳನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ, ಸ್ವಭಾವರಿಪುವೆಂಬ ಹೆಸರಿನ ಈಶ್ವರಭಕ್ತನೊಬ್ಬನ ಮಂಗಳಕರವಾದ ಕಥೆಯನ್ನು ಹೇಳುತ್ತೇನೆ, ಕೇಳು. ಈತನ ಕಥೆಯು ಮೇರು ಪರ್ವತವಾಸಿಯಾದ ಹುಲಿಯಿಂದಲೂ ಲಾಲಿಸಲ್ಪಟ್ಟು ಪ್ರಪಂಚದಲ್ಲೆಲ್ಲಾ ಪ್ರಸಿದ್ಧಿಗೊಂಡಿದೆ. ಕಾವೇರೀನದಿಯ ಜಲದಿಂದ ಪವಿತ್ರವಾಗಿರುವ ಚೋಲದೇಶದಲ್ಲಿ ಸೂರ್ಯವಂಶೋತ್ಪನ್ನನಾದ ಅಭಂಗಚೋಲೇಂದ್ರನೆಂಬ ರಾಜನು ರಾಜ್ಯಪರಿಪಾಲನೆ ಮಾಡುತ್ತಿದ್ದನು. ಮಹೇಂದ್ರನ ಅಮರಾವತಿಗೆ ಸಮಾನವಾದ ' ಕವೇರಪುಷ್ಪಪುರಿ ' ಎಂಬ ಒಂದು ಪಟ್ಟಣವು ಆ ಚೋಲದೇಶದಲ್ಲಿದ್ದಿತು. ಆ ಪಟ್ಟಣದಲ್ಲಿ ಸ್ವಭಾವರಿಪುವೆಂಬ ಹೆಸರಿನ ಒಬ್ಬ ವೈಶ್ಯಶ್ರೇಷ್ಠನಿದ್ದನು. ॥೧-೨-೩॥

ಪ್ರಥಮಃ ಶಿವಭಕ್ತಾನಾಂ ಶ್ರೀಶಾಂಭವಪದಾರ್ಚಕಃ ।
ಶಿವಭಕ್ತಪದಾರ್ಚಾತೋ ಸಂಪದಾ ಧನದೋಪಮಃ ॥೪॥

ತಸ್ಮಿನ್ದದಾತಿ ಭಕ್ತೇಭ್ಯೋ ವಸ್ತುತಸ್ತದಭೀಪ್ಸಿತಂ ।
ತಸ್ಯ ಭಕ್ತಸ್ಯ ದಾತೃತ್ವಂ ಜಿಜ್ಞಾಸುರಭವಚ್ಛಿವಃ ॥೫॥

ಸ್ಥಿರಾಯಾಗೋಚರೋ ಭಕ್ತೈಸ್ತ್ರ್ಯಂಬಕೇಶಸ್ತ್ರಯೀಮಯಃ ।
ದೇವೇಶಃ ಸೂಕ್ಷ್ಮಗಮ್ಯೋಽಪಿ ಸದಾ ದರ್ಶಿತತಾಂಡವಃ ॥೬॥

ಗೌರ್ಯಾ ಚ ಗಂಗಯಾಽಜ್ಞಾತಃ ಕಿತವೋ ಧೂರ್ತವೇಷವಾನ್ ।
ವಣಿಜೋಽಸ್ಯ ಗೃಹಂ ಪ್ರಾಪ ಸ ತದಾ ಭಸ್ಮಪಾಂಡರಃ ॥೭॥

ತಿರ್ಯಕ್ತ್ರಿಪುಂಡ್ರರುದ್ರಾಕ್ಷಮಾಲಾಭರಣಭೂಷಿತಃ ।
ವಣಿಕ್ಪತಿರ್ಭಕ್ತವೇಷಂ ತಂ ಮೂರ್ತಿಮಿವ ಮನ್ಮಥಂ ॥೮॥

ದೃಷ್ಟ್ವಾ ತದ್ದರ್ಶನಾನಂದೋ ನನಾಮ ಶಿವತತ್ವವಿತ್ ।
ಪಚೇಲಿಮೈಃ ಪೂರ್ವಪುಣ್ಯೈರ್ಭೂಷಿತೋಽಸ್ಮೀತಿ ಹೃಷ್ಟಧೀಃ ॥೯॥

---

ಶಿವಭಕ್ತಾಗ್ರೇಸರನಾದ ಅವನು ಶೈವರ ಪಾದಪೂಜಕನಾಗಿದ್ದನು. ಆ ಶಿವಭಕ್ತರ ಪಾದಾರ್ಚನೆಯಿಂದ ಅವನು ಐಶ್ವರ್ಯದಲ್ಲಿ ಕುಬೇರನಿಗೆ ಸಾಟಿಯಾಗಿದ್ದನು. ಅವನು ತನ್ನ ಭಕ್ತರಿಗೆ ಬೇಕಾದ ಇಷ್ಟಾರ್ಥವನ್ನು ಕೊಡುತ್ತಿರಲು ನಿಜವಾಗಿಯೂ ಇವನ ದಾನಶೀಲತೆಯನ್ನು ಪರೀಕ್ಷೆಮಾಡಲು ಒಂದುಸಾರಿ ಪರಶಿವನು ಬಯಸಿದನು. ॥೪-೫॥

ಭಕ್ತರಿಗೆ ಸುಲಭವಾಗಿ ಗೋಚರವಾಗದ ಅಂಬಿಕಾರಮಣನೂ, ವೇದಮೂರ್ತಿಯೂ, ದೇವತೋತ್ತಮನೂ, ಸೂಕ್ಷ್ಮವಾಗಿ ಗೋಚರಿಸುವುದಾದರೂ ಭಕ್ತರಿಗೆ ತಾಂಡವನೃತ್ಯದಿಂದ ತೋರ್ಪಡಿಸಿಕೊಳ್ಳುವವನೂ ಆದ ಶಿವನು ಗೌರೀ ಮತ್ತು ಗಂಗೆಯರಿಗೆ ತಿಳಿಯದಂತೆ ಕಪಟವೇಷಧಾರಿಯಾಗಿ ಶುಭ್ರವಾದ ಭಸ್ಮವನ್ನು ಲೇಪಿಸಿಕೊಂಡು ತಿರ್ಯಕ್ತ್ರಿಪುಂಡ್ರರುದ್ರಾಕ್ಷದ ಹಾರವೆಂಬ ಆಭರಣಗಳಿಂದಲಂಕೃತನಾಗಿ ಆ ವೈಶ್ಯನ ಮನೆಗೆ ಬಂದನು. ॥೬-೭॥

ಆ ವೈಶ್ಯವರ್ಯನು ಮನ್ಮಥನ ಆಕೃತಿಯಂತೆ ಅತಿ ಸುಂದರವಾದ ಶಾಂಭವನ ವೇಷಧಾರಿಯನ್ನು ನೋಡಿ ಶಿವರಹಸ್ಯವನ್ನರಿತವನಾದ್ದರಿಂದ ದರ್ಶನದಿಂದ ಬಹಳ

ಉಚಿತೈರುಪಚಾರೈಸ್ತುರುಜಾತ ಉಪಾಚರತ್ ॥೧೦॥

॥ ವಣಿಗುವಾಚ ॥

ಮಾಮೇವಂ ವಪುರಾಪ್ತೋಽಸಿ ಕಿಂ ಮೇ ಭಾಗ್ಯಮಹೋದಯಂ ।
ತ್ವತ್ಕಿಂಕರೋಽಸ್ಮಿ ಭಗವಾನ್ಕಿಮಾಗಮನಕಾರಣಂ ॥೧೧॥

ಇತಿ ಬ್ರುವಾಣಂ ವಣಿಜಂ ಪ್ರಾಂಜಲಿಂ ಪ್ರಾಹ ಸ ಪ್ರಭುಃ ।
ಮಂದಸ್ಮಿತಶಶಿಜ್ಯೋತ್ಸ್ನಾಲೋಕನೇನ ಮನೋಹರಂ ॥೧೨॥

॥ ವಿಪ್ರ ಉವಾಚ ॥

ಧನೇನ ಭಕ್ತಸಂಘಾನಾಂ ವಾಂಛಿತಂ ಯದ್ದದಾಸಿ ತತ್ ।
ಇತಿ ಶ್ರುತ್ವಾ ತವೋದಂತಮಾಗತೋಽಸ್ಮಿ ತ್ವದಂತಿಕಂ ॥೧೩॥

ದದಾಸಿ ಚೇದ್ವದಾಮೀತ್ಯುಚಿವಾನ್ಸ ತದಾ ದ್ವಿಜಃ ।
ಪ್ರಾಂಜಲಿಃ ಪ್ರಾಹ ತಂ ವೈಶ್ಯಃ ಪ್ರೇಮಾಂತಃ ಸಂಪ್ರಕಾಶಯನ್ ॥೧೪॥

---

ಆನಂದಹೊಂದಿ ಮೊದಲು ನಮಸ್ಕಾರ ಮಾಡಿದನು. ಆ ಮೇಲೆ ನನ್ನ ಹಿಂದಿನ ಪುಣ್ಯಪರಿಪಾಕದಿಂದ ಇಂದು ನಾನು ಧನ್ಯನಾದೆನು ಎಂದು ಸಂತುಷ್ಟಚಿತ್ತನಾಗಿ ಯೋಗ್ಯವಾದ ಉಪಚಾರಗಳಿಂದ ಆ ಭಕ್ತವರ್ಯನನ್ನು ಸ್ವಭಾವರಿಪುವೆಂಬ ವೈಶ್ಯನು ಉಪಚರಿಸಿದನು. ॥೮-೯-೧೦॥

ಇಂತಹ ದಿವ್ಯರೂಪಿನಿಂದ ನನ್ನ ಬಳಿಗೆ ತಾವು ಬಂದುದು ನನ್ನ ಮಹಾ ಭಾಗ್ಯವೇ ಸರಿ! ಭಗವಂತನೇ, ನಿನ್ನ ಸೇವಕನಾಗಿರುವೆನು. ತಾವು ನನ್ನ ಬಳಿಗೆ ಬಂದ ಕಾರಣವೇನು? ಅಪ್ಪಣೆಕೊಡಿಸಬೇಕೆಂದು ಹೇಳುತ್ತಾ ಕೈಮುಗಿದು ನಿಂತಿರುವ ವೈಶ್ಯನನ್ನು ಕುರಿತು, ಆ ಪ್ರಭುವು ಮುಗುಳುನಗೆಯಿಂದ ಬೆಳದಿಂಗಳಂತೆ ಬೆಳಗುತ್ತಿರುವ ದೃಷ್ಟಿಯನ್ನು ಅವನ ಮೇಲೆ ಬೀರುತ್ತಾ ಮನೋಹರವಾಗಿ ಅವನೊಡನಿಂತೆಂದನು. ॥೧೧-೧೨॥

ಅಯ್ಯ ವೈಶ್ಯನೇ, ಹಣದಿಂದ ಭಕ್ತರ ಸಮೂಹಕ್ಕೆ ಬೇಕಾದ ಇಷ್ಟಾರ್ಥಗಳನ್ನು ಸಲ್ಲಿಸುತ್ತೀಯೆಂದು ನಿನ್ನ ವೃತ್ತಾಂತವನ್ನು ತಿಳಿದು ನಿನ್ನ ಬಳಿಗೆ ಬಂದಿರುವೆನು. ನನ್ನ ಇಷ್ಟಾರ್ಥವನ್ನು ಸಲ್ಲಿಸುವುದಾದರೆ ಹೇಳುತ್ತೇನೆಂದು ಆ

॥ ವಣಿಗುವಾಚ ॥

ಯದಸ್ತು ನವರತ್ನಾನಿ ಧನಂ ಮೇ ಭಕ್ತಸತ್ಕೃತಂ ।
ಮಾಭೈಷೀರ್ವಾಂಛಿತಂ ತೇಽದ್ಯ ದದಾಮಿ ಭಗವನ್ನಿತಿ ॥೧೫॥

॥ ವಿಪ್ರ ಉವಾಚ ॥

ಧನಾದಿಷು ನ ಮೇ ವಾಂಛಾ ಶಿವೇ ಭಾಯಾಪ್ರಿಯೋಽಸ್ಮ್ಯಹಂ ।
ತ್ವತ್ಪ್ರಿಯಾವಾಂಛಯಾ ಪ್ರಾಪ್ತಂ ವಿದ್ಧಿ ಸಿದ್ಧಿಂ ವಣಿಗ್ವರ ॥೧೬॥

ತಾಂ ದದಾತು ಭವಾನ್ಮಹ್ಯಮಿತಿ ಪ್ರಾಹ ತದಾ ದ್ವಿಜಃ ।
ತಚ್ಛ್ರುತ್ವಾ ವಚನಂ ವೈಶ್ಯೋ ವಿರುದ್ಧಮಪಿ ಲೋಕತಃ ॥೧೭॥

ತದಾನೀಂ ಪ್ರಥಮಪ್ರೀತೇರಸ್ಯತಿಪ್ರೀತಿಮಾನಭೂತ್ ॥೧೮॥

॥ ವಣಿಗುವಾಚ ॥

ಯದಸ್ತಿ ಮೇ ಪ್ರಿಯಂ ವಸ್ತು ತದಸ್ತು ತವ ವಾಂಛಿತಂ ।
ವೈಶ್ಯವರ್ಯಸ್ತದಾವಶ್ಯಾಂ ಪ್ರಾಹ ಭಾರ್ಯಾಂ ತದಾ ದ್ವಿಜ ॥೧೯॥

---

ಬ್ರಾಹ್ಮಣನು ನುಡಿಯಲು ಆಗ ವೈಶ್ಯನು ಕೈಮುಗಿದು ತನ್ನ ಒಳಗಿನ ಪ್ರೇಮವನ್ನು ಪ್ರಕಟಿಸುತ್ತಾ ಅವನಿಗೆ ಇಂತೆಂದನು. ॥೧೩-೧೪॥

ಭಗವಂತನೇ, ನನ್ನಲ್ಲಿದ್ದ ಮಾಣಿಕ್ಯ, ಮುತ್ತು, ಹವಳ, ಪಚ್ಚೆ, ಪುಷ್ಯರಾಗ, ವಜ್ರ, ನೀಲ, ಗೋಮೇಧಿಕ ಮತ್ತು ವೈಡೂರ್ಯಗಳೆಂಬ ಒಂಬತ್ತು ರತ್ನಗಳೂ ಸುವರ್ಣವೇ ಮುಂತಾದ ದ್ರವ್ಯವೂ, ಭಕ್ತರ ಸೇವೆಗೆ ಉಪಯೋಗಿಸಲ್ಪಟ್ಟಿತು; ಆದರೂ ಚಿಂತೆಯಿಲ್ಲ. ಭಯಪಡಬೇಡ, ನಿನ್ನ ಇಷ್ಟಾರ್ಥವನ್ನು ತಪ್ಪದೇ ಸಲ್ಲಿಸುವೆನು ಎಂದು ವೈಶ್ಯನು ಹೇಳಿದನು. ॥೧೫॥

ಅಯ್ಯ ವೈಶ್ಯವರ್ಯನೇ, ಹಣಕಾಸಿನಲ್ಲಿ ನನಗೆ ಅಪೇಕ್ಷೆಯಿಲ್ಲ. ನಾನು ಯಾವಾಗಲೂ ಸ್ತ್ರೀಲೋಲುಪನು; ನಿನ್ನ ಹೆಂಡತಿಯನ್ನು ಅಪೇಕ್ಷಿಸಿ ಸಿದ್ಧಿಪಡೆಯಲು ಇಲ್ಲಿಗೆ ಬಂದಿದ್ದೇನೆ. ಆ ನಿನ್ನ ಪ್ರಿಯೆಯನ್ನು ನನಗೆ ಕೊಡೆಂದು ಆ ಶಾಂಭವನು ವೈಶ್ಯನನ್ನು ಕೇಳಿದನು. ಆಗ ಆ ವೈಶ್ಯನು ಆ ಮಾತುಗಳನ್ನು ಕೇಳಿ ಲೋಕ ವಿರುದ್ಧವಾಗಿದ್ದರೂ ಆಗ ಭಕ್ತನ ಪ್ರಥಮಪ್ರೀತಿಯೇ ಹೆಚ್ಚೆಂದು ಭಾವಿಸಿ, ಅದರಲ್ಲಿಯೂ ಒಪ್ಪಿಗೆಯುಳ್ಳವನಾದನು. ॥೧೬-೧೭-೧೮॥

ಆಮೇಲೆ, ಎಲೈ ಶೈವವರ್ಯನೇ, ನನಗೆ ಪ್ರೀತಿಪಾತ್ರವಾದ ವಸ್ತುವೇ

ವಿಪ್ರೇಣಾನೇನ ಗಚ್ಛ ತ್ವಂ ದತ್ತಾಸೀತ್ಯವದಚ್ಚ ತಾಂ ।
ತಚ್ಛ್ರುತ್ವಾಶನಿಸಂಕಾಶಂ ವಾಕ್ಯಂ ಸಾ ವ್ಯಾಕುಲಾಭವತ್ ॥೨೦॥

ಪುನಃ ಸ್ವಸ್ಥಮನಾಃ ಪ್ರಾಹ ಪ್ರಾಣೇಶಂ ಪತಿದೇವತಾ ।
ಇಯಮೇವ ತ್ವದಾಜ್ಞಾ ಚೇಜ್ಜೀವಿತೇಶಸ್ತ್ವಮೇವ ಮೇ ॥೨೧॥

ಯತ್ತ್ವಯೋಕ್ತಂ ಮಯಾ ಕಾರ್ಯಂ ನ ಸ್ವತಂತ್ರಾಸ್ಮಿ ಭರ್ತರಿ ।
ಇತೀರಯಂತೀ ಸಾ ನಾಥಂ ಸ್ತುವಂತೀ ಮನ್ಮಥಾಂತಕಂ ॥೨೨॥

ತಯೋರಕೃತ್ರಿಮಂ ಭಾವಂ ಜ್ಞಾತ್ವಾ ದೇವೋಽತಿವಿಸ್ಮಿತಃ ।
ಮಂದಸ್ಮಿತೋಲ್ಲಸದ್ಗಂಡಂ ವಿಲಾಸೋಲ್ಲಾಸಿ ಭೂಷಣಂ ॥೨೩॥

ಪ್ರಾಪ್ಯ ಪ್ರಣಮ್ಯ ಸಾ ವಿಪ್ರಂ ತಸ್ಥೌ ಸ್ತಬ್ಧಾನತಾನನಾ ।
ತ್ಯಕ್ತಾ ಪ್ರಿಯಾ ಕಿಮಸ್ತ್ಯನ್ಯತ್ಕಾರ್ಯಂ ನಾಥೇತಿವಾದಿನೀ ॥೨೪॥

---

ನಿನಗೆ ಇಷ್ಟವಾಯಿತು, ಸಂತೋಷ ಎಂದು ನುಡಿದು ಆ ವರ್ತಕಶ್ರೇಷ್ಠನು ತನ್ನ ಅಧೀನಳಾಗಿದ್ದ ಹೆಂಡತಿಯನ್ನು ಕುರಿತು, ಎಲೌ, ನೀನು ಇನ್ನು ಮುಂದೆ ಈ ವಿಪ್ರೋತ್ತಮನೊಡನೆ ನಡೆ, ನಿನ್ನನ್ನು ಈ ಬ್ರಾಹ್ಮಣನಿಗೆ ಕೊಟ್ಟಿದ್ದೇನೆಂದು ಹೇಳಿದನು. ಸಿಡಿಲಿಗೆ ಸಮಾನವಾದ ಆ ಕಠೋರವಚನವನ್ನು ಕೇಳಿ ಆ ವೈಶ್ಯ ಸತಿಯು ಖಿನ್ನಳಾದಳು. ॥೧೯-೨೦॥

ಸ್ವಲ್ಪ ಯೋಚಿಸಿ ತಾನೇ ಸಮಾಧಾನಮನಸ್ಸಿನಿಂದ ಪತಿಯನ್ನು ಕುರಿತು, ಆ ಪತಿವ್ರತೆಯು, ಸ್ವಾಮಿ, ಈಗ ಹೇಳಿದುದೇ ತಮ್ಮ ಅಪ್ಪಣೆಯಾದರೆ ಇನ್ನು ಮುಂದೆಯೂ ನನಗೆ ನೀವೇ ಪ್ರಾಣೇಶ್ವರರಾಗಿರಿ. ನಿಮ್ಮ ಅಪ್ಪಣೆಯನ್ನು ನಡೆಸುವುದೇ ನನ್ನ ಕೆಲಸವು. ಏಕೆಂದರೆ ನಾನು ಯಾವಾಗಲೂ ಗಂಡನಲ್ಲಿ ಅಧೀನವಾಗಿರುವೆನೇ ಹೊರತು ಸ್ವತಂತ್ರಳಲ್ಲವೆಂದು ಆ ವೈಶ್ಯಸ್ತ್ರೀಯು ನುಡಿದು ತನ್ನ ಪತಿಯನ್ನೂ ಮನ್ಮಥಶತ್ರುವಾದ ಶಿವನನ್ನೂ ಸ್ತೋತ್ರಮಾಡಿದಳು. ॥೨೧-೨೨॥

ಆ ವೈಶ್ಯದಂಪತಿಗಳ ನಿಷ್ಕಪಟಭಾವವನ್ನು ತಿಳಿದು ಮಹಾದೇವನು ತುಂಬಾ ವಿಸ್ಮಿತನಾದನು. ಮುಗುಳುನಗೆಯಿಂದ ಶೋಭಿಸುವ ಕಪೋಲವುಳ್ಳವನೂ, ವಿಲಾಸದಿಂದ ಶೋಭಿಸುತ್ತಿರುವ ಅಲಂಕಾರವುಳ್ಳವನೂ ಆದ ಆ ಶಾಂಭವನ ಸಮೀಪಕ್ಕೆ ಬಂದು ಆ ವರ್ತಕನ ಹೆಂಡತಿಯು, ಅವನಿಗೆ ನಮಸ್ಕಾರಮಾಡಿ, ಹೆಂಡತಿಯನ್ನೇ

ಅತೀತ್ಯ ಮಾಂ ನಯ ತತೋ ನ ಭಯಂ ವಿದ್ಯತೇ ತತಃ ।
ಇತ್ಯುಕ್ತಸ್ತಂ ವಣಿಕ್ಪ್ರಾಹ ಮಯಾ ವಿಪ್ರ ವಿಚಿಂತಿತಂ ॥೨೫॥

ತ್ವಯೋದಿತಂ ಮಯಾ ಕಾರ್ಯಮಿತಿ ಪ್ರಾಪ್ಯ ಗೃಹಾಂತರಂ ।
ಬದ್ಧಚೇಲೋದಯುತ್ಖಡ್ಗಫಲಕಶ್ಚ ವಿನಿರ್ಯಯೌ ॥೨೬॥

ಸ ತಾನ್ನಿರೋಧಕಾನ್ಹಂತುಮಕರೋದ್ದೃಢಮಾನಸಂ ।
ಪ್ರಣಮ್ಯ ತಂ ಪ್ರಯಾಹೀತಿ ಪ್ರಯಾಂತಂ ದ್ವಿಜಮನ್ವಗಾತ್ ॥೨೭॥

ತಸ್ಮಿನ್ಕ್ಷಣೇ ಶ್ರುತೋದಂತಾಸ್ತಸ್ಯ ತಸ್ಯಾಶ್ಚ ಬಾಂಧವಾಃ ।
ನಿರ್ಯಯುರ್ನಿಜಧಾಮಭ್ಯೋ ಸರ್ವೇ ಕ್ರೋಧಾ ಧೃತಾಯುಧಾಃ ॥೨೮॥

ವಿನಾ ಭ್ರಾಂತಂ ಸ್ವಭಾವಾರೇ ಕೇನ ನೀತಿರಿಯಂ ಕೃತಾ ।
ತಾಮಾದಾಯ ಕಥಂ ಯಾತಿ ಕಶ್ಚಿತ್ಕಾಂಚಿತ್ಪತಿವ್ರತಾಂ ॥೨೯॥

---

ಬಿಟ್ಟುಬಿಟ್ಟಿರುವ ಗಂಡನಲ್ಲಿ ನನಗೆ ಮತ್ತೇನು ಕೆಲಸವಿರುವುದು ಎಂದು ಹೇಳುತ್ತಾ ಮೌನದಿಂದ ತಲೆಬಾಗಿ ನಿಂತುಕೊಂಡಳು. ||೨೩-೨೪||

ಅಯ್ಯ ವೈಶ್ಯನೇ, ನನ್ನನ್ನು ಮುಂದೆ ಕಾಣುವ ನಿನ್ನ ಪರಿವಾರದವರ ತೊಂದರೆಯಿಲ್ಲದಂತೆ ದೂರ ಕರೆದುಕೊಂಡುಹೋಗಿಬಿಡು, ಆಗ ನನಗೆ ಭಯವಿರುವುದಿಲ್ಲವೆಂದು ಶಾಂಭವನು ಹೇಳಲು, ಆಗ ವೈಶ್ಯನು, ಅಯ್ಯ ವಿಪ್ರವರ್ಯನೇ, ನಿನ್ನ ಯೋಚನೆಯು ನನಗೆ ತಿಳಿಯಿತು. ನೀನು ಹೇಳಿದುದನ್ನು ನಾನು ಅವಶ್ಯವಾಗಿ ಮಾಡಬೇಕು ಎಂದು ಮನೆಯೊಳಗೆ ಹೋಗಿ ಸರಿಯಾಗಿ ಬಟ್ಟೆಬರೆಗಳನ್ನು ಕಟ್ಟಿಕೊಂಡು ಕತ್ತಿಯನ್ನು ಒರೆಯಿಂದ ತೆಗೆದು ಝಳಪಿಸುತ್ತಾ ಹೊರಗೆ ಬಂದನು. ||೨೫-೨೬||

ಮಧ್ಯದಲ್ಲಿ ಅವನು ತಡೆಮಾಡುವವರನ್ನೆಲ್ಲಾ ಕೊಲ್ಲಲು ದೃಢನಿಶ್ಚಯ ಮಾಡಿದನು. ಆಮೇಲೆ ಆ ಬ್ರಾಹ್ಮಣನಿಗೆ ನಮಸ್ಕರಿಸಿ ಇನ್ನು ಹೊರಡಬಹುದೆಂದು ಹೇಳುತ್ತಾ, ಹೋಗುತ್ತಿರುವ ಆ ಶಾಂಭವನನ್ನನುಸರಿಸಿ ಹೊರಟನು. ಮರುಕ್ಷಣದಲ್ಲಿಯೇ ಈ ವಿಷಯವನ್ನರಿತ ಆ ವೈಶ್ಯ ಮತ್ತು ಅವನ ಹೆಂಡತಿಯ ಬಂಧುಗಳೆಲ್ಲರೂ ತಮ್ಮ ತಮ್ಮ ಮನೆಗಳಿಂದ ಕೋಪದಿಂದ ಆಯುಧಪಾಣಿಗಳಾಗಿ ಹೊರಟು ಬಂದರು. ||೨೭-೨೮||

ಎಲೈ ಸ್ವಭಾವಾರಿಯೇ, ಭ್ರಾಂತಿಯಿಲ್ಲದೇ ಇದೇನು ಈ ನ್ಯಾಯವನ್ನಾಚರಿಸ

ತಾಮುವರ್ಣೇ ಮಹಾಜ್ಞಾತೇ ತಾಮನುದ್ಧೃಯ ವೀರ್ಯತಃ ।
ಲೋಕಸ್ಥಿತಿಃ ಸ್ಥಾಪನೀಯಾ ಇತಿ ಮಾರುತರಂಹಸಃ ॥೩೦॥

ಕಠೋರತರವಾಚಸ್ತೇ ನಿಂದತಸ್ತಂ ಸಮನ್ವಯುಃ ।
ಕ್ವ ಯಾಸಿ ತಿಷ್ಠ ತಿಷ್ಠೇತಿ ಮುದ್ರುಷ್ಟಸ್ತಂ ಚ ತಾಂಚ ತೇ ॥೩೧॥

ಸ್ವಭಾವಾಯಾಹಿತಾಸ್ತೇ ವೈ ವೈಶ್ಯಾಸ್ತೇ ವಿಧೃತಾಯುಧಾಃ ।
ಪತಿವ್ರತಾಮಿಮಾಂ ಹಿತ್ವಾ ತ್ವಂ ಯಾಹೀತ್ಯಬ್ರುವನ್ದ್ವಿಜಂ ॥೩೨॥

ಸಾಬ್ರವೀತ್ಸುಮುಖಂ ವೀಕ್ಷ್ಯ ತಾಪಸಂ ಭೀರುವತ್ಸ್ಥಿತಂ ।
ಸಾಬ್ರವೀದ್ವಿಸ್ಮಿತಾ ಸಾಧ್ವೀ ಇಂಗಿತಜ್ಞಾ ಸ್ವಭರ್ತರಿ ॥೩೩॥

ಮಾಭೈಷೀರ್ನಾಥ ತಾನೇತಾನ್ಸ್ವಭಾವಾರಿರ್ಜಯೇದಿತಿ ।
ತಚ್ಛ್ರುತ್ವಾ ವಣಿಗಿತ್ಯಾಹ ಧೀಮತಾಮೀಶ ಮಾಸ್ತು ಭೀಃ ॥೩೪॥

ಹನಿಷ್ಯಾಮಿ ಚ ತೇ ನಾಥ ಪಶ್ಯತಃ ಸ್ವಾಂಶ್ಚ ಬಾಂಧವಾನ್ ॥೩೫॥

---

ತೊಡಗಿದೆ. ಯಾರೋ ಬೇರೊಬ್ಬನು ಒಬ್ಬ ಪತಿವ್ರತೆಯನ್ನು ತೆಗೆದುಕೊಂಡು ಹೋಗಬಲ್ಲನೇ? ಯಾವ ದೋಷವೂ, ತಪ್ಪೂ ಇಲ್ಲದೆ ಪ್ರಿಯೆಯನ್ನು ಬಲಾತ್ಕಾರವಾಗಿ ತಿರಸ್ಕಾರಮಾಡುವುದು ಲೋಕಮರ್ಯಾದೆಯನ್ನು ಕಾಪಾಡುವ ಪುರುಷನ ಧರ್ಮವೆ? ಇದೇನು ನೀನು ಮಾಡುತ್ತಿರುವ ಅನ್ಯಾಯವೆಂದು ವಾಯುವೇಗದಿಂದ ಅಲ್ಲಿಗೆ ಬಂದು ಅವನ ಬಂಧುಗಳು ಕಠಿಣವಾಗಿ ನಿಂದಿಸುತ್ತಾ ಮುತ್ತಿಕೊಂಡು, ಎಲೈ ಎಲ್ಲಿ ಹೋಗುತ್ತಿರುವೆ? ನಿಲ್ಲು! ನಿಲ್ಲು! ಎಂದು ಅವರು ಆ ಬ್ರಾಹ್ಮಣನನ್ನೂ ಆ ವೈಶ್ಯನ ಪತ್ನಿಯನ್ನೂ ಬಿಡದೆ ಹಿಂಬಾಲಿಸಿದರು. ॥೨೯-೩೦-೩೧॥

ತಮ್ಮ ಮನೋಭೀಷ್ಟದಂತೆ ಆಯುಧಪಾಣಿಗಳಾಗಿ ಬಂದಿದ್ದ ಆ ವೈಶ್ಯರಾದರೋ, ಬ್ರಾಹ್ಮಣನನ್ನು ಕುರಿತು, ಎಲೈ ವಿಪ್ರ, ಈ ಪತಿವ್ರತೆಯನ್ನು ಬಿಟ್ಟು ಹೊರಟುಹೋಗೆಂದು ನುಡಿಯಲು, ಆಗ ಸಾಧ್ವಿಯೂ, ತನ್ನ ಸ್ವಾಮಿಯ ಅಭಿಪ್ರಾಯವನ್ನರಿತವಳೂ ಆದ ಆ ವೈಶ್ಯನಾರಿಯು ವಿಸ್ಮಯಹೊಂದಿ ಭಯಗೊಂಡಿರುವವನಂತಿರುವ ತಪಸ್ವಿಯನ್ನು ಕಂಡು, ಸುಂದರಮೊಗನಾದ ಅವನಿಗೆ, ಸ್ವಾಮಿ, ಭಯಪಡಬೇಕಾಗಿಲ್ಲ, ಸ್ವಭಾವಾರಿಯು ಎಲ್ಲರನ್ನೂ ಜಯಿಸುತ್ತಾನೆಂದು ಹೇಳಿದಳು. ಆಗ ವರ್ತಕನು ಆ ಮಾತನ್ನು ಕೇಳಿ ಮೇಧಾವಿಗಳಿಗೆ ಒಡೆಯನಾದ ವಿಪ್ರನೇ,

॥ ವೈಶ್ಯ ಉವಾಚ ॥

ನ ಸ್ಥೀಯತಾಂ ಮಮ ಪುರೋ ಗಮ್ಯತಾಂ ಜೀವಿತೇಪ್ಸುಭಿಃ ।
ನೋ ಚೇನ್ಮತ್ಖಡ್ಗಕೃಂತಾಂಗಾಃ ಲುಂಠ್ಯಂತೇ ಸಹಸಾ ಕ್ಷಿತೌ ॥೩೬॥

ತಚ್ಛ್ರುತ್ವಾಹುಶ್ಚ ತೇ ಮೂಢ ಸ್ವಕಲಂಕಂ ನ ವೀಕ್ಷ್ಯಸೇ ।
ದ್ವಿಜಾಯ ದತ್ವಾ ಪತ್ನೀಂ ಸ್ವಾಂ ಕಿಂ ದರ್ಶಯಸಿ ಪಾಟವಂ ॥೩೭॥

ವಯಂ ಸಹ ವಿನಶ್ಯಾಮೋ ನೈನಾಂ ದಾತುಂ ಸಹಾಮಹೇ ।
ಇತ್ಯುಕ್ತಶ್ಚ ಸ್ವಭಾವಾರಿಸ್ತಾನಭಾಷತ ರೋಷತಃ ॥೩೮॥

॥ ವಣಿಗುವಾಚ ॥

ವಿಭಿದ್ಯಾಂಗಾನಿ ವೋ ವಿಪ್ರಂ ನಯಾಮ್ಯೇನಾಂ ಸುಖಾಧ್ವನಾ ।
ಇತಿ ಪ್ರಾಹ ಸ್ವಭಾವಾರಿರ್ಧೀರೋದಾಂತಃ ಸ್ವಬಾಂಧವಾನ್ ॥೩೯॥

ದುರ್ವೃತ್ತೇನಾಽಮುನಾ ಕಿಂ ನ ಇತಿ ತೇ ಪರಿಹೃತ್ಯ ತಂ ।
ಪ್ರಿಯಾ ಸಹಾಯಂ ತಂ ವಿಪ್ರಂ ರುರುಧುಶ್ಚುಕ್ರುಧುಸ್ತಥಾ ॥೪೦॥

---

ಹೆದರಬೇಕಾಗಿಲ್ಲ; ಸ್ವಾಮಿ, ನೀವು ನೋಡುತ್ತಿರುವಂತೆಯೇ ನನ್ನ ಈ ನೆಂಟರನ್ನೆಲ್ಲಾ ಕೊಂದುಬಿಡುವೆನು ಎಂದು ನುಡಿದನು. ॥೩೨-೩೩-೩೪-೩೫॥

ಓ ಬಂಧುಗಳಿರಾ, ಬದುಕಲಿಚ್ಛಿಸುವರೆಲ್ಲರೂ ನನ್ನ ಮುಂದೆ ನಿಲ್ಲದೇ ಹೊರಟು ಹೋಗಿರಿ; ಇಲ್ಲದಿದ್ದಲ್ಲಿ ನನ್ನ ಕತ್ತಿಯಿಂದ ಕತ್ತರಿಸಲ್ಪಟ್ಟ ದೇಹವುಳ್ಳವರಾಗಿ ಕೂಡಲೇ ನೆಲದ ಮೇಲೆ ಬೀಳುವಿರಿ ಎಂದು ಸ್ವಭಾವರಿಪುವು ಹೇಳಲು, ಅದನ್ನು ಕೇಳಿ ಆ ಬಂಧುಗಳು, ಏ ಮೂಢ, ನಿನ್ನ ಕಲಂಕವನ್ನೇ ನೀನು ನೋಡುತ್ತಿಲ್ಲವಲ್ಲ! ಶಾಂಭವನಿಗೆ ನಿನ್ನ ನಿಜಪತ್ನಿಯನ್ನು ಕೊಟ್ಟು ಸಾಲದ್ದಕ್ಕೆ ನಿನ್ನ ಸಾಮರ್ಥ್ಯವನ್ನು ಬೇರೆ ತೋರಿಸುತ್ತಿದ್ದೀಯಾ! ನಾವೂ ಜೊತೆಯಲ್ಲಿ ಸಾಯುವೆವೇ ಹೊರತು ಇವಳನ್ನು ಬಿಟ್ಟುಕೊಡಲಿಚ್ಛಿಸುವುದಿಲ್ಲವೆಂದು ಹೇಳಿದ ಬಂಧುವಚನಗಳನ್ನು ಕೇಳಿ ಆ ಸ್ವಭಾವರಿಪುವು ಹೀಗೆ ಮಾತನಾಡಿದನು. ॥೩೬-೩೭-೩೮॥

ನಿಮ್ಮ ದೇಹವನ್ನು ತುಂಡುತುಂಡುಮಾಡಿ ಇವಳನ್ನೂ ಮತ್ತು ಬ್ರಾಹ್ಮಣನನ್ನೂ ಸುಖವಾದ ದಾರಿಯಲ್ಲಿ ಕರೆದುಕೊಂಡುಹೋಗುತ್ತೇನೆಂದು ಧೀರನೂ, ಜಿತೇಂದ್ರಿಯನೂ ಆದ ಸ್ವಭಾವಾರಿಯು ತನ್ನ ಬಾಂಧವರಿಗೆ ಹೇಳಿದನು. ದುಷ್ಟ

ಸ್ವಭಾವಾರಿಸ್ತತೋ ಬಂಧೂನ್ಮುನಿಂ ತಂ ಶಿವಭಾವಿತಃ ।
ಚರನ್ಮಂಡಲಮಾರ್ಗೇಣ ಕೃಂತಂಸ್ತಾನ್ನಿಶಿತಾಯುಧಾನ್ ॥೪೧॥

ಸಾ ತಾನೇಕೋಽನೇಕಃ ಸನ್ನಿಘ್ನನ್ದಿಕ್ಷು ವಿಜೃಂಭಿತಾನ್ ।
ವ್ಯಾಘ್ರವದ್ವಿಜಹಾರಾಜೌ ಮೃಗಾನಿವ ರಿಪುವ್ರಜೇ ॥೪೨॥

ಕೇಚಿತ್ಕೃತಪದಾಃ ಪೇತುಃ ಕೇಚಿದ್ವಿಚ್ಛಿನ್ನಬಾಹವಃ ।
ಕೇಚಿನ್ನಿಕೃಂತಶಿರಸಃ ಕೇಚಿತ್ಖಂಡಿತಮಧ್ಯಮಾಃ ॥೪೩॥

ದಲಿತೋದರನಿಷ್ಕ್ರಾಂತಾ ತೇ ಸಾಂದ್ರಂ ನಿಸೃತಾಸೃಜಃ ।
ಅನ್ಯೇ ನಿರ್ಭಿನ್ನಸರ್ವಾಂಗಾ ನಿಪೇತುರವನೀತಲೇ ॥೪೪॥

ಸ್ವಭಾವಾರಿಹತಾನಾಂ ತು ಪತಿತಾನಾಂ ರಣಾಜಿರೇ ।
ತೇಷಾಮುಪರಿ ವೀರಾಣಾಂ ನಿಪೇತುರ್ಗೃಧ್ರಸಂಚಯಾಃ ॥೪೫॥

---

ನಾದ ಇವನೊಡನೇಕೆ ನಮಗೆ ವ್ಯವಹಾರವೆಂದು ಹೇಳಿ ಅವನನ್ನು ಬಿಟ್ಟು ಅವರು ಪತ್ನಿಯೊಡನೆ ಹೋಗುತ್ತಿದ್ದ ಆ ಬ್ರಾಹ್ಮಣನನ್ನು ಮುತ್ತಿ ಅವನಮೇಲೆ ಆಗ್ರಹಗೊಂಡರು. ॥೩೯-೪೦॥

ಆಗ ಸ್ವಭಾವರಿಪುವು, ಆ ಮುನಿಯನ್ನೇ ಪರಶಿವನೆಂದು ಭಾವಿಸಿ, ತನ್ನ ಬಂಧುಗಳಮೇಲೆ ಬಿದ್ದು ಮಂಡಲಾಕಾರವಾಗಿ ಹರಿತವಾದ ಆಯುಧಗಳುಳ್ಳ ಅವರನ್ನು ಕತ್ತರಿಸುತ್ತಾ, ತಾನೊಬ್ಬನೇ ಆದರೂ, ದಿಕ್ಕುದಿಕ್ಕುಗಳಲ್ಲಿ ಬರುತ್ತಲಿರುವ ಅವರನ್ನು ಹೊಡೆಯುತ್ತಾ, ಪ್ರಾಣಿಗಳ ಗುಂಪಿನಲ್ಲಿನ ಹುಲಿಯಂತೆ ಬಂಧುಗಳ ಸಮೂಹದಲ್ಲಿ ಓಡಾಡಿ ಎಲ್ಲರನ್ನೂ ಸಂಹರಿಸಿದನು. ॥೪೧-೪೨॥

ಇದರಿಂದ ಕೆಲವರು ಕಾಲು ತುಂಡಾಗಿ ಬಿದ್ದರು. ಕೆಲವರ ತೋಳುಗಳು ತುಂಡಾದವು. ಇನ್ನು ಕೆಲವರ ತಲೆಗಳೇ ಹಾರಿಹೋದವು. ಮತ್ತೆ ಕೆಲವರ ಸೊಂಟವು ಕತ್ತರಿಸಿಹೋಯಿತು. ಹೊಟ್ಟೆ ಸೀಳಿ, ಕೊಬ್ಬು, ಮಾಂಸ, ರಕ್ತಗಳು ಹೊರಹೊಮ್ಮಿ ಚೆಲ್ಲಿಹೋದವು. ಹಲವರ ಸಕಲ ಅವಯವಗಳೂ ತುಂಡಾಗಿ ನೆಲದ ಮೇಲೆ ಬಿದ್ದುಬಿಟ್ಟವು. ॥೪೩-೪೪॥

ಹೀಗೆ ಆ ಸ್ವಭಾವರಿಪುವಿನಿಂದ ಕೊಲ್ಲಲ್ಪಟ್ಟು ಯುದ್ಧಭೂಮಿಯಲ್ಲಿ ಬಿದ್ದಿರುವ ವೀರರ ಮೇಲೆ ಹದ್ದುಗಳು ಗುಂಪುಗುಂಪಾಗಿ ಕಾಣಿಸಿಕೊಂಡವು. ಅವನೊಡನೆ

ಯೇ ಯೇ ಯುದ್ಧಾಯ ಸನ್ನದ್ಧಾಸ್ತೇ ತೇ ತೇನ ಹತಾಸ್ತದಾ ।
ಯೇ ಯೇ ಸಮರವಿತ್ರಸ್ತಾ ಅಮರ್ತ್ಯೈರ್ಹಸಿತಾಸ್ತದಾ ॥೪೬॥

ದುದ್ರುವುರ್ದುರ್ಗರಾಕಾರಾ ದಿಕ್ಷು ತ್ರಸ್ತಾ ಮೃಗಾ ಇವ ।
ಹತೇಷು ತೇಷು ವೀರೇಷು ವಿದ್ರುತೇಷ್ವಪರೇಷು ಚ ॥೪೭॥

ಸ ಚೈಕವೀರಃ ಸಂಪ್ರಾಹ ತತ್ರ ತಂ ದ್ವಿಜತಾಪಸಂ ।
ಭಗವನ್ಪಾಹಿ ಮಾಭೈಷೀರನುಗಚ್ಛಾಮಿ ತೇ ಪದಂ ॥೪೮॥

ಇತಿ ಸೋಽನುಗತಂ ಬುದ್ಧ್ವಾ ತಂ ಯಾಂತಂ ಮುನಿಮನ್ವಗಾತ್ ।
ಬ್ರಹ್ಮಾಚ್ಯುತಾಜ್ಞಾನಮೂರ್ತಿರನುಯಾತೋ ವಿಶಾಽಮುನಾ ॥೪೯॥

ಸ ವಿಪ್ರತಾಪಸಃ ಶಂಭುರ್ಧಾಮಚ್ಛಾಯಾವನಂ ಯಯೌ ।
ತತ್ಪ್ರವಿಶ್ಯ ಪ್ರಿಯಾ ಯುಕ್ತಶ್ಚಂದ್ರಮೌಳಿರ್ದ್ವಿಜಾಕೃತಿಃ ॥೫೦॥

---

ಯುದ್ಧಕ್ಕೆ ಬಂದವರೆಲ್ಲರೂ ಅವನಿಂದ ಕೊಲ್ಲಲ್ಪಟ್ಟರು. ಯುದ್ಧದಲ್ಲಿ ಹಿಂದಿರುಗಿದವರೆಲ್ಲರೂ ದೇವತೆಗಳಿಂದ ಹಾಸ್ಯಮಾಡಲ್ಪಟ್ಟರು. ॥೪೫-೪೬॥

ಕಪ್ಪೆಯಂತೆ ಆಕೃತಿಯುಳ್ಳ ಉಳಿದವರು, ಭಯಗೊಂಡ ಮೃಗಗಳಂತೆ ದಿಕ್ಕಾಪಾಲಾಗಿ ಓಡಿದರು. ಆರೀತಿ ವೀರರು ಕೊಲ್ಲಲ್ಪಟ್ಟು ಉಳಿದವರು ಓಡಿ ಹೋಗಲು ಆ ಅದ್ವಿತೀಯವೀರನಾದ ಸ್ವಭಾವರಿಪುವು ತಾಪಸವೇಷಧಾರಿಯಾದ ಬ್ರಾಹ್ಮಣನನ್ನು ಕುರಿತು, ಭಗವಂತನೇ, ಹೆದರಬೇಡ. ಇನ್ನು ಮುಂದೆ ಹೆಜ್ಜೆಹೆಜ್ಜೆಗೂ ನಿನ್ನನ್ನು ಅನುಸರಿಸಿ ಬರುತ್ತೇನೆ. ನನ್ನನ್ನು ಕಾಪಾಡೆಂದು ಸಮಾಧಾನ ಹೇಳಿದನು. ಅದರಂತೆಯೇ ಆ ಮುನಿಯನ್ನು ಅನುಸರಿಸಿ ಹಿಂದೆಯೇ ರಕ್ಷಣೆಮಾಡುತ್ತಾ ಹೊರಟನು. ಬ್ರಹ್ಮ, ವಿಷ್ಣುಗಳಿಂದ ತಿಳಿಯಲ್ಪಡದ ಆಕೃತಿಯುಳ್ಳ ಈ ಪರಶಿವನು ಆಗ ಈ ವೈಶ್ಯನಿಂದ ರಕ್ಷಿತನಾಗಿ ಮುಂದೆ ನಡೆದನು. ॥೪೭-೪೮-೪೯॥

ಹಾಗೆಯೇ ಪ್ರಯಾಣಮಾಡುತ್ತಾ ತಾಪಸವೇಷಧಾರಿಯಾದ ಶಂಭುವು ತನ್ನ ಸ್ಥಳವಾದ ಛಾಯಾವನಕ್ಕೆ ಬಂದನು. ವೈಶ್ಯನ ಪ್ರಿಯೆಯೊಡನೆ ಚಂದ್ರಶೇಖರನು ಬ್ರಾಹ್ಮಣವೇಷದಿಂದ ಪ್ರವೇಶಮಾಡಿದನು. ॥೫೦॥

॥ ದ್ವಿಜ ಉವಾಚ ॥

ಕ್ಷೇಮಮಸ್ತಿ ಪರಂ ಮೇ ತ್ವಂ ನಿವರ್ತಸ್ವೇತ್ಯಶಾಧಿ ತಂ ।
ಸ ತಂ ಪ್ರಣಮ್ಯ ಸ್ತುತ್ವಾ ಚಾಪಶ್ಯನ್ಪ್ರಯಯಾವಿತಿ ॥೫೧॥

ಸ್ವಭಾವಾರಿರ್ಭಕ್ತಮುಖ್ಯಃ ಶಿವೇ ದ್ರವಿಣದಾನತಃ ।
ಶುದ್ಧಾತ್ಮಾ ದುಷ್ಕರಾನ್ಹಂತುಂ ಬಹಿಃಸ್ಥಾಸ್ಯಾಮಿ ಚಾಬ್ರವೀತ್ ॥೫೨॥

ಸಮಾಯಾಹೀತಿ ದೇವೇನ ಪ್ರೇರಕೋಽಪಿ ಮುಹುರ್ಮುಹುಃ ॥೫೩॥

॥ ದ್ವಿಜ ಉವಾಚ ॥

ಹತಾಃ ಕಿಂ ಪುನರಾಯಾಂತಿ ಯಾಹಿ ವೈಶ್ಯೇತ್ಯುವಾಚ ಸಃ ।
ವ್ಯಾಹರನ್ನೇವ ಹಸ್ತಾಬ್ಜಭ್ರಂಗದಾಮಾಸಿನಾ ಭ್ರಮನ್ ॥೫೪॥

ಆಜಗಾಮ ಸ್ಫುರದ್ಘೋಷೋ ವಿತನ್ವನ್ಮಂಡಲಭ್ರಮೀಃ ।
ತತಸ್ತಿರೋಹಿತೋ ಮಾಯಾವಿಪ್ರೋಽಪಶ್ಯನ್ಮೃಗೀದೃಶಂ ॥೫೫॥

---

ಛಾಯಾವನವನ್ನು ಹೊಕ್ಕ ಮೇಲೆ ದ್ವಿಜಾಕೃತಿಯಾದ ಶಿವನು, ಅಯ್ಯ ವೈಶ್ಯನೇ, ನನಗೆ ಇನ್ನುಮೇಲೆ ಯಾವ ತೊಂದರೆಯೂ ಇಲ್ಲ, ಕ್ಷೇಮವಾಗಿರುತ್ತೇನೆ. ನೀನು ಇನ್ನು ಹೊರಡೆಂದು ಅಪ್ಪಣೆಮಾಡಲು, ವೈಶ್ಯನು ಆ ಶಾಂಭವನಿಗೆ ನಮಸ್ಕರಿಸಿ, ಸ್ತೋತ್ರಮಾಡಿದನಂತರ ಹೊರಡುತ್ತೇನೆಂದು, ಅತ್ತಿತ್ತ ನೋಡಿದನು. ಭಕ್ತಶ್ರೇಷ್ಠನಾದ ಆ ಸ್ವಭಾವರಿಪುವು ಪರಶಿವನ ಉದ್ದಿಶ್ಯವಾಗಿ ಸಕಲ ಧನವನ್ನೂ ತ್ಯಾಗಮಾಡಿ ಪರಿಶುದ್ಧಾಂತಃಕರಣನಾಗಿದ್ದುದರಿಂದ, ಸ್ವಾಮಿ, ಇಲ್ಲಿಯೂ ಬಂದು ತಡೆಮಾಡುವ ದುಷ್ಟರನ್ನು ಕೊಲ್ಲಲು ನಾನು ಹೊರಗೇ ನಿಂತಿರುವೆನು ಎನ್ನುತ್ತಾ ಎಷ್ಟುಬಾರಿ ಹೋಗೆಂದು ದೇವನಿಂದ ಹೇಳಲ್ಪಟ್ಟರೂ ಹಾಗೆಯೇ ನುಡಿಯುತ್ತಿದ್ದನು. ॥೫೧ ೫೨-೫೩॥

ಎಲೈ ವರ್ತಕನೇ, ಸತ್ತವರು ತಿರುಗಿ ಬರುವುದುಂಟೇ? ನನಗೇನೂ ಭಯ ವಿಲ್ಲ. ನೀನು ಹೋಗೆಂದು ಶಾಂಭವನು ವೈಶ್ಯನಿಗೆ ಹೇಳುತ್ತಿರುವಷ್ಟರಲ್ಲಿಯೇ ಹರಿತ ವಾದ ಕತ್ತಿಯನ್ನು ತಿರುಗಿಸುತ್ತಾ, ಭಯಂಕರವಾಗಿ ಕೂಗಿಕೊಂಡು ಗುಂಪುಗುಂಪಾಗಿ ಅಲೆಯುತ್ತಾ ಇನ್ನೊಂದು ಗುಂಪು ಅಲ್ಲಿಗೆ ಬಂದಿತು. ಆಗ ಮಾಯಾಬ್ರಾಹ್ಮಣನಾದ ಶಿವನು ಜಿಂಕೆಯಂತೆ ಕಣ್ಣುಳ್ಳ ಆ ವೈಶ್ಯಸತಿಯನ್ನು ನೋಡುತ್ತಾ ಕಣ್ಮರೆಯಾದನು. ॥೫೪-೫೫॥

ಏಕಾಕಿನೀಂ ದೃಶೌ ದಿಕ್ಷು ವಿದಿಕ್ಷುಚ ವಿಚಾಲಯನ್ ।
ದದರ್ಶ ಗಗನೇ ದೇವ್ಯಾ ಸಮಂ ವೃಷಭವಾಹನಂ ॥೫೬॥

ಕೈಲಾಸಶಿಖರಾರೂಢಚಂದ್ರಬಿಂಬಶ್ರಿಯಂ ಹರಂ ।
ಕರುಣಾಲಹರೀರೇಖಾ ತರಂಗಿತದೃಗಂಚಲಂ ॥೫೭॥

ಸುಮನಃ ಪರಿಷದ್ವೃಷ್ಟಸುಮನೋವರ್ಷಮೌಳಿನಂ ।
ಅನಂಸೀದಥ ಚಾಸ್ತೌಷೀತ್ಸ ವೈಶ್ಯೋ ವಶ್ಯವಾಗ್ವರಂ ॥೫೮॥

॥ ವೈಶ್ಯ ಉವಾಚ ॥

ಗಂಗಾಚಂದ್ರಕಲಾಸದುಲ್ಲಸದ್ಝರೀಸಾರಸ್ಫುರನ್ಮೌಳಿನಂ
ಕಂಠಂ ತೇ ಶಿತಿಕಂಠ ಕುಂಠಿತಗರಂ ಶ್ರೀನೀಲಕಂಠಾಧುನಾ ।
ವಹ್ನೀಂದ್ವರ್ಕಭವಾಕ್ಷಕೋಣಜಕೃಪಾಪಾಂಗೋಲ್ಲಸತ್ತೇ ಮುಖಂ
ಪಾದಾಬ್ಜಂ ಸುರಮೌಳಿಜಾಲಮಣಿಯುಕ್ಕಾಂತಂ ಭಜೇ ಶಂಕರಂ॥೫೯॥

---

ಆಗ ಸ್ವಭಾವರಿಪುವು ತನ್ನ ಪತ್ನಿಯು ಒಬ್ಬಳೇ ನಿಂತಿರುವುದನ್ನು ನೋಡಿ ಅತ್ತಿತ್ತ ಎಲ್ಲಾ ದಿಕ್ಕುಗಳಲ್ಲಿಯೂ ದೃಷ್ಟಿಯನ್ನು ಬೀರುತ್ತಾ, ಮೇಲೆ ನೋಡಲು ಆಗ ಪಾರ್ವತಿಯೊಡನೆ, ವೃಷಭವಾಹನನಾದ ಶಂಕರನು ಗೋಚರನಾದನು. ಕೈಲಾಸಶಿಖರವನ್ನೇರಿದ ಚಂದ್ರಬಿಂಬದಂತೆ ಕಾಂತಿಯುಳ್ಳ ಆ ಪರಮೇಶ್ವರನು ತನ್ನ ದಯಾಪ್ರವಾಹಗಳೆಂಬ ರೇಖೆಗಳಿಂದ ಚಂಚಲವಾದ ನೇತ್ರಚಾಪಲ್ಯವುಳ್ಳವನೂ, (ಅಂದರೆ ಭಕ್ತರ ಮೇಲೆ ತನ್ನ ದಯಾದೃಷ್ಟಿಯನ್ನು ಬೀರುವವನೂ) ದೇವತೆಗಳ ಗುಂಪಿನಿಂದ ಸುರಿಸಲ್ಪಟ್ಟ ಹೂಮಳೆಯುಳ್ಳವನೂ ಆದ ಆ ಪರಶಿವನಿಗೆ ವಾಗ್ಮಿಯಾದ ಆ ವೈಶ್ಯನು ನಮಸ್ಕಾರಮಾಡಿ, ಸ್ತುತಿಸಿದನು. ॥೫೬-೫೭-೫೮॥

ಗಂಗಾ ಮತ್ತು ಚಂದ್ರಕಲೆಗಳಿಂದ ಚೆನ್ನಾಗಿ ಹೊಳೆಯುತ್ತಿರುವ ಪ್ರವಾಹ ರೂಪವಾದ ಸಾರದಿಂದ ಶೋಭಿಸುವ ಕಿರೀಟವುಳ್ಳ ಶ್ರೀಕಂಠನೇ, ನಿನ್ನ ಕೊರಳು ಹಾಲಾಹಲವಿಷಭಕ್ಷಣೆಯಿಂದ ಹೀಗೆ ಕಪ್ಪಾಗಿ ತೋರುತ್ತಿರುವುದು. ಆದರಿಂದಲೇ ನೀನು ನೀಲಕಂಠನೆನಿಸಿರುವೆ. ನಿನ್ನ ಈ ದಿವ್ಯಮುಖವಾದರೋ ಸೂರ್ಯಚಂದ್ರಾಗ್ನಿ ಗಳೆಂಬ ಮೂರು ಕಣ್ಣುಗಳಿಂದ ಶೋಭಿಸುತ್ತಾ ಭಕ್ತರ ಮೇಲೆಲ್ಲಾ ದಯಾದೃಷ್ಟಿ ಯನ್ನು ಬೀರುತ್ತಿದೆ. ಈ ನಿನ್ನ ಪಾದಕಮಲವು ದೇವತೆಗಳ ಕಿರೀಟಗಳ ಮಣಿ

ಮಚ್ಚಿತ್ತಭ್ರಮರಃ ಸದಾ ತವ ವಿಭೋ ಪಾದಾಬ್ಜಮಾಸೀದತಾಂ॥೬೦॥

ಸ್ತುತ್ವೇತ್ಥಂ ಸಂಪ್ರಣಮ್ಯ ಭಾರ್ಯಯಾ ಶಶಿಶೇಖರಂ ।
ಅಜಾಗರೀಪ್ರಿಯೋ ಧೇನುಃ ಸುಖಭೂಮಿಂನ್ಯರಂಸ್ತ ಸಃ ॥೬೧॥

ಸಂತುಷ್ಟಃ ಪ್ರಿಯಯಾ ಶಂಭುಸ್ತಂ ಸ್ವಭಾವರಿಪುಂ ತತಃ ।
ಸ ಕೈಲಾಸನಿಜಂ ಧಾಮ ಸಕುಟುಂಬಂ ನಿನಾಯ ಸಃ ॥೬೨॥

ದೇವೇಷು ಪುಷ್ಪವಿಕಿರತ್ಸು ವರಂ ಸ್ತುವತ್ಸು
ಪಾಹೀತಿ ಸಂಪ್ರವದತ್ಸು ಚ ಪುಷ್ಪಕಸ್ಥೈಃ ।
ತಸ್ಮಿನ್ಪದೇ ಶಂಭುಪದಂ ತದೀಯಂ
ಶಸ್ತ್ರಾಹತಾಶ್ಚಾಪುರಮರ್ತ್ಯಲೋಕಂ ॥೬೩॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಸ್ವಭಾವರಿಪುಚರಿತ್ರ
ವರ್ಣನಂ ನಾಮ ಸಪ್ತವಿಂಶೋಽಧ್ಯಾಯಃ

---

ಗಳಿಂದ ಯುಕ್ತವಾಗಿ ವಿರಾಜಿಸುತ್ತಿರುವುದು. ದೇವ, ಜಗನ್ಮಂಗಳಕರನಾದ ನಿನ್ನನ್ನೇ ಭಜಿಸುತ್ತೇನೆ. ಶಂಕರ, ನನ್ನ ಮನಸ್ಸೆಂಬ ದುಂಬಿಯು ಯಾವಾಗಲೂ ನಿನ್ನ ಪಾದಕಮಲವನ್ನೇ ಸೇರುವಂತೆ ಅನುಗ್ರಹಿಸೆಂದು ಸ್ವಭಾವರಿಪುವು ಮಹಾದೇವ ನನ್ನು ಸ್ತೋತ್ರಮಾಡಿದನು. ||೫೯-೬೦||

ಹೀಗೆ ಆ ಸ್ವಭಾವರಿಪುವು ತನ್ನ ಹೆಂಡತಿಯೊಡನೆ ಪರಮೇಶ್ವರನನ್ನು ಸ್ತೋತ್ರಮಾಡಿ ನಮಸ್ಕರಿಸಿ, ಆ ಮಹಾದೇವನ ದರ್ಶನದಿಂದ ಆತ್ಮಾನಂದವನ್ನು ಪಡೆದನು. ಆಗ ಸಂತುಷ್ಟನಾದ ಶಂಕರನೂ ಆ ಸ್ವಭಾವರಿಪುವನ್ನು ಅವನ ಹೆಂಡತಿ ಯೊಡನೆ ತನ್ನ ಕೈಲಾಸಕ್ಕೆ ಕರೆದುಕೊಂಡನು. ||೬೧-೬೨||

ಹೀಗೆ ದೇವತೆಗಳು ಪುಷ್ಪಕವಿಮಾನಗಳಲ್ಲಿ ಕುಳಿತು, ಹೂಮಳೆಗರೆಯುತ್ತಾ ಮಹಾದೇವ, ಕಾಪಾಡು ಕಾಪಾಡು; ಎನ್ನುತ್ತಾ ಸ್ತೋತ್ರಮಾಡುತ್ತಿರಲು ಆ ಸಮಯದಲ್ಲಿಯೇ ಆ ವೈಶ್ಯದಂಪತಿಗಳಿಬ್ಬರೂ ದಿವ್ಯವಿಮಾನಾರೂಢರಾಗಿ ಶಿವನ ಪಾದವನ್ನು ಸೇರಿದರು. ಆ ಸ್ವಭಾವರಿಪುವಿನ ಕತ್ತಿಯಿಂದ ಕತ್ತರಿಸಲ್ಪಟ್ಟವರೆಲ್ಲರೂ ದೇವಲೋಕವನ್ನೈದಿದರು. ||೬೩||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಸ್ವಭಾವರಿಪುವಿನ ಚರಿತ್ರೆಯ ವರ್ಣನೆಯೆಂಬ ಇಪ್ಪತ್ತೇಳನೆಯ
ಅಧ್ಯಾಯವು ಮುಗಿದುದು



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಅಷ್ಟವಿಂಶೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

ಇಲಾನಂದಾಖ್ಯಭಕ್ತಸ್ಯ ಚರಿತಂ ಕಥಯಾಮಿ ತೇ ।
ಚಿದಂಬರಸಭಾನೃತ್ಯೇ ದೇವೇ ಶ್ರೀಚಂದ್ರಶೇಖರೇ ||೧||

ಶಿವಭಕ್ತಜನಸ್ತೋತ್ರಭೂಮಧಾರಿಹೃದಂತರಃ ।
ಚತುರ್ಥಜಾತಿತಾದೃಕ್ಷಪಚೇಲಿಮತಪಃ ಫಲಂ ||೨||

ಕನಿಷ್ಠಕುಟೀವಾಸ್ತವ್ಯಃ ಶಾಂತಿದಾಂತಿವಿಭೂಷಣಃ ।
ಭಸ್ಮರುದ್ರಾಕ್ಷಪೂತಾಂಗೋಽನಂಗಾರಿಪದಾರ್ಚಕಃ ||೩||

---

## ಇಪ್ಪತ್ತೆಂಟನೆಯ ಅಧ್ಯಾಯ

ಎಲೈ ಜೈಗೀಷವ್ಯನೇ, ಇಲಾನಂದನೆಂಬ ಹೆಸರಿನ ಭಕ್ತನ ಕಥೆಯನ್ನು ಈಗ ನಿನಗೆ ಹೇಳುತ್ತೇನೆ ಕೇಳು ; ಚಿದಂಬರದಲ್ಲಿನ ಸಭೆಯಲ್ಲಿ ನಡೆಯುವ ಶಿವತಾಂಡವದಲ್ಲಿಯೂ, ದೇವದೇವನಾದ ಚಂದ್ರಶೇಖರನಲ್ಲಿಯೂ, ಶಿವಭಕ್ತರಾದ ಜನಗಳ ಸ್ತೋತ್ರದಲ್ಲಿಯೂ ಆಸಕ್ತವಾದ ಮನಸ್ಸುಳ್ಳ, ಶೂದ್ರಜಾತಿಯಲ್ಲಿ ಆ ರೀತಿ ಪರಿಪಕ್ವವಾದ ತಪಃಫಲವಾಗಿದೆಯೋ ಎನ್ನುವಂತಿರುವ ಇಲಾನಂದನೆಂಬ ಶೂದ್ರನು ಒಂದು ಸಣ್ಣ ಗುಡಿಸಿಲಿನಲ್ಲಿ ವಾಸಮಾಡುತ್ತಾ ಶಾಂತಿ, ಇಂದ್ರಿಯನಿಗ್ರಹಗಳಿಂದ ಕೂಡಿದವನಾಗಿ ಭಸ್ಮರುದ್ರಾಕ್ಷಧಾರಣೆಯಿಂದ ಪವಿತ್ರದೇಹನೂ, ಮನ್ಮಥರಿಪುವಾದ ಶಿವನ ಪಾದಪೂಜಕನೂ ಆಗಿದ್ದನು. ಇವನು ಯಾವಾಗಲೂ ಶಂಭುವಿನ ಭಕ್ತರಿಗೆ ಸಂತೋಷವನ್ನುಂಟುಮಾಡುತ್ತಲೇ ಕಾಲಕಳೆಯುತ್ತಿದ್ದನು. ||೧-೨-೩||

ಯಃ ಸದಾ ಶಂಭುಭಕ್ತಾನಾಂ ಸಂತೋಷಂ ಕಲಯನ್ ಸ್ಥಿತಃ ।
ಅಸಂಖ್ಯೈಶ್ಚ ಹಲೈಃ ಕುರ್ವಂಸ್ಸಾಂತತ್ಯೇನ ಕೃಷಿಕ್ರಿಯಾಂ ॥೪॥

ಅನನ್ಯಜನಸಾಮಾನ್ಯಾಂ ಸಂಪದಂ ಪ್ರಾಪ್ಯ ಸರ್ವದಾ ।
ಕ್ಷುಧಿತೇಭ್ಯೋ ದಿಶನ್ನನ್ನಮನಿವಾರಿತಮಂಜಸಾ ॥೫॥

ಪ್ರಾಣಿನಸ್ತೋಷಯಾಮಾಸ ಸರ್ವಭೂತದಯಾಪರಃ ।
ವಿಶಿಷ್ಯ ಭಗವದ್ಭಕ್ತಾನ್ಭಸ್ಮೋದ್ಧೂಳಿತವಿಗ್ರಹಾನ್ ॥೬॥

ರುದ್ರಾಕ್ಷಮಾಲಾಭರಣಾನಭ್ಯುಪೇತ್ಯ ಪ್ರಣಮ್ಯ ಚ ।
ವಿಧಾಯ ಕುಶಲಪ್ರಶ್ನಂ ನೀತ್ವಾ ಚ ಭವನಾಂತರಂ ॥೭॥

ಪಾದೌ ಪ್ರಕ್ಷಾಳ್ಯ ವಿಧಿವದ್ಭೋಜಯಾಮಾಸ ವಾಂಛಿತಃ ।
ಏವಂ ಪ್ರತಿದಿನಂ ಶಂಭೋಃ ಕಿಂಕರೇಷು ವಿಧಾಯ ಚ ॥೮॥

ಹರ್ಷೋತ್ಕರ್ಷಪ್ರಕರ್ಷೇಣ ತಸ್ಮಿನ್ಧನದಸಂಪದಿ ।
ಸಂಪದೀವ ದರಿದ್ರತ್ವೇ ತಸ್ಯ ನಿಷ್ಠಾಮಚಂಚಲಾಂ ॥೯॥

---

ಅವನು ಲೆಕ್ಕವಿಲ್ಲದಷ್ಟು ನೇಗಿಲುಗಳಿಂದ ಒಟ್ಟಾಗಿ ಕೃಷಿಮಾಡುತ್ತಾ ಇತರ ಜನಗಳಿಗೆ ಅಸಾಧ್ಯವಾದ ಐಶ್ವರ್ಯವನ್ನು ಸಂಪಾದಿಸಿ, ಯಾವಾಗಲೂ ಹಸಿವಿನಿಂದ ಬಳಲಿದವರಿಗೆ ತಡೆಯದೇ ಅನ್ನ ಹಾಕುತ್ತಾ ಸಕಲ ಪ್ರಾಣಿಗಳಲ್ಲೂ ದಯೆಯುಳ್ಳವನಾಗಿ ಎಲ್ಲಾ ಪ್ರಾಣಿಗಳನ್ನೂ ಸಂತೋಷಪಡಿಸುತ್ತಿದ್ದನು. ॥೪-೫॥

ಅದರಲ್ಲಿಯೂ ವಿಶೇಷಶ್ರದ್ಧೆಯಿಂದ, ಭಗವದ್ಭಕ್ತರೂ, ಭಸ್ಮಲೇಪಿತದೇಹವುಳ್ಳವರೂ, ರುದ್ರಾಕ್ಷಮಾಲೆಗಳನ್ನಲಂಕರಿಸಿದವರೂ ಆದ ಶೈವರನ್ನು ಸಮೀಪಿಸಿ, ಅವರಿಗೆ ನಮಸ್ಕಾರಮಾಡಿ, ಮನೆಯೊಳಗೆ ಕರೆದುಕೊಂಡುಹೋಗಿ ಕುಶಲಪ್ರಶ್ನೆ ಮಾಡಿ ಅವರ ಕಾಲುಗಳನ್ನು ತೊಳೆದು ವಿಧಿಪ್ರಕಾರ ಅವರಿಗೆ ಬೇಕಾದ್ದನ್ನೆಲ್ಲಾ ಕೊಟ್ಟು ತೃಪ್ತಿಪಡಿಸುತ್ತಿದ್ದನು. ॥೬-೭॥

ಹೀಗೆ ಪ್ರತಿದಿನವೂ ಅವನು ಶಂಭುವಿನ ಸೇವಕರಿಗೆ ಸೇವೆಮಾಡುತ್ತಾ ಸಂತೋಷದಿಂದ ಕುಬೇರನಂತೆ ಐಶ್ವರ್ಯದಿಂದ ಮೆರೆಯುತ್ತಿರಲು, ಮಹಾದೇವನು ಐಶ್ವರ್ಯವಂತನಾಗಿರುವಂತೆಯೇ ಬಡತನದಲ್ಲಿಯೂ ಇವನ ಸ್ಥಿರವಾದ ಭಕ್ತಿಯನ್ನು

ದೇವೋ ದರ್ಶಯಿತುಂ ತಸ್ಯ ವಿತತಾನ ದರಿದ್ರತಾಂ ।
ಅಸಂಕುಚಿತಚೇತಸ್ಕೋ ಸಂಕೋಚೇಽಪಿ ಸ ಸಂಪದಃ ॥೧೦॥

ವಿಕ್ರೀಯ ಪ್ರಾಕ್ತನದ್ರವ್ಯಂ ಭೂಷಣಾದೀನಿ ಚಾಂತಕೇಃ ।
ಪೂರ್ವಾಧಿಕತಯಾ ಶಂಭೋರ್ಭಕ್ತಭುಕ್ತಿಪ್ರದಾನತಃ ॥೧೧॥

ವಿನ್ಯಸ್ಯ ಭಾರಂ ನೃತ್ತೇಶೇ ಸ ದುರ್ಗತಿಮಚೀಗಣತ್ ।
ತೃಣಾಯ ಮನ್ಯೇ ದೌರ್ಗತ್ಯಂ ಶೈವಾರಾಧನತತ್ಪರೇ ॥೧೨॥

ಪ್ರಕಾಶಯಿತುಮೇತಸ್ಮಿನ್ನನ್ನದಾನವ್ರತಂ ಹರಃ ।
ಹರಿಬ್ರಹ್ಮಾಪರಿಚ್ಛೇದ್ಯೋ ವಿಧಾಯ ವೃಷಭಃಸ್ವಯಂ ॥೧೩॥

ಸ್ವೀಚಕ್ರೇ ಭೂಮಿಕಾಂ ಕಾಂಚಿತ್ತಪಸ್ವಿಜನಮುದ್ರಿಕಾಂ ।
ಕುಹನಾತಮಸಾ ಚಂಚತ್ತಟಿತ್ಪಿಂಜರಿತಾಂಬರೇ ॥೧೪॥

ದಂಭೋಳಿಜೃಂಭಿತೋದಂಚತ್ಸ್ವನಸ್ಫೂರ್ಜದ್ದಿಗಂತರೇ ।
ನಿಶೀಥಸಮಯೇ ಮೇಘವಿಗಲದ್ವಾರಿ ಸಂಕುಲೇ ॥೧೫॥

---

ಪರೀಕ್ಷಿಸಿ ನೋಡಬೇಕೆಂದು ಯೋಚಿಸಿ ಇವನಿಗೆ ಬಡತನವನ್ನುಂಟುಮಾಡಿದನು. ॥೮-೯-೧೦॥

ಇಲಾನಂದನು ಹಿಂದಿನ ಐಶ್ವರ್ಯವು ಕಡಿಮೆಯಾದರೂ ಮನಸ್ಸಿನಲ್ಲಿ ಸಂಕೋಚಪಡದೇ ಹಿಂದಿನವರು ಇಟ್ಟಿದ್ದ ಆಭರಣವೇ ಮುಂತಾದವುಗಳನ್ನು ಒಳಗಿನಿಂದ ತಂದು ಅದನ್ನು ಮಾರಿ, ಎಂದಿಗಿಂತಲೂ ಹೆಚ್ಚಾಗಿಯೇ ಈಶ್ವರ ಭಕ್ತರಿಗೆ ಭೋಜನಮಾಡಿಸುತ್ತಿದ್ದನು. ಅವನು ಆ ಸತ್ಕಾರದ ಭಾರವನ್ನೆಲ್ಲಾ ನಟೇಶ್ವರನ ಮೇಲಿರಿಸಿ ಕೊಂಚವೂ ತನ್ನ ಹೀನಸ್ಥಿತಿಯನ್ನು ಲೆಕ್ಕಿಸದೇ ಕಾಲ ಕಳೆಯುತ್ತಿದ್ದನು. ಶಿವಪೂಜಾನಿರತನಾದ ಇಲಾನಂದನು ತನ್ನ ಆ ದುಸ್ಸ್ಥಿತಿಯನ್ನು ಹುಲ್ಲಿಗಿಂತಲೂ ಕಡಿಮೆಯಾಗಿ ಕಾಣುತ್ತಾ ಶೈವಾರಾಧನತತ್ಪರನಾಗಿದ್ದನು. ॥೧೧-೧೨॥

ಈ ಇಲಾನಂದನಲ್ಲಿ ಅನ್ನದಾನವ್ರತ ಮಹಿಮೆಯನ್ನು ಪ್ರಕಟಪಡಿಸಲು ವಿಷ್ಣು ಬ್ರಹ್ಮರಿಂದ ತಿಳಿಯಲಶಕ್ಯನಾದವನೂ, ಸಾಕ್ಷಾದ್ಧರ್ಮರೂಪನೂ ಆದ ಶಿವನು ಒಬ್ಬ ತಪಸ್ವಿಯ ವೇಷವನ್ನು ಹಾಕಿಕೊಂಡು, ಗಾಢವಾದ ಮಳೆಯಿಂದಲೂ ಕತ್ತಲೆಯಿಂದಲೂ ವ್ಯಾಪ್ತವಾಗಿ ಚಂಚಲವಾದ ಮಿಂಚುಗಳಿಂದ ಆಕಾಶವೆಲ್ಲವೂ ಹೊಂಬಣ್ಣ

ಸುಪ್ತಭಕ್ತಾಖಿಲಜನೇ ಭಸ್ಮದಿಗ್ಧತ್ರಿಪುಂಡ್ರವಾನ್ ।
ಪ್ರಾಪ್ಯ ಭಕ್ತಸ್ಯ ತದ್ಗೇಹಂ ಕ್ಷುಧಾರ್ತ ಇವ ಭಾವಯನ್ ॥೧೬॥

॥ ಶಂಭುರುವಾಚ ॥

ಗೃಹೇಶ ಶಂಭುಭಕ್ತೋಽಹಂ ಕ್ಷುಧಾರ್ತೋಽಸ್ಮೀತ್ಯುವಾಚ ತಂ ।
ತಚ್ಛ್ರುತ್ವಾ ರವಮುದ್ಘಾಟ್ಯ ಗೃಹೀ ಚ ನಿರಗಾದ್ಗೃಹಾತ್ ॥೧೭॥

ವರ್ಷಧಾರಾನಿಲಾಮರ್ಶಕಂಪಮಾನಾಂಗಮೇವ ತಂ ।
ನೀತ್ವಾ ಗೃಹಾಂತಃ ಶೀತಾರ್ತಿಂ ಶಮಯಿತ್ವಾನಿಲಾರ್ಚಿಷಾ ॥೧೮॥

ಭಕ್ತಃ ಪ್ರಾಹ ನಿಜಾಂ ಭಾರ್ಯಾಮುಪೋಷ್ಯಾಪ್ಯಹಮೋದನೈಃ ।
ಶಿವಭಕ್ತಾನ್ಪ್ರೀಣಯಿಷ್ಯಾಮೀತ್ಯೇವಂ ಸಂವಿನ್ಮಯಾಕೃತಾ ॥೧೯॥

ತತ್ಕಥಂ ಪರಿತೃಪ್ತಂ ಸ್ಯಾಂ ರಾತ್ರೌ ವರ್ಷಃ ಸಮಾಗತಃ ।
ಇತ್ಯುಕ್ತಾ ಸಾ ತಥಾ ಭರ್ತ್ರಾ ಶಿವಾಕಲ್ಪಾಽಬ್ರವೀತ್ಪತಿಂ ॥೨೦॥

---

ವಾಗಿ, ಸಿಡಿಲುಗುಡುಗುಗಳು ದಿಕ್ಕುಗಳನ್ನೆಲ್ಲಾ ಮೊಳಗಿಸುತ್ತಿರುವ ರಾತ್ರಿ ವೇಳೆಯಲ್ಲಿ ಮಳೆಯ ಮೋಡಗಳು ಅಗಾಧವಾಗಿ ನೀರು ಸುರಿಸುತ್ತಿರಲು ಎಲ್ಲಾ ಭಕ್ತವೃಂದವೂ, ಮಲಗಿ ನಿದ್ರಿಸುತ್ತಿರುವಾಗ, ಭಸ್ಮಲೇಪನ, ಭೂತಿತ್ರಿಪುಂಡ್ರಗಳಿಂದ ಅಲಂಕೃತನಾಗಿ, ಭಕ್ತನಾದ ಆ ಇಲಾನಂದನ ಮನೆಗೆ ಬಂದು ಹಸಿವಿನಿಂದ ಬಳಲಿದವನಂತೆ ನಟಿಸುತ್ತಾ ಅವನನ್ನು ಕೂಗಿ ಹೀಗೆಂದನು. ॥೧೩-೧೪-೧೫-೧೬॥

ಓ ಮನೆಯ ಯಜಮಾನನೇ, ನಾನು ಈಶ್ವರಭಕ್ತನು. ಹಸಿವಿನಿಂದ ಬಳಲಿರುವೆನು ಎಂದು ಕೂಗಿ ಹೇಳಲು, ಆ ಕೂಡಲೇ ಅದನ್ನು ಕೇಳಿ ಮನೆಯ ಯಜಮಾನನು ಬಾಗಿಲನ್ನು ತೆರೆದು ಮನೆಯಿಂದ ಹೊರಗೆ ಬಂದು ಮಳೆಯ ಹನಿ ಮತ್ತು ವಾಯುಗಳ ಹೊಡೆತದಿಂದ ನಡುಗುತ್ತಿರುವ ದೇಹವುಳ್ಳ ಅವನನ್ನು ಮನೆಯ ಒಳಕ್ಕೆ ಕರೆದುಕೊಂಡು ಹೋಗಿ, ಬೆಂಕಿಯ ಶಾಖದಿಂದ ಅವನ ಶೀತಬಾಧೆಯನ್ನು ಮೊದಲು ಹೋಗಲಾಡಿಸಿದನು. ॥೧೭-೧೮॥

ಅನಂತರ ಭಕ್ತನು ತನ್ನ ಸ್ವಂತ ಹೆಂಡತಿಯನ್ನು ಕರೆದು ನಾನು ಉಪವಾಸವಿದ್ದಾದರೂ ಈಶ್ವರಭಕ್ತರಿಗೆ ಊಟಮಾಡಿಸಿ ಸಂತೋಷಪಡಿಸುವೆನೆಂದು ನಾನು ಪ್ರತಿಜ್ಞೆ ಮಾಡಿದ್ದೇನೆ. ಈಗ ರಾತ್ರಿಯಾಗಿದೆ. ಹೇಗೆ ಈತನನ್ನು ತೃಪ್ತಿಪಡಿಸು

ಗೃಹೇ ಕಿಂಚಿನ್ನ ಪಶ್ಯಾಮಿ ನ ವೇಲೇಯಂ ಹಿ ಯಾಚನೇ ।
ಪ್ರಸುಪ್ತಾಃ ಪ್ರತಿವೇಶ್ಮಸ್ಥಾನಸು ವೇಲಂ ಕರೋಮಿ ಕಿಂ ॥೨೦॥

ದಿನಾದಾವಧಿಕೇದಾರಂ ಉಪ್ತಂ ಬೀಜಸಮುಚ್ಚಯಂ ।
ಸಮೂಹ್ಯಾದಾಯ ಗಚ್ಛಪ್ರೋ ನಾನ್ಯತ್ಕರ್ತವ್ಯಮಸ್ತಿ ವೈ ॥೨೨॥

ತದನ್ನಂ ಪರಿಕಲ್ಪ್ಯಾಥ ಕ್ಷುಧಾರ್ತಿಂ ಶಮಯಾತಿಥೇಃ ।
ವಿನೋಪಾಯಮಿದಂ ನಾನ್ಯದಿತಿ ತತ್ಪ್ರೇರಿತಃ ಪ್ರಿಯ ॥೨೩॥

॥ ಕೃಷೀವಲ ಉವಾಚ ॥

ಮಮಾದಿಸಂಪತ್ಸುಲಭಾ ಭವತೀತ್ಯನುಗಮ್ಯತಾಂ ।
ಸ ವರ್ಷಧಾರಾಭಿಹತಃ ಕೇಲಮುಕ್ಷೇತ್ರಮಭ್ಯಗಾತ್ ॥೨೪॥

ಕಾಲೇ ನೀಲಘನಚ್ಛನ್ನೇ ತಮೋವೃತದಿಗಂತರೇ ।
ಪದ್ಭ್ಯಾಮನ್ವಿಷ್ಯ ಪದವೀಂ ತಿಮಿರಾಂಧೀಕೃತೇಕ್ಷಣಃ ॥೨೫॥

---

ವುದು? ಮಳೆ ಬೇರೆ ಜೋರಾಗಿ ಸುರಿಯುತ್ತಿದೆ ಎಂದು ಹೇಳಲು ಪಾರ್ವತೀದೇವಿಗೆ ಸಮಾನಳಾದ ಆತನ ಪತ್ನಿಯು ಗಂಡನಿಗೆ ಇಂತೆಂದಳು. ॥೧೯-೨೦॥

ಸ್ವಾಮಿ, ಮನೆಯಲ್ಲಿ ಏನೊಂದೂ ಪದಾರ್ಥವಿಲ್ಲ, ಇನ್ನೆಲ್ಲಿಯಾದರೂ ಬೇಡೋಣವೆಂದರೆ ಇದು ಸಮಯವಲ್ಲ ಪಕ್ಕದ ಮನೆಯವರೆಲ್ಲರೂ ನಿದ್ರಿಸುತ್ತಿವರು. ಈಗ ನಾನೇನು ಮಾಡಲಿ. ಹಗಲಿನ ಪ್ರಾರಂಭದಲ್ಲಿ (ಬೆಳಗ್ಗೆ) ಗದ್ದೆಯಲ್ಲಿ ಬಿತ್ತಿ ಬಂದ ಬೀಜಗಳ ಸಮುದಾಯವನ್ನು ಅಗೆದು ತೆಗೆದುಕೊಂಡು ಬರೋಣ. ಅದನ್ನು ಬಿಟ್ಟರೆ ಬೇರೆ ಯಾವುದೂ ಉಪಾಯವಿಲ್ಲ. ಅದರ ಅನ್ನವನ್ನು ಮಾಡಿ, ಅತಿಥಿಯ ಹಸಿವಿನ ಪೀಡೆಯನ್ನು ಸಮಾಧಾನಪಡಿಸು. ಬೇರೆ ಯಾವುದೊಂದೂ ಉಪಾಯವೇ ನನಗೆ ತೋರುವುದಿಲ್ಲವೆಂದು ಪತ್ನಿಯು ಹೇಳಲು, ಅವಳಿಂದ ಪ್ರೇರಿತನಾದ ಪ್ರಿಯನು ಇಂತೆಂದನು. ॥೨೧-೨೨-೨೩॥

ಎಲೌ ಪ್ರಿಯೇ, ನನಗೆ ಇದರಿಂದ ನಿಜವಾದ ಐಶ್ವರ್ಯವು ಸುಲಭವಾಗಿ ಬರುತ್ತದೆಂದು ತಿಳಿಯೆಂದು ಹೆಂಡತಿಗೆ ಹೇಳಿ, ಅವನು ಮಳೆಯ ಧಾರೆಯಲ್ಲಿಯೇ ನೆನೆಯುತ್ತಲೇ ಬತ್ತದ ಗದ್ದೆಗೆ ಬಂದನು. ಕಪ್ಪು ಮೋಡಗಳಿಂದ ವ್ಯಾಪ್ತವಾಗಿ, ದಿಕ್ಕುಗಳಲ್ಲೆಲ್ಲಾ ಕತ್ತಲೆಯು ಕವಿದಿರುವ ಸಮಯದಲ್ಲಿ, ಕಾಲಿನಿಂದಲೇ ದಾರಿ

ಮಧ್ಯೇಮಧ್ಯೇ ಸ್ಫುರದ್ವಿದ್ಯುತ್ಪ್ರಭಾದರ್ಶಿತಪದ್ಧತಿಃ ।
ವಿದಾರಿತಶ್ರುತಿಪಥೋ ಗಂಭೀರಾಂಭೋದಗರ್ಜಿತಃ ॥೨೬॥

ಪಯಃ ಪೀತಕಸಂಛನ್ನಮಸ್ತಕಂ ಸುಪ್ತಪಕ್ಷಿಣಂ ।
ಪ್ರಾಪ್ಯಂ ಕೇದಾರಮುತ್ಸಾರ್ಯ ಸಲಿಲಂ ಬೀಜಸಂಚಯಂ ॥೨೭॥

ಆದಾಯ ಪೀಠಕಾಸರ್ಷೀನ್ನವನತ್ವಂ ಪ್ರಸಾದವಾನ್ ।
ದ್ವಾರ್ಸ್ಥೈರ್ವಸ ತದಾದಾಯ ಪ್ರವಿಶ್ಯ ಭವನಂ ಪ್ರಿಯಾ ॥೨೮॥

ಪ್ರಕ್ಷಾಳ್ಯ ಪಾಕಕಾಷ್ಠಾನಿ ನ ಸಂತೀತ್ಯಾಹ ತಂ ಪತಿಂ ।
ಭಿತ್ವಾ ಸ ಗೇಹಪಟಲಂ ಭಿತ್ವಾ ದಾರೂಣ್ಯಥಾಯಯೌ ॥೨೯॥

ಆದಾಯ ಸ್ಮ ತದಾ ಚುಲ್ಯಾಂ ದೀಪಯಾಮಾಸ ಪಾವಕಂ ।
ಸ ಯವಾಂಕುರಜಾತಂ ತತ್ತಪ್ತೇ ಭಾಂಡೇ ನಿಧಾಯ ಚ ॥೩೦॥

---

ಯನ್ನು ಹುಡುಕುತ್ತಾ, ಕತ್ತಲೆಯಿಂದ ಕುರುಡಾದ ಕಣ್ಣುಳ್ಳವನಾಗಿ ಮಧ್ಯಮಧ್ಯದಲ್ಲಿ ಹೊಳೆಯುತ್ತಿರುವ ಮಿಂಚಿನ ಕಾಂತಿಯಿಂದ ದಾರಿಯನ್ನು ಕಾಣುತ್ತಾ, ಕಿವಿಯೊಡೆಯುವಂತಿರುವ ಮೇಘಧ್ವನಿಯನ್ನು ಆಲೈಸುತ್ತಾ ಮುಂದೆ ಹೋದನು. ॥೨೪-೨೫-೨೬॥

ಮೇಲಿನ ವರೆಗೂ ನೀರಿನಿಂದ ಮುಚ್ಚಲ್ಪಟ್ಟು ಮೇಲೆ ಗರಿಗಳನ್ನು ಮುಚ್ಚಿರುವ ಬತ್ತದ ಗದ್ದೆಗೆ ಬಂದು, ಅಲ್ಲಿದ್ದ ನೀರನ್ನೆಲ್ಲಾ ಹೊರಡಿಸಿ, ಬೀಜರಾಶಿಯನ್ನು ತೆಗೆದುಕೊಂಡು ಬುಡದ ಮಣ್ಣಿನೊಡನೆಯೇ ಸಂತೋಷದಿಂದ ಮನೆಯ ಬಾಗಿಲಿಗೆ ಬಂದನು. ಅದನ್ನು ಅವನ ಹೆಂಡತಿಯು ಒಳಕ್ಕೆ ತೆಗೆದುಕೊಂಡು ಹೋಗಿ ಚೆನ್ನಾಗಿ ತೊಳೆದು ಪಾಕಕ್ಕೆ ಸಿದ್ಧಪಡಿಸಿದಳು. ಆದರೆ ಜಾಗ್ರತೆಯಾಗಿ ಅಡಿಗೆ ಮಾಡಲು ಸೌದೆಕಡ್ಡಿಗಳೇ ಇಲ್ಲವೆಂದು ಹೇಳಲು, ಮತ್ತೆ ಇಲಾವಂತನು ಮನೆಯ ಮರದ ಪಟ್ಟಿಗಳನ್ನೇ ಒಡೆದು ಚೂರುಗಳನ್ನು ತಂದಿತ್ತನು. ॥೨೭-೨೮-೨೯॥

ಕೂಡಲೇ ಆಕೆಯು ಆ ಮರದ ತುಂಡುಗಳಿಂದ ಒಲೆಯಲ್ಲಿ ಬೆಂಕಿಯನ್ನುರಿಸಿ, ಮೊಳಕೆ ಬಂದಿದ್ದ ಬತ್ತವನ್ನು ಕಾದ ಬಾಂಡಲೆಯಲ್ಲಿ ಹುರಿದು, ಒನಕೆಯಿಂದ ಕುಟ್ಟಿ ಶುಭ್ರವಾದ ಅಕ್ಕಿಯನ್ನು ಮಾಡಿಕೊಂಡಳು. ಆಮೇಲೆ ಅದರಿಂದ ಅನ್ನಮಾಡಿ ತರುವಾಯ ಪತಿಯನ್ನು ಕುರಿತು ಸ್ವಾಮಿ, ನೆಂಚಿಕೊಳ್ಳಲು ಯಾವ ಕಾಯಿಪಲ್ಯವೂ ಇಲ್ಲವಲ್ಲ! ಏನು ಮಾಡುವುದೆಂದಳು. ಹಸಿವಿನಿಂದ ಈ ಅತಿಥಿಯು

ವಿಶೋಷ್ಯ ಮುಸಲಾಘಾತಂ ಚಕ್ರೇ ಸಾ ಶುಭ್ರತಂಡುಲಂ ।
ಪಕ್ತ್ವಾsನ್ನಂ ಪತಿಮಿತ್ಯಾಹ ವ್ಯಂಜನಂ ನಾಸ್ತಿ ಕಿಂಚನ ॥೩೧॥

ತತಃ ಸೋsಪಿ ಕ್ಷುಧಾರ್ತೋsಯಂ ಭಕ್ತ ಇತ್ಯಾಕುಲೋsಭವತ್ ।
ನಿರ್ಗತ್ಯ ನಿಷ್ಕುಟಂ ಪ್ರಾಪ್ಯ ಭಕ್ತಃ ಪೂರ್ಣಫಲಾನ್ಯಪಿ ॥೩೨॥

ಸ ಸ್ವಪಾಶಾನಿವೋನ್ಮುಚ್ಯ ಶಾಕಾನ್ಯಾದಾಯ ಚಾಗಮತ್ ।
ನಾನಾವಿಧಾನಿ ತಾನ್ಯೇವ ವ್ಯಂಜನಾನಿ ವ್ಯಧಾತ್ತು ಸಾ ॥೩೩॥

ಅನ್ನಂ ಸಂಪನ್ನಮಿತಿ ಸಾ ಪ್ರಣೀತೇತ್ಯಾಹ ಚಾತಿಥಿಂ ।
ಸ ಪ್ರೀತಚೇತಸಾ ಬೋದ್ಧುಮಶಕ್ಯಂ ನಿಜಬೋಧತಃ ॥೩೪॥

ಶನೈಶ್ಶನೈರ್ಬೋಧಯಿತುಮುದ್ಯತಃ ಪ್ರಣಯೋಕ್ತಿಭಿಃ ॥೩೫॥

॥ ಕೃಷೀವಲ ಉವಾಚ ॥

ಉತ್ತಿಷ್ಠ ನಾಥ ಮದ್ದುಃಖಮೋಚನಾರ್ಥಂ ತ್ವಮಾಗತಃ ।
ಪೂಜಾಂ ಗೃಹಾಣ ವೇಲೇಯಮತ್ಯೇತೀತ್ಯಬ್ರವೀಚ್ಚ ಸಃ ॥೩೬॥

---

ಬಹಳ ಬಳಲಿರುವನು. ಹುಳಿ, ಪಲ್ಯ ಮುಂತಾದ ವ್ಯಂಜನಗಳನ್ನು ಮಾಡದಿದ್ದರೆ ಇವನ ಹಸಿವು ತೀರುವುದೆಂತು? ಎಂದು ಚಿಂತಾಕ್ರಾಂತನಾಗಿ, ಮನೆಯಿಂದ ಹೊರಟು ತನ್ನ ಕೈದೋಟಕ್ಕೆ ಬಂದು ಅಲ್ಲಿದ್ದ ಪೂರ್ಣಫಲಗಳನ್ನು ತನ್ನ ಸಾಂಸಾರಿಕ ಮಾಯಾಪಾಶವನ್ನು ಕತ್ತರಿಸುವಂತೆ ಕೊಯ್ದುಕೊಂಡು, ಕಾಯಿಪಲ್ಯಗಳನ್ನು ಮನೆಗೆ ತಂದನು. ॥೩೦-೩೧-೩೨॥

ಆ ಇಲಾನಂದನ ಹೆಂಡತಿಯು ಅದೇ ಕಾಯಿಪಲ್ಯಗಳಿಂದಲೇ ಅನೇಕ ಬಗೆಯ ವ್ಯಂಜನಗಳನ್ನು ಮಾಡಿದಳು. ಆಮೇಲೆ ಗಂಡನಿಗೆ ಅನ್ನವ್ಯಂಜನಾದಿಗಳೆಲ್ಲ ಸಿದ್ಧವಾಗಿರುವುವೆಂದು ಹೇಳಿದ ಮೇಲೆ ಇಲಾನಂದನನು ಅತಿಥಿಯನ್ನು ಕುರಿತು, ಅಡಿಗೆಯು ಸಿದ್ಧವಾಗಿದೆ ಎಂದು ಪ್ರೀತಿಯಿಂದ ನುಡಿಯುತ್ತಾ, ಸುಜ್ಞಾನದಿಂದ ಮಾತ್ರ ತಿಳಿಯಲು ಶಕ್ಯನಾದ ಭಗವಂತನನ್ನು ಮೆಲ್ಲಮೆಲ್ಲಗೆ ಮೃದುವಾಕ್ಯಗಳಿಂದ ಭೋಜನಕ್ಕೆ ಆಹ್ವಾನಿಸಿದನು. ॥೩೩-೩೪-೩೫॥

ಸ್ವಾಮಿ, ನನ್ನ ಕಷ್ಟವನ್ನು ಬಿಡಿಸುವುದಕ್ಕಾಗಿಯೇ ತಾವು ಇಲ್ಲಿಗೆ ಬಂದಿದ್ದೀರಿ. ಎದ್ದು ನಮ್ಮ ಸತ್ಕಾರವನ್ನು ಸ್ವೀಕರಿಸಬೇಕು. ಕಾಲವು ಮೀರುತ್ತಿದೆಯೆಂದು

ಭಾಸ್ವತ್ತೇಜೋದಿಶಶ್ಚೈವ ದ್ಯೋತಯಂ ದ್ಯಾಂ ದಿಶಶ್ಚ ಸಃ ।
ವಿಸ್ಮಿತೋಽಭೂತ್ತದಾಲೋಕ್ಯ ದಂಪತೀ ವಿಸ್ಮಯಾಕುಲೌ ॥೩೭॥

ಬ್ರಹ್ಮಾದಿಭಿರ್ಮೃಗ್ಯಮಾಣಸ್ತತ್ರ ಜ್ಯೋತಿರ್ಮಯಃ ಶಿವಃ ।
ಉಮಾಸಖೋ ವೃಷಾರೂಢೋ ವಿಸ್ಮಿತೌ ಪ್ರಾಹ ದಂಪತೀ ॥೩೮॥

॥ ಈಶ್ವರ ಉವಾಚ ॥

ಮದ್ಭಕ್ತ ಮಮ ಪೂಜಾಂ ತ್ವಮೇವಂ ಕೃತ್ವಾ ಸ್ಥಿರೋ ಭವ ।
ಮುಖ್ಯಸ್ತ್ವಂ ಶಿವಭಕ್ತಾನಾಂ ಪ್ರಾಪ್ತವಾನಸಿ ಶಾಶ್ವತಂ ॥೩೯॥

ಏತಯಾ ಸಹ ಪತ್ನ್ಯಾ ತ್ವಂ ಮಮ ಕೈಲಾಸಪರ್ವತೇ ।
ಧನೇಶಾದಧಿಕಂ ಭುಂಕ್ಷ್ವ ಶಿವದತ್ತಾಂ ಶ್ರಿಯಂ ಸ್ಥಿರಾಂ ॥೪೦॥

ತತಶ್ಶಿವಶಿವೇತ್ಯುಚ್ಚೈರ್ವದನ್ಜಯಜಯೇತಿ ಚ ।
ಪ್ರಹೃಷ್ಟಾತ್ಮಾ ಸ ಭಕ್ತಸ್ತಂ ತುಷ್ಟುವೇಽಭಿಪ್ರಣಮ್ಯ ಚ ॥೪೧॥

---

ಇಲಾನಂದನನು ಅತಿಥಿರೂಪಿಯಾಗಿ ಬಂದಿರುವ ಶಿವನಿಗೆ ವಿಜ್ಞಾಪಿಸಿಕೊಂಡನು. ಆಗ ಪರಶಿವನು ಪ್ರಕಾಶಮಾನವಾದ ತನ್ನ ತೇಜಸ್ಸಿನಿಂದ ದಿಕ್ಕುಗಳನ್ನೆಲ್ಲಾ ಬೆಳಗಿಸುತ್ತಾ ಆ ದಂಪತಿಗಳ ಅಕೃತ್ರಿಮವಾದ ಭಾವವನ್ನು ನೋಡಿ ಆಶ್ಚರ್ಯಪಟ್ಟನು. ಆ ದಂಪತಿಗಳೂ ಸಹ ಅಕಸ್ಮಾತ್ತಾಗಿ ಲಭಿಸಿದ ದಿವ್ಯತೇಜಸ್ಸನ್ನು ನೋಡಿ ಆಶ್ಚರ್ಯಚಕಿತರಾದರು. ಬ್ರಹ್ಮನೇ ಮೊದಲಾದವರಿಂದಲೂ ಹುಡುಕಲ್ಪಡುವ ಜ್ಯೋತಿಸ್ವರೂಪನಾದ ಪರಶಿವನು ಅಲ್ಲಿ ಪಾರ್ವತಿಯೊಡನೆ ವೃಷಭಾರೂಢನಾಗಿ ತನ್ನ ತೇಜೋರೂಪದಿಂದ ವಿಸ್ಮಿತವಾಗಿರುವ ಆ ದಂಪತಿಗಳಿಗಿಂತೆಂದನು. ॥೩೬-೩೭-೩೮॥

ಭಕ್ತವರ್ಯನೇ, ನೀನು ಹೀಗೆಯೇ ನನ್ನ ಪೂಜೆಯನ್ನು ಸ್ಥಿರವಾಗಿ ಮಾಡಿಕೊಂಡಿರು. ನೀನು ನನ್ನ ಭಕ್ತರಲ್ಲಿ ಮುಖ್ಯನಾಗಿ, ಶಾಶ್ವತವಾದ ಪದವಿಯನ್ನು ಪಡೆಯುವೆ. ನೀನು ಈ ನಿನ್ನ ಹೆಂಡತಿಯೊಡನೆ ನನ್ನ ಕೈಲಾಸಪರ್ವತದಲ್ಲಿ ನನ್ನಿಂದ ಅನುಗ್ರಹಿಸಲ್ಪಟ್ಟ ಶಾಶ್ವತವಾದ ಐಶ್ವರ್ಯವನ್ನು ಕುಬೇರನಿಗಿಂತಲೂ ಹೆಚ್ಚಾಗಿ ಪಡೆದು ಅನುಭವಿಸು ಎಂದು ಶಂಕರನು ಅನುಗ್ರಹಿಸಲು, ಆಗ ಇಲಾನಂದನನು, ಗಟ್ಟಿಯಾಗಿ ಶಿವ! ಶಿವ! ಜಯವಾಗಲಿ, ಎಂದು ಹೇಳುತ್ತಾ ಸಂತೋಷ

॥ ಕೃಷೀವಲ ಉವಾಚ ॥

ಭೋ ಭರ್ಗ ಶಾಶ್ವತ ವಿಭೋ ತ್ರಿಜಗಚ್ಛರಣ್ಯ
ರಾಕೇಂದುಧಾಮವದನಾಮಲಚಾರುಮೂರ್ತೇ ।
ವಿಶ್ವೇಶ ಶಾಶ್ವತ ವಿಭೋ ಶಶಿಖಂಡಚೂಡ
ಮಾಮದ್ಯ ಪಾಹಿ ಸುದೃಶಾ ಕರುಣಾವರುಣಾಲಯಾದ್ಯ ॥೪೨॥

॥ ಸ್ಕಂದ ಉವಾಚ ॥

ಇತಿ ಸಂಸ್ತುವತೇ ತಸ್ಮೈ ದೇವಃ ಪತ್ನೀಯುತಾಯ ಚ ।
ದತ್ವಾ ಕೈಲಾಸಮಮಲಂ ತತ್ರೈವಾಂತರ್ದಧೇ ಹರಃ ॥೪೩॥

ಸಾನಂದಂ ಸನಕಾದಿವಂದಿತಪದಂ ಸತ್ಸ್ವಾರಿವೃಂದಾರಕೋ
ಹ್ಯುದ್ಯನ್ಮೌಲಿನಿಘೃಷ್ಟಪಾದಕಮಲಂ ಲೋಕ್ಯಂ ತ್ವಿಲಾನಂದಕಃ ।

---

ಚಿತ್ತನಾಗಿ ಮಹಾದೇವನಿಗೆ ನಮಸ್ಕಾರಮಾಡಿ ಹೀಗೆ ಸ್ತೋತ್ರಮಾಡಿದನು. ॥೩೯-೪೦-೪೧॥

ಶಂಕರನೇ, ಶಾಶ್ವತನಾದ ಪ್ರಭುವೇ, ಮೂರು ಲೋಕಗಳಿಗೂ ಶರಣ್ಯನೂ, ರಾಕಾಚಂದ್ರನಂತೆ ನಿರ್ಮಲವಾದ ಮುಖದಿಂದ ಮನೋಹರವಾದ ಆಕೃತಿಯುಳ್ಳವನೂ, ಜಗದೊಡೆಯನೂ, ನಾಶರಹಿತನೂ, ಸರ್ವವ್ಯಾಪಕನೂ, ಚಂದ್ರಖಂಡವನ್ನು ತಲೆಯಲ್ಲಿ ಧರಿಸಿರುವವನೂ, ದಯಾಸಮುದ್ರನೂ ಆದ ಸ್ವಾಮಿಯೇ, ಈಗ ನಿನ್ನ ದಯಾಮಯವಾದ ದೃಷ್ಟಿಯಿಂದ ನನ್ನನ್ನು ಕಾಪಾಡು ಎಂದು ಇಲಾನಂದನೆಂಬ ರೈತನು ಪರಶಿವನನ್ನು ಸ್ತೋತ್ರಮಾಡಿದನು. ॥೪೨॥

ಹೀಗೆ ಪತ್ನೀಸಮೇತನಾಗಿ ಸ್ತೋತ್ರಮಾಡುತ್ತಿರುವ ಆ ದಂಪತಿಗಳಿಗೆ ನಿರ್ಮಲವಾದ ಕೈಲಾಸವನ್ನು ಕರುಣಿಸಿ, ಆ ಪರಮೇಶ್ವರನು ಅಲ್ಲಿಯೇ ಅಂತರ್ಧಾನನಾದನು. ॥೪೩॥

ಆನಂದಪೂರ್ಣರಾದ ಸನಕನಂದನರೇ ಮುಂತಾದವರಿಂದ ನಮಸ್ಕರಿಸಲ್ಪಟ್ಟು, ದೇವತೆಗಳ ಪ್ರಕಾಶಮಾನವಾದ ಕಿರೀಟದ ಮಣಿಗಳ ತೇಜಸ್ಸಿನಿಂದ ವ್ಯಾಪ್ತವಾದ ದರ್ಶನಾರ್ಹವಾದ ಪರಶಿವನ ಪಾದಕಮಲಕ್ಕೆ ವಂದಿಸುತ್ತಾ, ಆನಂದಾಸ್ಪದವೂ, ಬ್ರಹ್ಮಾದಿದೇವತೆಗಳಿಂದ ಪ್ರವೇಶಿಸಲಸಾಧ್ಯವೂ, ಕುಂದಪುಷ್ಪದಂತೆ ಶುಭ್ರವೂ ಆದ

ಲೇಭೇಽಸೌ ಶಿವಯೋರಪಾರಪರಮಾನಂದಾಸ್ಪದಂ ಕುಂದಭಂ
ಜಿತ್ವಾರಿಂ ರಜತಾದ್ರಿಶೃಂಗಮಮಲಂ ಬ್ರಹ್ಮಾದ್ಯಗಮ್ಯಂ ತದಾ ॥೪೪॥

ಇತಿ ಶ್ರೀ ಶಿವರಹಸ್ಯೇ ನವಮಾಂಶೇ ಸದಾಶಿವಾಖ್ಯೇ
ಇಲಾನಂದಭಕ್ತಪ್ರಸಾದವರ್ಣನಂ ನಾಮ ಅಷ್ಟಾವಿಂಶೋಽಧ್ಯಾಯಃ

---

ಪಾರ್ವತೀಪರಮೇಶ್ವರರಿಬ್ಬರಿಗೂ ಆಶ್ರಯವಾದ ರಜತಾದ್ರಿಶಿಖರವನ್ನು ಆ ಇಲಾನಂದನನು ಸಪತ್ನೀಕನಾಗಿ ಪಡೆದನು. ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೪೪॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಇಲಾನಂದನೆಂಬ ಭಕ್ತನಿಗೆ ಪರಮೇಶ್ವರನ ಅನುಗ್ರಹವರ್ಣನೆಯೆಂಬ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಏಕೋನತ್ರಿಂಶೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

ಸತ್ಯಾರ್ಥನಾಥ ನಾಮ್ನೋಽಸ್ಯ ಭಕ್ತಸ್ಯ ಕಥಯೇ ಕಥಾಂ ।
ಅಸ್ತಿ ಚೇದಿಪತಿಃ ಕಶ್ಚಿಚ್ಚಿಂತಾಮಣಿರಿವಾರ್ಥಿನಾಂ ||೧||

ಮರಾಢನಾಥಸತ್ಯಾರ್ಥ ಇತ್ಯನ್ವರ್ಥಪದಾಭಿಧಃ ।
ಸ ಗೋಪಾಲಪುರೇ ಗೋತ್ರಾಮಂಡಲಾಖಂಡಲಪ್ರಜಾಃ ||೨||

ಜುಗೋಪ ಭಗವದ್ಭಕ್ತಾನ್ಶಿವಂ ಸ್ವಹೃದಿ ಭಾವಯನ್ ।
ಸತಾಮರ್ಥಂ ಸ ಭಕ್ತಾರ್ಥಂ ಸತ್ಯಾರ್ಥಃ ಸಮುಪಾರ್ಜಯತ್ ||೩||

---

## ಇಪ್ಪತ್ತೊಂಬತ್ತನೆಯ ಅಧ್ಯಾಯ

ಎಲೈ ಜೈಗೀಷವ್ಯನೇ, ಸತ್ಯಾರ್ಥನಾಮವೆಂಬ ಹೆಸರಿನ ಭಕ್ತನ ಕಥೆಯನ್ನು ಹೇಳುತ್ತೇನೆ ಕೇಳು. ಯಾಚಕರಿಗೆ ಚಿಂತಾಮಣಿಯಂತೆ ಚೇದಿಪತಿಯೆನಿಸಿದ ರಾಜನೊಬ್ಬನಿದ್ದನು. ಅವನಿಗೆ ಮರಾಢನಾಥ, ಸತ್ಯಾರ್ಥನಾಥನೆಂಬ ಅನ್ವರ್ಥ ನಾಮಗಳಿದ್ದವು. ಅವನು ಗೋಪಾಲಪುರದಲ್ಲಿ ವಾಸಿಸುತ್ತಾ ಭೂಮಂಡಲದ ಇಂದ್ರನಂತೆ ಶಿವನನ್ನು ಮನಸ್ಸಿನಲ್ಲಿಯೇ ಸದಾ ಭಾವಿಸುತ್ತಾ ಭಗವದ್ಭಕ್ತರಾದ ಪ್ರಜೆಗಳನ್ನು ಪ್ರೀತಿಯಿಂದ ಕಾಪಾಡುತ್ತಿದ್ದನು. ||೧-೩||

ಅವನು ಸತ್ಪುರುಷರಿಗೋಸ್ಕರವಾಗಿಯೂ ಶೈವಶ್ರೇಷ್ಠರ ಸತ್ಕಾರಕ್ಕಾಗಿಯೂ, ಸತ್ಯದಿಂದಲೇ ದ್ರವ್ಯವನ್ನು ಸಂಪಾದಿಸುತ್ತಿದ್ದನು. ಭೂಪಾಲನಾದ ಅವನು ತನ್ನ

ತನೂಮಯಿ ತದರ್ಧಾರ್ಧಂ ತನುಂ ಧರಣಿಶೇಖರಃ ।
ಕದಾಚಿದರ್ಕ ಏವೋದ್ಯತ್ಕರಾಲಕರವಾಲಕಃ ॥೪॥

ಜಿಗಾಯ ಜಗತೀಪಾಲೋ ವೈರಿಣಃ ಸ ರಣಾಂಕಣೇ ।
ಅಥೋ ತುರಂಗಮಾತಂಗಪದಾತಿರಥಪತ್ತಿಭಿಃ ॥೫॥

ಉಪಾಯಸಮಿಮಾನೀಯಾದ್ಭುವೋ ಭಾರಮಿವಾಗ್ರತಃ ।
ಕೃಪಾಣಪರಿಭೂತಃ ಸ್ವಕೃಪಣಾಂ ವೃತ್ತಿಮುತ್ಸಿದತ್ ॥೬॥

ಪಲಾಯಿತಬಲಂ ಹಿತ್ವಾ ಪರಿಪ್ಸಿಪ್ರಾಣಮಾತ್ಮನಃ ।
ನಿಜಮಂದಿರಮಾಧೂಯ ಗಿರಿಂ ಮಂದರಮಾಸದತ್ ॥೭॥

ಬಲಮಂದಿ(?)ಮನೋದಂತಸ್ಸ ಹಿ ಮಂದಸ್ತಪಸ್ವಿನಾಂ ।
ಉದ್ಧೃತ್ಯ ಪುಸ್ತಕಂ ಹಸ್ತೇ ಶಿರಸಾ ತ್ರಿಜಟಾಸ್ತರಃ ॥೮॥

---

ಸಂಪಾದನೆಯ ಅರ್ಧಭಾಗವನ್ನೆಲ್ಲಾ ಇದಕ್ಕೋಸ್ಕರವೇ ಹೆಚ್ಚಾಗಿ ಉಪಯೋಗಿಸುತ್ತಿದ್ದನು. ಒಂದು ಸಲ ರಾಜನು ಕತ್ತಿಯನ್ನು ಹಿಡಿದು ಶೋಭಿಸುತ್ತಾ ಸಾಕ್ಷಾತ್ಸೂರ್ಯನೇ ಏನೋ ಎಂಬಂತೆ ಕುದುರೆ, ಆನೆ, ಕಾಲಾಳು ಮತ್ತು ರಥಸೇನೆಗಳೊಡನೆ ಹೊರಟು ಶತ್ರುಗಳನ್ನು ಯುದ್ಧ ಭೂಮಿಯಲ್ಲಿ ಗೆದ್ದನು. ಅನೇಕ ದೇಶಗಳನ್ನು ಸ್ವಾಧೀನಪಡಿಸಿಕೊಂಡನು. ||೩-೪-೫||

ಭೂಮಿಯ ಸಂಪೂರ್ಣ ನಿಧಿಯನ್ನೇ ತರುತ್ತಿರುವನೋ ಎಂಬಂತೆ ಶತ್ರುಗಳಿಂದ ಕಪ್ಪಕಾಣಿಕೆಗಳನ್ನು ಹೇರಳವಾಗಿ ಹೊರಿಸಿಕೊಂಡು ಬರುತ್ತಿದ್ದನು. ಹೀಗಿರಲು ಒಂದು ಸಲ ಇವನಿಗೆ ಸಂಪೂರ್ಣ ವೈರಾಗ್ಯವುಂಟಾಗಿ, ಕತ್ತಿಯಿಂದ ಸಂಪಾದಿಸಲ್ಪಟ್ಟ ತನ್ನ ಸಂಪೂರ್ಣ ಐಶ್ವರ್ಯದಲ್ಲಿ ನಿರಾಶನಾದನು. ಓಡಿಹೋದ ಸೈನ್ಯವನ್ನು ಬಿಟ್ಟು ತನ್ನ ಪ್ರಾಣವನ್ನು ಕಾಪಾಡಿಕೊಳ್ಳಬೇಕೆಂಬಿಚ್ಛೆಯಿಂದ ತನ್ನ ಸ್ವಂತ ಮನೆಯನ್ನು ಬಿಟ್ಟು ಮಂದರಪರ್ವತವನ್ನು ಸೇರಿ ಅಲ್ಲಿ ಮುನಿಯಂತೆ ವಾಸಮಾಡತೊಡಗಿದನು. ||೬-೭||

ಅಲ್ಲಿಗೆ ಮತ್ತಾರನ್ನೂ ಸೇರಿಸದಂತೆ ಕೆಲವು ಅನುಚರರ ಸಹಾಯದಿಂದ, ಕೇವಲ ಮುನಿಜನರೊಡಗೂಡಿ ಸದಾ ಪುಸ್ತಕವನ್ನು ಹಿಡಿದು ವ್ಯಾಸಂಗಮಾಡುತ್ತಾ

ಪ್ರಶಾಸ್ತಿ ತಾಪಸಸ್ಸಾಸ್ಯಸ್ಯಮಾವಸ್ಥ್ಯಂ ಪ್ರಾಪ್ತಭೂಪತೇಃ ।
ಅವಾರಿತದ್ವಾರತಯಾ ತದಾವಾರಿ ನ ಕೇನಚಿತ್ ॥೯॥

ಅವಾಪ ಕಕ್ಷ್ಯಾಶ್ಯೋಲ್ಲಂಘ್ಯ ಪ್ರವಾಸಕತಪಸ್ವಿವತ್ ।
ತತ್ರ ದತ್ತಾಭಿಧಃ ಕಶ್ಚಿತ್ತರುಣೋ ದ್ವಾರಿ ತಾಪಸಂ ॥೧೦॥

ಶೇತೇ ನರಪತಿರ್ನೇಯಂ ವೇಲಾ ಗಂತುಂ ತವಾಂತರಂ ।
ದಿದೃಕ್ಷುಃ ಸನ್ನಿಧೇ ದೇಶೇ ಕ್ಷಿತಿಭೃತ್ವಾಯ ದೀಕ್ಷಿತಃ ॥೧೧॥

ವಿವಿಕ್ಷುರಭವದ್ಭಿಕ್ಷುರ್ದತ್ತವಾಚಮಲಕ್ಷಯನ್ ।
ಮೃಗೇಕ್ಷಣಾ ಕ್ಷಿತಿಭೃತೋ ಭಿಕ್ಷುಮಾಲೋಕ್ಯ ವಲ್ಲಭಂ ॥೧೨॥

ಅಬೋಧಯತ್ಪ್ರಬುದ್ಧಃ ಸನ್ನಮುಪಾಚರದಂಜಸಾ ॥೧೩॥

---

ತಲೆಯಲ್ಲಿ ಜಡೆಯನ್ನು ಧರಿಸಿ ತಪಸ್ವಿಯಂತೆ ಇದ್ದನು. ಮತ್ತು ತನ್ನ ಸಮೀಪಕ್ಕೆ ಬಂದ ತಪಸ್ವಿಗಳಿಗೆ ಸತ್ಕಾರಮಾಡುತ್ತಾ, ಆದರಿಂದ ಮನಃಶಾಂತಿಯನ್ನು ಪಡೆಯುತ್ತಾ ಆನಂದದಿಂದಿದ್ದನು. ಒಂದು ದಿನ ಒಬ್ಬ ಮುನಿಯು ಈ ರಾಜನಿದ್ದೆಡೆಗೆ ಬಂದನು. ಮೊದಲು ಅವನನ್ನು ಬಾಗಿಲಿನಲ್ಲಿ ಯಾರೂ ತಡೆಯಲಿಲ್ಲ. ॥೮-೯॥

ಹೀಗೆಯೇ ಆ ತಾಪಸನು ಕ್ರಮವಾಗಿ ಒಳಹೊಕ್ಕು ರಾಜನಿದ್ದ ಸ್ಥಳಕ್ಕೆ ಬಂದನು. ಪ್ರಯಾಣಿಕನಾದ ತಪಸ್ವಿಯಂತೆ ಬರುತ್ತಿರುವ ಅವನನ್ನು ಅಲ್ಲಿ ದತ್ತನೆಂಬ ತರುಣನೊಬ್ಬನು ತಡೆದು, ಸ್ವಾಮಿ, ಮಹಾರಾಜರು ಮಲಗಿರುವರು. ನಿಮಗೆ ಒಳಹೊಗಲು ಇದು ಸಮಯವಲ್ಲ, ನೋಡುವ ಅಪೇಕ್ಷೆಯಿದ್ದಲ್ಲಿ ಸಮೀಪದಲ್ಲಿರುವ ಈ ರಾಜರನ್ನು ನಿರೀಕ್ಷಿಸುವ ಜಾಗದಲ್ಲಿ ವಿಶ್ರಮಿಸಿಕೊಳ್ಳೆಂದು ಹೇಳಿದನು. ॥೧೦-೧೧॥

ಆ ತಪಸ್ವಿಯಾದರೋ ಆ ದತ್ತನ ಮಾತನ್ನು ಲಕ್ಷಿಸದೇ ಒಳಹೊಗಲು ಆಗ ರಾಜನ ಹೆಂಡತಿಯು ಆ ಭಿಕ್ಷುವನ್ನು ಕಂಡು ತನ್ನ ಗಂಡನನ್ನು ಕೂಡಲೇ ಎಚ್ಚರಗೊಳಿಸಿದಳು. ಆ ಕೂಡಲೇ ರಾಜನೆದ್ದು ಕೋಪಿಸಿಕೊಳ್ಳದೆ ತಾಪಸನನ್ನು ಎದುರುಗೊಂಡು ಉಪಚರಿಸಿದನು. ॥೧೨-೧೩॥

॥ ನೃಪ ಉವಾಚ ॥

ಕುಲಂ ಶುದ್ಧಂ ಗೃಹಂ ಪೂತಂ ಪ್ರಸನ್ನಂ ಮಮ ಮಾನಸಂ ।
ತವಾಗಮನಮಾಹಾತ್ಮ್ಯಾತ್ಕಿಂಕರಃ ಕಿಂ ಕರೋಮ್ಯಹಂ ॥೧೪॥

ಧನಂ ಚ ಸಂಪದಂ ಸರ್ವಂ ಜೀವಿತಂ ಚ ದದಾಮಿ ತೇ ।
ಇತಿ ಬ್ರುವಾಣಂ ಸಂತುಷ್ಯ ಪರೀಕ್ಷಿತುಮಿವಾಸ್ಯ ಗಾಂ ॥೧೫॥

ಕೇಶಾನ್ನಿಷ್ಕೃಷ್ಯ ರಾಜಾನಮಸಿಂ ಮುಂಚ್ಯ ಜಘಾನ ಸಃ ।
ಸತ್ಯನಾಥಃ ಕ್ಷತಃ ಕ್ಷಿಪ್ರಂ ಪ್ರಯಾತಃ ಕ್ಷಿತಿಪಃ ಕ್ಷಿತೌ ॥೧೬॥

ತತಃ ಕವಾಟರಂಧ್ರೇಣ ದೃಷ್ಟ್ವಾ ತಚ್ಚೇಷ್ಟಿತಂ ಗತಾಃ ।
ಕುಟಿಲಭ್ರುಕುಟೀಬದ್ಧಂ ವಿಕಟಾಸಿಪಟೋದ್ಯತಂ ॥೧೭॥

ದತ್ತಮಾಲೋಕ್ಯ ಸನ್ನದ್ಧಸ್ತ್ಯಕ್ತಮೂರ್ಛೋ ನೃಪೋಽವದತ್ ॥೧೮॥

---

ಸ್ವಾಮಿ, ತಮ್ಮ ಆಗಮನದ ಮಹಿಮೆಯಿಂದ ನನ್ನ ವಂಶವು ಶುದ್ಧವಾಯಿತು, ನನ್ನ ಮನೆಯು ಪವಿತ್ರವಾಯಿತು, ನನ್ನ ಮನಸ್ಸು ನಿರ್ಮಲವಾಯಿತು, ಈಗ ಸೇವಕನಾದ ನಾನು ಏನುಮಾಡಲಿ? ಧನ, ಕನಕಾದಿ ಐಶ್ವರ್ಯ ಮತ್ತು ನನ್ನ ಪ್ರಾಣ ಯಾವುದು ಬೇಕಾದರೂ ಕೊಡಲು ಸಿದ್ಧನಿದ್ದೇನೆಂದು ಹೇಳಿದ ರಾಜನ ಮಾತನ್ನು ಕೇಳಿ, ಸಂತುಷ್ಟನಾದ ತಾಪಸನು ಇವನ ಮಾತನ್ನು ಪರೀಕ್ಷಿಸಬೇಕೆಂದು ತನ್ನ ತಲೆಗೂದಲಿನಲ್ಲಿದ್ದ ಚೂರಿಯನ್ನು ತೆಗೆದುಕೊಂಡು ರಾಜನಿಗೆ ಹೊಡೆದನು. ಈ ಚೂರಿಯ ಏಟಿನಿಂದ ಹೊಡೆಯಲ್ಪಟ್ಟ ಸತ್ಯನಾಥ ರಾಜನು ನೆಲದಮೇಲೆ ಮೂರ್ಛೆಬಿದ್ದನು. ॥೧೪-೧೫-೧೬॥

ಅದನ್ನು ಅಲ್ಲಿಯೇ ಇದ್ದ ಬಾಗಿಲಿನ ಸಂದಿಯಿಂದ ನೋಡಿ ಹೊರಗಿದ್ದ ಭಟರು ಓಡಿಬಂದರು. ಅವರಲ್ಲಿ ಕೆಲವರು ಹುಬ್ಬುಗಂಟಿಕ್ಕಿಕೊಂಡು ಭಯಂಕರವಾದ ಕತ್ತಿಯನ್ನು ಹಿಡಿದುಬಂದಿರುವ ದತ್ತನನ್ನು ನೋಡಿ ಮೂರ್ಛೆಹೊಂದಿದ್ದ ರಾಜನು ಕೂಡಲೇ ಎಚ್ಚೆತ್ತು ದತ್ತನನ್ನು ಕರೆದು ಅವನಿಗೆ ಹೀಗೆ ಅಪ್ಪಣೆಮಾಡಿದನು. ॥೧೭-೧೮॥

|| ರಾಜೋವಾಚ ||

ನೈನಂ ವಧೀರವಿಧಿಷು ಪರೇ ಚಾಪಿ ಯಥಾ ತಥಾ।
ಶಪೇನ್ಮಾಂ ಚೋತ್ಸೃಜೇದೇನಂ ತ್ವಂ ದತ್ತೇತ್ಯಾದಿಶನ್ನೃಪಃ ॥೧೯॥

ಜ್ಞಾತ್ವಾ ತತ್ಕರ್ಮ ತಂ ಹಂತುಮಾಗತಾನ್ನೃಪ ಶಾಸನೇ।
ಉದ್ಯೋಕ್ಷ್ಯತಾಂ ನಿವಾರ್ಯೈನಂ ದತ್ತಃ ಪ್ರಸ್ಥಾಪಯದ್ವನಂ ॥೨೦॥

ಕೃಪಾಣಪಾಣಿಸ್ತಂ ದತ್ತಃ ಪ್ರಾಪಯತ್ಪಾವನಂ ವನಂ।
ತಪಸ್ಯೈವ ಪ್ರಯಾಗೂಹಸ್ತತಃ ಶಕ್ತಿಪುರಂ ಪುನಃ ॥೨೧॥

ಪಥಿ ದತ್ತೇನ ನೀತಸ್ಯ ವಂಚಕಸ್ಯ ತಪಸ್ವಿನಃ।
ಅಕ್ಷತತ್ವಂ ಕಥಂ ನ ಸ್ಯಾದಿತ್ಯಭೂದ್ವ್ಯಾಕುಲೋ ನೃಪಃ ॥೨೨॥

ದತ್ತಾತ್ಸಮಾಗತಾತ್ಸರ್ವಂ ತದ್ವೃತ್ತಾಂತಂ ಮಹೀಪತಿಃ।
ಶ್ರೋತುಮಿಚ್ಛನ್ನಿಜಂ ಪ್ರಾಣಂ ಧಾರಯಾಮಾಸ ಚಾತ್ಮನಿ ॥೨೩॥

---

ಅಯ್ಯ ದತ್ತನೇ, ಈ ತಪಸ್ವಿಯನ್ನು ಶತ್ರುವೆಂದು ಭಾವಿಸಬೇಡ. ಈತನು ಪೂಜ್ಯನು, ವಧ್ಯನಲ್ಲ. ಈತನು ಕೋಪಿಸಿಕೊಂಡರೆ ನನಗೆ ಶಾಪಕೊಡಬಹುದು ಆದ್ದರಿಂದ ಇವನನ್ನು ಕೊಲ್ಲದೇ ಸುರಕ್ಷಿತವಾಗಿ ದೂರ ಕಳುಹಿಸಬೇಕು. ಈತನು ಮಾಡಿದ ದುಷ್ಟ ಕೆಲಸವನ್ನರಿತು ಇವನನ್ನು ಕೊಲ್ಲಲು ಬರುವವರನ್ನು ನೀನು ಶಿಕ್ಷಿಸಲು ಇವನೊಡನೆ ಹೊರಡು ; ಇವನನ್ನು ಖಂಡಿತವಾಗಿ ಕೊಲ್ಲಬೇಡ. ಎಂದು ಹೇಳಿ ದತ್ತನು ಇವನೊಡನೆ ಕಾಡಿಗೆ ಹೊರಡಬೇಕೆಂದು ಹೇಳಿದನು. ||೧೯-೨೦||

ಆ ದತ್ತನು ರಾಜಾಜ್ಞೆಯಂತೆ ತಾಪಸನನ್ನು ರಕ್ಷಿಸುತ್ತಾ ಕತ್ತಿಯನ್ನು ಹಿಡಿದು ಪಾವನವಾದ ಕಾಡಿಗೆ ಕರೆದುಕೊಂಡು ಹೋಗಿಬಿಟ್ಟನು. ಆ ಮುನಿಯಾದರೋ ತನ್ನ ತಪಶ್ಶಕ್ತಿಯಿಂದ ಶಕ್ತಿಪುರವೆಂಬ ಪಟ್ಟಣದ ಸಮೀಪದಲ್ಲಿಯೇ ಮಾಯವಾದನು. ಇತ್ತ ರಾಜನು, ದತ್ತನು ಕರೆದುಕೊಂಡುಹೋದ ತಪಸ್ವಿಗೆ ಈ ದತ್ತನಿಂದ ಯಾವ ವಿಧವಾದ ತೊಂದರೆಯು ಸಂಭವಿಸುವುದೋ ಎಂದು ಚಿಂತಿಸುತ್ತಾ ಅದನ್ನು ತಿಳಿಯಲು ಮತ್ತೆ ಕೆಲವು ಚರರನ್ನು ಅಟ್ಟಿದನು. ||೨೧-೨೨||

ಅವರೆಲ್ಲರೂ ದತ್ತನ ಜೊತೆಯಲ್ಲಿಯೇ ಬಂದು ಆ ತಪಸ್ವಿಯ ಸಮಾಚಾರವನ್ನು ವಿಸ್ತಾರವಾಗಿ ಹೇಳುವವರೆಗೂ ಆ ಸತ್ಯಾರ್ಥರಾಜನು ತನ್ನ ಪ್ರಾಣವನ್ನು

ಸ ಶಠಸ್ತಾಪಸಃ ಕಶ್ಚಿದಕ್ಷತೋ ನಿರ್ಜನಂ ವನಂ ।
ಮಯಾನೀತ ಇತಿ ಪ್ರಾಪ್ಯ ದತ್ತೋಽಶಂಸನ್ಮಹೀಪತೇಃ ॥೨೪॥

ತ್ವಯಾ ಸೌಮ್ಯ ಕೃತಂ ಯತ್ತತ್ಕೇನ ವಾ ವರ್ಣ್ಯತಾಮಿದಂ ।
ಇತಿ ದತ್ತಂ ದ್ವಾರಪಾಲಂ ಪ್ರಶಶಂಸೆ ಮುಹುರ್ಮುಹುಃ ॥೨೫॥

ಆಹೂಯ ಪುತ್ರಾಮಾತ್ಯಾದಿ ನಿಜಂ ಭಾವಂ ನ್ಯವೇದಯತ್ ।
ವಿಧಿನಾದ್ಯ ಕೃತಂ ಮೇಽದ್ಯ ಯದ್ವ್ಯಾಜ್ಞಾ ಕೇನ ಲಂಘ್ಯತೇ ॥೨೬॥

ಶಿವಭಕ್ತಿಪ್ರಕಾಶ್ಯೇಷಾ ಭಕ್ತಿರ್ಭಾಗ್ಯವಶಾದ್ಭವೇತ್ ।
ನೋಪೇಕ್ಷಣೀಯಾ ಸರ್ವೇಷು ಕಾಲೇಷ್ವಭಿಮತಪ್ರದಾ ॥೨೭॥

ಇತ್ಯಾದೀಶಂ ನಮಸ್ಕೃತ್ಯ ಶಿವಭಕ್ತೋ ದಯಾನಿಧಿಃ ।
ಆನಂದತಾಂಡವೇಶಾಂಘ್ರಿಮಂತಸ್ಸ್ವಾಂತಮಚಿಂತಯತ್ ॥೨೮॥

ತಾಂಡವೇಶಸ್ತದಾ ತುಷ್ಟಸ್ತಸ್ಯ ಭೂತಗಣೈರ್ವೃತಃ ।
ವೃಷಾರೂಢಸ್ತಿಲ್ಲವನನಾಥಃ ಶೀತಾಂಶುಭೂಷಣಃ ॥೨೯॥

---

ಗಟ್ಟಿಯಾಗಿ ಧರಿಸಿಕೊಂಡಿದ್ದನು, ಆಗ ಆ ದತ್ತನು ಬಂದು ದುಷ್ಟತಪಸ್ವಿಯು ಯಾವ ತೊಂದರೆಗೂ ಒಳಗಾಗದೇ ತನ್ನಿಂದಲೇ ನಿರ್ಜನವಾದ ಕಾಡಿಗೆ ಕರೆದು ಕೊಂಡು ಹೋಗಿ ಬಿಡಲ್ಪಟ್ಟನೆಂದು ರಾಜನಿಗೆ ತಿಳಿಸಿದನು. ॥೨೩-೨೪॥

ಎಲೈ ಸೌಮ್ಯನೇ, ನೀನು ಮಾಡಿರುವುದನ್ನು ಯಾರಿಂದ ತಾನೇ ವರ್ಣಿಸಲು ಸಾಧ್ಯ, ನೀನೇ ಧನ್ಯ ಎಂದು ರಾಜನು ದತ್ತನೆಂಬ ದ್ವಾರಪಾಲಕನನ್ನು ಬಹಳವಾಗಿ ಹೊಗಳಿದನು. ಅನಂತರ ಮಕ್ಕಳು, ಮಂತ್ರಿ ಮುಂತಾದವರನ್ನು ಕರೆಸಿ, ಅದೃಷ್ಟ ಪರಿಣಾಮದಿಂದ ನನಗೆ ಈ ಅವಸ್ಥೆಯುಂಟಾಯಿತು. ಈ ದೈವಾಜ್ಞೆಯನ್ನಾರು ಮೀರಬಲ್ಲರು ಎಂಬುದಾಗಿ ತನ್ನ ಅಭಿಪ್ರಾಯವನ್ನೆಲ್ಲಾ ಅವರಿಗೆ ಈ ರೀತಿ ಉಪದೇಶಿಸಿದನು. ॥೨೫-೨೬॥

ಮನುಷ್ಯರಿಗೆ ಶಿವಭಕ್ತಿಯನ್ನು ಪ್ರಕಟಿಸುವ ಭಕ್ತಿಯು ಕೇವಲ ಭಾಗ್ಯವಶ ದಿಂದ ಮಾತ್ರ ಉಂಟಾದೀತು! ಎಲ್ಲಾ ಕಾಲದಲ್ಲಿಯೂ ಇಷ್ಟಾರ್ಥವನ್ನುಂಟು ಮಾಡುವ ಈ ಶಿವಭಕ್ತಿಯನ್ನು ಎಂದೂ ಉಪೇಕ್ಷೆಮಾಡಬಾರದು, ಇದೇ ಮುಂತಾಗಿ ಹೇಳುತ್ತಾ ಈಶ್ವರನಿಗೆ ನಮಸ್ಕಾರಮಾಡಿ ದಯಾಸಾಗರನಾದ ಆ ರಾಜನು ತನ್ನ

ದೇವಂ ಚ ಯೂವತ್ಸ ನರೋ ನೃಪಾಗ್ರಣೀಃ
ನಿಜಾಂಘ್ರಿ ಚ ಪ್ರೇಮುಪರಂಪರಾಯಾಃ ।
ಸ ಮುಕ್ತಿನಾಥಾಕೃತಿರೇಷ ನೈಜಂ
ಪರಂ ಪ್ರಪೇದೇ ನಿಜಧಾಮ ಶಂಭೋಃ ॥೩೦॥

ಭಕ್ತಾಂಘ್ರಿನಾಥಪ್ರತಿಪನ್ನಸತ್ಯ
ಸತ್ಯಾರ್ಥನಾಥಾಹ್ವಯಚೋದಿತಸ್ಯ ।
ಪರಸ್ಯ ಶಂಭೋಃ ಪದಮೇತಿ ವಿಪ್ರೋ
ಚರಿತ್ರಮೇತತ್ಸುಪಠೇಚ್ಛೃಣೋತಿ ॥೩೧॥

॥ ಶ್ರೀ ಸ್ಕಂದ ಉವಾಚ ॥

ಚರಿತಂ ಚೇದಿರಾಜಸ್ಯ ಪ್ರಥಮಂ ಪ್ರಥಿತಂ ಮಯಾ ।
ವೀರೋದ್ಭಟಸ್ಯ ಭಕ್ತಸ್ಯ ಮಾಹಾತ್ಮ್ಯಮಿತಿ ವರ್ಣ್ಯತೇ ॥೩೨॥

---

ಮನಸ್ಸಿನಲ್ಲಿ ಆನಂದತಾಂಡವೇಶ್ವರನ ಪಾದಕಮಲವನ್ನು ಧ್ಯಾನಮಾಡಿದನು. ಆಗ ಈ ಸತ್ಯಾರ್ಥರಾಜನಿಂದ ಸ್ತೋತ್ರಮಾಡಲ್ಪಟ್ಟ ತಾಂಡವೇಶ್ವರನು ಆಗ ಸಂತುಷ್ಟನಾಗಿ ತನ್ನ ಭೂತಗಣಗಳೊಡನೆ ಕೂಡಿ ವೃಷಭವಾಹನನಾಗಿಯೂ ಚಂದ್ರಶೇಖರನಾಗಿಯೂ (ತಿಲ್ಲವನಾಧಿಪತಿಯು) ಪ್ರತ್ಯಕ್ಷನಾದನು. ॥೨೭-೨೮-೨೯॥

ಆದರಿಂದ ರಾಜಶೇಖರನಾದ ಈ ಸತ್ಯಾರ್ಥರಾಜನು ಭಕ್ತಿಪರಂಪರೆಯಿಂದ ಆ ಮಹಾದೇವನ ನಿಜವಾದ ಪಾದಗಳಿಗೆ ನಮಸ್ಕಾರಮಾಡಿ ಶಿವಾನುಗ್ರಹದಿಂದ ಆ ಮುಕ್ತಿನಾಥನ ಆಕೃತಿಯನ್ನೇ ತಾನೂ ಪಡೆದು, ನಿಜವಾದ ಆ ಪರಶಿವನ ದಿವ್ಯ ಸ್ಥಾನವನ್ನೇ ಹೊಂದಿದನು. ॥೩೦॥

ಇಂತಹ ಭಕ್ತಶ್ರೇಷ್ಠನೂ ಭಕ್ತಹಿತೈಷಿಯೂ ಆಗಿ, ಹಿಡಿದ ಸತ್ಯವನ್ನು ತಪ್ಪದೇ ಸಾಧಿಸುತ್ತಾ ಸತ್ಯಾರ್ಥನಾಥನೆನಿಸಿದ್ದ ಈ ರಾಜನಿಗೆ ಪರಮೇಶ್ವರನು ಅನುಗ್ರಹಿಸಿದ ಈ ಕಥೆಯನ್ನು ಕೇಳುವ ಮತ್ತು ಓದುವ ಮಾನವನು ಶಂಭುವಿನ ಪರಮಪದವನ್ನೇ ಹೊಂದುತ್ತಾನೆಂಬುದರಲ್ಲಿ ಸಂಶಯವಿಲ್ಲ. ॥೩೧॥

ಓ ಜೈಗೀಷವ್ಯನೇ, ಚೇದಿರಾಜನ ಚರಿತ್ರೆಯು ನನ್ನಿಂದ ಮೊದಲು ಪ್ರಸಿದ್ಧಿಪಡಿಸಲ್ಪಟ್ಟಿತು. ಈಗ ನಾನು ನಿನಗೆ ವೀರೋದ್ಭಟನೆಂಬ ಮತ್ತೊಬ್ಬ ಭಕ್ತನ

ಶಿವಪಾದೌ ಸಮಭ್ಯರ್ಚ್ಯ ಲಬ್ಧೋ ಯೇನ ಪರಶ್ವಥಃ ।
ಸ ರಾಮಃ ಕ್ಷತ್ರಿಯಾಂ ಹತ್ವಾ ವಿಪ್ರಸಾದ್ದತ್ತವಾನ್ಧರಾಂ ॥೩೩॥

ವಾಸಾರ್ಥಂ ಯಾಚಮಾನಾಯ ತಸ್ಮೈ ರಾಮಾಯ ಸಾಗರಃ ।
ಕೇರಳಂ ಸ್ವಾರ್ಥವಿಜಯಂ ವಿಷಯಂ ಸಂಪದಾಂ ದದೌ ॥೩೪॥

ಮೌಕ್ತಿಕೈಃ ಶಂಖನಿರ್ಮುಕ್ತೈರ್ವೇಣುಪುಂಡ್ರೇಕ್ಷುಸಂಭವೈಃ ।
ಸದಾಲಂಕ್ರಿಯತೇ ತತ್ರ ವಾರುಣೀನಾಂ ತಟದ್ವಯಂ ॥೩೫॥

ಅರುಣಾದ್ರಿರಿತಿಗ್ರಾಮಃ ಶೋಭತೇ ಶಂಭುಗೋಚರಃ ।
ಮಂತ್ರಶುದ್ಧೈರ್ಯುತೋ ವಿಪ್ರೈಃ ಶಾಪಾನುಗ್ರಹಣಕ್ಷಮೈಃ ॥೩೬॥

ಗ್ರಾಮೇ ತತ್ರೈವ ಮಹಿತೇ ರುದ್ರವಂಶಶಿಖಾಮಣಿಃ ।
ಅಭೂದ್ಧಾರಭಟೋನಾಮ ಶಿವಭಕ್ತೋ ದೃಢವ್ರತಃ ॥೩೭॥

ಛಿನ್ನಸಂಸಾರಬಂಧೇಷು ಶಿವಾಂಘ್ರಿದೃಢಭಕ್ತಿಷು ।
ಶಿವಭಕ್ತೇಷು ನಿಯತಂ ಶಿವಮೇವ ವಿಭಾವಯನ್ ॥೩೮॥

---

ಮಹಿಮೆಯನ್ನು ಮುಂದೆ ಹೇಳುವೆನು, ಕೇಳು. ಶಿವನ ಪಾದಗಳನ್ನು ಪೂಜಿಸಿ ಯಾರಿಂದ ಗಂಡುಗೊಡಲಿಯು ಹೊಂದಲ್ಪಟ್ಟಿತೋ, ಆ ಪರಶುರಾಮನು ಕ್ಷತ್ರಿಯರನ್ನೆಲ್ಲಾ ಕೊಂದು ಭೂಮಿಯನ್ನು ಬ್ರಾಹ್ಮಣರಿಗೆ ದಾನಮಾಡಿದನು. ಹೀಗೆ ಭೂಮಿಯನ್ನೆಲ್ಲಾ ಬ್ರಾಹ್ಮಣರಿಗೆ ದಾನಮಾಡಿದಮೇಲೆ ಪರಶುರಾಮನು ತನಗೆ ವಾಸಮಾಡಲು ಜಾಗವಿಲ್ಲದೇ ಸಮುದ್ರವನ್ನು ಬೇಡಲು, ಆಗ ಸಮುದ್ರರಾಜನು ತನ್ನ ಐಶ್ವರ್ಯಕ್ಕೆ ಆಶ್ರಯವಾದ ಕೇರಳದೇಶವನ್ನು ಕೊಟ್ಟನು. ॥೩೨-೩೩-೩೪॥

ಆ ಕೇರಳದೇಶದಲ್ಲಿ ಯಾವಾಗಲೂ ನದಿಗಳ ದಡಗಳು ಮುತ್ತಿನಚಿಪ್ಪಿನಿಂದ ಸಿಡಿದ ಮುತ್ತುಗಳಿಂದಲೂ ಬಿದಿರುಮೆಳೆ, ಭಸ್ಮರಾಶಿ, ಮತ್ತು ಕಬ್ಬಿನ ಗದ್ದೆಗಳು ಇವುಗಳಿಂದಲೂ ಅಲಂಕರಿಸಲ್ಪಟ್ಟಿರುವುವು. ಆ ಕೇರಳದೇಶದಲ್ಲಿಯೇ ಅರುಣಾದ್ರಿಯೆಂಬ ಗ್ರಾಮವು ಆ ಶಂಭುವಿಗೆ ಗೋಚರವಾಗಿ, ಮಂತ್ರಶುದ್ಧರೂ, ಶಾಪ, ಮತ್ತು ಅನುಗ್ರಹ ಶಕ್ತರೂ ಆದ ಬ್ರಾಹ್ಮಣರಿಂದ ಯುಕ್ತವಾಗಿ ವಿರಾಜಿಸುತ್ತಿರುವುದು.॥೩೫-೩೬॥

ಪೂಜ್ಯವಾದ ಅದೇ ಗ್ರಾಮದಲ್ಲಿಯೇ ರುದ್ರವಂಶಕ್ಕೆ ಚೂಡಾಮಣಿಪ್ರಾಯನಾದ ದೃಢನಿಯಮವುಳ್ಳ ಹಾರಭಟನೆಂಬ ಶಿವಭಕ್ತನಿದ್ದನು. ಅವನು ಸಂಸಾರ

ಸ ಗತ್ವಾ ಶಿವಧಾಮಾನಿ ನತ್ವಾ ತೇಷು ತದೀಶ್ವರಾನ್ ।
ಉಲ್ಲಂಘ್ಯ ಕೇರಳಾನ್ ದೇಶಾಂಶ್ಚಚಾರ ಸಕಲಾಂ ಮಹೀಂ ॥೩೯॥

ಶಿವಭಕ್ತಸಮಾಚಾರಸ್ಥಾಪನವ್ರತದೀಕ್ಷಿತಃ ।
ಕಲ್ಯಾಣಃ ಪ್ರಾಪ ಕಲ್ಯಾಣಂ ಕಮಲಾಲಯಮಾಸ್ಥಿತಃ ॥೪೦॥

ಯಸ್ಮಿನ್ನೇವ ಸತಃ ಶಂಭೋಶ್ಚಕ್ರೇ ಚಂದ್ರದಿವಾಕರೌ ।
ರಥ್ಯಾವೇದಾ ರಥೋಭೂಮಿರ್ಯಂತಾ ವೇಧಾಃ ಶರೋಹರಿಃ ॥೪೧॥

ವಾಸುಕಿಜ್ಯಾ ಧನುರ್ಮೇರುರ್ದಿವಿ ಲಕ್ಷ್ಯಂ ಪುರತ್ರಯಂ ।
ತಪಸ್ತಪ್ತ್ವಾ ಪುರಾ ಯತ್ರ ಕಮಲಾ ಹರಿವಲ್ಲಭಾ ॥೪೨॥

ಪರಮೇಶಪ್ರಸಾದೇನ ಪ್ರಾಭೂದಖಿಲಸಂಪದಾಂ ।
ಕೃಪಾಕಟಾಕ್ಷವಿಕ್ಷೇಪೈಃ ಕೃಪಣಾನಾಂ ವಿಶೇಷತಃ ॥೪೩॥

---

ಬಂಧನವನ್ನು ತ್ಯಜಿಸಿ, ಶಿವನ ಪಾದಗಳಲ್ಲಿಯೇ ದೃಢವಾದ ಭಕ್ತಿಯುಳ್ಳ ಶಿವಭಕ್ತರಲ್ಲಿ ಯಾವಾಗಲೂ ಶಿವನನ್ನೇ ಭಾವಿಸುತ್ತಾ ವಾಸಿಸುತ್ತಿದ್ದನು. ॥೩೭-೩೮॥

ಅವನು ಶಿವಸ್ಥಾನಗಳಿಗೆಲ್ಲಾ ಹೋಗಿ ಅಲ್ಲಿನ ಶಿವಲಿಂಗಗಳಿಗೆಲ್ಲಾ ನಮಸ್ಕರಿಸಿ, ಈ ಕೇರಳದೇಶವನ್ನೊಂದೇ ಅಲ್ಲದೆ ಇತರ ಭೂಮಂಡಲದಲ್ಲೆಲ್ಲಾ ಸಂಚರಿಸಿದನು. ಶಿವಭಕ್ತರ ಸಮಾಚಾರವನ್ನು ಜನರಿಗೆ ತಿಳಿಸಿ, ಶಿವಭಕ್ತಿಯನ್ನು ಸ್ಥಾಪಿಸುವುದರಲ್ಲಿ ಬದ್ಧಕಂಕಣನಾಗಿ ಮಂಗಳಕರವಾದ ಆತನು, ಕೊನೆಗೆ ಮಂಗಳಪ್ರದವಾದ ಕಮಲಾಲಯದಲ್ಲಿ ಬಂದು ನೆಲಸಿದನು. ॥೩೯-೪೦॥

ಆ ಕಮಲಾಲಯದಲ್ಲಿದ್ದಾಗಲೇ ಶಂಭುವಿಗೆ ಚಂದ್ರಸೂರ್ಯರೇ ಚಕ್ರಗಳಾಗಿಯೂ, ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಗಳೇ ಕುದುರೆಗಳಾಗಿಯೂ, ಭೂಮಿಯೇ ರಥವಾಗಿಯೂ, ಬ್ರಹ್ಮನೇ ಸಾರಥಿಯಾಗಿಯೂ, ವಿಷ್ಣುವೇ ಬಾಣವಾಗಿಯೂ, ಆದಿಶೇಷನೇ ನೇಣಾಗಿಯೂ (ಹೆದೆ) ಮೇರುಪರ್ವತವೇ ಬಿಲ್ಲಾಗಿಯೂ, ಅಂತರಿಕ್ಷದಲ್ಲಿರುವ ತ್ರಿಪುರಗಳೇ ಲಕ್ಷ್ಯವಾಗಿಯೂ ಆಗಿ ತ್ರಿಪುರಾಸುರನನ್ನು ಮಹಾದೇವನು ಧ್ವಂಸಮಾಡಿದನು. ವಿಷ್ಣುಪತ್ನಿಯಾದ ಲಕ್ಷ್ಮಿಯು ಇಲ್ಲಿಯೇ ತಪಸ್ಸಮಾಡಿ, ಆ ಪರಮೇಶ್ವರನ ಅನುಗ್ರಹದಿಂದ ಸಕಲೈಶ್ವರ್ಯಗಳಿಗೂ ಅಧಿದೇವತೆಯಾದಳು. ॥೪೧-೪೨॥

ಸಂಪೂರ್ಣ ಕೃಪಣರಾದವರನ್ನೂ ಸಹ ಈ ಲಕ್ಷ್ಮಿಯು ತನ್ನ ದಯಾಮಯ

ಪ್ರನಮ್ರಾಣಾಂ ಕಲಿಯುಗೇ ಪ್ರಾಯೋಣಾಖಿಲಸಂಪದಾಂ ।
ಶಂಕರಾಂಘ್ರಿಸಮಾಸಕ್ತಕಿಂಕರಾಗ್ರೇಸರೋ ಭುವಿ ॥೪೪॥

ಗಣಿತ್ವಚಿಂತಂ(?)ಕುಂಭಾಗ್ರಮಾಣಿಕ್ಯರುಚಿರಪ್ರಭೋಃ ।
ಕುಂಕುಮಕ್ಷೋದನಿಕರೈರಂಕಿತಾಯತವಕ್ಷಸಂ ॥೪೫॥

ಶಿಖಾಗ್ರವಿಗಲತ್ಪುಷ್ಪಸುಖಾದ್ಯನಿಶಿಖಾಂತರಂ ।
ಕ್ವಣತ್ಕಿಂಕಿಣಿಕಾನಾದಕ್ವಣತ್ಕಿಂಕಿಣಿಭೂಷಣಂ ॥೪೬॥

ಕಸ್ತೂರೀತಿಲಕಾಮೋದವಿಸ್ತಾರಿತದಿಗಂತರಂ ।
ಗಂಡಪ್ರಲೋಲರುದ್ರಾಕ್ಷಮಂಡಲಂ ಚಾರುಕುಂಡಲಂ ॥೪೭॥

ಆಜಾನುಸಿದ್ಧಗಾಂಭೀರ್ಯಂ ಆಜಾನುವಿಲಸದ್ಭುಜಂ ।
ಅನಮತ್ಯ ಮಹಾಭಕ್ತಾನುಪಮಿತ್ಯಾತ್ಮನೋ ಭುವಂ ॥೪೮॥

---

ವಾದ ಕಡೆಗಣ್ಣಿನ ನೋಟಗಳಿಂದ ನೋಡಿ ಅವರನ್ನು ವಿನೀತರನ್ನಾಗಿ ಮಾಡಿ, ಸಾಮಾನ್ಯವಾದ ಸಕಲೈಶ್ವರ್ಯಗಳಿಗೂ ಅಧಿಪತಿಗಳನ್ನಾಗಿ ಮಾಡುತ್ತಿರುವಳು. ಆ ಶಂಕರಪಾದದಲ್ಲಿ ನಿರತನಾದ ಸೇವಕವರ್ಯನೂ ಸಹ ಈ ಭೂಮಿಯಲ್ಲಿ ಸಕಲೈಶ್ವರ್ಯ ಭರಿತನಾಗಿ ಆಗಬಲ್ಲನು. ॥೪೩-೪೪॥

ಶಿವಾಲಯದಲ್ಲಿ ಪರಶಿವಭಕ್ತನು ಕುಂಭಾಗ್ರಗತವಾದ ಮಾಣಿಕ್ಯದ ಕಾಂತಿಯಂತೆ ವಿರಾಜಿಸುತ್ತಿದ್ದನು. ಸುಂದರನೆನಿಸಿದ ಆ ಭಕ್ತನು ಕುಂಕುಮಕೇಸರಿಯ ಲೇಪನದಿಂದ ಗುರುತುಮಾಡಲ್ಪಟ್ಟವಿಸ್ತಾರವಾದ ಎದೆಯುಳ್ಳವನಾಗಿದ್ದನು. ಆ ಭಕ್ತನ ತಲೆಯ ತುದಿಯಿಂದ ಪುಷ್ಪಗಳು ಉದುರುತ್ತಿದ್ದುವು. ಇದನ್ನು ನೋಡಿದರೆ ಶಂಕರನ ಶಿರೋಭಾಗದಿಂದ ಅಗ್ನಿಕಣಗಳು ಹೊರಹೊಮ್ಮುವಂತೆ ಕಾಣುತ್ತಿದ್ದುವು. ಕ್ವಣಕ್ವಣವೆಂದು ನಾದಮಾಡುವ ಗೆಜ್ಜೆಗಳನ್ನು ಅಲಂಕರಿಸಿಕೊಂಡಿರುವವನೂ, ಹಣೆಗೆ ಹಚ್ಚಿಕೊಂಡಿರುವ ಕಸ್ತೂರೀತಿಲಕದಿಂದ ದಿಕ್ಪ್ರದೇಶಗಳನ್ನೆಲ್ಲಾ ಸುವಾಸನೆಗೊಳಿಸುತ್ತಿರುವವನೂ, ಕೊರಳಲ್ಲಿ ಜೋಲುಬಿದ್ದಿರುವ ರುದ್ರಾಕ್ಷಸಮೂಹವುಳ್ಳವನೂ, ಮನೋಹರವಾದ ಕುಂಡಲವುಳ್ಳವನೂ ಆಗಿ ವಿರಾಜಿಸುತ್ತಿದ್ದನು. ॥೪೫-೪೬-೪೭॥

ಮೊಳಕಾಲಿನವರೆಗೂ ಸಿದ್ಧವಾಗಿ ಶೋಭಿಸುತ್ತಿರುವ ಉದ್ದವಾದ ತೋಳ್ಗಳುಳ್ಳವನಾಗಿ ಗಂಭೀರತೆಯನ್ನು ಪಡೆದಿದ್ದನು. ತನ್ನ ಹೋಲಿಕೆಯಿಂದ ಇತರ

ಮಂದಂಮಂದಂ ಸಮಾಯಾಂತಂ ಸುಂದರಂ ಲೋಕಸುಂದರಂ ।
ಹಂತುಮೇನಂ ಮನಶ್ಚಕ್ರೇ ಹಂತ ಹಂತ ಹರಪ್ರಿಯಂ ॥೪೯॥

ಗರ್ಭಗೇಹಂ ಭಿಯಾ ಶಂಭೋರ್ಗರ್ಭಂ ಮಾತುರಿವಾವಿಶತ್ ।
ಕವಾಟಂ ದೃಢಮಾಬಧ್ಯ ಲಲಾಟನಯನಾಲಯೇ ॥೫೦॥

ಭಕ್ತವಾಹ್ಯಂ ತಮಾಲಕ್ಷ್ಯ ಯುದ್ಧವೀರಸ್ತಮಬ್ರವೀತ್ ॥೫೧॥

॥ ವೀರೋದ್ಭಟ ಉವಾಚ ॥

ಅವನೀತೇ ಯದಿ ಪ್ರೀತಿಸ್ತವ ಯೂನಿ ಶಿವದ್ವಿಜೇ ।
ಭವಬಾಹ್ಯೋ ಮಹಾದೇವ ಭವ ಬಾಹ್ಯೋ ಮಹಾನಪಿ ॥೫೨॥

ವೀರೋದ್ಭಟಸ್ಯ ವಿಕಟಾಂ ಧೀರೋಕ್ತಿಂ ಕಲಯನ್ನಿವಃ ।
ಶರಣಾಗತಮಾಹೇದಂ ಕರುಣಾವರುಣಾಲಯಃ ॥೫೩॥

---

ದೊಡ್ಡ ದೊಡ್ಡ ಭಕ್ತರನ್ನೂ, ಕಡೆಗಾಣಿಸಿ ವಿಶೇಷ ಕಾಂತಿಯಿಂದ ಭೂಮಿಯಲ್ಲಿ ಮೆಲ್ಲನೆಲ್ಲಗೆ ಬರುತ್ತಿರುವ ಭಕ್ತವರ್ಯನೂ ಲೋಕಸುಂದರನೂ ಆದ ಈ ಸುಂದರ ನನ್ನು ಕೊಲ್ಲಲು ಮನಸ್ಸುಮಾಡಿದನು. ॥೪೮-೪೯॥

ಆಗ ಹೆದರಿಕೆಯಿಂದ ಶಿವನ ಗರ್ಭಗುಡಿಯನ್ನು, ತನ್ನ ತಾಯಿಯ ಗರ್ಭ ದಂತೆ, ಸುಂದರನು ಹೊಕ್ಕು ಬಾಗಿಲನ್ನು ಬಿಗಿಯಾಗಿ ಮುಚ್ಚಿಕೊಂಡನು. ಹಣೆಗಣ್ಣನ ಗರ್ಭಗುಡಿಯಲ್ಲಿ ಅವಿತುಕೊಂಡಿರುವ ಭಕ್ತಶ್ರೇಷ್ಠನಾದ ಸುಂದರನನ್ನು ಕಂಡು ಯುದ್ಧವೀರನು ಹೊರಗೆ ನಿಂತು ಹೀಗೆ ನುಡಿದನು. ॥೫೦-೫೧॥

ಎಲೈ ಶಿವನೇ, ವಿನಯವಿಲ್ಲದ ಈ ಯುವಕನಾದ ಶೈವಬ್ರಾಹ್ಮಣನಲ್ಲಿ ನಿನಗೆ ಪ್ರೀತಿಯಿರುವುದಾದರೆ, ಮಹಾದೇವ, ನೀನು ದೊಡ್ಡವನಾದರೂ ಹೊರಗೆ ಬಾ. ನೋಡುತ್ತೇನೆಂದು, ವೀರೋದ್ಭಟನು ದಿಟ್ಟತನದಿಂದ ನುಡಿಯಲು, ಆ ಧೀರನ ಮಾತನ್ನು ಹಾಗೆಯೇ ಚಿಂತಿಸುತ್ತಾ ದಯಾಸಮುದ್ರನಾದ ಮಹೇಶನು, ತನ್ನನ್ನು ಮರೆಹೊಕ್ಕಿರುವ ಸುಂದರನಿಗೆ ಇಂತೆಂದನು. ॥೫೨-೫೩॥

|| ಈಶ್ವರ ಉವಾಚ ||

ಸ್ತುಹಿ ವೀರೋದ್ಭಟಮುಖಾನ್ನಹಿ ಭೀತಿಂ ಚ ಸುಂದರ ।
ಇತಿ ಗರ್ಭಗಿರಾ ಸ್ತೌಷೀನ್ಮತಿಮತ್ತಮಶೇಖರಃ ॥೫೪॥

|| ಸುಂದರ ಉವಾಚ ||

ಶಂಭೋಃ ಶಂಕರಕಿಂಕರಾಃ ಶಿವಪರಾ ರುದ್ರಾಕ್ಷಭಸ್ಮಾದರಾ
ಲಿಂಗಾರ್ಚಾಸು ಪರಾಯಣಾಃ ಶ್ರುತಿಶಿರಃ ಸಾರಾರ್ಥನೋದಾದರಾಃ ।
ವ್ಯಾಹಾರೇಽಪಿ ಸದೈವ ತೇ ಹರಹರೇತೀಶೇತಿ ಶಬ್ದಾದರಾಃ
ಭಕ್ತಾಸ್ತೇ ಮುಹುರಪ್ಯಪಾರವಿಭವಾಸ್ತೇ ಶಂಕರಾಃ ಶಾಂಕರಾಃ ॥೫೫॥

ಮಹಾನುಭಾವಾಸ್ತೇಽಪ್ಯೇನಂ ಮಹಾದೇವಸ್ಯ ಕಿಂಕರಾಃ ।
ಆಕರ್ಣ್ಯ ತತ್ಸ್ತುತಿಂ ಪ್ರೋಚುರ್ಭಕ್ತಾನಾಂ ಪ್ರಥಮಂ ತದಾ ॥೫೬॥

ತತೋ ದೇವಾಶ್ರಯಂ ಗತ್ವಾ ಸುಂದರೋ ಭಕ್ತಿವೇಷ್ಟಿತಃ ।
ಶಿವಭಕ್ತಾಂತರಂಗಃ ಸನ್ನವತಿಷ್ಠ ಭಿಯೋಜ್ಝಿತಃ ।೫೭॥

---

ಆಗ ಈಶ್ವರನು, “ ಎಲೈ ಸುಂದರನೇ, ವೀರೋದ್ಭಟನೇ ಮೊದಲಾದವರನ್ನು ಸ್ತೋತ್ರಮಾಡು. ಭಯವನ್ನು ತೊರೆ” ಎಂದು ಹೇಳಲು, ಆ ಗರ್ಭಗುಡಿಯಲ್ಲಿ ಶಿವನ ನುಡಿಯಂತೆ ಬುದ್ಧಿವಂತರಲ್ಲಿ ಶ್ರೇಷ್ಠನಾದ ಆ ಸುಂದರನು ಹೀಗೆ ಸ್ತೋತ್ರ ಮಾಡಿದನು. ||೫೪||

“ ಶಂಭುವೇ, ಶಂಕರನ ಸೇವಕರೂ, ಶಿವಧ್ಯಾನಪರಾಯಣರೂ, ರುದ್ರಾಕ್ಷ ಮತ್ತು ಭಸ್ಮಧಾರಣೆಯಲ್ಲಿ ಆದರವುಳ್ಳವರೂ, ಲಿಂಗಪೂಜೆಗಳಲ್ಲಿ ನಿರತರೂ, ವೇದಾಂತಾರ್ಥಸಾರವನ್ನು ವಿವೇಚನೆಮಾಡುವುದರಲ್ಲಿ ಆದರವುಳ್ಳವರೂ, ತಮ್ಮ ಮಾತಿನಲ್ಲೆಲ್ಲಾ ಯಾವಾಗಲೂ “ ಹರ, ಹರ, ಈಶ ” ಎಂಬ ಶಬ್ದಗಳನ್ನು ಪಯೋಗಿಸುವುದರಲ್ಲಿಯೇ ಆಸಕ್ತರೂ ಆಗಿರುವ ಆ ನಿನ್ನ ಭಕ್ತರು ಪದೇಪದೇ ಅಪಾರವಾದ ಐಶ್ವರ್ಯವುಳ್ಳವರಾಗಿ ಯಾವಾಗಲೂ ಶಂಕರಭಕ್ತರೆಂದು ಪ್ರಸಿದ್ಧರಾಗಿರುವರು.”||೫೫||

ಮಹಾಮಹಿಮರಾದ ಆ ಶಂಕರನ ಭಕ್ತರೆಲ್ಲರೂ ಈ ಸುಂದರನ ಸ್ತೋತ್ರವನ್ನು ಕೇಳಿ, ಆತನನ್ನು ಭಕ್ತಾಗ್ರೇಸರನೆಂದು ತಿಳಿದರು. ಆಮೇಲೆ ಆ ಸುಂದರನೂ ಮಹಾದೇವನ ಆಶ್ರಯವನ್ನು ಪಡೆದು ಭಕ್ತಿಯಿಂದ ಪೂರ್ಣನಾಗಿ

ಏವಂ ವ್ಯವಸ್ಥಾಂ ಚರಯನ್ಧರಣ್ಯಾಂ
ಮಾಹೇಶ್ವರಾಣಾಂ ಮಹಿಮಾತ್ಮನಾಂ ಸಃ ।
ತತ್ಸೌಮ್ಯನಾಥೋದಿತಶಂಭುಭಕ್ತ
ಪ್ರಬಂಧಹೇತುರ್ವಿಚಚಾರ ಕಾಮಂ ॥೫೮॥

ವೀರೋದ್ಭಟಃ ಶಂಕರಕಿಂಕರಾಣಾ
ಮಗ್ರೇಸರಃ ಸಾಹಸಭಕ್ತಿಧುರ್ಯಃ ।
ಅವಾಪ್ಯ ಕಾಲೇ ಭಗವತ್ಪ್ರಸಾದಾತ್
ಗಣಾಗ್ರಣೀರೂಪಧರೋ ಮಹಾನಭೂತ್ ॥೫೯॥

ವೀರೋದ್ಭಟಸ್ಯಾದ್ಭುತಭಕ್ತಿವೀರ್ಯಂ
ಶೃಣೋತಿ ಯಃ ಸಾಹಸಚಂಡಭಕ್ತಃ ।
ಪ್ರಾಪ್ನೋತಿ ಸಶ್ರೀಕಲಧೌತಶೈಲೇ
ಭವಪ್ರಸಾದೇನ ಗಣಾಧಿಪತ್ವಂ ॥೬೦॥

---

ಶಿವಭಕ್ತರ ಅಂತರಂಗವೋ (ಮನಸ್ಸೋ) ಎನ್ನುವಂತೆ ಭುಯವನ್ನು ತೊರೆದು ಆನಂದದಿಂದಿದ್ದನು. ||೫೬-೫೭||

ಆ ಸುಂದರನು ಹೀಗೆ ಭೂಮಿಯಲ್ಲಿ ಶಿವಭಕ್ತರಾದ ಮಹಾನುಭಾವರಲ್ಲಿ ಒಂದು ವ್ಯವಸ್ಥೆಯನ್ನು ಕಲ್ಪಿಸುತ್ತಾ, ಸೌಮ್ಯನಾಥನು ಹೇಳಿದ ಶಂಭುಭಕ್ತರ ಸ್ತೋತ್ರರೂಪವಾದ ಪ್ರಬಂಧಕ್ಕೋಸ್ಕರ ತನ್ನ ಇಚ್ಛೆಬಂದಂತೆ ಎಲ್ಲಾ ಕಡೆಯಲ್ಲಿಯೂ ಸಂಚರಿಸಿದನು. ||೫೮||

ಶಿವಸೇವಕರಲ್ಲಿ ಅತಿ ಮುಂದಾಳುವೂ, ಶೌರ್ಯ ಮತ್ತು ಭಕ್ತಿಗಳಲ್ಲಿ ಧುರೀಣನೂ ಆದ ಆ ವೀರೋದ್ಭಟನೂ ಸಹ ಸಕಾಲದಲ್ಲಿ ಆ ಭಗವಂತನ ಅನುಗ್ರಹ ದಿಂದ ಗಣಾಧಿಪತಿರೂಪವನ್ನು ಪಡೆದು ಮಹಾತ್ಮನೆನಿಸಿದನು. ||೫೯||

ಈ ವೀರೋದ್ಭಟನ ಅದ್ಭುತವೂ, ಭಕ್ತಿಸಹಿತವೂ ಆದ ಪರಾಕ್ರಮವನ್ನು ಕೇಳುವವನು, ಪ್ರಚಂಡ ಸಾಹಸ ಭಕ್ತಿಭರಿತನಾಗಿ ರಜತಾಚಲದಲ್ಲಿ ಆ ಪರಮೇಶ್ವರನ ದಿವ್ಯಾನುಗ್ರಹದಿಂದ ಗಣಾಧಿಪತಿಸ್ಥಾನವನ್ನೂ ಹೊಂದುತ್ತಾನೆಂದು ಜೈಗೀಷವ್ಯನಿಗೆ ಕುಮಾರಸ್ವಾಮಿಯು ಹೇಳಿದನು. ||೬೦||

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ
ವೀರೋದ್ಭಟಚರಿತ್ರವರ್ಣನಂ ನಾಮ ಏಕೋನತ್ರಿಂಶೋಽಧ್ಯಾಯಃ

---

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ವೀರೋದ್ಭಟನ ಚರಿತ್ರೆಯ ವರ್ಣನೆಯೆಂಬ ಇಪ್ಪತ್ತೊಂಬತ್ತನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ತ್ರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ವಕ್ಷ್ಯಾಮ್ಯಮರನೀತ್ಯಾಖ್ಯವಣಿಜಃ ಶೋಭನಾಂ ಕಥಾಂ ।
ಕಾವೇರೀಲಹರೀಮುಕ್ತಶಂಖಮೌಕ್ತಿಕದಂತುರೇ ॥೧॥

ಕಲ್ಹಾರಕೈರವೋಲ್ಲಾಸಿಫುಲ್ಲಪದ್ಮವಿರಾಜಿತೇ ।
ಕೋಕಕೇಕಾರವೋನ್ಮಿಶ್ರಶಾಲಿಕೇದಾರಮಂಡಿತೇ ॥೨॥

ಕೇದಾರಮೃತ್ತಿಕಾಮುಕ್ತಪುಂಡ್ರೇಕ್ಷೂಮುಕ್ತಮೌಕ್ತಿಕೇ ।
ಬದ್ಧಕಲ್ಪಾತಟೀಸೇತುಪದ್ಧತೀ ಬದ್ಧಭೂರುಹೇ ॥೩॥

---

## ಮೂವತ್ತನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ, ಅಮರನೀತಿಯೆಂಬ ವೈಶ್ಯನ ಮಂಗಳಕರವಾದ ಕಥೆಯನ್ನು ನಿನಗೆ ಹೇಳುತ್ತೇನೆ ಕೇಳು : ದಕ್ಷಿಣಭಾರತದಲ್ಲಿರುವ ಕಾವೇರೀನದಿಯ ಎರಡು ದಡಗಳ ವೈಭವವನ್ನು ಆದರದಿಂದ ಲಾಲಿಸು. ಕಾವೇರಿಯ ತೀರಪ್ರದೇಶವು ಸದಾ ಅಮೂಲ್ಯವಾದ ಮುತ್ತು ಮತ್ತು ಶಂಖಗಳಿಂದ ವ್ಯಾಪ್ತವಾಗಿಯೂ, ಕಲ್ಹಾರ (ಸೌಗಂಧಿಕಾಪುಷ್ಪ) ಕೈರವ, ಬಿಳಿನೈದಿಲೆ ಇವುಗಳಿಂದ ರಂಜಿತವಾಗಿಯೂ, ಚೆನ್ನಾಗಿ ಅರಳಿದ ತಾವರೆಗಳಿಂದ ಪ್ರಕಾಶಿಸುತ್ತಿರುವುದಾಗಿಯೂ, ಚಕ್ರವಾಕ ಮತ್ತುನವಿಲುಗಳ ಧ್ವನಿಗಳಿಂದ ಮನಮೋಹರವಾಗಿಯೂ, ಬತ್ತದ ಗದ್ದೆಗಳಿಂದ ಅಲಂಕೃತವಾಗಿಯೂ ವಿರಾಜಿಸುವುದು. ಅಲ್ಲಲ್ಲಿ ಶುಭ್ರವಾದ ಮತ್ತು ಭಸ್ಮಸದೃಶವಾದ ಮಣ್ಣಿನ ರಾಶಿಯೂ

ಚಿಕ್ರೋಡದಂತನಿರ್ಭಿನ್ನೇ ನಾರಿಕೇಲಪಯೋಭರೈಃ ।
ಉದ್ಯನ್ನಾಗಲತಾರೂಢೇ ಕದಲೀದಲವಿರಾಜಿತೇ ॥೪॥

ಪನಸಾಮ್ರವನೋದ್ದಾಮಫಲಗಂಧೇನ ಬಂಧುರೇ ।
ದ್ವಿಜಾಗ್ರಹಾರಪಂಕ್ತೀಭಿಸ್ತಟದ್ವಯವಿರಾಜಿತೇ ॥೫॥

ಆಸಹ್ಯಾದುದ್ಗತಾಯಾಶ್ಚ ಕಾವೇರ್ಯಾಸ್ತೀರಯೋರ್ದ್ವಯೋಃ ।
ಶಿವಾಗಾರವರೋದ್ದಾಮಕುಂಭಸ್ಥಗಿತದಿಕ್ತಟೇ ॥೬॥

ಯತ್ರ ಯತ್ರ ಶಿವಕ್ಷೇತ್ರೇ ವಸ್ತುಂ ಸಂಸೇವಿತುಂ ಹರಂ ।
ವಿಷ್ಣುಧಾಮಶತೈರ್ಯುಕ್ತೇ ಯತಿವೃಂದಮಠೈರ್ಯುತೇ ॥೭॥

ಸಹ್ಯಜಾಸಹ್ಯಪಾಪಾನಿ ನಾಶಯಂತೀ ಸ್ವಪಾವನೈಃ ।
ಚಲತ್ತರಂಗಸಂಗೋತ್ಥಪೂತವಾತೈಶ್ಚ ಪಾಪಿನಾಂ ॥೮॥

---

ಅಕ್ಕಪಕ್ಕದಲ್ಲಿಯೇ ತಾನೇ ತಾನಾಗಿ ಬೆಳೆದಿರುವ ಕಬ್ಬಿನ ಗದ್ದೆಗಳೂ, ಅಲ್ಲಲ್ಲಿಯೇ ಕೃತಕವಾಗಿ ಕಟ್ಟಲ್ಪಟ್ಟಿರುವ ಪ್ರಬಲವಾದ ಸೇತುವೆಗಳೂ, ಗುಂಪಾದ ಮರಗಳ ತೋಪುಗಳೂ ಅಲ್ಲಿ ಕಂಡುಬರುವುವು. ॥೧-೨-೩॥

ಕಾಡುಹಂದಿಗಳು ತಮ್ಮ ದಂತದಿಂದ ಕಾವೇರೀನದಿಯ ಅಕ್ಕಪಕ್ಕದ ಭೂಮಿಯನ್ನು ಹಳ್ಳವನ್ನಾಗಿ ಮಾಡಿರುವುವು. ಸಾಲಾಗಿ ಬೆಳೆದ ತೆಂಗಿನ ಮರಗಳಿಂದಲೂ, ವೀಳೇದೆಲೆಯ ಬಳ್ಳಿಗಳಿಂದಲೂ, ಬಾಳೆಯಗರಿಗಳಿಂದಲೂ ವಿರಾಜಿಸುತ್ತ, ಹಲಸು ಮಾವು ಮುಂತಾದ ಫಲಭರಿತಗಳಾದ ಮರಗಳ ಕಾಡುಗಳಲ್ಲಿ ವಿಶೇಷವಾಗಿ ಬೆಳದಿರುವ ಹಣ್ಣುಗಳ ಸುಗಂಧದಿಂದ ಮನೋಹರವಾಗಿ, ಎರಡು ದಡಗಳಲ್ಲಿಯೂ ಬ್ರಾಹ್ಮಣರ ಅಗ್ರಹಾರ ಪಂಕ್ತಿಗಳಿಂದ ಕೂಡಿ ಮನೋಹರವಾಗಿರುವುದು. ॥೪-೫॥

ಸಹ್ಯಾದ್ರಿಯಲ್ಲಿ ಉದ್ಭವಿಸಿ ದಿವ್ಯಭೂಮಿಯಲ್ಲಿ ಹರಿದುಬರುತ್ತಿರುವ ಕಾವೇರೀ ನದಿಯ ಎರಡು ದಡಗಳಲ್ಲಿಯೂ ಇರುವ ಶ್ರೇಷ್ಠವೂ, ಎತ್ತರವೂ ಆದ ಶಿವದೇವಾಲಯಗಳು, ದಿವ್ಯವಾದ ಗೋಪುರಗಳಿಂದ ದಿಕ್ಕುಗಳನ್ನು ಅಲಂಕರಿಸುತ್ತಿರುವುವು. ಶಿವಕ್ಷೇತ್ರಗಳಿರುವೆಡೆಗಳಲ್ಲೆಲ್ಲಾ ಬಂದು ನೆಲಸಿ, ಶಿವನನ್ನು ಸೇವಿಸುವುದಕ್ಕೋಸ್ಕರ ವಾಸಮಾಡುತ್ತಿರುವ ನೂರಾರು ವೈಷ್ಣವಸ್ಥಾನಗಳೂ, ವೈರಾಗ್ಯಸಂಪನ್ನರಾದ ಸಂನ್ಯಾಸಿಗಳ ಮಠಗಳೂ ಅಲ್ಲಲ್ಲಿ ಕಂಡುಬರುತ್ತಿರುವುವು. ಭಯಂಕರವಾದ ಪಾಪ

ದೇವೀ ಶತಮುಖೀ ತತ್ರ ಪ್ಲಾವಯಂತೀ ಚ ಸಾಗರಂ ।
ತರಂಗಿತಂ ಶಿವಾಗಾರಶಂಖದುಂದುಭಿನಿಸ್ವನೈಃ ॥೯॥

ನಿಚೋಲಭೂತೇ ಪೃಥ್ವ್ಯಾಂ ತು ಪಾಲಿತೇ ಚೋಲಮಂಡಲೇ ।
ಚೋಲೈಶ್ಚ ಪಾಲಿತೇ ತತ್ರ ಶಿವಕೈಂಕರ್ಯತತ್ಪರೈಃ ॥೧೦॥

ಶಾಂಭವೈರ್ಭಸ್ಮರುದ್ರಾಕ್ಷಧಾರಿಭಿಃ ಪರಿಸೇವಿತೇ ।
ಮೃತ್ಸ್ನೈಕತಮಹಾರತ್ನಬಾಣಸ್ಫಾಟಿಕಸಂಭವೈಃ ॥೧೧॥

ಶಿವಲಿಂಗಾರ್ಚಕೈಶ್ಶೈವೈರ್ಬಿಲ್ವಾರ್ಚನಪರಾಯಣೈಃ ।
ಸಂವೃತ್ತೇ ವಿವಿಧೈಃ ಶಂಭೋರರಥೋತ್ಸವ ವಿರಾಜಿತೇ ॥೧೨॥

---

ಗಳನ್ನೂ ಸಹ ನಾಶಮಾಡುವ ತನ್ನ ಪಾವನವಾದ ನೀರಿನಿಂದಲೂ, ಅದರ ಮೇಲೆ ಬೀಸಿ ಪವಿತ್ರವೆನಿಸುವ ವಾಯುವಿನಿಂದಲೂ, ಪಾಪಿಗಳನ್ನೂ ಪವಿತ್ರಗೊಳಿಸುತ್ತಿರುವ ಪ್ರವಾಹಭರಿತವಾದ ಕಾವೇರೀನದಿಯು ಅಲ್ಲಿ ಮಹಿಮಾಪೂರ್ಣವೆನಿಸಿರುವುದು. ॥೬-೭-೮॥

ನೂರಾರು ಕವಲಾಗಿ ಒಡೆದು ಸಾಗರದಲ್ಲಿ ಐಕ್ಯವಾಗುವ ಆ ಕಾವೇರಿಯು ಅಕ್ಕಪಕ್ಕದ ಶಿವದೇವಾಲಯಗಳಲ್ಲಿ ನಡೆಯುವ ಶಂಖ ಮತ್ತು ನಗಾರಿವಾದ್ಯಧ್ವನಿಗಳಿಂದ ಕೂಡಿ ಭೋರ್ಗರೆಯುತ್ತಿರುವುದು. ಇಂತಹ ಪಾವನವಾದ ಕಾವೇರೀನದಿಯಿಂದ ಕೂಡಿ, ಭೂದೇವಿಗೆ ಕುಪ್ಪಸದಂತೆ ಮುಖ್ಯವಾಗಿರುವ ಚೋಲದೇಶವು ಅಲ್ಲಿ ಪ್ರಸಿದ್ಧವಾಗಿರುವುದು. ಈ ಚೋಲದೇಶದಲ್ಲಿ ಸದಾ ಶಿವಸೇವಾನಿರತರಾದ ಚೋಲರಾಜರು ರಾಜ್ಯಭಾರಮಾಡುತ್ತಾ, ಪ್ರಜೆಗಳನ್ನು ಕಾಪಾಡುತ್ತಿರುವರು. ॥೯-೧೦॥

ಭಸ್ಮ, ರುದ್ರಾಕ್ಷಧಾರಣೆಮಾಡಿಕೊಂಡಿರುವ ಅನೇಕ ಶೈವರು ಕಾವೇರೀ ದಡದ ಆ ಚೋಲದೇಶದಲ್ಲಿ ಮಣ್ಣು, ಮರಳು, ಅಮೂಲ್ಯ ರತ್ನ, ಬಾಣ ಮತ್ತು ಸ್ಫಟಿಕಶಿಲೆಗಳಿಂದ ಮಾಡಲ್ಪಟ್ಟ ಶಿವಲಿಂಗಗಳನ್ನು ಅವರವರ ಯೋಗ್ಯತಾನುಸಾರವಾಗಿ ಆಶ್ರಯಿಸಿ, ಬಿಲ್ವದಳಗಳಿಂದ ಪೂಜಿಸುವುದರಲ್ಲಿ ನಿರತರಾಗಿರುವರು. ಅಲ್ಲಿ ಶಂಭುವಿನ ಬಗೆಬಗೆಯ ಉತ್ಸವಗಳಿಂದ ಕೂಡಿದ ರಥೋತ್ಸವಗಳು ಆಗಾಗ ನಡೆಯುತ್ತಲೇ ಇರುವುವು ॥೧೧-೧೨॥

ಪುರಾಣಸರಿದಿತ್ಯಸ್ತಿ ಕಾವೇರೀಮುಖಸಂಭವಾ ।
ತತ್ತೀರೇ ಶಂಭುಪುರಮಿತ್ಯಸ್ತಿ ಭುವನಭೂಷಣಂ ॥೧೩॥

ರತ್ನದೀಪ್ತಸ್ಯಂದನೌಘವೀಥೀಸಂಪದಮಾಸ್ಪದಂ ।
ತಸ್ಮಿನ್ನಮರನೀತ್ಯಾಖ್ಯೋ ವೈಶ್ಯವಂಶಸಮುದ್ಭವಃ ॥೧೪॥

ಕಶ್ಚಿದಾಸೀತ್ಸುವರ್ಣಾದಿನವರತ್ನನಿಧೀಶ್ವರಃ ।
ಶಿವಮೇವ ಸದಾ ಧ್ಯಾಯನ್ಭಕ್ತೇಭ್ಯೋ ಭುಕ್ತಿದಾಯಕಃ ॥೧೫॥

ಕೌಪೀನಕಂಥಾಂಶುಕದಃ ಸಂಪದಾಂ ಫಲಮನ್ವಭೂತ್ ।
ಶ್ರೀಕಾಂತಾಖ್ಯಪುರೇ ತ್ರ್ಯಕ್ಷಂ ನತ್ವಾ ತತ್ಪಾದಸೇವಿನಾಂ ॥೧೬॥

ಭುಕ್ತ್ಯೈ ಚ ಭಕ್ತವರ್ಣಾನಾಂ ಮಠಂ ತತ್ರ ವ್ಯಧಾತ್ಸ ವೈ ।
ಸ ತತ್ರ ಕಲ್ಪಿತಮಠೇ ದೇವಯಾತ್ರೋತ್ಸವೇ ಬಹೂನ್ ॥೧೭॥

---

ಇಲ್ಲಿ ಕಾವೇರೀನದಿಯಿಂದ ಹುಟ್ಟಿದ "ಪುರಾಣಸರಿತ್" ಎಂಬ ನದಿಯಿರುವುದು. ಅದರ ದಡದಲ್ಲಿ ಭೂಮಿಗೇ ಅಲಂಕಾರಪ್ರಾಯವಾಗಿರುವ ಶಂಭುಪುರವೆಂಬ ಒಂದು ಪಟ್ಟಣವಿದೆ. ರತ್ನಗಳ ಕಾಂತಿಯಿಂದ ಹೊಳೆಯುತ್ತಿರುವ ರಥಗಳ ಗುಂಪುಗಳಿಂದ ಕೂಡಿದ ಬೀದಿಬೀದಿಗಳುಳ್ಳ ಆ ಪುರವು ತಾನು ಐಶ್ವರ್ಯಕ್ಕೆ ಆಶ್ರಯವಾಗಿರುವಂತೆ ತೋರ್ಪಡಿಸುತ್ತಿತ್ತು. ಆ ಶಂಭುಪುರದಲ್ಲಿ ವೈಶ್ಯವಂಶದಲ್ಲಿ ಜನಿಸಿ, ಸುವರ್ಣ ವಜ್ರ, ಮಾಣಿಕ್ಯ, ಮುತ್ತು, ಹವಳ, ಪಚ್ಚೆ, ಪುಷ್ಯರಾಗ, ವಜ್ರ, ನೀಲ, ಗೋಮೇಧಿಕ ಮತ್ತು ವೈಡೂರ್ಯಗಳೆಂಬ ನವರತ್ನಗಳಿಗೂ ಒಡೆಯನಾದ ಅಮರನೀತಿಯೆಂಬ ವರ್ತಕನಿದ್ದನು. ॥೧೩-೧೪॥

ಅವನು ಯಾವಾಗಲೂ ಶಿವನನ್ನೇ ಧ್ಯಾನಮಾಡುತ್ತಾ, ಈಶ್ವರಭಕ್ತರಿಗೆ ವಿಶೇಷರೀತಿಯ ಭೋಜನವನ್ನು ನಡೆಸುತ್ತಿದ್ದನು. ಬ್ರಹ್ಮಚಾರಿಗಳಿಗೆ ಕೌಪೀನದ ಬಟ್ಟೆಗಳನ್ನು ದಾನಮಾಡುತ್ತಾ, ತನ್ನ ಐಶ್ವರ್ಯದ ಫಲವನ್ನು ಅನುಭವಿಸುತ್ತಿದ್ದನು. ಈ ಅಮರನೀತಿಯು 'ಶ್ರೀಕಾಂತಾ' ಎಂಬ ಹೆಸರಿನ ಪಟ್ಟಣದಲ್ಲಿರುವ ಪರಶಿವಲಿಂಗಕ್ಕೆ ಪೂಜಾದಿಗಳನ್ನು ಸಲ್ಲಿಸುತ್ತಾ ಆ ಮಹೇಶನ ಪಾದವನ್ನು ಸೇವಿಸುವ ಭಕ್ತವೃಂದಕ್ಕೆ ಭೋಜನಸೌಕರ್ಯವುಂಟಾಗುವುದಕ್ಕೋಸ್ಕರ ಅಲ್ಲಿ ಒಂದು ಮಠವನ್ನು ಸ್ಥಾಪಿಸಿದ್ದನು. ॥೧೫-೧೬॥

ಹೀಗೆ ತಾನು ಸ್ಥಾಪಿಸಿದ ಮಠದಲ್ಲಿ, ಮಹಾದೇವನ ಯಾತ್ರೆ ಮತ್ತು

ಅನ್ನಾದ್ಯೈಃ ಪ್ರೀಣಯನ್ಭಕ್ತಾನುನಾಸಾಲೋಕಯಂಶ್ಚಿವಂ ।
ಜಾತುಕಾಂತಪುರಾಧೀಶಸ್ತಂ ಭಕ್ತಂ ಚಂದ್ರಶೇಖರಃ ॥೧೮॥

ಪಾತುಂ ಕೌಪೀನಮಹಾತ್ಮ್ಯಾದ್ವ್ಯಾಜಾದ್ವರ್ಣೀ ಬಭೂವ ಸಃ ।
ಅಲಕ್ಷಿತಜಟಾಬದ್ಧಸತ್ರಿಪುಂಡ್ರಶಿಖಾಂಚಿತಃ ॥೧೯॥

ಸ ಪವಿತ್ರೇ ಯಜ್ಞಸೂತ್ರೇ ಯಯೌ ಕೃಷ್ಣಾಜಿನೋಜ್ಜ್ವಲಃ ।
ಕೌಪೀನೋಜ್ಜ್ವಲಮಾಬಧ್ವಾ ಖಂಡವಾಸಕಟೀತಟಂ ॥೨೦॥

ನಿರ್ಮಲೇ ಭಕ್ತಹೃದಯೇ ನಿಕ್ಷೇಪ್ತುಂ ಪಾದಯೋರ್ಯುಗಂ ।
ನ್ಯಸ್ತನ್ಯಾಸೋಚಿತಂ ಕ್ಷೋಣ್ಯಾಂ ಯಾಂತಮಾಧಾರಚಕ್ರಗಂ ॥೨೧॥

ವರ್ಣಿನಂ ತಂ ಜನಾ ವೀಕ್ಷ್ಯ ಸರ್ವೇ ಹೃದಿ ಮುದಾನ್ವಿತಾಃ ।
ತಸ್ಯ ಹಸ್ತೇಕುಶಗ್ರಂಥಿಕೌಪೀನಾಂಚಿತದಂಡಭೃತ್ ॥೨೨॥

---

ಉತ್ಸವಾದಿಗಳಿಗೋಸ್ಕರ ಬರುವ ಭಕ್ತರಿಗೆ ಅನ್ನವಸ್ತ್ರಾದಿದಾನಗಳಿಂದ ಸಂತೋಷ ಪಡಿಸುತ್ತಾ, ತಾನೂ ಶಿವಕೈಂಕರ್ಯಗಳನ್ನು ನೋಡುತ್ತಾ ವಾಸಿಸುತ್ತಿದ್ದನು. ಹೀಗಿರಲು ಒಂದು ದಿನ ಆ ಕಾಂತಪುರಾಧಿಪತಿಯಾದ ಚಂದ್ರಶೇಖರನು, ಕೌಪೀನದ ಮಹಿಮೆಯಿಂದ ತನ್ನ ಭಕ್ತರನ್ನು ಉದ್ಧರಿಸಲು ಕಪಟಬ್ರಹ್ಮಚಾರಿರೂಪದಿಂದ ಆ ಅಮರನೀತಿಯುದ್ದೆಡೆಗೆ ಬಂದನು. ॥೧೭-೧೮॥

ತನ್ನ ನಿಜವಾದ ಜಟಾಕಲಾಪ ಭಸ್ಮತ್ರಿಪುಂಡ್ರಾದಿಗಳನ್ನು ಕಾಣಿಸದೆ ಪವಿತ್ರವಾದ ಯಜ್ಞೋಪವೀತದಿಂದಲೂ ಕೃಷ್ಣಾಜಿನದಿಂದಲೂ ಶೋಭಿಸುತ್ತಾ, ಉಜ್ವಲವಾದ ಕೌಪೀನದೊಡನೆ ಸೊಂಟದಲ್ಲಿ ತುಂಡು ಬಟ್ಟೆಗಳನ್ನು ಕಟ್ಟಿಕೊಂಡು, ತೇಜಸ್ವಿಯಾಗಿ ನಿರ್ಮಲವಾದ ತನ್ನ ಭಕ್ತನ ಮನಸ್ಸಿನಲ್ಲಿ ತನ್ನ ಪಾದಗಳೆರಡನ್ನೂ ಇರಿಸುವ ಉದ್ದೇಶದಿಂದ ಕ್ರಮವಾಗಿ ನೆಲದ ಮೇಲೆ ನಡೆದು ಬಂದನು. ಸಕಲ ಪ್ರಪಂಚಕ್ಕೂ ಆಧಾರನಾಗಿರುವ ದೇವನಂತೆ ತೇಜಶ್ಶಾಲಿಯಾಗಿರುವ ಆ ಬ್ರಹ್ಮ ಚಾರಿಯನ್ನು ನೋಡಿ ಜನಗಳೆಲ್ಲರೂ ಮನಸ್ಸಿನಲ್ಲಿ ಆನಂದಭರಿತರಾದರು. ॥೧೯-೨೦-೨೧॥

ಅವನ ಕೈಯಲ್ಲಿ ದರ್ಭೆಯ ಕಂತೆ, ಮತ್ತು ಕೌಪೀನದಿಂದ ಯುಕ್ತವಾದ ಬ್ರಹ್ಮ ದಂಡವು ಕಂಡುಬರುತ್ತಿದ್ದಿತು. ಆ ಬ್ರಹ್ಮಚಾರಿಯು ತನ್ನ ಪ್ರಭಾವದಿಂದ ಜನಗಳ

ಸ ಪ್ರಾಪಾಮುರನೀತಿಂ ತಂ ಮುಹಿಮ್ನಾನಂದಯನ್ನನಾನ್ ।
ಅದೃಷ್ಟಪೂರ್ವಂ ತಂ ದೃಷ್ಟ್ವಾ ಸ ವಣಿಗ್ಬ್ರಹ್ಮಚಾರಿಣಂ ॥೨೩॥

ಲಬ್ಧಂ ತಪಃ ಫಲಮಿತಿ ಪ್ರಣಮನ್ಪ್ರಶಶಂಸ ಚ ।
ಸ ವರ್ಣೀತ್ಯಾಹ ತಂ ದೃಷ್ಟ್ವಾ ಪ್ರೀಣಯಿತ್ವಾನ್ನದಾನತಃ ॥೨೪॥

॥ ವರ್ಣ್ಯುವಾಚ ॥

ಕೌಪೀನಕಂಥಾವಸ್ತ್ರಾಣಿ ದದಾಸೀತ್ಯಹಮಾಗತಃ ।
ತಚ್ಛ್ರುತ್ವಾ ಸ ವಣಿಕ್ಪ್ರಾಪ್ಯ ಮಠಂ ಪಾಕವಿದೋ ದ್ವಿಜಾನ್ ॥೨೫॥

ಆದರೇಣಾನ್ನಪಾನಾದಿ ಕುರ್ವಂತ್ವಸ್ಯೇತಿ ಚಾದಿಶತ್ ।
ಭೂಯೋ ವರ್ಣಿನಮಭ್ಯೇತ್ಯ ತ್ವಂ ಮಠೇಽಸ್ಮಿನ್ದ್ವಿಜೋತ್ತಮ ॥೨೬॥

ಪ್ರಸೀದ ಭೋಕ್ತುಮಿತ್ಯೇನಂ ಯಯಾಚೇ ಸಾಂಜಲಿರ್ದ್ವಿಜಂ ॥೨೭॥

---

ನ್ನೆಲ್ಲಾ ಸಂತೋಷಪಡಿಸುತ್ತಾ ಆ ಅಮುರನೀತಿಯ ಬಳಿಗೆ ಬಂದನು. ಆ ವರ್ತಕನಾದರೋ ಹಿಂದೆ ಯಾವಾಗಲೂ ಕಾಣದ ಆ ಬ್ರಹ್ಮಚಾರಿಯನ್ನು ಕಂಡು ನನ್ನ ತಪಸ್ಸಿನ ಫಲವು ಇಂದಿಗೆ ಲಭಿಸಿತೆಂದು ಭಾವಿಸುತ್ತಾ, ಆತನನ್ನು ನಾನಾರೀತಿ ಸ್ತುತಿಸಿದನು. ಅನಂತರ ಆ ವರ್ತಕನು ತನ್ನ ಮನೆಯಲ್ಲಿ ಅನ್ನವನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸುತ್ತಿರಲು ಆ ಬ್ರಹ್ಮಚಾರಿಯು ಅವನನ್ನು ನೋಡಿ ಇಂತೆಂದನು. ॥೨೨-೨೩-೨೪॥

ಅಯ್ಯ ವರ್ತಕನೇ, ಕೌಪೀನ ಕಂಥೆಗಳಿಗೆ ನೀನು ಬಟ್ಟೆಗಳನ್ನು ದಾನ ಮಾಡುತ್ತೀಯೆಂದು ಕೇಳಿ ನಾನು ಅದಕ್ಕಾಗಿ ನಿನ್ನಲ್ಲಿಗೆ ಬಂದಿರುತ್ತೇನೆಂದು ಹೇಳಲು, ಆ ಬ್ರಹ್ಮಚಾರಿಯ ಮಾತುಗಳನ್ನು ಕೇಳಿ ವೈಶ್ಯನು ಸಂತೋಷದಿಂದ ತನ್ನ ಮಠಕ್ಕೆ ಹೋಗಿ ಅಡಿಗೆ ಮಾಡುವ ಬ್ರಾಹ್ಮಣರಿಗೆ, ನೀವು ಆದರದಿಂದ ಈ ವಟುವಿಗೆ ಅನ್ನ ಪಾನಾದಿಗಳನ್ನು ಕೊಟ್ಟು ಸಂತೋಷಪಡಿಸಬೇಕೆಂದು ನಿಯಮಿಸಿದನು. ಮತ್ತೆ ಬ್ರಹ್ಮಚಾರಿಯ ಬಳಿಗೆ ಬಂದು ಎಲೈ ಶ್ರೇಷ್ಠನಾದ ಬ್ರಹ್ಮಚಾರಿಯೇ, ನನ್ನಲ್ಲಿ ಅನುಗ್ರಹಮಾಡಿ ಈ ನನ್ನ ಮಠದಲ್ಲಿ ಭೋಜನಮಾಡಬೇಕೆಂದು ಕೈಜೋಡಿಸಿ ಆ ದ್ವಿಜವಟುವನ್ನು ಬೇಡಿಕೊಂಡನು. ॥೨೫-೨೬-೨೭॥

॥ ವರ್ಣೀ ಉವಾಚ ॥

ಧಾರ್ಮಿಕಸ್ತ್ವಂ ಮಠೇ ಭೋಕ್ಷ್ಯೇ ಸ್ನಾತುಂ ಯಾಮಿ ಕವೇರಜಾಂ ।
ಸ್ಯಾದ್ವರ್ಷಂ ಪಥಿ ಚೇದೇತದ್ಯಾಯಾತ್ಕೌಪೀನಮಾರ್ದ್ರತಾಂ ॥೨೮॥

ಅತಸ್ತ್ವನ್ಯಚ್ಚ ಮೇ ಭೂಯೋಽಸ್ತ್ಯರ್ಪಯೇತಿ ವಣಿಕ್ಕರೇ ।
ಆಷಾಢಾತ್ತತ್ರದಾದಾನಾದಾಶತ್ಸಪರತಃ ಪರಃ ॥೨೯॥

ಕೌಪೀನಸ್ಯಾಸ್ಯ ಮಾಹಾತ್ಮ್ಯಂ ಮಯಾ ವಕ್ತುಂ ನ ಶಕ್ಯತೇ ।
ಇದಂ ಸಂರಕ್ಷ್ಯಾಗತಾಯ ಮಹ್ಯಂ ದೇಹೀತ್ಯಶಾದ್ವಟುಃ ॥೩೦॥

ವಣಿಕ್ಕೌಪೀನಮಾದಾಯ ನ್ಯಸ್ಯ ರಕ್ಷಾಂ ಕರೋದ್ಗೃಹೇ ।
ಸ್ನಾತುಂ ಯಾತಸ್ಯ ಚ ವಟೋರಾಗತಿಂ ಪ್ರತ್ಯಪಾಲಯತ್ ॥೩೧॥

ಕೌಪೀನಂ ಯಾಪಯಿತ್ವಾ ತನ್ಮಾಯಯಾ ವಟುರಾಯಯೌ ।
ಕಿಂ ಕಾವೇರ್ಯಾಂ ಜಲೈರಾರ್ದ್ರಂ ಸ್ವರ್ನದ್ಯಾಂ ವಾ ಘನೋದ್ಭವೈಃ ॥೩೨॥

---

ಅಯ್ಯ ವರ್ತಕನೇ, ನೀನು ಧರ್ಮಿಷ್ಠನು, ನಿನ್ನ ಮಠದಲ್ಲಿ ಅವಶ್ಯವಾಗಿ ಭೋಜನಮಾಡುತ್ತೇನೆ. ಈಗ ಮೊದಲು ಸ್ನಾನಮಾಡುವುದಕ್ಕಾಗಿ ಕಾವೇರೀ ನದಿಗೆ ನಾನು ಹೋಗಬೇಕಾಗಿದೆ. ದಾರಿಯಲ್ಲಿ ಮಳೆಯೇನಾದರೂ ಬಂದರೆ ಈ ನನ್ನ ಕೌಪೀನವು ನೆನೆದುಹೋಗುವುದು. ನನಗೆ ಇದೊಂದು ಕೌಪೀನವಲ್ಲದೆ ಬೇರೊಂದಿಲ್ಲ. ಆದ್ದರಿಂದ ನಾನು ಬರುವವರೆಗೆ ಈ ನನ್ನ ಕೌಪೀನವನ್ನು ಜೋಪಾನವಾಗಿ ಕಾಪಾಡಿ ಕೊಂಡಿರೆಂದು ಪರಾತ್ಪರವಸ್ತುವಾದ ಆ ಪರಶಿವನು ವರ್ತಕನನ್ನು ಕೇಳಿಕೊಂಡನು. ಅಲ್ಲದೇ ಆ ವರ್ತಕನನ್ನು ಕುರಿತು, ಅಯ್ಯ ವೈಶ್ಯವರ್ಯನೇ, ಈ ಕೌಪೀನದ ಮಹಿಮೆಯನ್ನು ನನ್ನಿಂದ ಹೇಳುವುದಕ್ಕೆ ಸಾಧ್ಯವಿಲ್ಲ. ಇದು ತುಂಬಾ ಮಹಿಮೆ ಯುಳ್ಳದ್ದು. ಇದರಂತೆಯೇ ಕೌಪೀನದಾನವೂ ಬಹು ಪುಣ್ಯಪ್ರದವಾದುದು. ಇದನ್ನು ನಾನು ಬಂದಮೇಲೆ ತಿರುಗಿ ಕೊಡೆಂದು ಆ ವಟುವು ವರ್ತಕನಿಗೆ ಅಪ್ಪಣೆ ಮಾಡಿ ದನು. ॥೨೮-೨೯-೩೦॥

ಕೂಡಲೇ ಆ ವರ್ತಕನು ವಟುವಿನ ಆ ಕೌಪೀನವನ್ನು ತೆಗೆದುಕೊಂಡು ಮನೆಯಲ್ಲಿಟ್ಟು ರಕ್ಷಣೆಮಾಡಿದನು. ಅಲ್ಲದೆ ಸ್ನಾನಮಾಡಲು ಹೋದ ವಟುವಿನ ಬರುವಿಕೆಯನ್ನೇ ನಿರೀಕ್ಷಿಸುತ್ತಿದ್ದನು. ಆ ಮಾಯಾವಟುವಾದರೋ ತನ್ನ ಮಾಯೆ ಯಿಂದ ವೈಶ್ಯನಿಗೆ ಕೊಟ್ಟಿದ್ದ ಕೌಪೀನವನ್ನು ಅವನಿಗೆ ಅರಿಯದಂತೆ ಅಪಹರಿಸಿ

ಭಕ್ತಸ್ಸಂಪನ್ನನಾನೇಷಶ್ಚಂದ್ರಮೌಳಿಪದಸ್ಥಧೀಃ ।
ಆರ್ದ್ರಮೂರ್ತಿಂ ತಮಾಯಾಂತಂ ಪ್ರಹ್ವಃ ಪ್ರತ್ಯುದ್ಯಯೌ ವಟುಂ ॥೩೩॥

ಭೃತ್ಯಪ್ರೇಮಜಲೈಃ ಸ್ನಾತುಕಾಮಃ ಕೌಪೀನತಸ್ಕರಃ ।
ಭಕ್ತಸ್ಯಾಗ್ರೇ ಸ್ಥಿತಃ ಪ್ರಾಹ ಕೌಪೀನಂ ಗತಮಾರ್ದ್ರತಾಂ ॥೩೪॥

ಆಷಾಢವೇಷ್ಟಿತಂ ಚೈತದಾರ್ದ್ರಂ ಪರಿಹೃತಂ ಮಯಾ ।
ಪರಿತ್ಯಕ್ತಂ ತ್ವಯಿ ನ್ಯಸ್ತಮಾನಯೇತ್ಯಾಹ ವರ್ಣಿರಾಟ್ ॥೩೫॥

ಸ ಗೃಹಂ ಪ್ರಾಪ್ಯ ಕೌಪೀನಮದೃಷ್ಟ್ವಾ ದುಃಖಿತೋ ಮುಹುಃ ॥೩೬॥

॥ ವೈಶ್ಯ ಉವಾಚ ॥

ಕ್ವಾದ್ಯ ಯಾತಂ ಕೇನ ನೀತಂ ಕೌಪೀನಂ ಮಾಯಯಾ ಮಮ ।
ಅದೃಷ್ಟ್ವಾ ಮುಹುರನ್ವಿಷ್ಯ ಸ ವೈಶ್ಯಃ ಸಾಧ್ವಸಾಕುಲಃ ॥೩೭॥

---

ಬಿಟ್ಟನು. ಇತ್ತ ವೈಶ್ಯನು ಮನೆಯಲ್ಲಿ ಆ ವಟುವಿನ ಕೌಪೀನವು ಕಾವೇರೀನದಿಯ ನೀರಿನಿಂದ ತೊಯ್ದಿದೆಯೋ ಅಥವಾ ಮೇಘಗಳಿಂದ ಹುಟ್ಟಿದ ದೇವನದಿಯ ನೀರಿನಿಂದ ಒದ್ದೆಯಾಗಿರಬಹುದೋ ಏನೋ ಎಂದು ಚಿಂತಿಸುತ್ತಿದ್ದನು. ॥೩೧-೩೨॥

ಭಕ್ತನೂ, ಸಂಪತ್ತುಳ್ಳವನೂ ಆದ ಈ ಅಮರನೀತಿಯು ಆ ಚಂದ್ರಮೌಳಿಯ ಪಾದದಲ್ಲಿಯೇ ಮನಸ್ಸಿಟ್ಟು ಧ್ಯಾನಿಸುತ್ತಾ, ತೊಯ್ದ ಆಕೃತಿಯುಳ್ಳವನಾಗಿ ಬರುತ್ತಿರುವ ಆ ವಟುವನ್ನು ಕಂಡು ನಮ್ರನಾಗಿ ಎದುರುಗೊಂಡನು. ಆಗ ತನ್ನ ಸೇವಕನ ಪ್ರೇಮಬಾಷ್ಪದಿಂದ ಸ್ನಾನಮಾಡಲಿಚ್ಛಿಸಿದ ಆ ಕೌಪೀನಾಪಹಾರಿಯಾದ ಮಾಯಾ ವಟುವು, ತನ್ನ ಭಕ್ತನ ಮುಂದೆ ನಿಂತುಕೊಂಡು, ಅಯ್ಯ ಭಕ್ತನೇ, ಈಗ ನನ್ನ ಕೌಪೀನವು ಒದ್ದೆಯಾಯಿತು. ॥೩೩-೩೪॥

ಈ ಮುತ್ತುಗದ ದಂಡಕ್ಕೆ ಸುತ್ತಿದ್ದ ಈ ಕೌಪೀನವೂ ಒದ್ದೆಯಾಗಿರುವುದರಿಂದ ನಾನು ಅದನ್ನು ತೆಗೆದು ಹಾಕಿಬಿಟ್ಟೆನು. ನಿನ್ನಲ್ಲಿ ಕೊಟ್ಟಿರುವ ಆ ನನ್ನ ಕೌಪೀನವನ್ನು ತೆಗೆದುಕೊಂಡು ಬಾ ಎಂದು ಆ ವಟುವರ್ಯನು ನುಡಿಯಲು ವರ್ತಕನು ಹಾಗೆಯೇ ಆಗಲೆಂದು ಮನೆಗೆ ಹೋಗಿ, ಅಲ್ಲಿ ತಾನು ರಕ್ಷಿಸುತ್ತಿದ್ದ ಕೌಪೀನವನ್ನು ಕಾಣದೇ ತುಂಬಾ ದುಃಖಿತನಾದನು. ॥೩೫-೩೬॥

ಮತ್ತು ನಾನಿಟ್ಟಿದ್ದ ಕೌಪೀನವು ಈಗ ಎಲ್ಲಿ ಹೋಯಿತು! ಮಾಯೆಯಿಂದ ಯಾರು ಅಪಹರಿಸಿದರು? ಎಂದು ಎಲ್ಲೆಲ್ಲೂ ಹುಡುಕಿ ಕಾಣದೇ ಕೊನೆಗೆ ಭಯ

ವಟೋರ್ಮಾಯಾವಿನಃ ಕೂಟಪಾಶೇ ಲಗ್ನಃ ಕರೋತು ಕಿಂ ।
ಪತ್ನೀಬಂಧುಸುತಪ್ರಾಪ್ತಾ ಮಹತೀ ವಿಪದಿತ್ಯಸೌ ॥೩೮॥

ಅನ್ಯದಾದಾಯ ಕೌಪೀನಂ ರಮ್ಯಂ ನಿರ್ಗತ್ಯ ಚಾಬ್ರವೀತ್ ॥೩೯॥

ನ್ಯಸ್ತಂ ಗೃಹೇ ತೇ ಕೌಪೀನಂ ನ ದೃಷ್ಟಮಿದಮದ್ಭುತಂ ।
ಗೃಹಾಣ ಚಾದ್ಭುತಂ ಚಾನ್ಯತ್ತನ್ನ ಪಶ್ಯಾಮಿ ಪೌರ್ವಿಕಂ ॥೪೦॥

ಶಿವ ಏವ ವಿಜಾನಾತಿ ಕೇನ ವಾ ತದ್ಧೃತಂ ವಟೋ ।
ಇದಂ ನವೀನಂ ಕೌಪೀನಂ ಧಾರಯಸ್ವ ಸಿತೋಜ್ಜ್ವಲಂ ॥೪೧॥

ಅಪರಾಧಂ ಕ್ಷಮಸ್ವೇತಿ ಪ್ರಣಮಂತಂ ವಟುಂ ತದಾ ।
ಇತ್ಥಂ ತೇನೇರಿತಂ ವಾಕ್ಯಂ ಶ್ರುತ್ವಾ ವರ್ಣೀ ತದಾಬ್ರವೀತ್ ॥೪೨॥

॥ ವರ್ಣ್ಯುವಾಚ ॥

ನೈವಂ ವದ ವಣಿಕ್ಶ್ರೇಷ್ಠ ಕಾಲೋ ಭೂಯೋಽಹ್ನಿ ವರ್ತತೇ ।
ತದೇವ ದೇಹಿ ಕೌಪೀನಂ ದತ್ತಂ ಮೇ ಗುರುಣಾ ಪುರಾ ॥೪೩॥

ಗ್ರಸ್ತನಾಗಿ ಆ ಮಾಯಾವಿಯಾದ ಬ್ರಹ್ಮಚಾರಿಯ ಸ್ವರೂಪವನ್ನರಿಯದೆ ಕರ್ತವ್ಯ ಮೂಢನಾಗಿ ನಿಂತುಬಿಟ್ಟನು. ಇದು ತನ್ನ ಹೆಂಡತಿ, ಬಂಧುಗಳು ಮತ್ತು ಮಕ್ಕಳಿಗೆಲ್ಲಾ ಒದಗಿರುವ ದೊಡ್ಡ ವಿಪತ್ತೆಂದು ಚಿಂತಿಸುತ್ತಾ, ಹೊಸದಾದ ಬೇರೊಂದು ಮನೋಹರವಾದ ಕೌಪೀನವನ್ನು ತೆಗೆದುಕೊಂಡು ಬಂದು ವಟುವಿನೊಡನೆ ಇಂತೆಂದನು. ॥೩೭-೩೮-೩೯॥

ಅಯ್ಯಾ ವಟುವೇ, ಮನೆಯಲ್ಲಿ ಸುರಕ್ಷಿತವಾಗಿಟ್ಟಿದ್ದ ನಿನ್ನ ಕೌಪೀನವು ಈಗ ಕಾಣದೇ ಅತ್ಯಾಶ್ಚರ್ಯಕರವಾಗಿರುವುದು. ಆದರ ಬದಲು ಈ ಅದ್ಭುತವಾದ ಕೌಪೀನವನ್ನು ತೆಗೆದುಕೋ, ನಿನ್ನ ಕೌಪೀನವು ಹಳೆಯದು. ಅದೂ ಎಲ್ಲೋ ಹೋಯಿತು. ಎಲೈ ಬ್ರಹ್ಮಚಾರಿಯೇ, ಅದನ್ನು ಯಾರು ತೆಗೆದುಕೊಂಡಿದ್ದಾರೆಂಬುದು ಆ ಪರಶಿವನಿಗೊಬ್ಬನಿಗೆ ಮಾತ್ರ ತಿಳಿದಿದೆಯೇ ಹೊರತು ಉಳಿದವರಿಗರಿಯದು. ಅದ್ದರಿಂದ ಹೊಸದೂ ಶುಭ್ರವೂ ಆದ ಈ ಕೌಪೀನವನ್ನು ಧರಿಸಿಕೋ, ನನ್ನ ತಪ್ಪನ್ನು ಕ್ಷಮಿಸು, ಎಂದು ವೈಶ್ಯನು ಹೇಳುತ್ತಿರುವ ಮಾತನ್ನು ಕೇಳಿ ಆ ವಟುವು ಆಗ ವೈಶ್ಯನಿಗಿಂತೆಂದನು. ॥೪೦-೪೧-೪೨॥

ಎಲೈ ವರ್ತಕಶ್ರೇಷ್ಠನೇ, ಹೀಗೆ ನುಡಿಯಬೇಡ, ಇನ್ನೂ ಹಗಲು ಬೇಕಾದ

ನೀತಿಃ ಸಾಧ್ವೀ ದೇವನೀತೇ ತ್ವಯ್ಯದ್ಯೈವ ಮಯಾರ್ಪಿತಂ ।
ಮಹತ್ಕೌಪೀನಮಾದಾಯ ಗೃಹಾಣಾನ್ಯತ್ತು ತತ್ಸಮಂ ॥೪೪॥

ಇತಿ ವಕ್ತಿ ಭವಾನ್ರಮ್ಯಂ ಕೌಪೀನಾಹರಣಾಯ ಕಿಂ ।
ಕೌಪೀನಹರ್ತೇತಿ ವೃಥಾ ಪ್ರಥಾಂ ಪ್ರಾಪ್ನೋಽಸಿ ಭೂತಲೇ ॥೪೫॥

ಅಯುತ್ನಮೇತದ್ವಾಣಿಜ್ಯಮಿತಿ ವೈಶ್ಯ ಯದುದ್ಯತೇ ।
ದ್ವಿಜೇ ಕ್ರುದ್ಧೇ ಪರಿಭ್ರಾಂತಮಾನಸಃ ಶುಷ್ಯದಾನನಃ ॥೪೬॥

॥ ವೈಶ್ಯ ಉವಾಚ ॥

ಇದಂ ಮಯಾ ನ ವಿದಿತಂ ಮಯಾತ್ಯಂತಲಘೀಯಸಾ ।
ಅಪರಾಧಂ ಕ್ಷಮಸ್ವೇತಿ ಪ್ರಣಮ್ಯ ವ್ಯಥಿತೋ ವಣಿಕ್ ॥೪೭॥

---

ಷ್ಟಿದೆ. ಚೆನ್ನಾಗಿ ಹುಡುಕಿ, ನನ್ನ ಗುರುವು ಹಿಂದೆ ನನಗೆ ಅನುಗ್ರಹಿಸಿದ್ದ ಆ ಕೌಪೀನವನ್ನೇ ನನಗೆ ಕೊಡು. 'ಸ್ವಾಮಿ, ನೀವು ಕೊಟ್ಟ ಮಹಾಕೌಪೀನವು ಕಾಣದಾಗಿದೆ. ಅದರ ಬದಲಾಗಿ ಅದಕ್ಕೆ ಸಮನಾದ ಈ ಕೌಪೀನವನ್ನು ತೆಗೆದುಕೋ' ಎಂದು ಹೇಳುತ್ತಾ ನನ್ನ ಕೌಪೀನವನ್ನು ಅಪಹರಿಸುವುದು ನಿನಗೆ ಸರಿಯಾದ ನಡತೆಯಲ್ಲ. ಅಥವಾ ಇದು ನ್ಯಾಯವೋ, ನೀನೇ ಯೋಚಿಸು. ಇದೇನು ಹೀಗೆ ನುಡಿಯುತ್ತಿರುವೆ? ನಿನ್ನನ್ನು ನೋಡಿದರೆ ಕೌಪೀನವನ್ನು ಕದಿಯುವುದಕ್ಕೆ ಪ್ರಯತ್ನಿಸುತ್ತಿರುವಂತೆ ಕಾಣುತ್ತಿದೆಯಲ್ಲ. ಹೀಗಾದರೆ ಭೂಮಿಯಲ್ಲಿ 'ಕೌಪೀನದ ಕಳ್ಳನೆಂದು' ನೀನು ವ್ಯರ್ಥವಾಗಿ ಜನಗಳಿಂದ ಹೇಳಿಸಿಕೊಳ್ಳುವೆ. ॥೪೩-೪೪-೪೫॥

ವೈಶ್ಯನೇ, ಹೀಗಾದರೆ 'ಈ ನಿನ್ನ ವ್ಯಾಪಾರವು ನಿಷ್ಪ್ರಯೋಜನವೆಂದು ಹೇಳಲ್ಪಡುವುದು' ಎಂದು ಬ್ರಹ್ಮಚಾರಿಯು ಹೇಳಲು ಕೋಪಹೊಂದಿದ ಈ ದ್ವಿಜವಟುವಿನಿಂದ ಮುಂದೇನಾಗುವುದೋ ಎಂಬ ಭ್ರಾಂತಿಯುಕ್ತವಾದ ಮನಸ್ಸುಳ್ಳವನಾಗಿ, ಗ್ಲಾನಿಹೊಂದಿದ ಮುಖದಿಂದ ಕೂಡಿ ವೈಶ್ಯನು ಇಂತೆಂದನು. ॥೪೬॥

ಅಯ್ಯ ವಟುವೇ, ಅತ್ಯಲ್ಪನಾದ ನನಗೆ ಇದೊಂದೂ ತಿಳಿಯದು. ನನ್ನ ತಪ್ಪನ್ನು ಕ್ಷಮಿಸಬೇಕೆಂದು ನಮಸ್ಕಾರಮಾಡುತ್ತಾ ಆ ವರ್ತಕನು ದುಃಖಿತನಾದನು. ಸ್ವಾಮಿ, ಈ ಕೌಪೀನಕ್ಕಾಗಿ ತಮಗೆ ಮತ್ತೇನು ಸೇವೆಮಾಡಲಿ. ಹಸುಗಳು, ಎಮ್ಮೆಗಳು, ರತ್ನಗಳು, ಅನೇಕವಿಧವಾದ ದ್ರವ್ಯಗಳು, ಬಟ್ಟೆಗಳ ಮೂಟೆ

ಅನ್ಯತ್ಕರೋಮಿ ಕೈಂಕರ್ಯಂ ಕೌಪೀನಂ ಕಿಂ ಕರೋಮಿ ತೇ।
ಗಾವೋ ಮಹಿಷ್ಯೋ ರತ್ನಾನಿ ಧನಾನಿ ವಿವಿಧಾನಿ ಮೇ ॥೪೮॥

ದದಾಮಿ ವಾಸೋ ಭಾರಾಂಶ್ಚ ಪ್ರಣಮಾಮಿ ಪದಂ ಚ ತೇ।
ಅಂತರ್ಹೃಷ್ಯನ್ಬಹಿಃ ಕ್ರುಧ್ಯನ್ಕಿಂ ರತ್ನೈರ್ಮೇ ಧನಾದಿಭಿಃ ॥೪೯॥

ಕೌಪೀನಂ ದೇಹಿ ತತ್ಸಾಮ್ಯಂ ಜಹೀತ್ಯಾಹ ವಿಶಾಂ ವಟುಃ।
ಕೌಪೀನಂ ನಾಸ್ತಿ ಮೇ ಚೌರ್ಯಮನೇಕಾನ್ಯಂಶುಕಾನಿ ಮೇ ॥೫೦॥

ದದಾಮಿ ಧನಜಾತಾನಿ ವರ್ಣಿನಂ ಪ್ರಾಹ ಸೋ ವಣಿಕ್।
ಭೂಯಃ ಸ ವರ್ಣಿನಂ ಪ್ರಾಹ ಕೌಪೀನಂ ಮುಷಿತಂ ಹಿ ತತ್ ॥೫೧॥

ಏತದಾಷಾಢವಿಧೃತಂ ತನ್ಮಾನಸದೃಶಂ ಭವೇತ್।
ಕೌಪೀನಂ ತುಲಯಾ ಧೃತ್ವಾ ಕೌಪೀನಂ ದೇಹಿ ಮೇಽಪರಂ ॥೫೨॥

---

ಇವುಗಳಲ್ಲಿ ಯಾವುದು ಬೇಕಾದರೂ ಕೊಡಲುಸಿದ್ಧನಿರುವೆನು, ಎಂದು ಪಾದಕ್ಕೆ ನಮಸ್ಕಾರಮಾಡುತ್ತಿರಲು, ಆ ಮಾಯಾ ವಟುವು ಒಳಗೆ ಸಂತೋಷಪಡುತ್ತಾ ಹೊರಗೆ ಮಾತ್ರ ಕೋಪವನ್ನು ಪ್ರಕಟಿಸುತ್ತಾ, ಅಯ್ಯ! ನನಗೆ ನಿನ್ನ ಧನಕನಕ ವಸ್ತುವಾಹನಾದಿಗಳಲ್ಲಿ ಯಾವುದು ಬೇಕಾಗಿದೆ? ನನ್ನ ಕೌಪೀನಕ್ಕೆ ಸಮಾನವಾದೊಂದು ಕೌಪೀನವನ್ನು ಮಾತ್ರ ಕೊಡು; ಉಳಿದವಿಷಯವೇ ಬೇಡೆಂದು ವಟುವು ವೈಶ್ಯನಿಗೆ ಖಂಡಿತವಾಗಿ ನುಡಿದನು. ||೪೭-೪೮-೪೯||

ಅಯ್ಯ ವಟುವೇ! ನನ್ನಲ್ಲಿ ನಿಜವಾಗಿಯೂ ಕೌಪೀನವಿಲ್ಲ; ಕಳ್ಳತನವೂ ನನ್ನಲ್ಲಿ ತೋರುವುದಿಲ್ಲ. ಸ್ವಾಮಿ! ಇದಕ್ಕಾಗಿ ಅನೇಕ ಬಟ್ಟೆಗಳನ್ನೂ ಧನರಾಶಿಗಳನ್ನೂ ಕೊಡಲು ಸಿದ್ಧನಾಗಿರುವೆನು, ಎಂದು ಪುನಃ ಆ ಬ್ರಹ್ಮಚಾರಿಗೆ ವೈಶ್ಯನು ನುಡಿದನು. ಆಗ ಬ್ರಹ್ಮಚಾರಿಯು, ನಿನಗೆ ಕೊಟ್ಟಿದ್ದ ಕೌಪೀನವನ್ನು ನೀನು ಕದ್ದಿರುವೆ. ಹೋಗಲಿ, ಈ ದಂಡಕ್ಕೆ ಧರಿಸಿರುವ ಬಟ್ಟೆಯು ಕೌಪೀನವು ಪ್ರಾಯಶಃ ಅದರ ತೂಕಕ್ಕೆ ಸರಿಯಾಗಿದ್ದಿರಬಹುದು. ಆದ್ದರಿಂದ ಈಗ ನೀನು ತಕ್ಕಡಿಯಲ್ಲಿ ತೂಗಿ ಈ ಪಾಲಾಶದಂಡಕ್ಕೆ ಕಟ್ಟಿರುವ ವಸ್ತ್ರಕ್ಕೆ ಸರಿತೂಗುವ ಬೇರೊಂದು ಕೌಪೀನವನ್ನು ನನಗೆ ಕೊಡು ಎಂದು ಹೇಳಿದನು. ||೫೦-೫೧-೫೨||

ಇತ್ಯುಕ್ತೋ ವಟುನಾ ವೈಶ್ಯಃ ಪ್ರೀತಿಮಾನಾನಯತ್ತುಲಾಂ ।
ಸ್ಥಾಲ್ಯಾಂ ಕೌಪೀನಮೇಕಸ್ಯಾಂ ನೀಲಕಂಠೋ ನಿಜಂ ವ್ಯಧಾತ್ ॥೫೩॥

ಸರ್ವಾಣಿ ತಸ್ಯ ಗೇಹ್ಯಾನಿ ತಸ್ಮಿನ್ನಿನ್ಯಸ್ಯ ವೈಶ್ಯರಾಟ್ ।
ಕೌಪೀನಜಾತಸ್ಯೈವೇಶಸ್ತಸ್ಯ ನಾಲಮಭೂತ್ತದಾ ॥೫೪॥

ನ್ಯಸ್ಯ ಸ್ಥಾಲ್ಯಾಮಿದಂ ಚಾಸೀದುನ್ನತಾ ನ ಪುನರ್ನತಾ ।
ಕೌಪೀನಮಸ್ಯ ಮಾಯೀಯಮಿತಿ ಪಟ್ಟಾಂಬರಾಣಿ ಸಃ ॥೫೫॥

ಸ್ವರ್ಣಾದೀನಪ್ಯಹಂ ನ್ಯಸ್ಯೇ ಆದಿಶೇತ್ಯನಮುಯ್ಯತಂ ।
ತಂ ಪ್ರಾಹ ವಣಿಜಂ ವರ್ಣೀ ಧನೇಶವಚನೇನ ಕಿಂ ॥೫೬॥

ನಿಧೇಹ್ಯತ್ರ ಧನಾದೀನಿ ಮತ್ಕೌಪೀನತುಲಾಸ್ವಿತಿ ।
ಸ್ವಸ್ಥಾಲ್ಯಾಂ ನಿದಧೇ ಸ್ವರ್ಣಲೋಹರತ್ನಾದಿಕಂ ತದಾ ॥೫೭॥

ಉದಸ್ಥಾತ್ಸರ್ವಮಾದಾಯ ಸರ್ವೋಽಭೂದ್ವಿಸ್ಮಿತೋ ಜನಃ ।
ವೇದಸೂತ್ರಕೃತಸ್ಯೈಷ ಕೌಪೀನಸ್ಯ ವಣಿಗ್ಧನಂ ॥೫೮॥

---

ಹೀಗೆ ವಟುವು ಹೇಳಲು ಆ ವೈಶ್ಯನು ಅದಕ್ಕೆ ಒಪ್ಪಿ ಕೂಡಲೇ ತಕ್ಕಡಿಯನ್ನು ತರಿಸಿ, ಅದರ ಒಂದು ಬಟ್ಟಲಲ್ಲಿ ನೀಲಕಂಠನು ತನ್ನ ಕೌಪೀನವನ್ನಿಟ್ಟನು. ಆ ವೈಶ್ಯಶ್ರೇಷ್ಠನು ಇನ್ನೊಂದು ಬಟ್ಟಲಲ್ಲಿ ತನ್ನ ಮನೆಯಲ್ಲಿದ್ದ ಬಟ್ಟೆಯ ಚೂರುಗಳನ್ನೆಲ್ಲಾ ತರಿಸಿಹಾಕಿದನು. ಆದರೂ ಈ ಕೌಪೀನಕ್ಕೆ ಅದು ಸರಿತೂಗಲಿಲ್ಲ. ||೫೩-೫೪||

ಹತ್ತಿಬಟ್ಟೆಗಳೆಲ್ಲಾ ಮುಗಿಯಲು, ಆ ವೈಶ್ಯನು ಪಟ್ಟೆವಸ್ತ್ರಗಳನ್ನು ತಕ್ಕಡಿಗೆ ತರಿಸಿ ಹಾಕಿದನು. ಹಾಗಾದರೂ ಆ ತಕ್ಕಡಿಯೂ ಮೇಲಿತ್ತೇ ವಿನಾ ಕೆಳಗಿಳಿಯಲೇ ಇಲ್ಲ. ಆಗ ಅವನು ಇದು ಮಾಯಾಕೌಪೀನವೆಂದರಿತು, ಸ್ವಾಮಿ, ಸುವರ್ಣವೇ ಮೊದಲಾದವುಗಳನ್ನು ಇದರ ತೂಕಕ್ಕೆ ಹಾಕಲು ಅನುಮತಿಕೊಡಬೇಕೆಂದು ಪ್ರಾರ್ಥಿಸಲು, ವಟುವು ಅಯ್ಯ ಹಣವಂತನೇ, ಕೇವಲ ಮಾತಿನಿಂದೇನು ಪ್ರಯೋಜನ? ನನ್ನ ಕೌಪೀನಕ್ಕೆ ಸರಿತೂಗುವಷ್ಟು ನಿನ್ನಲ್ಲಿರುವ ಧನಕನಕಾದಿಗಳನ್ನು ಹಾಕು ಎನ್ನಲು, ಆಗ ವರ್ತಕನು ಚಿನ್ನ, ಕಬ್ಬಿಣ, ರತ್ನ ಮುಂತಾದ ತನ್ನ ಮನೆಯಲ್ಲಿದ್ದುದನ್ನೆಲ್ಲಾ ತಂದುಹಾಕಿಸಿದನು. ಜನಗಳೆಲ್ಲರೂ ಆಶ್ಚರ್ಯಚಕಿತರಾದರು.

ನಾಲಮಿತ್ಯದ್ಭುತಂ ನೈವ ಜಗಚ್ಚ ನಹಿ ತತ್ಸಮಂ ।
ಕೈವಲ್ಯಶೇಷಃ ಸಂಪ್ರಾಹ ವಣಿಕ್ಕಿಂಚಿದ್ಧನಂ ನ ಮೇ ॥೫೯॥

ಅತಃ ಪುತ್ರಕಲತ್ರಾಭ್ಯಾಮಾರೋಹಾಮಿ ತುಲಾಮಿಮಾಂ ।
ಅಕೃತ್ರಿಮಪ್ರೇಮರಸಂ ದೇವೋ ವೈಶ್ಯತುಲಾಂ ಬಲಾತ್ ॥೬೦॥

ಪಾಶಾಂ ಛಿತ್ವಾ ಪದಂ ನೇತುಂ ಸ್ವೇ ತಥೇತ್ಯವಮನ್ಯತ ।
ನತ್ವಾ ತಮರ್ಥಂ ಸೋಲ್ಲಾಸೋ ವಣಿಗ್ದಾರಸಮನ್ವಿತಃ ॥೬೧॥

ತುಲಾಂ ಪ್ರದಕ್ಷಿಣೀಕರ್ತುರ್ಮಾರುರುಕ್ಷುರ್ಜಗಾದ ಸಃ ॥೬೨॥

॥ ವೈಶ್ಯ ಉವಾಚ ॥

ಶಿವಭಕ್ತಾಂಘ್ರಿದಾಸ್ಯಂ ಸೋ ಲಂಘಿತಂ ತ್ವತ್ಸಮಾಸ್ತ್ವಿಯಂ ।
ಇತಿ ಕಾಂತಪುರೇಶಾನಮುಮಾಕಾಂತಂ ಪ್ರಣಮ್ಯ ಸಃ ॥೬೩॥

---

ಈ ಕೌಪೀನವೂ ವೇದಸೂತ್ರಗಳಿಂದ ನಿರ್ಮಿತವಾದದ್ದು. ಈ ಕೌಪೀನಕ್ಕೆ ಈ ವರ್ತಕನ ಸಮೀಪದಲ್ಲಿ ಸದೃಶವಾದ ಹಣವಿಲ್ಲ. ಈ ಪ್ರಪಂಚವೇ ಆದರೂ ಸರಿತೂಗಲಾರದು, ಎಂದು ನೋಡಿದವರು ಎನ್ನುತ್ತಿದ್ದರು. ॥೫೫-೫೬-೫೭-೫೮॥

ಆಗ ಪುಣ್ಯಶೇಷನಾದ ವರ್ತಕನು, ಅಯ್ಯ ವಟುವೇ, ನನ್ನಲ್ಲಿ ಕೊಂಚವೂ ಹಣವಿಲ್ಲವಾದ್ದರಿಂದ ಮಕ್ಕಳು ಮಡದಿಯರೊಡನೆ ನಾನೇ ಈ ತಕ್ಕಡಿಯನ್ನೇರುವೆನೆಂದು ವೈಶ್ಯನು ಹೇಳಲು, ನಿಷ್ಕಪಟವಾದ ಪ್ರೇಮರಸವುಳ್ಳ ಆ ವೈಶ್ಯನನ್ನು, ಆ ವೈಶ್ಯನ ತಕ್ಕಡಿಯ ಹಗ್ಗವನ್ನು ಕೀಳುವುದರ ಮೂಲಕ (ಸಂಸಾರಪಾಶಬಂಧನ ನಿರ್ಮೂಲನಮಾಡುವ ಮೂಲಕ) ಉತ್ತಮವಾದ ತನ್ನ ಸ್ಥಾನವನ್ನು ಹೊಂದಿಸಲು ಮನಸ್ಸುಮಾಡಿದನು. ಆ ವರ್ತಕನು ತಾನು ನುಡಿದ ಅರ್ಥವನ್ನು ಉತ್ಸಾಹದಿಂದ ನಡೆಸಲು ಪತ್ನೀಪುತ್ರರೊಡನೆ ತಕ್ಕಡಿಯನ್ನೇರುವುದಕ್ಕೆ ಮೊದಲು, ಪ್ರದಕ್ಷಿಣೆಮಾಡಿ, ಈ ರೀತಿ ನುಡಿದನು. ॥೫೯-೬೦-೬೧-೬೨॥

ಎಲೈ ಪರಮೇಶ್ವರನೇ, ನಿನ್ನ ಪಾದಸೇವಕರ ಪಾದಸೇವೆಯನ್ನು ಮೀರದೇ ನಾನು ನಡೆಸಿದ್ದರೆ ಈ ತಕ್ಕಡಿಯು ಆ ಕೌಪೀನಕ್ಕೆ ಸಮಾನವಾಗಲಿ, ಎಂದು ಆ ಕಾಂತಪುರಾಧಿಪತಿಯಾದ ಉಮಾರಮಣನಿಗೆ ನಮಸ್ಕಾರಮಾಡಿ ಆ ವರ್ತಕನು ಶಿವಪಂಚಾಕ್ಷರಮಂತ್ರವನ್ನು ಹೇಳುತ್ತಾ ತಕ್ಕಡಿಯನ್ನೇರಿದನು. ಆಗ ಆವನ ದಾಸ್ಯ

ಆರುರೋಹ ತುಲಾಂ ತಸ್ಮಿನ್ಸುಕ್ತ್ವಾ ಪಂಚಾಕ್ಷರಂ ಮನುಂ ।
ತದ್ದ್ವಾಸ್ಯಂ ತಚ್ಚ ಕೌಪೀನಂ ತುಲಾತುಲ್ಯಮಿಥೋಽಭವತ್ ॥೬೪॥

ಭಕ್ತಿನಿರ್ಮಲಭಾವಂ ತಂ ಸ್ತುತ್ವಾ ನೇಮುರ್ಜನಾಸ್ತದಾ ।
ಪುಷ್ಪಾಣಿ ವವೃಷುರ್ದೇವಾಃ ಸರ್ವಾಣಿ ಚ ತಿರೋದಧೇ ॥೬೫॥

ಪುಷ್ಪವರ್ಷೇ ತಿರೋಭೂತೇ ಸ ಚ ಕಾಂಚಿಪುರೇಶ್ವರಃ ।
ಸಮಾಸ್ಥಾಯ ನಿಜಂ ರೂಪಂ ಪ್ರಾದುರಾಸೀನ್ನಭಸ್ಥಲೇ ॥೬೬॥

ಭಕ್ತಸ್ತುಲಾಮಧಿಗತಸ್ಸುತದಾರಯುಕ್ತ
ಸ್ತುಷ್ಟಾವ ತಂ ಶಿವಶಿವೇತಿ ತದಾ ಪ್ರಹೃಷ್ಟಃ ।
ದೇವೋಽಪಿ ಮಾನವದುದಾರತುಲಾಸ್ಥಿತೇನ
ತೇನ ಪ್ರಿಯಾಸುತಯುತೇನ ಸಮಂ ತಿರೋಽಭೂತ್ ॥೬೭॥

ಅಮರನೀತಿಚರಿತ್ರಮಿದಂ ಶುಭಂ
ದುರಿತಜಾತವಿನಾಶನಕೀರ್ತನಂ ।

---

ದೊಡನೆ ಆ ಬ್ರಹ್ಮಚಾರಿಯ ಕೌಪೀನವು ಪರಸ್ಪರಸಮಾನತೂಕವುಳ್ಳದ್ದಾಯಿತು. ||೬೩-೬೪||

ಭಕ್ತಿಯಿಂದ ನಿರ್ಮಲವಾದ ಮನೋಭಾವನೆಯುಳ್ಳ ಆ ವೈಶ್ಯನನ್ನು ಸ್ತೋತ್ರಮಾಡಿ ಜನಗಳೆಲ್ಲರೂ ಅವನಿಗೆ ಪ್ರಣಾಮಮಾಡಿದರು. ಆಗ ದೇವತೆಗಳು ಮರೆಯಲ್ಲಿ ನಿಂತುಕೊಂಡು ಹೂಮಳೆಗರೆದರು. ಆ ಹೂಮಳೆಯು ಮರೆಯಾಗಲು ಆ ಕಾಂತಪುರಾಧಿಪತಿಯು ತನ್ನ ನಿಜಸ್ವರೂಪವನ್ನು ಧರಿಸಿ ಆಕಾಶದಲ್ಲಿ ತನ್ನ ಭಕ್ತನಿಗೆ ಪ್ರತ್ಯಕ್ಷನಾದನು. ||೬೫-೬೬||

ಪತ್ನೀಪುತ್ರರೊಡನೆ ತಕ್ಕಡಿಯಲ್ಲಿ ಕುಳಿತಿರುವ ಆ ಭಕ್ತನು ಸಂತುಷ್ಟನಾಗಿ 'ಶಿವ ಶಿವ' ಎಂದು ಮಹಾದೇವನನ್ನು ಸ್ತೋತ್ರಮಾಡಿದನು. ಆ ಮಹಾದೇವನೂ ಸಹ ಆಳತೆಯ ಬಟ್ಟೆನುತೆ ಉದಾರಮನಸ್ಸಿನಿಂದ ತಕ್ಕಡಿಯಲ್ಲಿ ಕುಳಿತಿರುವ ಆ ವೈಶ್ಯನ ಪತ್ನೀಪುತ್ರರ ಜತೆಯಲ್ಲಿ ತಾನೂ ಮರೆಯಾದನು. ||೬೭||

ಶುಭಕರವಾದ ಮತ್ತು ಪಾಪಸಮೂಹನಾಶಕವಾದ ಈ ಅಮರನೀತಿಯೆಂಬ ಭಕ್ತನ ಚರಿತ್ರೆಯನ್ನು ಭಕ್ತಿಯಿಂದ ಹೇಳುವವನೂ ಮತ್ತು ಕೇಳುವವನೂ

ಪಠತಿ ಭಕ್ತಿಯುತಃ ಶೃಣೋತಿ ಯಃ
ಸ ಶಿವಲೋಕಮನಾಮಯಮಾಪ್ನುಯಾತ್ ॥೬೮॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಅಮರನೀತಿಭಕ್ತ
ಚರಿತ್ರವರ್ಣನಂ ನಾಮ ತ್ರಿಂಶೋಧ್ಯಾಯಃ

---

ಶಿವಭಕ್ತಿಯುಕ್ತನಾಗಿ ದುಃಖಶೂನ್ಯವಾದ ಶಿವಲೋಕವನ್ನು ಪಡೆಯುವನು ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೬೮॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಅಮರನೀತಿಯೆಂಬ ಭಕ್ತನ ಚರಿತ್ರೆಯ ವರ್ಣನೆಯೆಂಬ
ಮೂವತ್ತನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಏಕತ್ರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಶ್ರೀವೀರಭಕ್ತನಾಥಸ್ಯ ಚರಿತಂ ಕಥಯಾಮಿ ತೇ ।
ವ್ಯಾಘ್ರಮ್ಯುದಿತಹೇಮಾದ್ರೇರನಪಾಯಸ್ಯ ಭೂಭುಜಃ ॥೧॥

ಅಸಿಭಿನ್ನಾದ್ರಿನಿರ್ಧೂತಕಾವೇರೀದುರ್ಗಮಾಧ್ವನಃ ।
ಪುರಂ ಗರ್ಭಪುರಂ ನಾಮ ಸಂಪದಾಮಸ್ತಿ ಭಾಜನಂ ॥೨॥

ಯದ್ವೀಥಿಸ್ಥಾನಿ ರತ್ನಾನಿ ಭಾಂತಿ ರಂಜಿತದೀಪವತ್ ।
ತತ್ರಾಸ್ತಿ ಹೇಮಪ್ರಾಕಾರಂ ಭಕ್ತೈಃ ಸೇವ್ಯಂ ಸುರೈಃ ಸ್ತುತಂ ॥೩॥

---

## ಮೂವತ್ತೊಂದನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ! ಶ್ರೀ ವೀರಭಕ್ತನಾಥನೆಂಬ ಭಕ್ತನೊಬ್ಬನ ಚರಿತ್ರೆಯನ್ನು ನಿನಗೆ ಹೇಳುವೆನು, ಕೇಳು; ವ್ಯಾಘ್ರಪಾದಮುನಿಗಳಿಂದ ಸೇವಿತವಾದ ಗರ್ಭಪುರವೆಂಬ ಪಟ್ಟಣದಲ್ಲಿ ಮೇರುಪರ್ವತದಂತೆ ಗಂಭೀರನೂ, ಮಹಾಪುರುಷನೂ, ಅಪಾಯರಹಿತನೂ ಆದ ಒಬ್ಬ ರಾಜನು ರಾಜ್ಯವಾಳುತ್ತಿದ್ದನು. ಆ ನಗರವು ಇಂದ್ರನ ವಜ್ರಾಯುಧದ ಏಟಿನಿಂದ ಒಡೆದುಹೋದ ಬೆಟ್ಟದಲ್ಲಿ ಹುಟ್ಟಿ, ಲೋಕವನ್ನೆಲ್ಲಾ ಪಾವನಮಾಡುತ್ತಾ ಹರಿಯುತ್ತಿರುವ ಕಾವೇರೀನದಿಯಿಂದ ಪವಿತ್ರತವಾಗಿ ಸಕಲೈಶ್ವರ್ಯಗಳಿಗೂ ಆಶ್ರಯಸ್ಥಾನವೋ ಎಂಬಂತೆ ಮೆರೆಯುತ್ತಿದ್ದಿತು. ॥೧-೨॥

ಆ ಗರ್ಭಪುರದ ಬೀದಿಗಳಲ್ಲಿರುವ ರತ್ನಗಳು ಸದಾ ಹೊತ್ತಿಸಿಟ್ಟಿರುವ ದೀಪಗಳಂತೆ ಪ್ರಕಾಶಿಸುತ್ತಿದ್ದುವು. ಅಲ್ಲಿ ಭಕ್ತರಿಂದ ಸೇವಿಸಲರ್ಹವಾಗಿ ದೇವತೆಗಳಿಂದ

ಹರಧಾಮೇತಿ ವಿಖ್ಯಾತಂ ಶ್ರೀಮಚ್ಛಂಕರಮಂದಿರಂ ।
ತಸ್ಮಿನ್ ಶ್ರೀವೀರಭಕ್ತಾಖ್ಯಃ ಶಿವದ್ವಿಜಕುಲೋದ್ಭವಃ ॥೪॥

ಅಭೂಚ್ಛಿವೋಲ್ಲಸದ್ಭಕ್ತಿಃ ಶಿವಶಾಸನವರ್ಧನಃ ।
ಭಸ್ಮರುದ್ರಾಕ್ಷಕಲಿತತ್ರಿಪುಂಡ್ರಾವಲಿದೀಪ್ತಿಮಾನ್ ॥೫॥

ಯದಾ ಶ್ರೀಶಿವಭಕ್ತಾನಾಂ ಕೇಸ ಚಾಪ್ಯಾಪದಂ ಭವೇತ್ ।
ಸ ಸಿಂಹವತ್ತದಾ ಖಡ್ಗವೇತಂಡಾಶ್ಚಂಡಕೋಪನಃ ॥೬॥

ಕದಾಪಿ ಶಿವಕಾಮಾಖ್ಯೋ ಹರಧಾಮೇಷು ಸೇವಿತಾ ।
ಮಾಲಾರ್ಪಕಃ ಶಿವೇ ಭಕ್ತಃ ಪುಷ್ಪಾಹೃತಿಪರೋಽಭವತ್ ॥೭॥

ಪ್ರಾತಃ ಸ್ನಾತ್ವಾ ಮುಖಂ ಬದ್ಧ್ವಾ ಸಹಮಾನಂದಸಂಗತಃ ।
ಪುಷ್ಪಾಣ್ಯಾಹೃತ್ಯ ನೇಲೇಯಂ ಶಿವಂ ಸೇವಿತುಮಾಗತಃ ॥೮॥

---

ಸ್ತೋತ್ರಮಾಡಲ್ಪಟ್ಟು ಸುವರ್ಣಮಯವಾದ ಪ್ರಾಕಾರದಿಂದ ಯುಕ್ತವಾಗಿರುವ 'ಹರಧಾಮ'ವೆಂದು ಪ್ರಸಿದ್ಧವಾದ ಒಂದು ಶಿವಮಂದಿರವಿದ್ದಿತು. ಅಲ್ಲಿ ಶೈವಬ್ರಾಹ್ಮಣ ವಂಶೋತ್ಪನ್ನನಾದ ಶ್ರೀವೀರಭಕ್ತನೆಂಬ ಹೆಸರುಳ್ಳವನು ಯಾವಾಗಲೂ ಶಿವನಲ್ಲಿಯೇ ನೆಲಗೊಂಡ ಭಕ್ತಿಯುಳ್ಳವನಾಗಿ ಶಿವನ ಅಪ್ಪಣೆಯನ್ನು ಅಭಿವೃದ್ಧಿಪಡಿಸಿಕೊಳ್ಳುತ್ತಾ, ಭಸ್ಮ, ರುದ್ರಾಕ್ಷ, ಭಸ್ಮತ್ರಿಪುಂಡ್ರಾಂಕಿತನಾಗಿ ಬಹಳ ತೇಜಸ್ಸಿನಿಂದ ಮೆರೆಯುತ್ತಾ ವಾಸವಾಗಿದ್ದನು. ॥೩-೪-೫॥

ಎಲ್ಲಿಯೇ ಆಗಲಿ, ಪರಶಿವನ ಭಕ್ತರಿಗೆ ವಿಪತ್ತುಗಳೊದಗಿದಾಗೆಲ್ಲಾ ಅವನು ಸಿಂಹದಂತೆ ಪ್ರಚಂಡಕೋಪದಿಂದ ಶಿವದ್ವೇಷಿಗಳ ಮೇಲೆರಗಿ ತನ್ನ ಕತ್ತಿಯಿಂದ ಅವರನ್ನು ಕತ್ತರಿಸಿಬಿಡುತ್ತಿದ್ದನು. ಒಂದು ದಿನ ಶಿವಾಲಯಗಳಲ್ಲಿ ಶಿವನನ್ನು ಸೇವಿಸುತ್ತಾ ಯಾವಾಗಲೂ ಮಹಾದೇವನಿಗೆ ಪುಷ್ಪಮಾಲೆಯನ್ನು ಅರ್ಪಿಸುತ್ತಿದ್ದ ಶಿವಕಾಮನೆಂಬುವನು ಹೂಗಳನ್ನು ಕುಯ್ಯುವುದರಲ್ಲಿ ನಿರತನಾಗಿದ್ದನು ॥೬-೭॥

ಅವನು ಬೆಳಗ್ಗೆ ಎದ್ದು ಸ್ನಾನಮಾಡಿ, ಮುಖಕ್ಕೆ (ಮಾತನಾಡುವಾಗ ಉಗುಳು ಬೀಳುವುದೆಂದು) ಬಟ್ಟೆಯನ್ನು ಕಟ್ಟಿಕೊಂಡು ಆನಂದದೊಡನೆ ಹೂಗಳನ್ನು ಕೊಯ್ದು ಇದು ಸರಿಯಾದ ಕಾಲವೆಂದು ಹೂಗಳನ್ನು ತೆಗೆದುಕೊಂಡು ಶಿವನಿಗೆ ಸಮರ್ಪಿಸಲು ದಾರಿಯಲ್ಲಿ ಬರುತ್ತಿದ್ದನು. ಅಂದು ಮಹಾನವಮಿಯಾದ್ದ

ಮಹಾನವನ್ಯೋತ್ಸವಾದೌ ಚೋಲೇಂದ್ರಜಯಕುಂಜರಃ ।
ಮದಧಾರಾಕರತ್ರುಟ್ಯದ್ಗಂಧಾಯಿತ ದಿಗಂತರಃ ॥೯॥

ನಿಮಜ್ಯ ನದ್ಯಾಮಾಯಾತಃ ಪ್ರಸಕ್ತ ಪಟಹಧ್ವನಿಃ ।
ಘಂಟಾಬೃಂಹಿತಫೂತ್ಕಾರಪುಷ್ಕರಾಸಾರಸೇಚನೈಃ ॥೧೦॥

ವಿಧೂತಾಧೋರಣಾಯಾಸೋ ವಿಚಚಾರ ಸುವೀಥಿಷು ।
ವೇಗಾದಗ್ರೇ ಪ್ರಯಾತಸ್ಯ ಶಿವಕಾಮಸ್ಯ ಸ ದ್ವಿಪಃ ॥೧೧॥

ಪುಷ್ಪಪೇಟಕಮಧ್ಯಸ್ಥಪುಷ್ಪಾಣ್ಯುರ್ವ್ಯಾಮವಾಕಿರತ್ ।
ಯತ್ನೇನ ನೀಯಮಾನೋಽಪಿ ಯಂತೃಮುಖ್ಯೈರ್ಭಯಾಕುಲೈಃ॥೧೨॥

ಕ್ರುದ್ಧೋರುವಿತತಾಂ ಶುಂಡಾಂ ಕೃತ್ವಾ ವೇತಂಡರಾಟ್ಸದಾ ।
ದಂತಾಭ್ಯಾಮುತ್ಕ್ಷಿಪನ್ಭೂಮಿಂ ಮದಾಂಬುಕೃತಪಂಕಿಲಾಂ ॥೧೩॥

---

ರಿಂದ ಆ ದಿವಸದ ಉತ್ಸವದ ಮೊದಲು ಚೋಲರಾಜನ ಜಯವೆಂಬ ಆನೆಯು ಮದೋದಕದಿಂದ ತುಂಬಿ ಹರಿಯುತ್ತಿರುವ ಗಂಡಸ್ಥಳದಿಂದ ದಿಕ್ಕುಗಳನ್ನೆಲ್ಲಾ ಸುಗುಣಭರಿತವನ್ನಾಗಿ ಮಾಡುತ್ತಾ, ನದಿಯಲ್ಲಿ ಮುಳುಗಿ ಬರುತ್ತಿರಲು, ಮೊದಲೇ ಮದಿಸಿದ ಅದಕ್ಕೆ ಉತ್ಸವಸಂಬಂಧದ ತಮಟೆಧ್ವನಿಗಳ ಶಬ್ದವು ಉದ್ರೇಕವನ್ನು ಉಂಟುಮಾಡಿದ್ದರಿಂದ ತನ್ನ ಕೊರಳಿನ ಘಂಟಾಧ್ವನಿಯಿಂದಲೂ, ಫೂತ್ಕಾರದಿಂದಲೂ ಚೀರುತ್ತಾ ತನ್ನ ಸೊಂಡಿಲಿನಿಂದ ನೀರನ್ನು ಎರಚುತ್ತಾ ಮಾವಟಿಗರ ಪ್ರಯತ್ನವನ್ನೆಲ್ಲಾ ವ್ಯರ್ಥಗೊಳಿಸಿ ಸ್ವಚ್ಛಂದವಾಗಿ ಬೀದಿಗಳಲ್ಲಿ ಸಂಚರಿಸತೊಡಗಿತು. ॥೮-೯-೧೦॥

ಇಂತಹ ಆನೆಗೆ ಹೆದರಿ ವೇಗವಾಗಿ ಮುಂದೆ ಓಡುತ್ತಿರುವ ಆ ಶಿವಕಾಮನ ಹೂವಿನ ಬುಟ್ಟಿಯಲ್ಲಿದ್ದ ಹೂವುಗಳೆಲ್ಲಾ ನೆಲದ ಮೇಲೆ ಬಿದ್ದುಹೋದುವು. ಮಾವಟಿಗರೂ ಭಯಗೊಂಡು ಬಹಳ ಪ್ರಯತ್ನದಿಂದ ಸ್ವಾಧೀನಪಡಿಸಿಕೊಳ್ಳಲು ಯತ್ನಿಸಿದರೂ ಆ ಆನೆಯು ಕೋಪಗೊಂಡು ಉದ್ದವೂ, ವಿಸ್ತಾರವೂ ಆದ ತನ್ನ ದೊಡ್ಡ ಸೊಂಡಿಲನ್ನು ನೆಲಕ್ಕೆ ಹೊಡೆಯುತ್ತಾ ತನ್ನ ದಂತಗಳಿಂದ ಭೂಮಿಯನ್ನು ಅಗೆದು ಮದೋದಕದಿಂದ ತುಂಬಿಸುತ್ತಾ ಹೋಗುತ್ತಿದ್ದಿತು. ॥೧೧-೧೨-೧೩॥

ತಂ ಯಾಂತಮುಕ್ಷಮಃ ಪ್ರಾಪ್ತೋ ಕ್ರುದ್ಧಃ ಪ್ರಸ್ಖಲಿತಃ ಪತನ್ ।
ಭುವಮಾಸ್ಫಾಲ್ಯ ಹಸ್ತಾಭ್ಯಾಂ ಕ್ರೋಶಂ ಶಿವಶಿವೇತಿ ಚ ॥೧೪॥

ಶಿವಶಂಕರ ಮಾಂ ಪಾಹಿ ಗಜರಾಜತ್ವಗಂಬರ ।
ಚಂದ್ರಗಂಗಾನದ್ಧಜಟಾಭೂಷಣ ಕುಸುಮೋಚ್ಚಯಂ ॥೧೫॥

ಅವಾಕಿರದಹೋ ನಾಗೋ ವೀರಭಕ್ತೋಗತಃ ಕ್ವನು ।
ತಚ್ಛ್ರುತ್ವಾ ವೀರಭಕ್ತೋಽಯಮಾಗತಃ ಪ್ರಜ್ವಲನ್ರುಷಾ ॥೧೬॥

ಪ್ರಥಮಂ ಶಿವಭಕ್ತಾನಾಂ ಪರಿಪಂಥಿಭಯಂಕರಂ ।
ತಂ ಶಿವದ್ರೋಹಿಣಂ ಹತ್ವಾ ಭೋಕ್ಷ್ಯಾಮೀತಿ ತದಾ ಜಗೌ ॥೧೭॥

ಮಾಭೈಷೀಃ ಶಿವಕಾಮೇತಿ ಗರ್ಜನ್ಪರ್ಜನ್ಯವದ್ಯಯೌ ।
ಪಶ್ಯನ್ವಿಕೀರ್ಣಪುಷ್ಪಾಣಿ ರಥ್ಯಾಂ ತೇನ ಪಥಾ ಯಯೌ ॥೧೮॥

---

ಹೀಗೆ ಮದಿಸಿ ಓಡಿಬರುತ್ತಿದ್ದ ಆನೆಯನ್ನು ಹಿಡಿದು ನಿಗ್ರಹಿಸಲು ಸಾಧ್ಯವಿಲ್ಲದಿರುವಾಗ, ಶಿವಕಾಮನು ಹೆದರಿ ಜಾರಿ ನೆಲದಮೇಲೆ ಬಿದ್ದು ನೆಲದಮೇಲೆ ಎರಡು ಕೈಗಳನ್ನೂ ಬಡಿಯುತ್ತಾ 'ಶಿವಶಿವ' ಎಂದು ಕೂಗುತ್ತಾ, 'ಶಿವ! ಶಂಕರ! ನನ್ನನ್ನು ಕಾಪಾಡು; ಗಜರಾಜನಚರ್ಮವನ್ನು ಧರಿಸಿರುವ ಸ್ವಾಮಿಯೇ! ಚಂದ್ರ ಮತ್ತು ಗಂಗೆಯರಿಂದ ಯುಕ್ತವಾಗಿರುವ ನಿನ್ನ ಜಡೆಗಳಿಗೆ ಅಲಂಕಾರವಾಗುವ ಈ ಹೂವಿನ ಸಮೂಹವನ್ನು ಈ ಆನೆಯು ಚೆಲ್ಲಾಡಿತಲ್ಲಾ! ಅಯ್ಯೋ ಮಹೇಶ! ನನ್ನನ್ನು ಕಾಪಾಡು. ॥೧೪-೧೫॥

ಇಂತಹ ಕಷ್ಟದ ಸಂದರ್ಭದಲ್ಲಿ ಆ ವೀರಭಕ್ತನೆಲ್ಲಿಹೋದನೋ ಕಾಣೆನಲ್ಲಾ! ಎಂದು ಕೂಗುತ್ತಿರಲು ಆ ಮಾತನ್ನು ಕೇಳಿ, ವೀರಭಕ್ತನು ಕೋಪದಿಂದುರಿಯುತ್ತಾ, ಶಿವಭಕ್ತಾಗ್ರೇಸರನೂ, ಎದುರಾಳಿಗೆ ಭಯವನ್ನುಂಟುಮಾಡುವ ಪರಾಕ್ರಮಿಯೂ ಆದ ಆತನು ಶಿವದ್ರೋಹಿಯನ್ನು ಮೊದಲು ಕೊಂದು ಅನಂತರ ಊಟಮಾಡುವೆನೆಂದು ಶಿವಕಾಮನಿದ್ದೆಡೆಗೆ ಬಂದನು. ಅವನಿಗೆ ಸಮಾಧಾನಹೇಳುತ್ತಾ, ಎಲೈ ಶಿವಕಾಮನೇ, ನೀನು ಹೆದರಬೇಡ, ನಾನಿದ್ದೇನೆಂದು ಮೇಘದಂತೆ ಗರ್ಜಿಸುತ್ತಾ ಹೊರಟು, ದಾರಿಯಲ್ಲಿ ಹೂವು ಚೆಲ್ಲಿರುವುದನ್ನು ನೋಡಿ, ಇಲ್ಲಿಯೇ ಮುಂದೆ ಶತ್ರುವಿರಬೇಕೆಂದೂಹಿಸಿ ಅದೇಮಾರ್ಗವಾಗಿ ಮುಂದುವರಿದನು. ॥೧೬-೧೭-೧೮॥

ದೃಷ್ಟ್ವಾ ನಾಗೇನ ನಿರ್ಭಿನ್ನಮಸ್ತಕಂ ಧಾವಮಾನಕಂ ।
ಶಿವಕಾಮಂ ತದಾಪ್ರಾಕ್ಷೀತ್ಪಾಹಿ ವೀರೇತಿವಾದಿನಂ ॥೧೯॥

ಸಾರ್ಚಿಷಂ ಪರಶುಂ ಬಿಭ್ರನ್ನನುದ್ರುತ್ಯ ತಮೈಕ್ಷತ ।
ಪುರಾಯಮೀಶಃ ಕೃತ್ತಿತ್ವಙ್ನಾಗರೂಪೋ ತರುಃ ಕಿಲ ॥೨೦॥

ಸುರೈರ್ನಿರುಧ್ಯಮಾನೋಽಪಿ ಖಂಡಶೋ ಹನ್ಮಿ ತಂ ಗಜಂ ।
ಇತಿ ಪಾದೇನ ತನ್ನಾಗಂ ಪರಭಾಗೇ ಜಘಾನ ಸಃ ॥೨೧॥

ಕ್ರೋಧೋದ್ಧೂತಾಧೋರಣಃ ಸನ್ನಿವೃತ್ತೋಽಭೂತ್ಸ ಚ ದ್ವಿಪಃ ।
ಹಸ್ತಲಗ್ನಂ ನರಂ ಚಾಪಿ ನಿರ್ಗತಂ ಸಃ ಕ್ರುಧಾಧಿಕಃ ॥೨೨॥

ಉತ್ಪ್ಲುತ್ಯ ವೀರೋ ಗತಭೀರ್ನಾಗಸ್ಯಾಭಿಸ್ಥಿತೋ ದೃಢಂ ।
ಛಿತ್ವಾ ಪರಶ್ವಧೇನಾಸ್ಯ ಹಸ್ತಮುಗ್ರೋ ನ್ಯಪಾತಯುತ್ ॥೨೩॥

---

ಆನೆಗೆ ಹೆದರಿ ನೆಲದ ಮೇಲೆ ಬಿದ್ದು ಮತ್ತೂ ಹೆದರಿ ಓಡುತ್ತಿದ್ದ ಆ ಶಿವಕಾಮನಿಗೆ ಸಮಾಧಾನ ಹೇಳಿ, ಹೊಳೆಯುತ್ತಿರುವ ಕೊಡಲಿಯನ್ನು ಹಿಡಿದು ವೇಗದಿಂದ ಮುಂದೆ ಹೋಗಿ, ದುಷ್ಟತನದಿಂದ ಮುಂದುವರಿಯುತ್ತಿರುವ ಆ ಆನೆಯನ್ನು ಕಂಡನು. ಆಗ ಈಶ್ವರನೇ ಗಜಚರ್ಮವನ್ನು ಧರಿಸಿ, ಸರ್ಪಾಭರಣನಾಗಿ ಬಂದಿದ್ದಂತೆ ಈ ವೀರಭಕ್ತನು ನೋಡುವವರಿಗೆ ತೋರುತ್ತಿದ್ದನು. ಅವನು ದೇವತೆಗಳು ಬಂದು ತಡೆದರೂ ಆ ಆನೆಯನ್ನು ಬಿಡದೇ ತುಂಡುತುಂಡಾಗಿ ಕತ್ತರಿಸಿಬಿಡುವೆನೆಂದು ಆರ್ಭಟಿಸುತ್ತಾ, ಹಿಂಭಾಗದಲ್ಲಿ ಆ ಆನೆಯ ಕಾಲಿಗೆ ಕೊಡಲಿಯಿಂದ ಬಲವಾಗಿ ಹೊಡೆದನು. ॥೧೯-೨೦-೨೧॥

ಆ ಏಟನ್ನು ತಾಳಲಾರದೇ ಆನೆಯು ಕ್ರೋಧದಿಂದ ಮಾವಟಿಗರನ್ನೆಲ್ಲಾ ತಿರಸ್ಕರಿಸುತ್ತಾ ಹಿಂತಿರುಗಿ, ತನ್ನ ಕುಂಭಸ್ಥಲದಲ್ಲಿ ಅಂಕುಶಗಳನ್ನು ಹಿಡಿದುಕೊಂಡಿದ್ದ ಮನುಷ್ಯನನ್ನೂ ಲೆಕ್ಕಿಸದೇ ಸೊಂಡಿಲಿನಿಂದ ತಿರುಗಿಸಿ ಎಸೆದು ಬಿಸಾಡಿತು. ಆಗ ವೀರಭಕ್ತನು ಸ್ವಲ್ಪವೂ ಭಯವಿಲ್ಲದೇ ಆ ಆನೆಯ ತಲೆಯ ಮೇಲೆ ಬಿಗಿಯಾಗಿ ಕುಳಿತು, ತನ್ನ ಕೈಲಿದ್ದ ಕೊಡಲಿಯಿಂದ ಆ ಆನೆಯ ಸೊಂಡಿಲನ್ನು ತುಂಡರಿಸಿ ಕೆಳಗೆ ಬೀಳಿಸಿದನು. ॥೨೨-೨೩॥

ವೇತಂಡಖಂಡಿತೋಚ್ಚಂಡಶುಂಡಾದಂಡೇ ಪತತ್ಯಸೌ ।
ಮೇರುಕೋದಂಡಹಸ್ತೋರ್ಧ್ವತಾಂಡವಂ ಹೃದಿ ಭಾವಯನ್ ॥೨೪॥

ತೌ ತತ್ಸ್ಕಂಧಗತೌ ಪಾರ್ಶ್ವಗತಾನ್ ತ್ರೀನ್ಸಾಯುಧಾನ್ವಧೀತ್ ।
ಯಂತೃಭಿಃ ಪಂಚಭಿಃಸಾರ್ಧಂ ಹತಃ ಸಾಮ್ರಾಜ್ಯಕುಂಜರಃ ॥೨೫॥

ರಾಜ್ಞೇ ನಿವೇದಯಂತ್ಯನ್ಯೇ ದ್ವಾಸ್ಥಾಯಂತೃಸಮೀರಿತಂ ।
ಶ್ರುತ್ವಾ ತೇಷಾಂ ವಚೋ ದ್ವಾಸ್ಥಾಃ ಪ್ರವಿಶ್ಯಾಂತರ್ಭಯಾಕುಲಾಃ ॥೨೬॥

ಬದ್ಧಾಂಜಲಿಪುಟಾ ರಾಜ್ಞೇ ಯಥಾವೃತ್ತಂ ನ್ಯವೇದಯನ್ ॥೨೭॥

॥ ರಾಜೋವಾಚ ॥

ರಾಜಾ ಜಿತಾರೇರಪಿ ಮೇ ಕಿಮುದ್ಯೈತದುಪಾಗತಂ ।
ಅಕಾರ್ಯನೀತಿಃ ಕೇನೇತಿ ಕೃತಾ ಪಾಲಾನ್ಸಮಾದಿಶತ್ ॥೨೮॥

ರಾಜ್ಞಾ ತೇನ ಸಮಾದಿಷ್ಟಾ ಸೇನಾ ತಂ ನೃಪಮನ್ವಗಾತ್ ।
ಚತುರಂಗಬಲೋಪೇತಾ ಧೃತನಾನಾವಿಧಾಯುಧಾಃ ॥೨೯॥

---

ದೊಡ್ಡಸೊಂಡಲು ತುಂಡಾಗಿ, ಈ ಆನೆಯು ನೆಲದಮೇಲೆ ಬೀಳಲು, ಮೇರು ಪರ್ವತವನ್ನೇ ಬಿಲ್ಲಾಗಿ ಹಿಡಿದ ಮಹೇಶ್ವರನ ತಾಂಡವನಾಟ್ಯವನ್ನು ಮನಸ್ಸಿನಲ್ಲಿ ನೆನೆಯುತ್ತಾ, ವೀರಭಕ್ತನು ಆ ಆನೆಯಮೇಲೆ ಕುಳಿತಿದ್ದ ಇಬ್ಬರು ಮಾವಟಿಗರನ್ನೂ ಪಕ್ಕದಲ್ಲಿ ಬರುತಿದ್ದ ಆಯುಧಪಾಣಿಗಳಾದ ಮೂವರನ್ನೂ ಕೊಂದನು. ಹೀಗೆ ಐದುಮಂದಿ ಮಾವಟಿಗರೊಡನೆ ಚೋಲರಾಜನ ವಿಜಯದಾನೆಯು ಮೃತವಾಯಿತು. ॥೨೪-೨೫॥

ಉಳಿದ ಕೆಲವರು ಮಾವಟಿಗರು ಓಡಿಹೋಗಿ ಈ ವಿಷಯವನ್ನು ರಾಜನಿಗೆ ತಿಳಿಸಲು ಬಾಗಿಲಕಾಯುವವರಿಗೆ ಹೇಳಿದರು. ಅವರು ಹೆದರಿಕಾತುರರಾಗಿ ಕೈ ಮುಗಿದುಕೊಂಡು ನಡೆದ ವೃತ್ತಾಂತವನ್ನೆಲ್ಲಾ ಸರಿಯಾಗಿ ರಾಜನಿಗೆ ಅರಿಕೆಮಾಡಿದರು. ॥೨೬-೨೭॥

ಆಗ ರಾಜನು ಶತ್ರುಗಳನ್ನೆಲ್ಲಾ ಗೆದ್ದಿರುವ ನನಗೆ ಇದೇನು ವಿಪತ್ತು ಸಂಭವಿಸಿತು! ಯಾರಿಂದ ಈ ಅಕಾರ್ಯವು ಮಾಡಲ್ಪಟ್ಟಿತು? ಎಂದು ಯೋಚಿಸಿ, ಇರಲಿ, ನೋಡೋಣ; ಎಂದು ಸೈನಿಕರಿಗೆ ಸಿದ್ಧವಾಗಿರುವುದು ಎಂದು ಅಪ್ಪಣೆಮಾಡಿದನು.

ಗಂಭೀರಭೇರೀ ನಿಸ್ವಾನೈಃ ಶಂಖಕಾಹಲನಿಸ್ವನೈಃ ।
ಹೇಷಿತೈರ್ಹಯಮುಖ್ಯಾನಾಂ ಗಜಾನಾಂ ಬೃಂಹಿತೈರಪಿ ॥೩೦॥

ಭಟಾನಾಂ ಸಿಂಹನಾದೈಶ್ಚ ರಥನೇಮಿಸ್ವನೈರಪಿ ।
ಅಧಃ ಕೃತಾಬ್ಧಿರವಯೋ ಸೇನಯಾನುಗತಸ್ತಥಾ ॥೩೧॥

ತ್ವಂ ತತ್ತುರಂಗಮಾರೂಢೋ ಜವೇನ ಪವನೋಪಮಂ ।
ವೀಥೀಮವಾಪ ಸಂಭ್ರಾಂತೋ ನೃಪೋ ಘೋರೈರ್ನಿರಂತರಂ ॥೩೨॥

ನೃಪೋ ಮತ್ತದ್ವಿಪಂ ತತ್ರ ದದರ್ಶ ನಿಹತಂ ಭುವಿ ।
ಯಂತ್ರಭಿಃ ಪಂಚಭಿಃ ಸಾರ್ಧಂ ಪಾದೈಃ ಸ್ವೈರಿವ ಪರ್ವತಂ ॥೩೩॥

ನ ಕಶ್ಚಿದನ್ಯದ್ವಿಶತೋ ನೃಪೋ ಭಕ್ತಮವೈಕ್ಷತ ।
ಪರಶ್ವಧಧರಂ ವೀರಂ ಶ್ವಸಂತಮಿವ ಪನ್ನಗಂ ॥೩೪॥

---

ರಾಜಾಜ್ಞೆಪಡೆದು ಆ ಸೇನೆಯು ಬಗೆಬಗೆಯ ದಿವ್ಯಾಯುಧಗಳನ್ನು ಧರಿಸಿ ರಾಜನನ್ನು ಹಿಂಬಾಲಿಸಿತು. ॥೨೮-೨೯॥

ಗಂಭೀರವಾದ ನಗಾರಿ, ಕಹಳೆ, ಶಂಖ, ತಮಟೆಗಳ ಧ್ವನಿಯಿಂದಲೂ, ಶ್ರೇಷ್ಠವಾದ ಕುದುರೆಗಳ ಕೆನೆಯುವಿಕೆಯಿಂದಲೂ, ಆನೆಗಳ ಗರ್ಜನೆಯಿಂದಲೂ, ಯೋಧರ ಸಿಂಹನಾದಗಳಿಂದಲೂ, ರಥಚಕ್ರಗಳ ಧ್ವನಿಗಳಿಂದಲೂ, ಆ ಸೇನೆಯ ಕೋಲಾಹಲವು ಸಮುದ್ರದ ಧ್ವನಿಯನ್ನೂ ತಿರಸ್ಕರಿಸುತ್ತಿದ್ದಿತು. ಇಂತಹ ಪ್ರಚಂಡ ಸೇನೆಯೊಡನೆ ಹಿಂಬಾಲಿಸಲ್ಪಟ್ಟು ವೇಗವಾದ ಕುದುರೆಯನ್ನೇರಿ, ವಾಯುವೇಗದಿಂದ ರಾಜನು ಭಯಪಟ್ಟಿರುವ ಜನಗಳಿಂದ ತಾನೂ ಭ್ರಾಂತನಾದಂತೆ ಆ ಬೀದಿಗೆ ಬಂದನು. ॥೩೦-೩೧-೩೨॥

ಅಲ್ಲಿ ಸಮೀಪದ ತನ್ನ ಗುಡ್ಡಗಳೊಡನೆ ಬಿದ್ದಿರುವ ಪರ್ವತದಂತೆ, ಐದು ಮಂದಿ ಮಾವಟಿಗರೊಡನೆ ನೆಲದ ಮೇಲೆ ಸತ್ತುಬಿದ್ದಿರುವ ಆ ಮದಗಜವನ್ನು ರಾಜನು ಕಂಡನು. ಹಾಗೆಯೇ ಸುತ್ತಮುತ್ತ ಇದನ್ನು ಕೊಂದವನಾರೆಂದು ಹುಡುಕುತ್ತಿರಲು, ಆ ವೀರಭಕ್ತನೊಬ್ಬನನ್ನು ಬಿಟ್ಟು ಮತ್ತಾರೂ ಇವನಿಗೆ ಕಾಣಲಿಲ್ಲ. ಈ ವೀರಭಕ್ತನು ಕೊಡಲಿಯನ್ನು ಹಿಡಿದು ಉಸಿರುಬಿಡುತ್ತಿರುವ ಸರ್ಪದಂತೆ ನಿಂತಿದ್ದನು. ಅವನನ್ನು ಕಂಡು ರಾಜನು ಈ ಭಕ್ತನು ಪ್ರಾಯಶಃ ಕೊಂದಿರಲಾರನು. ಹಾಗಿದ್ದರೆ

ಅಯಂ ಭಕ್ತೋ ನ ಹಂತಾ ಸ್ಯಾತ್ಕೇನಾಯಂ ನಿಹತೋ ಗಜಃ ।
ಇತಿ ಪೃಷ್ಟಾ ನೃಪೇಣಾಹುರ್ಹತಶೇಷಾ ನಿಷಾದಿನಃ ॥೩೫॥

॥ ಯಂತಾರ ಊಚುಃ ॥

ವೀರೇಷು ಕಃ ಪುರಃ ಸ್ಥಾತುಂ ಸಮರ್ಥಸ್ತವ ದಂತಿನಃ ।
ಕ್ರುದ್ಧೇನಾನೇನ ಭಕ್ತೇನ ನಾಗಃ ಪರಶುನಾ ಹತಃ ॥೩೬॥

ತಚ್ಛ್ರುತ್ವಾ ಧೂರ್ಜಟೇರ್ಭಕ್ತಾ ನ ಹಿ ನಿಘ್ನಂತ್ಯನಾಗಸಂ ।
ಇತಿ ಸೇನಾಂ ನಿವಾರ್ಯೈನಾಂ ಸ ತುರಂಗಾದವಾತರತ್ ॥೩೭॥

ಮತ್ತೇನಾನೇನ ಭಕ್ತೇನ ಮತ್ತೇಭೋ ನಿಹತೋ ಮಮ ।
ತಂ ಪೃಚ್ಛಾಮಿ ಸಮಾಗಮ್ಯ ಇತಿ ಚಿಂತಾಕುಲೋ ನೃಪಃ ॥೩೮॥

ಭಕ್ತೇಷು ಕಿಂ ಕರಿಷ್ಯಾಮಿ ಶಂಕರೇ ಕಿಂಕರಾ ಯುಧಿ ।
ನ ಚೇತ್ತತ್ರ ಯಥಾವೃತ್ತಂ ಶ್ರುತಂ ತತ್ತತ್ರ ತಿಷ್ಠತು ॥೩೯॥

---

ಮತ್ತಾರಿಂದ ಈ ಆನೆಯು ಕೊಲ್ಲಲ್ಪಟ್ಟಿತೆಂದು, ಪಕ್ಕದಲ್ಲಿದ್ದವರನ್ನು ಕೇಳಲು, ಅಲ್ಲಿಯೇ ಇದ್ದ, ಅಳಿದುಳಿದ ಮಾವಟಿಗರು ದುಃಖಿತರಾಗಿ ರಾಜನಿಗೆ ಇಂತೆಂದರು. ||೩೩-೩೪-೩೫||

ರಾಜೇಂದ್ರನೇ, ನಿನ್ನ ಈ ಆನೆಯ ಮುಂದೆ ಯಾವ ವೀರನು ತಾನೇ ನಿಲ್ಲಲು ಶಕ್ತನಾದಾನು? ಕೋಪಗೊಂಡ ಈ ವೀರಭಕ್ತನಿಂದಲೇ ಆನೆಯು ಕೊಡಲಿಯಿಂದ ಕಡಿಯಲ್ಪಟ್ಟಿತು ಎಂದು ಹೇಳಲು, ಆ ಮಾತನ್ನು ಕೇಳಿ, ಶಿವಭಕ್ತರು ನಿರಪರಾಧಿಯನ್ನೆಂದೂ ಕೊಲ್ಲುವುದಿಲ್ಲವಾದ್ದರಿಂದ ವಿಚಾರಿಸೋಣವೆಂದು ತನ್ನ ಸೈನ್ಯವನ್ನೆಲ್ಲಾ ತಡೆದು ತಾನು ಕುದುರೆಯಿಂದಿಳಿದನು. ||೩೬-೩೭||

ಕೋಪಗೊಂಡ ಈ ವೀರಭಕ್ತನಿಂದ ನನ್ನ ಮದಗಜವು ಸಂಹರಿಸಲ್ಪಟ್ಟಿದೆ. ಇದಕ್ಕೆ ಕಾರಣವನ್ನು ಅವನಿಂದಲೇ ವಿಚಾರಿಸುವೆನೆಂದು ರಾಜನು ಮುಂದುವರಿದು ಹೇಗೆಂದನು. ಓ ಸೇವಕರಿರಾ, ಈ ಶಿವಭಕ್ತನನ್ನು ಏನು ತಾನೇ ನಾನು ಮಾಡಬಲ್ಲೆನು? ಒಂದುವೇಳೆ ನೀವು ಹೇಳಿದಂತೆಯೇ ನಡೆದಿದ್ದರೆ ಆ ವಿಷಯವು ಹಾಗೆಯೇ ನಡೆದುಹೋಗಲಿ ಎಂದು ಯೋಚಿಸಿ ವೀರಭಕ್ತನಿದ್ದೆಡೆಗೆ ಧಾವಿಸಿ ಬಂದನು. ||೩೮-೩೯||

॥ ಶ್ರೀ ಸ್ಕಂದ ಉವಾಚ ॥

ಪ್ರಣಮ್ಯ ತಂ ವೀರಭಕ್ತಂ ಶಿವಕಾಮುಂ ಶುಚಾಕುಲಂ ।
ಸ್ವಮೂರ್ಧಭೇದಾದಧಿಕಂ ಪುಷ್ಪನಾಶಶುಚಾಕುಲಂ ॥೪೦॥

ಉವಾಚ ಪ್ರಾಂಜಲಿರ್ಭಕ್ತಂ ಚೋಲೇಂದ್ರೋ ಇಂದ್ರಸನ್ನಿಭಃ॥೪೧॥

॥ ರಾಜೋವಾಚ ॥

ಯಂತೃಭಿಃ ಸಹ ನಾಗೇನ ಕೋಽಪರಾಧಃ ಕೃತೋಽಮುನಾ ।
ಕರುಣಾಂ ಕುರು ಭಕ್ತೇತಿ ಸ ಭಕ್ತಸ್ತಮುವಾಚ ಹ ॥೪೨॥

॥ ವೀರಭಕ್ತ ಉವಾಚ ॥

ಶಿವಕಾಮುಃ ಶಿವಾರ್ಹಾಣಿ ಪುಷ್ಪಾಣ್ಯಾಹೃತ್ಯ ಚಾಗತಃ ।
ತಾನ್ಯಾಚ್ಛಿದ್ಯಾಕಿರದ್ದಂತೀ ದಂತೈರ್ಮೂರ್ಧನ್ಯಯಂ ಹತಃ ॥೪೩॥

ಅವಾರಯಂತೋ ಯಂತಾರ ಏವಮಾಗಸ್ಕೃತಂ ಗಜಂ ।
ಇಮೇ ಹತಾ ಇತಿ ಪ್ರೋಕ್ತೇತ್ರಸ್ತಃ ಪ್ರಹ್ವೋಽಬ್ರವೀನ್ನೃಪಃ ॥೪೪॥

---

ತನ್ನ ತಲೆ ಒಡೆದುದಕ್ಕಿಂತಲೂ, ಹೂವು ನಾಶವಾದದ್ದಕ್ಕೆ ಹೆಚ್ಚು ದುಃಖಿಸುತ್ತಿರುವ ಶಿವಕಾಮುನನ್ನೂ, ಅವನನ್ನು ಸಂತೈಸುತ್ತಿದ್ದ ವೀರಭಕ್ತನನ್ನೂ ರಾಜನು ಕಂಡು ನಮಸ್ಕಾರ ಮಾಡಿ, ದೇವೇಂದ್ರಸಮಾನನಾದ ಆ ಚೋಲರಾಜನು ಕೈಮುಗಿದು ಭಕ್ತನನ್ನು ಕುರಿತು, ॥೪೦-೪೧॥

ಭಕ್ತಶ್ರೇಷ್ಠರೇ, ಮಾವಟಿಗರೊಡನೆ ಈ ಆನೆಯಿಂದ ಯಾವ ತಪ್ಪು ಮಾಡಲ್ಪಟ್ಟಿತು? ಸ್ವಾಮಿ, ದಯವಿಟ್ಟು ನನಗೆ ಆ ವಿಷಯವನ್ನು ತಿಳಿಸಿ ಅನುಗ್ರಹಿಸಬೇಕೆಂದು ಚೋಲರಾಜನು ಕೇಳಲು ಆ ವೀರಭಕ್ತನು ರಾಜನಿಗಿಂತೆಂದನು. ॥೪೨॥

ಅಯ್ಯ ರಾಜನೇ, ಶಿವಪೂಜಾಯೋಗ್ಯವಾದ ಹೂಗಳನ್ನು ಈ ಶಿವಕಾಮುನು ತರುತ್ತಿದ್ದನು. ಈ ಆನೆಯು ಆ ಹೂಗಳನ್ನೆಲ್ಲಾ ಅಹಂಕಾರದಿಂದ ಚೆಲ್ಲಾಪಿಲ್ಲಿಯಾಗಿ ಎರಚಿ, ತನ್ನ ದಂತಗಳಿಂದ ಇವನ ತಲೆಯನ್ನು ಒಡೆಯಿತು. ಹೀಗೆ ಆನೆಯು ತಪ್ಪುಮಾಡಿದರೂ ತಡೆಯದೇ ಇರುವ ಈ ಮಾವಟಿಗರನ್ನೂ, ಆನೆಯನ್ನೂ ನಾನು ಕೊಂದೆನೆಂದು ಹೇಳಲ್ಪಟ್ಟ ರಾಜನು ಭಯಗೊಂಡು, ವಿನಯದಿಂದ ವೀರಭಕ್ತನಿಗೆ ಇಂತೆಂದನು. ॥೪೩-೪೪॥

॥ ನೃಪ ಉವಾಚ ॥

**ವೇತಂಡಃ ಖಂಡಿತೋ ವೋಽದ್ಯ ಹತಃ ಸ್ವೇನೈವ ಚಾಗಸಾ ।**
**ಪರಶ್ವಧೇನ ಭದ್ರೇಣ ಮಾಂ ನಿಹಂತುಂ ನ ಯುಜ್ಯತೇ ॥೪೫॥**

**ಮದೀಯೇನೈವ ಖಡ್ಗೇನ ಜಹಿ ಮಾಮಪರಾಧಿನಂ ।**
**ಇತಿ ಕೋಶಾತ್ಕೃಪಾಣಂ ಸ್ವಮಾಕೃಷ್ಯಾಸ್ಯ ದದೌ ಕರೇ ॥೪೬॥**

॥ ರಾಜೋವಾಚ ॥

**ಅಸ್ಯ ಭಕ್ತಿರಹೋ ಭಕ್ತೇ ವ್ಯತಿರಿಕ್ತೇತಿ ಚಿಂತಯನ್ ।**
**ಸದ್ಯೋ ಜಿಘಾಂಸುರಾತ್ಮಾನಂ ವೀರಭಕ್ತೋಽಸಿಮಾದದೇ ॥೪೭॥**

**ಗೃಹೀತಾಸೇಃ ಪುರಸ್ತಸ್ಯ ಸ್ಥಿತ್ವಾ ನತ್ವಾ ಚ ತತ್ಪದೇ ॥೪೮॥**

**ಖಡ್ಗೇನಾನೇನ ಹತ್ವಾ ಮಾಂ ಜಹಿ ಮಾಮಪರಾಧಿನಂ ।**
**ಮಯಾ ಕೃತಂ ತ್ವಯಾ ನಾಗಂ ಕೃತಮಾಗೋ ನಿವಾರಣಂ ॥೪೯॥**

**ಅಯಮಾಶ್ಚರ್ಯಕೃನ್ಮೇಽದ್ಯ ಭಕ್ತೋಽಪ್ಯಂತರ್ಭಿಯಂ ದಧತ್ ।**
**ಹತೇ ನಿಯಂತೃಭಿರ್ನಾಗೋ ಮಾಂ ಜಹ್ಯಾಗೋ ಮಹತ್ಕೃತಂ॥೫೦॥**

---

ವೀರಭಕ್ತನೇ, ಈ ನನ್ನ ಆನೆಯು ತನ್ನ ತಪ್ಪಿನಿಂದಲೇ ತಾನು ಹತವಾಯಿತು. ಆ ಆನೆಯನ್ನು ಕೊಂದ ಮಂಗಳಕರವಾದ ಗಂಡುಕೊಡಲಿಯಿಂದ ನನ್ನ ಕೊಲೆಮಾಡುವುದು ಯುಕ್ತವಲ್ಲ. ಅಪರಾಧಿಯಾದ ನನ್ನನ್ನು ಈ ನನ್ನ ಕತ್ತಿಯಿಂದಲೇ ಕೊಂದುಬಿಡೆಂದು ತನ್ನ ಒರೆಯಿಂದ ಕತ್ತಿಯನ್ನು ತೆಗೆದು ಆ ವೀರಭಕ್ತನ ಕೈಯಲ್ಲಿ ಕೊಟ್ಟನು. ಆಗ ಆ ವೀರಭಕ್ತನು, ಆಶ್ಚರ್ಯವು! ಈ ರಾಜನ ಭಕ್ತಿಯು ಶಿವಭಕ್ತನಾದ ನನ್ನಲ್ಲಿ ವಿರುದ್ಧವಾಗಿ ತೋರುತ್ತಿರುವುದೆಂದು ಯೋಚಿಸುತ್ತಾ, ಕೂಡಲೇ ತನ್ನನ್ನೇ ತಾನು ಕೊಲ್ಲಲಿಚ್ಛೆಯುಳ್ಳವನಾಗಿ ಆ ಕತ್ತಿಯನ್ನು ತೆಗೆದುಕೊಂಡನು. ॥೪೫॥೪೬॥

ಅಯ್ಯಾ ಭಕ್ತನೇ, ಇಷ್ಟಕ್ಕೆಲ್ಲಾ ಕಾರಣನಾದ ಅಪರಾಧಿಯಾದ ನನ್ನನ್ನು ಈ ಕತ್ತಿಯಿಂದ ಕೊಲ್ಲು, ನೀನು ಆ ಆನೆಯ ಅಪರಾಧವನ್ನು ನಿವಾರಿಸಿದವನು. ಇದು ನನ್ನ ಆಣೆ. ಅಲ್ಲದೇ ಶಿವಭಕ್ತರಿಗೂ ಮನಸ್ಸಿಗೆ ಭಯವನ್ನುಂಟುಮಾಡಿದ

ಇತಿ ಬ್ರುವನ್ನಯಂ ರಾಜಾ ಕಥಂ ವಧ್ಯೋಽಸಿ ನಾಮುನಾ ।
ನಿರುದ್ಧಹಸ್ತೇ ಭಕ್ತೇಽಪಿ ರಾಜ್ಞಿ ಸಾಹಸತತ್ಪರೇ ॥೫೧॥

ತದಾ ಶಿವಾಜ್ಞಯಾ ವ್ಯೋಮ್ನಿ ಪ್ರಾಹ ವಾಗಶರೀರಿಣೀ ॥೫೨॥

॥ ವಾಣ್ಯುವಾಚ ॥

ಭಕ್ತಿಂ ದರ್ಶಯಿತುಂ ಭೂಮೌ ಪುಷ್ಪಾಣಿ ವ್ಯಕಿರದ್ಗಜಃ ।
ಕೃತ್ಯಂ ಚೈತತ್ಕಲಾನಾಥರೇಖಾಮೌಲಿದಯಾಕೃತಂ ॥೫೩॥

ಇತಿ ತಾವತ್ಸಮುತ್ತಸ್ಥೌ ಯಂತೃಭಿಃ ಸಹ ಕುಂಜರಃ ।
ಖಡ್ಗಮುಕ್ತೇ ಸಮುದ್ಭಕ್ತೇ ಭೂಪೋ ಭಕ್ತಂ ತಮಾನಮತ್ ॥೫೪॥

ಪುಷ್ಪಾಣಿ ವವೃಷುರ್ದೇವಾ ಭೂಯೋ ಮೂರ್ಧನಿ ಭಕ್ತಯೋಃ ।
ಭಕ್ತಚೋಲೇಂದ್ರಯೋರ್ದಿವ್ಯಾಂ ವಾಚಂ ಶೃಣ್ವಂತು ಮಾನಿನಃ ॥೫೫॥

---

ಅಪಾರವಾದ ಅಪರಾಧವು ಬೇರೆ ನನ್ನಲ್ಲಿರುವುದು. ಮಾವಟಿಗರೊಡನೆ ಆನೆಯನ್ನು ಕೊಂದಮೇಲೆ ಮಹಾಪರಾಧಿಯಾಗಿರುವ ನನ್ನನ್ನು ಈಗ ಸಂಹರಿಸು; ಎಂದು ಹೇಳುತ್ತಿರುವ ರಾಜನನ್ನು ಕುರಿತು, ಅಯ್ಯ ರಾಜನೇ, ಇದಕ್ಕೋಸ್ಕರ ನೀನು ಹೇಗೆ ವಧಾರ್ಹನಾಗುತ್ತಿ! ಎಂದು ವೀರಭಕ್ತನು ತಡೆಯುತ್ತಿರಲು ರಾಜನು ಸಾಹಸದಿಂದ ನನ್ನ ಕೊಲೆಯು ಈ ತಪ್ಪಿಗೆ ಅವಶ್ಯವಾಗಿ ಆಗಿಯೇ ತೀರಬೇಕೆಂದು ಬಲಾತ್ಕಾರಮಾಡುತ್ತಿರುವ ಆ ಸಂದರ್ಭದಲ್ಲಿ ಶಿವನ ಅಪ್ಪಣೆಯಿಂದ ಅಶರೀರವಾಣಿಯಾಯಿತು. ॥೪೮-೪೯-೫೦-೫೧-೫೨॥

ಎಲೈ ಭಕ್ತರಿರಾ, ಭಕ್ತಿಯನ್ನು ತೋರಿಸುವುದಕ್ಕೋಸ್ಕರವೇ ನೆಲದ ಮೇಲೆ ಆನೆಯು ಆ ಹೂವನ್ನು ಹರಡಿತು. ಈ ಕೆಲಸವೆಲ್ಲವೂ ಚಂದ್ರಮೌಳಿಯಾದ ಶಿವನ ದಯೆಯಿಂದ ನಡೆದದ್ದು, ಎಂದು ಅಶರೀರವಾಣಿಯಾಗಲು ಆ ಕೂಡಲೆ ಮಾವಟಿಗರೊಡನೆ ಆ ಜಯಕುಂಜರವು ಮೇಲೆದ್ದುನಿಂತಿತು. ವೀರಭಕ್ತನು ಕತ್ತಿಯನ್ನು ಕೆಳಗಿರಿಸಿ ರಾಜನಿಗೆ ನಮಸ್ಕರಿಸಲು ರಾಜನೂ ಪ್ರತಿಯಾಗಿ ಆ ವೀರಭಕ್ತನಿಗೆ ಪ್ರಣಾಮಮಾಡಿದನು. ಆ ಸಮಯದಲ್ಲಿ ದೇವತೆಗಳು ಆ ಭಕ್ತರೀರ್ವರ ತಲೆಯ ಮೇಲೂ ಹೂಮಳೆಗರೆದರು. ॥೫೩-೫೪॥

ಎಲೈ ಅಭಿಮಾನಿಗಳಿರಾ, ಈ ವೀರಭಕ್ತ ಮತ್ತು ಚೋಲರಾಜನ ದಿವ್ಯವಾದ ಮಾತನ್ನು ಕೇಳಿರಿ; ಆ ಶಿವಕಾಮನೂ ಸಹ ಬುಟ್ಟಿಯ ತುಂಬಾ ಹೂ ಪಡೆದು

ಹೃಷ್ಟೋಽಭೂಚ್ಛಿವಕಾಮೋಽಪಿ ಪುಷ್ಪಸಂಪೂರ್ಣಪೇಟಿಕಃ ।
ತತಃ ಸುಪ್ತೋತ್ಥಿತಮಿವ ಕ್ವಣದ್ಘಂಟಾಕೃತಾರವಂ ॥೫೬॥

ಜಯದ್ವಿಪಂ ಪುರಸ್ಕೃತ್ಯ ಪ್ರಾಪುರಾಧೋರಣಾಂ ನೃಪಂ ॥೫೭॥

॥ ಆಧೋರಣ ಉವಾಚ ॥

ಇಮಮಾರುಹ ರಾಜೇಂದ್ರ ಗಜೇಂದ್ರಂ ಗಿರಿಸಂನಿಭಂ ।
ಸುಕುಥಾಸ್ತರಣಾಸ್ತೀರ್ಣಂ ಮನ್ಮಥಾರಾತಿಪೂಜಕ ॥೫೮॥

ಕಕ್ಷ್ಯಾ ವಿಸ್ತೀರ್ಣಕಕ್ಷ್ಯಂ ತೇ ಸಾಕ್ಷಾತ್ ತ್ರ್ಯಕ್ಷಪ್ರಸಾದಜಂ ।
ಇತ್ಯುಕ್ತೋ ವೀರಭಕ್ತೇನ ಸಂಪ್ರೀತೇನಾರುರೋಹ ಸಃ ॥೫೯॥

ಭಕ್ತೇನಾತಿಗಭೀರೇಣ ಪೌರುಷೇಣ ಕೃತಂ ಬಹು ।
ವೈಭವಂ ಚ ಸ ಸೃಷ್ಟ್ವಾಸೌ ಸ್ವಪಥಾರ್ಥಂ ಮಹೀಪತೇಃ ॥೬೦॥

---

ಸಂತುಷ್ಟನಾದನು. ಆಗ ಮಲಗಿ ಎದ್ದಂತೆ ಆ ಆನೆಯು ಘಂಟೆಯ ಧ್ವನಿಮಾಡುತ್ತಾ ಮೆಲ್ಲಗೆ ಮೇಲೇಳಲು ಆ ಮಾವಟಿಗರೂ ಜಯಹಸ್ತಿಯನ್ನು ಮುಂದುಮಾಡಿಕೊಂಡು ರಾಜನ ಬಳಿಗೆ ಹೊರಟರು. ॥೫೫-೫೬-೫೭॥

ಅಯ್ಯಾ ಶಿವಪೂಜಕನಾದ ರಾಜೇಂದ್ರನೇ, ಉತ್ತಮವಾದ ಮೃದುಪೀಠದಿಂದಲಂಕೃತವಾಗಿ ಮೇರುಪರ್ವತದಂತೆ ಉನ್ನತವಾಗಿರುವ ಈ ವಿಜಯದಂತಿಯನ್ನೇರುವವನಾಗು. ಆ ಸಾಕ್ಷಾನ್ಮಹೇಶ್ವರನ ಅನುಗ್ರಹದಿಂದುಂಟಾಗಿರುವ ಸ್ಥಾನವು ನಿನಗೆ ವಿಸ್ತಾರವಾಗಿ ಇದರಲ್ಲಿ ರಚಿತವಾಗಿದೆಯೆಂದು ಮಾವಟಿಗನಿಂದ ಹೇಳಲ್ಪಟ್ಟ ಚೋಲರಾಜನು ಸಂತುಷ್ಟಾಂತರಂಗನಾದ ವೀರಭಕ್ತನೊಡನೆ ಆ ಆನೆಯನ್ನೇರಿ ಕುಳಿತುಕೊಂಡನು. ॥೫೮-೫೯॥

ಅಯ್ಯಾ ಜೈಗೀಷವ್ಯನೇ, ಹೀಗೆ ಗಂಭೀರಸ್ವಭಾವವುಳ್ಳ ಶಿವಭಕ್ತನು ಕೇವಲ ಪರಾಕ್ರಮದಿಂದಲೇ ಅಷ್ಟು ಕೆಲಸಮಾಡಿದನು. ದಿವ್ಯವೈಭವಗಳೂ ಅವನಿಂದ ನಡೆಸಲ್ಪಟ್ಟವು. ಅಲ್ಲದೇ ಈ ಭಕ್ತನು ತನ್ನಿಂದಲೇ ರಾಜಪಥೆ ನಡೆಯುದಂತೆ ಏನೇನೋ ವೈಚಿತ್ರ್ಯವೆಸಗಿದನು! ಅಯ್ಯಾ ಮುನಿಶ್ರೇಷ್ಠನೇ, ಈ ಭೂಮಂಡಲದಲ್ಲಿ ಶಿವಭಕ್ತನ ಮಹಿಮೆಯನ್ನು ಯಾರುತಾನೇ ತಿಳಿಯಬಲ್ಲರು? ಅಂತರಂಗದಲ್ಲಿ ಶಿವನನ್ನು

ಭಕ್ತಮಾಹಾತ್ಮ್ಯಮೇತಸ್ಯ ಕೋ ವಾ ವೇತ್ತಿ ಮಹೀತಲೇ ।
ಅಂತರೇಣ ಶಿವಂ ನಿತ್ಯಂ ಸ್ವಭಕ್ತಾಭೀಷ್ಟದಾಯಿನಂ ॥೬೧॥

ಸ ವೀರಭಕ್ತಃ ಶಿವಕಾಮಭಕ್ತೇ
ರ್ಜ್ಞಾತುಂ ನ ಶಕ್ಯಃ ಶಿವಭಕ್ತಿಭೂಮ್ನಃ ।
ಇತಿ ಬ್ರುವಂಸ್ತಂ ನೃಪತಿಂ ಪ್ರಶಂಸ
ನ್ಭೂತೇಶಕೈಂಕರ್ಯಪರೋ ಬಭೂವ ॥೬೨॥

ಇತಿ ತೌ ಶಿವಕಾಮವೀರಭಕ್ತೌ
ಶಿವಭಕ್ತಾರ್ತಿಹರೌ ಚಿರಂ ವಿಹೃತ್ಯ ।
ರಜತಾಚಲಸೀಮ್ನಿ ಧಾಮ್ನಿ ಶಂಭೋ
ರ್ಗಣನಾಥಪ್ರಥಮಾವಿಮಾವಭೂತಾಂ ॥೬೩॥

ಚಮೂಭಟೇಷ್ವಬ್ಧಿಸಮಾರವೇಷು
ಪ್ರವೃತ್ತವಂದಿಪ್ರವರಸ್ತವೇಷು ।

---

ನಿತ್ಯವೂ ಧ್ಯಾನಿಸುವ ತನ್ನ ಭಕ್ತರಿಗೆ ಸಕಲ ಇಷ್ಟಾರ್ಥಗಳನ್ನು ಕೊಡುವ ಆ ಮಹಾನುಭಾವನ ಮಹಿಮೆಯು ಅಪಾರವಾದುದು. ||೬೦-೬೧||

ಆ ವೀರಭಕ್ತನು, ಅಯ್ಯ ರಾಜನೇ, ಆ ಶಿವಕಾಮಭಕ್ತನಲ್ಲಿರುವ ಶಿವಭಕ್ತಿಯನ್ನು ಸಂಪೂರ್ಣವಾಗಿ ತಿಳಿಯಲು ಸಾಧ್ಯವೇ ಇಲ್ಲವೆಂದು ರಾಜನಿಗೆ ಹೇಳುತ್ತಾ ಅವನನ್ನು ಹೊಗಳುವವನಾಗಿ ಆ ಭೂತಗಳಿಗೊಡೆಯನಾದ ಮಹಾದೇವನ ಸೇವೆ ಮಾಡುವುದರಲ್ಲಿ ಆಸಕ್ತನಾದನು. ||೬೨||

ಹೀಗೆ ಶಿವಕಾಮ ಮತ್ತು ವೀರಭಕ್ತರಿಬ್ಬರೂ ಬಹಳಕಾಲ ಶಿವಭಕ್ತರ ಪೀಡೆಯನ್ನು ಹೋಗಲಾಡಿಸುತ್ತಾ ವಿಹರಿಸಿಕೊಂಡಿದ್ದು, ಕೊನೆಗೆ ರಜತಾಚಲದ ಎಲ್ಲೆಯಲ್ಲಿರುವ ಕೈಲಾಸದಲ್ಲಿ ಆ ಶಂಭುವಿನ ಮೊದಲಿನ ಎರಡು ಗಣಗಳ ಅಧಿಪತಿಗಳೆನಿಸಿದರು. (ಅಂದರೆ ಇಬ್ಬರೂ ಗಣಾಧಿಪತಿಪದವಿಯನ್ನು ಪಡೆದು ಮುಖ್ಯರಾದರು.) ||೬೩||

ಸಮುದ್ರಕ್ಕೆ ಸಮಾನವಾಗಿ ಸೈನಿಕರು ಧ್ವನಿಮಾಡುತ್ತಾ, ವಂದಿಮಾಗಧರು ರಾಜಬಿರುದುಗಳನ್ನು ಸ್ತುತಿಸುತ್ತಿರಲು, ಆ ಚೋಲಮಹಾರಾಜನು ನಟೇಶ್ವರನ

ಸುಖೀ ಸ ಚೋಲಃ ಸ್ವಗೃಹಂ ವಿವೇಶ
ನಟೇಶಪಾದಾಂಕಿತತುಂಗಮೌಲಿಃ ॥೬೪॥

ಮಾಹೇಶ್ವರಾಪತ್ತಿವಿಮೋಚಕಸ್ಯ
ಶ್ರೀವೀರಭದ್ರಸ್ಯ ಚರಿತ್ರಮೇತತ್ ।
ಪಠಂತಿ ವಾಚಾ ಮನಸಾ ಸ್ಮರಂತಿ
ಯೇ ತೇ ಲಭಂತೇ ಪದಮಿಂದುಮೌಲೇಃ ॥೬೫॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ವೀರಭಕ್ತಚರಿತ
ವರ್ಣನಂ ನಾಮೈಕತ್ರಿಂಶೋಽಧ್ಯಾಯಃ

---

ಪಾದಚಿಹ್ನಿತವಾದ ಕಿರೀಟವನ್ನು ತಲೆಯಲ್ಲಿ ಧರಿಸಿ ಸುಖವಾಗಿ ಪರಿವಾರದೊಡನೆ ತನ್ನ ಅರಮನೆಯನ್ನು ಹೊಕ್ಕನು. ॥೬೪॥

ಶಿವರ ಆಪತ್ತುಗಳನ್ನು ಪರಿಹರಿಸುವ ಶ್ರೀ ವೀರಭಕ್ತನ ಈ ಚರಿತ್ರೆಯನ್ನು ಓದುತ್ತಾ ಮನಸ್ಸಿನಲ್ಲಿ ಸ್ಮರಣೆಮಾಡುವವರೆಲ್ಲರೂ ಆ ಚಂದ್ರಶೇಖರನಾದ ಶಿವನ ಸ್ಥಾನವನ್ನೈದುವರು, ಎಂದು ಜೈಗೀಷವ್ಯನಿಗೆ ಕುಮಾರಸ್ವಾಮಿಯು ಹೇಳಿದನು. ॥೬೫॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ವೀರಭಕ್ತನ ಚರಿತ್ರೆಯ ವರ್ಣನೆಯೆಂಬ ಮೂವತ್ತೊಂದನೆಯ
ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ದ್ವಾತ್ರಿಂಶೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

ಶ್ರೀ ವೀರಭವಭಕ್ತಸ್ಯ ಚರಿತಂ ಕಥಿತಂ ಮಯಾ ।
ಪ್ರಥಿತಂ ವಿಹೃತಾಶೇಷದಿಙ್ಮುಖಂ ಸುಖದಂ ಸತಾಂ ||೧||

ಭಕ್ತಸ್ಯೈನಾದಿನಾಥಸ್ಯ ಮಾಹಾತ್ಮ್ಯಂ ವರ್ಣ್ಯತೇಽಧುನಾ ।
ನಿಚೋಲಭೂತೇ ಪೃಥ್ವ್ಯಾಸ್ತು ಚೋಲೇ ಧರ್ಮಸ್ಯ ಮೂಲಕೇ ||೨||

ದೇಶೋಽಸ್ತಿ ಶಿಬಿರಗ್ರಾಮೋ ನಾಮ್ನಾ ಶರವರವ್ರತಃ ।
ತಸ್ಮಿನ್ನೇವೇನಾದಿನಾಥಶ್ಚ ಆಸೀತ್ಪ್ರತಿಕುಲೋದ್ಭವಃ ||೩||

---

## ಮೂವತ್ತೆರಡನೆಯ ಅಧ್ಯಾಯ

ಅಯ್ಯಾ ಜೈಗೀಷವ್ಯನೇ! ಇಲ್ಲಿಯವರೆಗೆ ದಿಗಂತವಿಶ್ರಾಂತವಾಗಿ ಸಾಧುಗಳಿಗೆ ಸುಖವನ್ನುಂಟುಮಾಡುತ್ತಾ ಪ್ರಸಿದ್ಧವಾಗಿರುವ ಶ್ರೀವೀರಭಕ್ತನೆಂಬ ಶೈವವರ್ಯನ ಕಥೆಯನ್ನು ನಿನಗೆ ನಾನು ಹೇಳಿದೆನು. ಈಗ ಏನಾದಿನಾಥನೆಂಬ ಮತ್ತೊಬ್ಬ ಭಕ್ತನ ಮಹಿಮೆಯನ್ನು ನಿನಗೆ ಹೇಳುತ್ತೇನೆ ಕೇಳು. ||೧||

ಭೂದೇವಿಗೆ ಕುಪ್ಪಸಪ್ರಾಯವಾಗಿ, ಸಕಲಧರ್ಮಗಳಿಗೂ ಮೂಲಭೂತವಾಗಿರುವ ಚೋಲದೇಶದಲ್ಲಿ ಶಿಬಿರಗ್ರಾಮವೆಂಬ ಒಂದುಪಟ್ಟಣವಿದೆ. ಅಲ್ಲಿ ಶರವರವ್ರತನೆಂಬ ಒಬ್ಬ ರಾಜನಿದ್ದನು. ಆದೇ ಊರಿನಲ್ಲಿಯೇ ಅವನ ಪ್ರತಿಕಕ್ಷಿಯ ವಂಶದಲ್ಲಿ ಹುಟ್ಟಿದ ಏನಾದಿನಾಥನೆಂಬುವನೂ ಇದ್ದನು. ಇವನು ರಾಜರ ಶಸ್ತ್ರವಿದ್ಯೆಗೆ

ನೃಪಶಸ್ತ್ರಕುಲಾಚಾರ್ಯಃ ಶಿವಭಕ್ತಾಂಘ್ರಿಸಕ್ತಧೀಃ ।
ಸ ಮಹೇಶಾರ್ಚಕೋ ನಿತ್ಯಂ ದ್ರವ್ಯೈಃ ಶಸ್ತ್ರಕುಲೋದ್ಭವೈಃ ॥೪॥

ಮಹೇಶ್ವರಸ್ಯ ಭಕ್ತಾಂಶ್ಚ ತೋಷಯಂಶ್ಚಾನ್ನದಾನತಃ ।
ಅತಿಶೂರ ಇತಿಖ್ಯಾತಶ್ಚಾನ್ಯ ಆಸೀಚ್ಚರವ್ರತಃ ॥೫॥

ಅವಮನ್ಯತ ಸೋಽಪ್ಯನ್ಯಾನ್ಖಡ್ಗವಿದ್ಯಾಸು ಗರ್ವಿತಾನ್ ।
ಕುಲಕ್ರಮಸಮುತ್ಪನ್ನಾನ್ವೃತ್ತಿರಸ್ಯಾಯುಧಸ್ಯ ಮೇ ॥೬॥

ಏನಾದಿನಾಥಮಾಶ್ಚರ್ಯಂ ನ ಸೇಹೇ ಪೌರುಷೇಣ ಸಃ ।
ಸೂರ್ಯೋದಯೇ ಸ ವರ್ಣೇಂದು ಸಮಸ್ತಜನಸಂವೃತಃ ॥೭॥

ಏನಾದಿನಾಥೇನ ಸಮಂ ಸ ಯೋದ್ಧುಂ ಧಿಯಮಾತನೋತ್ ।
ತದ್ಗೃಹದ್ವಾರಮಾಸಾದ್ಯ ಶಾರ್ದೂಲಸ್ಯೈವ ಜಂಬುಕಃ ॥೮॥

---

ಕುಲಕ್ರಮವಾದ ಆಚಾರ್ಯನಾಗಿ ಶೈವಶ್ರೇಷ್ಠರ ಚರಣಸೇವೆಯಲ್ಲಿಯೇ ನೆಲಸಿದ ಮನಸ್ಸುಳ್ಳವನೆನಿಸಿ, ನಿತ್ಯವೂ ತನ್ನ ಶಸ್ತ್ರವಿದ್ಯೆಯಿಂದ ಸಂಪಾದನೆಯಾಗುವ ಹಣ ದಿಂದಲೇ ಮಹೇಶ್ವರನನ್ನು ತಪ್ಪದೆ ಪೂಜೆಮಾಡುತ್ತಾ ಕಾಲಕಳೆಯುತ್ತಿದ್ದನು. ॥೨-೩-೪॥

ಈತನು ಈಶ್ವರಭಕ್ತರನ್ನು ಆಗಾಗ ಊಟಉಪಚಾರಗಳಿಂದ ಸಂತೋಷ ಪಡಿಸುತ್ತಾ ಇದ್ದನು. ಅದೇಗ್ರಾಮದಲ್ಲಿಯೇ ಅತಿಶೂರನೆಂದು ಪ್ರಸಿದ್ಧನಾದ ಮತ್ತೊಬ್ಬ ಶಸ್ತ್ರಜೀವಿಯೂ ವಾಸಮಾಡುತ್ತಿದ್ದನು. ಅವನು ಖಡ್ಗವಿದ್ಯೆಯಲ್ಲಿ ತಾನು ಶ್ರೇಷ್ಠನೆನಿಸಿಕೊಳ್ಳುತ್ತಾ ವಂಶಪಾರಂಪರ್ಯವಾಗಿ ವೀರರೆನಿಸಿದ್ದವರನ್ನೆಲ್ಲಾ ನಾನಾರೀತಿ ಹಿಯ್ಯಾಳಿಸುತ್ತಾ ತಾನೊಬ್ಬನೇ ಖಡ್ಗಜೀವಿಯೆಂದು ಹೇಳುತ್ತಾ ಅವಮಾನ ಮಾಡುತ್ತಿದ್ದನು. ॥೫-೬॥

ಆದರೆ ಇವನು ಈ ಏನಾದಿನಾಥನ ಆಶ್ಚರ್ಯಕೃತ್ಯಗಳನ್ನು ಕೇಳಿದ್ದರೂ, ತನ್ನ ಪರಾಕ್ರಮದಿಂದ ಅದನ್ನು ಲೆಕ್ಕಿಸುತ್ತಿರಲಿಲ್ಲ. ಒಂದುದಿನ ಅವನು ತನ್ನ ಸಮಾನ ರಾದ ಇತರ ಪರಿವಾರಜನರೊಡನೆ ಕೂಡಿ ಆ ಏನಾದಿನಾಥನೊಡನೆ ಸೂರ್ಯೋದಯ ಕಾಲದಲ್ಲಿಯೇ ಯುದ್ಧಮಾಡಬೇಕೆಂದು ನಿಶ್ಚಯಿಸಿ, ಅವನ ಮನೆಯ ಬಾಗಿಲಿಗೆ ಹೋದನು. ಹುಲಿಯಮನೆಗೆ ನರಿಯು ಹೋಗಿ ನಿಂತಂತೆ ನಿಂತುಬಿಟ್ಟನು. ॥೭-೮॥

ವಿದ್ಯಯಾ ವೀರಭೋಽಸ್ಮೀತಿ ಸೋಽತಿಶೂರಸ್ತಮಾಹ್ವಯತ್ ।
ಸಾಹಸಾಂಕೋ ಬದ್ಧಚೇಲಃ ಸ ವೀರಃ ಖಡ್ಗಖೇಟಭೃತ್ ॥೯॥

ಕೇನಾಹೂತೋಽಹಮಸ್ಮೀತಿ ಹರ್ಯಕ್ಷ ಇವ ನಿರ್ಯಯೌ ।
ಪಾರ್ಶ್ವಸ್ಥಿತೇಷು ಶಿಷ್ಯೇಷು ವೃತೋ ನೈ ಚಾಂತ್ಯಬಂಧುಭಿಃ ॥೧೦॥

ಏನಾದಿನಾಥಂ ವೀರಂ ತಂ ಶಾರ್ದೂಲಂ ವ್ಯಾಹರದ್ರಿಪುಃ ॥೧೧॥

॥ ವೀರ ಉವಾಚ ॥

ಗ್ರಾಮಾದ್ಬಹಿರ್ವ್ಯೂಹ್ಯ ಬಲಮಾವಯೋರ್ಯುಧ್ಯಮಾನಯೋಃ ।
ವಿಜೀತುಂ ಶಸ್ತ್ರವಿದ್ಯಾಯಾಂ ವೃತ್ತಿಃ ಸೈಷಾನಯೋರಿತಿ ॥೧೨॥

ಏನಾದಿನಾಥ ನಿರ್ಯಾಹಿ ಶಸ್ತ್ರೈಃ ಶಿಷ್ಯೈಃ ಪರೀವೃತಃ ।
ಇತಿ ತದ್ವಚನಂ ಶ್ರುತ್ವಾ ಶಸ್ತ್ರಾಚಾರ್ಯೋ ವಿನಿರ್ಯಯೌ ॥೧೩॥

---

ಎಲೈ ವೀರನೇ, ನಿನ್ನ ಶಸ್ತ್ರವಿದ್ಯೆಯಿಂದ ನನ್ನನ್ನು ತೃಪ್ತಿಪಡಿಸೆಂದು ಆ ಅತಿಶೂರನು, ಏನಾದಿನಾಥನನ್ನು ಕೂಗಿ ಕರೆದನು. ಆಗ ಪರಾಕ್ರಮಚಿಹ್ನಿತನಾದ ಆ ವೀರನು ಸರಿಯಾಗಿ ಬಟ್ಟೆಗಳನ್ನುಟ್ಟುಕೊಂಡು ಕತ್ತಿಗುರಾಣಿಗಳನ್ನು ಹಿಡಿದು "ಯಾರು ನಿನ್ನನ್ನು ಹೀಗೆ ಕರೆಯುವರು' ಎಂದು ಸಿಂಹದಂತೆ ಹೊರಹೊರಟು ಬಂದನು. ಪಕ್ಕದಲ್ಲಿ ಆವನ ಶಿಷ್ಯರೆಲ್ಲರೂ ನಿಂತಿದ್ದರು. ಎಲ್ಲೋ ಕೆಲವು ಮಂದಿ ಆಪ್ತಬಂಧುಗಳು ಆವನ ಜೊತೆಯಲ್ಲಿದ್ದರು. ಆಗ ಇವನನ್ನು ನೋಡಿ ಶತ್ರುವಾದ ಅತಿಶೂರನು ಹುಲಿಯಂತೆ ಗರ್ಜಿಸುತ್ತಾ ಅತಿ ವೀರನಾದ ಈ ಏನಾದಿನಾಥನನ್ನು ಕುರಿತು ಇಂತೆಂದನು. ॥೯-೧೦-೧೧॥

ಅಯ್ಯ ಏನಾದಿನಾಥನೇ, ಊರ ಹೊರಗೆ ನಮ್ಮಿಬ್ಬರ ಸೈನ್ಯವನ್ನು ವ್ಯೂಹ ವನ್ನಾಗಿ ರಚಿಸಿ, ಶಸ್ತ್ರವಿದ್ಯೆಯಿಂದ ಜೀವಿಸುವ ನಮ್ಮಿಬ್ಬರ ಪರಾಕ್ರಮವನ್ನೂ ಪರಸ್ಪರ ಹೋರಾಟದಿಂದ ಜನರಿಗೆ ತೋರಿಸೋಣ. ನಿನ್ನ ಶಸ್ತ್ರಾಸ್ತ್ರಗಳಿಂದ ಯುಕ್ತನಾಗಿ ಶಿಷ್ಯರೊಡನೆ ನೀನು ಯುದ್ಧಕ್ಕೆ ಸಿದ್ಧನಾಗೆಂದು ಹೇಳಿದ ಆ ಅತಿಶೂರನ ಮಾತನ್ನು ಕೇಳಿ ಶಸ್ತ್ರಾಚಾರ್ಯನಾದ ಆ ಏನಾದಿನಾಥನು ಅದಕ್ಕೆ ಒಪ್ಪಿಕೊಂಡು ಯುದ್ಧಕ್ಕೆ ನಡೆದನು. ॥೧೨-೧೩॥

ತದಾ ಹೃಷ್ಟಂ ರಣಕ್ಷೋಣೀಂ ಯಯೌ ತದುಭಯೋರ್ಬಲಂ ।
ವೀರೋ ವಿಖ್ಯಾತಬಿರುದಾ ಕಟಕಾದಿಲಸತ್ಪದಃ ॥೧೪॥

ಸೇನಯೋರಂತರೇ ಚೇರುಃ ಖಡ್ಗರೋಚಿಲಸತ್ಕರಾಃ ।
ಅನುಜ್ಞಾತಾ ನೃಪೇಣಾಪಿ ಪೌರೈರೀರಿತವೈಭವಾಃ ॥೧೫॥

ಧನ್ವಿನೋ ಧನ್ವಿನೋ ಜಘ್ನುಃ ಖಡ್ಗಿನಃ ಖಡ್ಗಿನೋ ಮಿಥಃ ।
ಸಶಕ್ತಯಃ ಶಕ್ತಿಭೃತೋ ತಥಾನ್ಯೇ ಚ ಸಮಾಯಯುಃ ॥೧೬॥

ಪ್ರದೀಪ್ತಶಕ್ತಯಸ್ತತ್ರ ವೀರಹಸ್ತಪ್ರಸಾರಿತಾಃ ।
ಪರಸ್ಪರ ಸ್ಫುರಜ್ಜಿಹ್ವಾಃ ಫಣಿರಾಜಾ ಇವಾಬಭುಃ ॥೧೭॥

ಶರಕೃತ್ತಶಿರಃ ಪಾದಪಾರ್ಶ್ವಜಾನೂರುಬಾಹವಃ ।
ಉದಾಂತಾಸೃಕ್ಷಕಾಸ್ತತ್ರ ಪೇತುರ್ವೀರಾ ರಣಾಜಿರೇ ॥೧೮॥

---

ಆಗ ಅವರಿಬ್ಬರ ಸೈನ್ಯವೂ ಸಂತೋಷಗೊಂಡು ಯುದ್ಧಭೂಮಿಗೆ ನಡೆಯಿತು. ಇತ್ತ ವೀರನೂ ತನ್ನ ಪ್ರಖ್ಯಾತವಾದ ಅತಿಶೂರನೆಂಬ ಬಿರುದನ್ನು ಸೂಚಿಸುವ ಕಟಕಕುಂಡಲಾದ್ಯಲಂಕೃತಪಾದವುಳ್ಳವನಾಗಿ ಯುದ್ಧರಂಗಕ್ಕೆ ಹೋದನು. ಎರಡು ಸೈನ್ಯಗಳ ಮಧ್ಯದಲ್ಲಿಯೂ ಕತ್ತಿಯ ಕಾಂತಿಯಿಂದ ಶೋಭಿಸುತ್ತಿದ್ದ ಕೈಗಳೇ ಕಾಣುತ್ತಿದ್ದವು. ಪಟ್ಟಣಿಗರಿಂದ ಈ ವಿಷಯವು ರಾಜನ ವರೆಗೂ ತಿಳಿದುಹೋಯಿತು. ॥೧೪-೧೫॥

ಯುದ್ಧದಲ್ಲಿ ಬಿಲ್ಲುಗಾರನು ಬಿಲ್ಲುಗಾರನೊಡನೆಯೂ, ಖಡ್ಗವುಳ್ಳವರು ಕತ್ತಿಯವರೊಡನೆಯೂ ಪರಸ್ಪರವಾಗಿ ಹೊಡೆದಾಡಿದರು. ಶಕ್ತ್ಯಾಯುಧಪಾಣಿಗಳು ತಮ್ಮಂತೆ ಶಕ್ತಿಯೆಂಬ ಆಯುಧವುಳ್ಳವರೊಡನೆಯೂ, ಇತರರು ತಮತಮಗೆ ಅನುರೂಪರಾದವರೊಡನೆಯೂ ಪರಸ್ಪರವಾಗಿ ಹೋರಾಡಿದರು. ವೀರರು ತಮ್ಮ ಕೈಯಲ್ಲಿ ಹಿಡಿದು ಬಿಡುತ್ತಿರುವ ಪ್ರಜ್ವಲಿಸುತ್ತಿರುವ ಶಕ್ತ್ಯಾಯುಧಗಳು ಪರಸ್ಪರವಾಗಿ ತಮ್ಮ ತಮ್ಮ ನಾಲಿಗೆಗಳನ್ನು ಪ್ರಕಾಶಪಡಿಸುತ್ತಿರುವ ಸರ್ಪಗಳಂತೆ ಪ್ರಕಾಶಿಸುತ್ತಿದ್ದವು. ॥೧೬-೧೭॥

ಆ ಯುದ್ಧದಲ್ಲಿ ಬಾಣಪ್ರಹಾರದಿಂದ ಕತ್ತರಿಸಲ್ಪಟ್ಟ, ತಲೆ, ಕಾಲು, ಬೆನ್ನು, ಮೊಳಕಾಲು, ತೊಡೆ ಮತ್ತು ತೋಳು ಇವುಗಳುಳ್ಳ ವೀರರು ರಕ್ತದಕೋಡಿಯನ್ನು

ನೌಕಾಸಂಪ್ಲವನೇ ಯಾವತ್ತಾವತ್ಸಸ್ರುರ್ನರಾಪಗಾಃ ।
ಪಿಶಾಚವೇತಾಲಗಣಾಸ್ತತ್ತೀರೇ ತಾಂಡವಂ ವ್ಯಧುಃ ॥೧೯॥

ಭಕ್ಷಯಂತಃ ಪಲಾಲಾನಾಂ ಪಿಂಡಾನಿ ವಿಕಟಾನನಾಃ ।
ದ್ವೌ ಖಡ್ಗಿನೌ ಮಿಥೋಯುಕ್ತೌ ತಯೋರ್ಯೇನಾಸಿಕಾಕೃತಃ ॥೨೦॥

ಅನೂರುಃ ಸಂಪತಂಸ್ತಸ್ಮೈ ಚಿಕ್ಷೇಪಾಸಿಮುಭೌ ಹತೌ ।
ಆಕಂಠಕ್ಷಿಪ್ತಕುಂತಾಗ್ರೇಣೈತೌ ವಿಗತಜೀವಿತೌ ॥೨೧॥

ಶೌರ್ಯಂ ಮಿಥೋ ಮಾನಯಂತೌ ದ್ವೌ ವಿಮಾನಾಂತರಸ್ಥಿತೌ ।
ಹತವೀರಾರುಣಾಕ್ಷ್ಯೂರ್ಧ್ವಬಲಾಕಾಧ್ವಾಂಕ್ಷಮಂಡಲಾಃ ॥೨೨॥

ಲೋಹಕಾರಾನಲಗುಹಾಂಗಾರಧೂಮನಿಭಾ ಬಭುಃ ।
ಏನಾದಿವೀರಶಾರ್ದೂಲೋ ವಮದ್ವಹ್ನಿಕೃಪಾಣಕಃ ॥೨೩॥

---

ಹರಿಸುತ್ತಾ ಬಿದ್ದುಬಿಟ್ಟರು. ದೋಣಿಗಳು ತೇಲುವಷ್ಟು ದೊಡ್ಡದಾಗಿ ರಕ್ತದ ದೊಡ್ಡ ನದಿಗಳು ಹರಿದಾಡಿದುವು. ಈ ನದಿಗಳ ದಡದಲ್ಲಿ ಪಿಶಾಚ ಮತ್ತು ಬೇತಾಳಗಳ ಗಣಗಳು ಭಯಂಕರವಾಗಿ ನಾಟ್ಯವಾಡಲುಪಕ್ರಮಿಸಿದುವು. ॥೧೮-೧೯॥

ಈಭೂತಬೇತಾಳಾದಿಗಳು ಯುದ್ಧಭೂಮಿಯಲ್ಲಿ ವಿಕಾರವಾದ ಮುಖಗಳಿಂದ ಮಾಂಸಗಳ ಮುದ್ದೆಯನ್ನು ತಿನ್ನುತ್ತಾ ಕೂಗುತ್ತಿದ್ದವು. ಇಬ್ಬರು ಕತ್ತಿಯುದ್ಧ ಮಾಡುವವರು ಪರಸ್ಪರವಾಗಿ ಯುದ್ಧಮಾಡುತ್ತಾ, ಒಬ್ಬನು ಪ್ರತಿದ್ವಂದ್ವಿಗೆ ಕತ್ತಿಯಿಂದ ಹೊಡೆದಾಗ, ಅವನು ತೊಡೆಮುರಿದು ಕೆಳಗೆ ಬೀಳುವುದರೊಳಗೆ ತನ್ನ ಕತ್ತಿಯನ್ನೂ ಎದುರಾಳಿಯ ಮೇಲೆಸೆದು ಅವನನ್ನೂ ಬೀಳಿಸುತ್ತಿದ್ದನು. ಇದರಿಂದ ಇಬ್ಬರೂ ಮೃತರಾಗುತ್ತಿದ್ದರು. ಹೀಗೆ ಕುತ್ತಿಗೆಯವರೆಗೂ ಎಳೆದು ಬಿಟ್ಟ ಕುಂತಾಯುಧದ ತುದಿಯಿಂದ ಇಬ್ಬರೂ ಪ್ರಾಣತ್ಯಾಗಮಾಡಿ ತಮ್ಮ ಪರಾಕ್ರಮವನ್ನು ಪರಸ್ಪರವಾಗಿ ಹೊಗಳಿಕೊಳ್ಳುತ್ತಾ ದೇವವಿಮಾನ ಮಧ್ಯವನ್ನೇರಿದರು. ॥೨೦-೨೧॥

ಮೃತರಾದ ವೀರಯೋಧರ ಕೆಂಪಾದ ಕಣ್ಣುಗುಡ್ಡೆಗಳಮೇಲೆ ಗುಂಪುಗುಂಪಾಗಿ ಹಾರಾಡುತ್ತಿರುವ ಕಾಗೆಗಳ ಸಮೂಹವು ಕಮ್ಮಾರನ ಬೆಂಕಿಯಮನೆಯಲ್ಲಿ ಹೊರಡುವ ಹೊಗೆಯಂತೆ ಪ್ರಕಾಶಿಸಿದವು. ಈ ಏನಾದಿನಾಥನೆಂಬ ವೀರಶ್ರೇಷ್ಠನು ಬೆಂಕಿಯನ್ನು ಕಾರುತ್ತಿರುವ ಕತ್ತಿಯುಳ್ಳವನಾಗಿ ಅಳಿದುಳಿದಿರುವ ಸೈನಿಕರ ಕಾಲು,

ಚಿಚ್ಛೇದ ಹತಶೇಷಾಣಾಂ ಪಾದಪಾರ್ಶ್ವಶಿರೋಭುಜಾನ್ ।
ಶೂರನೇನಾದಿನಾಥಂ ತಂ ಭೂತನಾಥಪದಾರ್ಚಕಂ ॥೨೪॥

ಸ ವೀರಃ ಸೋಽಪ್ಯಗಾತ್ತತ್ರ ಹತಶೇಷಬಲಾನ್ವಿತಂ ।
ಧೂತಶೀರ್ಷೋಽಸಿಭಿನ್ನಾಂಗೋ ಯಾವದಂತರ್ವಿಶತ್ಯರಿಃ ॥೨೫॥

ಏನಾದಿಸ್ತಾವದಾತ್ಮಾನಂ ಮುಮೋಚಾರಿಪಲಾಯನಾತ್ ।
ಅತಿಶೂರೋ ಜಿತಕ್ಲೇಶಾಚ್ಛಯಾನೋ ನಿಶಿ ಭೂತಲೇ ॥೨೬॥

ಜಾಗ್ರನ್ನಿಚಿಂತಯನ್ ಶತ್ರುಂ ಕುಹಕೇನ ವಿಹನ್ಮ್ಯಹಂ ।
ಸ ದೂತಂ ಪ್ರಾಹಿಣೋತ್ತಸ್ಮೈ ಪ್ರಭಾತೇ ಯುದ್ಧಮಸ್ತ್ವಿತಿ ॥೨೭॥

ಉಭಯೋಃ ಕಿಂ ವೃಥೈವಾನ್ಯೈರ್ಹನ್ಯಮಾನೈರ್ಜನೈರಿತಿ ।
ಏನಾದಿನಾಥಸ್ತಚ್ಛ್ರುತ್ವಾ ತಥಾಸ್ತ್ವಿತ್ಯಪರೇಽಹನಿ ॥೨೮॥

---

ಪಾರ್ಶ್ವ, ತಲೆ ಮತ್ತು ಭುಜವೇ ಮುಂತಾದವುಗಳನ್ನೂ ಕತ್ತರಿಸುತ್ತಾ ಮುಂದು ವರಿಯುತ್ತಿದ್ದನು. ॥೨೨-೨೩॥

ಮಹೇಶ್ವರನ ಪಾದಪೂಜಕನಾದ ವೀರಾದಿವೀರನೆನಿಸಿದ ಏನಾದಿನಾಥನನ್ನು ಬಿಟ್ಟು, ಆ ಅತಿಶೂರನು ತನ್ನ ಕಳೆದುಳಿದ ಬಲದೊಡನೆ ಓಡಿಹೋದನು. ಶತ್ರುವಿನ ಏಟನಿಂದ ತಲೆತಿರುಗಿ, ಕತ್ತಿಯಿಂದ ಕಡಿಯಲ್ಪಟ್ಟ ಅವಯವವುಳ್ಳವನಾಗಿ ಶತ್ರುವು ಒಳಗೆ ಪ್ರವೇಶಿಸುವಷ್ಟರಲ್ಲಿ ಏನಾದಿನಾಥನು ಶತ್ರುವಿನ ಓಟವನ್ನು ಕಂಡು ಯುದ್ಧ ವ್ಯಾಪಾರದಿಂದ ಶ್ರಾಂತನಾದನು. ॥೨೪-೨೫॥

ಆ ಅತಿಶೂರನಾದರೋ ಯುದ್ಧದಲ್ಲಿ ಸೋತು ಶ್ರಮದಿಂದ ರಾತ್ರಿ ನೆಲದ ಮೇಲೆ ಮಲಗಿ, ಎಚ್ಚರನಾಗಿಯೇ, ಈ ಶತ್ರುವನ್ನು ಮೋಸದಿಂದ ನಾನು ಕೊಲ್ಲು ತ್ತೇನೆಂದು ಯೋಚಿಸುತ್ತಾ ಅವನ ಬಳಿಗೆ ಒಬ್ಬ ದೂತನನ್ನು ಕಳುಹಿಸಿ, 'ನಾಳೆ ಬೆಳಿಗ್ಗೆ ನಮ್ಮಿಬ್ಬರಿಗೇ ಯುದ್ಧವಾಗಲಿ, ಎರಡುಕಡೆಯ ಜನಗಳೂ ವ್ಯರ್ಥವಾಗಿ ಏಕೆ ಸಾಯಬೇಕೆಂದು ಹೇಳಿಕಳುಹಿಸಿದನು. ॥೨೬-೨೭॥

ಏನಾದಿನಾಥನು ಆ ಮಾತನ್ನು ಕೇಳಿ ಹಾಗೆಯೇ ಆಗಲೆಂದು ಒಪ್ಪಿಕೊಂಡು ಮಾರನೆಯ ದಿವಸಬೆಳಗ್ಗೆ ಕತ್ತಿಗುರಾಣಿಗಳೊಡನೆ ತನ್ನ ಕಡೆಯವರಿಗೆ ತಿಳಿಯದಂತೆ ಯುದ್ಧಭೂಮಿಗೆ ಬಂದನು. ಅತ್ತ ಅತಿಶೂರನು ಈ ಏನಾದಿನಾಥನು ಹಣೆಯಲ್ಲಿ

ಖಡ್ಗಖೇಟಧರಃ ಪ್ರಾಪ ಸ್ವೈರಜ್ಞಾತೋ ರಣಕ್ಷಿತಿಂ ।
ಶ್ರೀಭಸ್ಮಫಾಲಮೇನಾದಿರ್ನ ಹಂತೀತಿ ವಿಚಿಂತಯನ್ ॥ ೨೯ ॥

ಶ್ರೀಭಸ್ಮಭಾಗ್ಯಂ ದೂರೇಽಪಿ ಭಸ್ಮ ಫಾಲೇ ದಧೌ ತದಾ ।
ಮಾಲಿನ್ಯಮನಸಾ ಬಿಭ್ರತ್ಖಡ್ಗಖೇಟಧರೋ ರಿಪುಃ ॥ ೩೦ ॥

ವೀರಸ್ಥಾನಮಗಾತ್ಪುಣ್ಯಂ ಯತ್ರ ಏನಾದಿರಾಸ್ಥಿತಃ ।
ಲಘುಕೋಽಯಮಿತಿ ಸ್ಮೃತ್ವಾ ವೀರಸಿಂಹಃ ಸ್ಥಿತೋ ರಿಪುಃ ॥ ೩೧ ॥
ಖೇಟಚ್ಛನ್ನಾಸಿಕಃ ಪ್ರಾಪ ರಂಧ್ರಾನ್ವೇಷೀ ತದಂತಿಕಂ ।
ಮಹೋಕ್ಷವನ್ನಿರುಧ್ಯೈವಂ ಕೇಸರೀವ ರಿಪೌ ಲಲನ್ ॥ ೩೨ ॥

ಏನಾದಿಃಪಾರ್ಶ್ವಗೇ ಖೇಟೇ ತಸ್ಯಾಪಶ್ಯತ್ತ್ರಿಪುಂಡ್ರಕಂ ।
ಹಂತ ಹಂತ ರಿಪೋಃ ಫಾಲೇ ಭಸ್ಮಾಪೂರ್ವಂ ನಿರೀಕ್ಷ್ಯ ಸಃ ॥ ೩೩ ॥

ಶಿವಭಕ್ತೋ ನ ವಧ್ಯೋಽಯಂ ಯಥಾಕಾಮಂ ಕರೋತು ಮೇ ।
ನಿರಾಯುಧವಧಾತ್ಪಾಪಂ ಮಾಸ್ತ್ವಸ್ಯೇತಿ ಧೃತಾಯುಧಃ ॥ ೩೪ ॥

---

ಭಸ್ಮವನ್ನು ಇಟ್ಟವರನ್ನು ಕೊಲ್ಲುವುದಿಲ್ಲವೆಂದು ಯೋಚಿಸಿ ತನಗೆ ಆ ಭಾಗ್ಯವಿಲ್ಲದಿದ್ದರೂ, ಅದಕ್ಕಾಗಿ ಹಣೆಯಲ್ಲಿ ಭಸ್ಮವನ್ನು ಧರಿಸಿಕೊಂಡನು. ॥೨೮-೨೯॥

ಹಾಗೆ ಅತಿಶೂರನು ಕಲ್ಮಷಚಿತ್ತದಿಂದ ಭಸ್ಮಧಾರಣೆಮಾಡಿ, ಖಡ್ಗದ ಒರೆಯನ್ನು ಹಿಡಿದು ಏನಾದಿಯ ಪುಣ್ಯಕರವಾದ ವೀರಸ್ಥಾನಕ್ಕೆ ಹೋದನು. ಈ ವೀರಸಿಂಹನೆಂದು ತಿಳಿದಿದ್ದ ಶತ್ರುವಾದ ಏನಾದಿನಾಥನು ಅಲ್ಪಮಾತ್ರದವನೆಂದು ತಿಳಿದು, ಒರೆಯಲ್ಲಿ ಮುಚ್ಚಿಕೊಂಡ ಕತ್ತಿಯುಳ್ಳವನಾಗಿ ಹೊಂಚುಹಾಕುತ್ತಾ ಅವನ ಹತ್ತಿರಕ್ಕೆ ಹೋದನು. ದೊಡ್ಡ ಎತ್ತಿನಂತೆ ಅವನನ್ನು ಮಧ್ಯೆ ತಡೆದು ಸಿಂಹದಂತೆ ಶತ್ರುವಿನ ಮೇಲೆ ಅತಿಶೂರನು ಯುದ್ಧಕ್ಕೆ ನಿಂತನು. ಹಾಗೆಯೇ ಯುದ್ಧಮಾಡುತ್ತಾ ಪಕ್ಕಕ್ಕೆ ಬಂದಾಗ ಅತಿಶೂರನ ಹಣೆಯಲ್ಲಿ ಭಸ್ಮತ್ರಿಪುಂಡ್ರವಿದ್ದುದನ್ನು ಏನಾದಿನಾಥನು ನೋಡಿದನು. ॥೩೦-೩೧-೩೨॥

ಅಯ್ಯೋ! ಅಯ್ಯೋ! ಶತ್ರುವಿನ ಹಣೆಯಲ್ಲಿ ಹೊಸದಾಗಿ ಭಸ್ಮತ್ರಿಪುಂಡ್ರವು ಕಾಣಿಸುತ್ತಿರುವುದಲ್ಲಾ! ಇವನು ಶಿವಭಕ್ತನು, ವಧಾರ್ಹನಲ್ಲ. ಇವನು ಏನು ಬೇಕಾದರೂ ಮಾಡಲಿ. ಆದರೆ ನಾನು ಆಯುಧವನ್ನು ತ್ಯಜಿಸಿದರೆ ನಿರಾಯುಧನಾದ

ಆಜಿಗಾಂಸುಸ್ತತ್ರ ರಿಪುಂ ತಸ್ಥೌ ಭಕ್ತಪ್ರಭಾವವಿತ್ ।
ಯಥಾ ಸ್ಥಿತಸ್ಯ ಭಕ್ತಸ್ಯ ಭಾವಂ ಜಾನನ್ನಥಾಪ್ಯರಿಃ ॥೩೫॥

ಚಕ್ರೇ ಸ ಸಾತಕೀ ಹಂತುಂ ನಿಜಂ ಪೂರ್ಣಫಲಂ ಮತಂ ।
ಅಥೈತಚ್ಛಿನಭಕ್ತಂ ತಂ ರಕ್ಷಿತುಂ ತಂ ಚ ಶಂಕರಃ ॥೩೬॥

ಭಸ್ಮಪಾಲಂ ಚ ತಂ ವೀರಂ ರಕ್ಷಿತುಂ ಸ್ವಯಮಾಯಯೌ ।
ಉಭಯೋರ್ಯುಧ್ಯತೋರ್ಮಧ್ಯೇ ಹಸ್ತಾಭ್ಯಾಂ ವಾರಯಂಸ್ಥಿತಃ ॥೩೭॥

ಗಂಗಾತುಂಗಜಟಾಜೂಟಂ ಶ್ರೀಕಂಠಃ ಪ್ರತ್ಯದೃಶ್ಯತ ॥೩೮॥

ಖಡ್ಗೇನ ಶತ್ರೋರ್ಭವನಾಶಬಂಧನಾ-
ದುನ್ಮೋಚ್ಯ ಸಾಮೀಪ್ಯಪದಂ ಚ ತಸ್ಮೈ ।
ದತ್ವಾ ಶಿವೋ ಹೇಮಸಭಾಂ ವಿವೇಶ
ತಾಭ್ಯಾಂ ಸ್ತುತೋ ವೈ ದೃಢಭಕ್ತಿಭಾವಿತಃ ॥೩೯॥

---

ನನ್ನನ್ನು ಕೊಂದ ಪಾಪವು ಇವನಿಗೆ ಬಂದೀತು. ಇದಾಗಬಾರದೆಂದು ಯೋಚಿಸಿ ಆಯುಧವನ್ನು ಕೈಯ್ಯಲ್ಲಿ ಹಿಡಿದೇ ನಿಂತುಕೊಂಡನು. ಶಿವಭಕ್ತಿಯ ಮತ್ತು ಭಕ್ತನ ಸ್ವರೂಪವನ್ನು ಅರಿತವನಾದ್ದರಿಂದ ಈ ಏನಾದಿನಾಥನು ಶತ್ರುವನ್ನು ಕೊಲ್ಲದೇ ಹಾಗೆ ನಿಂತುಕೊಂಡನು. ॥೩೩-೩೪॥

ಸುಮ್ಮನೇ ನಿಂತಿದ್ದ ಭಕ್ತನ ಭಾವವನ್ನರಿತರೂ ಶತ್ರುವು ತನ್ನ ಪೂರ್ಣವಾದ ಮನೋಭಿಪ್ರಾಯದಂತೆ ಅವನನ್ನು ಕೊಲ್ಲಲು ಮನಸ್ಸು ಮಾಡಿದನು. ಆಗ ತನ್ನ ಭಕ್ತನನ್ನೂ, ಕೃತ್ರಿಮದಿಂದ ಭಸ್ಮವನ್ನು ಹಣೆಯಲ್ಲಿಟ್ಟಿರುವ ಅತಿಶೂರನನ್ನೂ ಸಹ ಕಾಪಾಡಲು ಮಹೇಶ್ವರನು ತಾನೇ ಆ ಯುದ್ಧಭೂಮಿಗೆ ಬಂದನು. ಇವರಿಬ್ಬರೂ ಯುದ್ಧಮಾಡುತ್ತಿರುವಾಗ ಮಧ್ಯದಲ್ಲಿ ಕಾಣಿಸಿಕೊಂಡು ಗಂಗಾನದಿ ಮತ್ತು ದೊಡ್ಡ ಜಡೆ ಇವುಗಳಿಂದ ಅಲಂಕೃತನಾದ ಆ ಶ್ರೀಕಂಠನು ಎರಡುಕೈಗಳಿಂದಲೂ ಇವರಿಬ್ಬರನ್ನೂ ತಡೆಯುತ್ತಾ ಇಬ್ಬರಿಗೂ ಗೋಚರನಾದನು. ॥೩೫-೩೬-೩೭-೩೮॥

ಖಡ್ಗಯುದ್ಧದಿಂದ ಪರಸ್ಪರ ಶತ್ರುಗಳಾದ ಈ ವೀರಸಿಂಹ ಮತ್ತು ಏನಾದಿನಾಥರನ್ನು ಸಂಸಾರಬಂಧನದಿಂದ ಬಿಡುಗಡೆ ಮಾಡಿ, ಅವರಿಗೆ ಸಮೀಪವಾಸ ರೂಪವಾದ ಸಾಮೀಪ್ಯಮೋಕ್ಷವನ್ನು ಕರುಣಿಸಿ ಆ ಮಹೇಶ್ವರನು ಅವರಿಬ್ಬರಿಂದಲೂ

ಲೋಕಾದಿನಾಥಸ್ಯ ಪದಾಬ್ಜಭಕ್ತೇ-
ರೇನಾದಿನಾಥಸ್ಯ ಚರಿತ್ರಮೇತತ್ ।
ಭಕ್ತ್ಯಾ ಪಠೇದ್ಯಃ ಶ್ರುಣುಯಾಚ್ಚ ನಿತ್ಯಂ
ಶಂಭೋಃ ಪದಂ ಶಾಶ್ವತಮಾಪ್ನುಯಾತ್ಸಃ ॥೪೦॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಏನಾದಿನಾಥ
ಭಕ್ತಚರಿತ್ರವರ್ಣನಂ ನಾಮ ದ್ವಾತ್ರಿಂಶೋಽಧ್ಯಾಯಃ

---

ಸ್ತುತಿಸಲ್ಪಟ್ಟವನಾಗಿ, ಅವರ ದೃಢವಾದ ಭಕ್ತಿಗೆ ಮೆಚ್ಚಿ, ಅನಂತರ ತಾನು ಹೇಮ ಸಭೆಯನ್ನು ಹೊಕ್ಕನು. ॥೩೯॥

ಇಂತಹ ಜಗದೊಡೆಯನಾದ ಪರಶಿವನ ಪಾದಕಮಲಭಕ್ತನಾದ ಈ ಏನಾದಿನಾಥನ ಚರಿತ್ರೆಯನ್ನು ಭಕ್ತಿಯಿಂದ ಪ್ರತಿದಿನವೂ ಪಠನಮಾಡುವವನೂ ಮತ್ತು ಕೇಳುವವನೂ ಶಂಕರನ ಶಾಶ್ವತವಾದ ಸ್ಥಾನವನ್ನು ಪಡೆಯುತ್ತಾನೆಂದು ಜೈಗೀಷವ್ಯಮುನಿಗೆ ಕುಮಾರಸ್ವಾಮಿಯು ಹೇಳಿದನು. ॥೪೦॥

ಇಲ್ಲಿಗೆ ಶ್ರೀ ಶಿವರಹಸ್ಯದ ಸದಾಶಿವಸಂಜ್ಞಕವಾದ ಒಂಭತ್ತನೆಯ ಅಂಶದಲ್ಲಿ
ಏನಾದಿನಾಥನೆಂಬ ಭಕ್ತನ ಚರಿತ್ರೆಯ ವರ್ಣನೆಯೆಂಬ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

# ತ್ರಯಸ್ತ್ರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಭಿಲ್ಲೇನ ಭಲ್ಲಹಸ್ತೇನ ಕಾಲಹಸ್ತೀಶ್ವರಾರ್ಚನಾತ್ ।
ಪ್ರಾಪ್ತಂ ಪರಂ ಪದಂ ಪುಣ್ಯಂ ತತ್ತೇ ವಕ್ಷ್ಯಾಮಿ ಸಾದರಂ ॥೧॥

ತತ್ರ ಶ್ರೀಪರ್ವತೇ ವಾಸೀ ಭಿಲ್ಲೋ ನಲ್ಪಪ್ರಮಾಣವಾನ್ ।
ಆಸ್ತಿಗೋಧಾಪುರಂ ತತ್ರ ಖರ್ವಟಂ ವಟಭೂಷಿತಂ ॥೨॥

ವೇಣುಸಂಭೂತಮುಕ್ತೌಘಭಿಲ್ಲನಿರ್ಝರವೇಷ್ಟಿತಂ ।
ಶಾಖಾಸಂಕಲಿತಾಮ್ರೌಘಕಪಿತ್ಥಾಲಂಬಿನಾಗುರಂ ॥೩॥

---

## ಮೂವತ್ತಮೂರನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ, ಇನ್ನು ಮುಂದೆ ನಿನಗೆ ಭಲ್ಲಾಯುಧಪಾಣಿಯಾದ ಬೇಡನು ಕಾಲಹಸ್ತೀಶ್ವರನನ್ನು ಪೂಜಿಸಿ ಪುಣ್ಯಕರವಾದ ಪರಮಸ್ಥಾನವನ್ನು ಪಡೆದ ಕಥೆಯನ್ನು ಹೇಳುತ್ತೇನೆ. ಅದನ್ನು ಆದರದಿಂದ ಕೇಳುವನಾಗೆಂದು ಕುಮಾರ ಸ್ವಾಮಿಯಿಂತೆಂದನು. ಶ್ರೀಪರ್ವತದಲ್ಲಿ ದೊಡ್ಡ ದೇಹಪ್ರಮಾಣವುಳ್ಳ ಒಬ್ಬ ಭಿಲ್ಲನು ವಾಸವಾಗಿದ್ದನು. ಆ ಶ್ರೀಪರ್ವತದ ಹತ್ತಿರ ಗೋಧಾಪುರವೆಂಬ ಪಟ್ಟಣವು ಹೆಚ್ಚು ಆಲದಮರಗಳಿಂದ ಅಲಂಕೃತವಾಗಿದ್ದಿತು. ॥೧-೨॥

ಮತ್ತು ಅದು ಬಿದಿರುಗಳಿಂದುಂಟಾದ ಮುತ್ತಿನ ಸಮೂಹಗಳಿಂದಲಂಕೃತರಾದ ಭಿಲ್ಲರಪಡೆಯಿಂದ ವ್ಯಾಪ್ತವಾಗಿ, ಅನೇಕ ಕೊಂಬೆಗಳಿಂದ ಯುಕ್ತವಾಗಿರುವ ಮಾವಿನ

ಚತ್ವಾರಪ್ರಾಂತವಿಸ್ತಾರ ಶಿಲಾಶುಷ್ಯತ್ಪ್ರಿಯಂಗುವತ್ ।
ಹೃದ್ಯಾಕೃಷ್ಣಮೃಗವ್ಯಾಘ್ರಸಿಂಹದಂತಿಕಿಶೋರಕಾಃ ॥೪॥

ವರ್ಧಿತಾವ್ಯಾಧಶಿಶುಭಿರುಲ್ಲಸಂತಿ ಯದಂಕಣೇ ।
ಯತ್ರ ವ್ಯಾಧಕುಮಾರೀಭಿಶ್ಚಾಮರೀ ಹರಿಣೀಮೃಗಾಃ ॥೫॥

ಕೌತುಕೇ ಗೋಪಲಾಲ್ಯಂತೇ ಶಿಖಿನಃ ಶಾರಿಕಾ ಶುಕಾಃ ।
ಯತ್ರ ಪ್ರತಿಕಿರಂತೌಘ ದ್ವಿರದಾ ಹರಿಗರ್ಜಿತೈಃ ॥೬॥

ಪ್ರಾದುರ್ಭವಂತಿ ಛಿಂದಂತಿ ಭಿಂದಂತಿ ಗಿರಿಮುದ್ಭವಾನ್ ।
ವೇಣುಡಿಂಡಿಮಶೃಂಗಾಣಾಮುಚ್ಚಲಂತಿ ಸ್ವನಾ ಸದಾ ॥೭॥

ಯತ್ರೋಚ್ಚಗಿರಿಶೃಂಗಾಣಾಂ ನಿರ್ಝರಾಣಾಮುಥಾರ್ಭಟೀಃ ।
ಆಹೃತಾನಾಂ ಹಠಾದ್ವ್ಯಾಧೈರ್ನಾರೀಚಿಕೀನಾಂ ನ ಕೇವಲಂ ॥೮॥

---

ಮರಗಳ ಗುಂಪಿನಿಂದಲೂ, ಬೇಲದ ಮರಗಳಿಂದಲೂ ಜೋಲುಹಾಕಿರುವ ಬಲೆಗಳಿಂದಲೂ ಶೋಭಿಸುತ್ತಿದ್ದಿತು ಆ ಊರಿನ ಮನೆಗಳ ಅಂಗಣಗಳಲ್ಲಿ ವಿಸ್ತಾರವಾಗಿರುವ ಕಲ್ಲುಚಪ್ಪಡಿಗಳ ಮೇಲೆ ನವಣೆಗಳನ್ನು ಒಣಗಿಸುವುದಕ್ಕೋಸ್ಕರ ಹರಡಿದ್ದರು. ಮನೋಹರವಾದ ಜಿಂಕೆಯಮರಿ, ಹುಲಿ, ಸಿಂಹ ಮತ್ತು ಆನೆಗಳ ಮರಿಗಳನ್ನು ಬೇಡರ ಮಕ್ಕಳು ಸಾಕುತ್ತಾ ಅವುಗಳೊಡನೆ ಆಟವಾಡುತ್ತಾ ಮನೆಗಳ ಅಂಗಳಗಳಲ್ಲಿ ಶೋಭಿಸುತ್ತಿರುವರು. ||೩-೪||

ಬೇಡರ ಕುವರಿಯವರು ಚಮರೀಮೃಗ, ಜಿಂಕೆ, ಹುಲ್ಲೆ, ನವಿಲು, ಶಾರಿಕಾ, ಮತ್ತು ಗಿಳಿಗಳನ್ನು ಕುತೂಹಲದಿಂದ ಸಾಕಿ ಆಟವಾಡಿಸುತ್ತಾ ಕಾಲಕಳೆಯುತ್ತಿರುವರು. ಸಿಂಹಗಳ ಗರ್ಜನೆಯನ್ನು ಕೇಳಿ ಕೀರುತ್ತಿರುವ ಆನೆಗಳ ಹಿಂಡುಗಳು ಕಾಡುಗಳಲ್ಲೆಲ್ಲಾ ಅಲೆಯುತ್ತಾ, ಬೆಟ್ಟಗಳಲ್ಲಿ ಬೆಳೆದಿರುವ ಮರಗಿಡಗಳನ್ನು ಮುರಿಯುತ್ತಲೂ, ಬೀಳಿಸುತ್ತಲೂ ಅಲೆಯುತ್ತಿದ್ದುವು. ಬಿದಿರುಗಳ ಸಿಡಿತಗಳು ಡಿಂಡಿಮವಾದ್ಯಗಳಂತೆ ಮೊಳಗುತ್ತಾ ಪರ್ವತಶಿಖರಗಳನ್ನೆಲ್ಲಾ ಶಬ್ದಗೊಳಿಸುತ್ತಿರುವುವು. ||೫-೬-೭||

ಎತ್ತರವಾದ ಬೆಟ್ಟಗಳ ಶಿಖರಗಳಿಂದ ಹರಿದುಬರುವ ನೀರಿನ ಪ್ರವಾಹಗಳು ಆರ್ಭಟಿಸುತ್ತಿರುವುವು. ಹೊಸದಾಗಿ ಬಲಾತ್ಕಾರದಿಂದ ಬೇಡನು ಎಳೆದುತಂದಿರುವ

ಯತ್ರ ಕ್ವಚನ ನಾಗಾನಾಂ ಕುಲಂ ಮುದಿರವತ್ಸ್ಥಿತಂ ।
ತತೋsಜ್ಝಿತಕ್ಷಮಾ ಪ್ರೇಮನಯನಾಂ ಮಾಂಸಭೋಜನಂ ॥೯॥

ಅಧರ್ಮಾಣಾಂ ಪುಲಿಂದಾನಾಮಧಿಪೋ ನಾಗ ಇತ್ಯಭೂತ್ ।
ವೇಣುಮುಕ್ತಾಮಯಂ ಹಾರಂ ಯದ್ಬಿಭ್ರತ್ಸ್ತನಮಂಡಲೇ ॥೧೦॥

ಸವಿಕ್ಷ್ಯ ಲಜ್ಜ್ಯಯೇನಾಸೀದ್ವಲಯಂ ನಾಗದಂತಜಂ ।
ಜನ್ಮಾಂತರೇsಪಿ ತಪ್ತ್ವಾಪಿ ತಪೋ ವ್ಯಾಧಕುಲೋದ್ಭವಃ ॥೧೧॥

ಕ್ರೂರೋ ವಿಕ್ರಮದರ್ಪಾಭ್ಯಾಂ ಸಿಂಹವದ್ಧನ್ವಿನಾಂ ನೃಣಾಂ ।
ವ್ಯಾಧೇನ ಕುಲಸಂಭೂತಾ ನಾಮ್ನಾ ದಂತೇತಿ ಕನ್ಯಕಾ ॥೧೨॥

ಮೃಗಾದನಸ್ಯ ವ್ಯಾಘ್ರೀವ ತಸ್ಯಾಸೀದ್ಗೃಹಮೇಧಿನೀ ।
ಶಾರ್ದೂಲನಖಸುಪ್ರೋತಗುಂಜಾಂಗಾವಿಧುತಸ್ರಜಾ ॥೧೩॥

---

ಉತ್ತಮವಾದ ಹಸುಗಳೂ ಗಾಬರಿಯಿಂದ ಕೂಗುತ್ತಿರುವುವು. ಆ ನಗರದ ಕೆಲವೆಡೆಗಳಲ್ಲಿ ಆನೆಗಳ ಸಮೂಹವು ಮೋಡಗಳಂತೆ ಕಾಣುತ್ತಿರುವುವು. ಅಂತಹ ಆನೆಗಳ ಗುಂಪಿನಲ್ಲಿ ದಯೆಯನ್ನು ತೋರಿಸದೇ ದಿಟ್ಟತನದಿಂದ ಸಂಚರಿಸುತ್ತಾ ಮಾಂಸವನ್ನು ತಿನ್ನುವುದರಲ್ಲಿ ಪ್ರೇಮದೃಷ್ಟಿಯನ್ನು ಬೀರುತ್ತಿರುವ, ಅಧರ್ಮಕಾರ್ಯಕ್ಕೆ ಆಶ್ರಯವಿತ್ತಿರುವ ಬೇಡರಿಗೆಲ್ಲಾ ನಾಗನೆಂಬುವನು ಸ್ವಾಮಿಯಾಗಿದ್ದನು. ||೮-೯||

ಬಿದಿರ ಮುತ್ತುಗಳ ಹಾರವನ್ನು ಸ್ತನಪ್ರದೇಶದಲ್ಲಿ (ವಕ್ಷಸ್ಥಳದಲ್ಲಿ) ಧರಿಸಿರುವುದನ್ನು ನೋಡಿ ನಾಚಿಕೆಯಿಂದ ಆನೆಯ ದಂತದ ಕಡಗವು ಕೈಗಳಲ್ಲಿ ಶೋಭಿಸುತ್ತಿರುವುದೋ ಎಂಬಂತೆ ಇವನು ಕೈಗೆ ಆನೆಯ ಕೊಂಬಿನ ಕಂಕಣಗಳನ್ನು ಹಾಕಿಕೊಂಡಿದ್ದನು. ಹಿಂದಿನ ಜನ್ಮದಲ್ಲಿ ಅನೇಕ ತಪಸ್ಸುಮಾಡಿದ್ದರೂ ಬೇಡರ ವಂಶದಲ್ಲಿ ಹುಟ್ಟಿರುವ ಈ ನಾಗನು ಬಿಲ್ಲುಗಾರರಿಗೆ ತನ್ನ ಪರಾಕ್ರಮ ಮತ್ತು ದರ್ಪಗಳಿಂದ ಸಿಂಹದಂತಿದ್ದನು. ||೧೦-೧೧||

ಇದೇ ಬೇಡರ ವಂಶದಲ್ಲಿಯೇ ಹುಟ್ಟಿದ ದಂತಾ ಎಂಬ ಹೆಸರಿನ ಒಬ್ಬ ಕನ್ಯೆಯು ಗಂಡುಹುಲಿಗೆ ಹೆಣ್ಣುಹುಲಿಯಂತೆ ಆ ನಾಗನೆಂಬ ವ್ಯಾಧರಾಜನಿಗೆ ಮಡದಿಯಾದಳು. ಹುಲಿಗಳ ಉಗುರು ಮತ್ತು ಗುಳಗಂಜಿಗಳಿಂದ ಕೂಡಿದ ಹಾರವನ್ನು ಜೋಲಾಡುವಂತೆ ಕಂಠಕ್ಕೆ ಹಾಕಿಕೊಂಡು ನವಿಲುಗರಿಗಳಿಂದ ಯುಕ್ತವಾಗಿರುವ

ಬರ್ಹಿಬರ್ಹಾವಲೀನದ್ಧತಮಾಲದಳಚೋಲಿಕಾ ।
ಸಪ್ತಚ್ಛದಾಚ್ಛಛದನೈಶ್ಛಾದಿತಾ ಛಾಂದಸೀ ತಥಾ ॥೧೪॥

ಅನಪತ್ಯೇತ್ಯುಚ್ಯಮಾನಾ ಲೋಕೈಃ ಸಾ ದುಃಖಿತಾಽಭವತ್ ।
ವಿಷಣ್ಣಾಂ ತಾಂ ಪ್ರಿಯಾಂ ವೀಕ್ಷ್ಯ ದೇವಂ ನಿತ್ಯಮಸೇವತ ॥೧೫॥

ಮಯೂರಕುಕ್ಕುಟೋನ್ಮತ್ತ ನೀಯಮಾಲಿಂಕ ತೋರಣಾ ।
ಘಂಟಾಂ ಬದ್ಧ್ವಾ ಸಹಸ್ತ್ರೀಭಿರ್ದೇವಂ ಭೇಜೇ ಸ ವ್ಯಾಧಪಃ ॥೧೬॥

ದಂತಾಪಿ ದತ್ವಾ ಮಾಂಸಾನಿ ಸರ್ವೇಷಾಂ ಭೋಜನಾಯ ಹಿ ।
ಸ್ನಾತ್ವಾ ನಿರ್ಝರತೋಯೇಷು ನಿರ್ಜರಾದಧಿಕಾಽಭವತ್ ॥೧೭॥

ತತ್ರ ಸಾಪಿ ಚಿರಂ ದೇವಂ ಕಾರ್ತಿಕೇಯಮತೋಷಯತ್ ।
ಬರ್ಹಿವಾಹಸ್ಯ ಭಿನ್ನಾದ್ರೇಃ ಪುತ್ರಸ್ಯ ಪುರವೈರಿಣಃ ॥೧೮॥

---

ಹೊಂಗೆಯ ಚಿಗುರುಗಳನ್ನು ತಲೆಗೆ ಮುಡಿದುಕೊಳ್ಳುತ್ತಾ ಆ ಬೇಡನ ಹೆಂಡತಿಯು ಶುಭ್ರವಾದ ಏಳೆಲೆಬಾಳೆಯಂತೆ ಇರುವ ಬಟ್ಟೆಗಳನ್ನು ಧರಿಸುತ್ತಿದ್ದಳು.॥೧೨-೧೩-೧೪॥

ಹೀಗಿದ್ದರೂ ಮಕ್ಕಳಿಲ್ಲದವಳೆಂದು ಜನಗಳಿಂದ ಹೇಳಿಸಿಕೊಳ್ಳುತ್ತಾ ಅವಳು ವಿಶೇಷವಾದ ದುಃಖಕ್ಕೀಡಾಗಿದ್ದಳು. ತನ್ನ ಪ್ರಿಯೆಯು ಹೀಗೆ ಖಿನ್ನಳಾಗಿರುವುದನ್ನು ನೋಡಿ ಆ ವ್ಯಾಧರಾಜನಾದ ನಾಗನು ಪ್ರತಿದಿನವೂ ಕೊಬ್ಬಿದ ನವಿಲು, ಕೋಳಿ ಇವುಗಳನ್ನು ಮಹಾದೇವನಿಗೆ ಸಮರ್ಪಿಸಿ, ದಿವ್ಯವಾದ ಮಾಲೆಗಳು, ತೋರಣಗಳು ಇವುಗಳಿಂದ ಅಲಂಕರಿಸಿ, ಸಾಲಾಗಿ ಘಂಟೆಗಳನ್ನು ಕಟ್ಟಿಸಿ ಮಹಾದೇವನನ್ನು ಭಕ್ತಿಯಿಂದ ತನ್ನ ಸ್ತ್ರೀಜನಗಳೊಡನೆ ಸೇವಿಸುತ್ತಿದ್ದನು. ॥೧೫-೧೬॥

ಆ ನಾಗನ ಪತ್ನಿಯಾದ 'ದಂತಾ' ಎಂಬುವಳೂ ಸಹ ಎಲ್ಲರಿಗೂ ಊಟಕ್ಕೆ ಬೇಕಾದಷ್ಟು ಮಾಂಸಗಳನ್ನು ಒದಗಿಸಿ ತಾನು ಝರಿಗಳ ನೀರಿನಲ್ಲಿ ಸ್ನಾನಮಾಡುತ್ತಾ ದೇವತೆಗಳಿಗಿಂತಲೂ ಶ್ರೇಷ್ಠಳೆನಿಸಿದಳು. ಅಲ್ಲಿಯೇ ಅವಳು ಬಹಳಕಾಲ ಕುಮಾರಸ್ವಾಮಿಯನ್ನು ಪೂಜಿಸಿ ಸಂತೋಷಪಡಿಸಿದಳು. ಮಯೂರವಾಹನನೂ, ಕ್ರೌಂಚ ಪರ್ವತವನ್ನು ಒಡೆದವನೂ, ತ್ರಿಪುರರನ್ನು ಸಂಹರಿಸಿ, ಕಾಲಕೂಟವಿಷವನ್ನು ಕುಡಿದ ಮಹಾದೇವನ ಪುತ್ರನೂ ಆದ ಸ್ಕಂದದೇವನ ಮತ್ತು ಶ್ರೀವಲ್ಲೀದೇವಿಯ ಅನುಗ್ರಹದಿಂದ ಕೇವಲ ಬೇಡರ ಜಾತಿಗೆ ಭೂಷಣಪ್ರಾಯವಾಗಿ, ಬೇಡದಂಪತಿಗಳ

ನಿಷಾದಸ್ಯ ನಿಷಾದ್ಯೈಕಪಚೇಲಿಮತಪಃಫಲಂ ।
ಶ್ರೀದೇವ್ಯಾಶ್ಚ ಪ್ರಸಾದೇನ ನಿಷಾದಕುಲಭೂಷಣಂ ॥೧೯॥

ದಧೌ ಗುಣಾನ್ವಿತಂ ಗರ್ಭಂ ಸಾನೈಷಾದೀ ನಿಷಾದಹೃತ್ ।
ಶುಭರ್ಕ್ಷೇ ಸೂತಿಕಾಗೇಹೇ ಋಕ್ಷರಾಜದ್ಯುತಿಂ ಸುತಂ ॥೨೦॥

ಅಸೂತ ತನಯಂ ದಂತಾ ಚಂದ್ರಲೇಖೇವ ವಾರಿಧೇಃ ।
ವ್ಯಾಧೋಽಪಿ ನಿಷ್ಯಥೇ ದುಃಖಮೃಗಂ ಹರ್ಷಶರೈಸ್ತದಾ ॥೨೧॥

ದೇವಾಃ ಸುಮಾನಿ ವವೃಷುಃ ದಿವಿ ಭೇರ್ಯೋಽಪಿ ದಧ್ವನುಃ ।
ಸ ಬಾಲಕೋಽಂಬುದಶ್ಯಾಮೋ ಕರಿದಂತೋತ್ಥಮೌಕ್ತಿಕೈಃ ॥೨೨॥

ಸುವಿದ್ಯುನ್ಮೇಘಮಧ್ಯಸ್ಥಾ ಯಥಾ ಭಾತಿ ತಥಾ ಬಭೌ ।
ಉತ್ಸಂಗೇ ಶುಶುಭೇ ಬಾಲಃ ಶೃಂಗೇ ನೀಲಗಿರೇರಿವ ॥೨೩॥

ತಪಸ್ಸಿನ ಪರಿಪಾಕರೂಪವಾದ ಫಲವೆನಿಸಿದ, ಗುಣಪೂರ್ಣವಾದ ಗರ್ಭವನ್ನು ಈ ದಂತಾ ಎಂಬ ಬೇಡಿತಿಯು ಧರಿಸಿದಳು. ಇದರಿಂದ ಹಿಂದೆ ಅವಳಿಗೆ ಉಂಟಾಗಿದ್ದ ದುಃಖವು ನಿವೃತ್ತಿಯಾಯಿತು. ||೧೭-೧೮ ೧೯||

ಶುಭನಕ್ಷತ್ರದಲ್ಲಿ ಸೂತಿಕಾಗೃಹದಲ್ಲಿ ಈ ದಂತೆಯು ನಕ್ಷತ್ರಗಳ ರಾಜನಾದ ಚಂದ್ರನಂತೆ ಕಾಂತಿಯುಳ್ಳ ಮಗನನ್ನು ಸಮುದ್ರದಲ್ಲಿ ಹುಟ್ಟಿದ ಚಂದ್ರಲೇಖೆಯಂತೆ ಪಡೆದಳು. (ಇಲ್ಲಿ ಮುಂದೆ ಇವನ ಬಣ್ಣವು ನೀಲವೆಂದು ವರ್ಣಿಸಲ್ಪಟ್ಟಿರುವುದರಿಂದ "ಋಕ್ಷರಾಜ" ಶಬ್ದಕ್ಕೆ ಚಂದ್ರನೆಂದು ಅರ್ಥಮಾಡದೆ ಕರಡಿಯ ಪರವಾದ ಅರ್ಥಮಾಡಬಹುದು.) ಈ ಪುತ್ರಜನನದಿಂದ ವ್ಯಾಧರಾಜನಾದ ನಾಗನು ತನ್ನ ದುಃಖವೆಂಬ ಜಿಂಕೆಯನ್ನು ಸಂತೋಷವೆಂಬ ಬಾಣಗಳಿಂದ ಹೊಡೆದು ಸಂಹರಿಸಿದನು. (ಅಂದರೆ ಅವನ ದುಃಖವೆಲ್ಲವೂ ಕಳೆದು ಸಂತುಷ್ಟನಾದನು.) ಈ ಸಮಯದಲ್ಲಿ ದೇವತೆಗಳು ಪುಷ್ಪವೃಷ್ಟಿ ಸುರಿಸಿದರು. ಆಕಾಶದಲ್ಲಿ ದೇವನಗಾರಿಗಳು ಮೊಳಗಿದವು. ||೨೦-೨೧||

ಮೋಡದಂತೆ ಕಪ್ಪುಬಣ್ಣವುಳ್ಳ ಆ ಹುಡುಗನು ಆನೆಯ ದಂತಗಳಿಂದ ಮಾಡಿದ ಮುತ್ತುಗಳನ್ನು ಧರಿಸಿ, ಮೇಘಮಧ್ಯದಲ್ಲಿರುವ ಒಳ್ಳೆಯ ಮಿಂಚಿನಂತೆ ಪ್ರಕಾಶಿಸಿದನು. ಆ ತಂದೆಯ ತೊಡೆಯ ಮೇಲೆ ಕುಳಿತಿರುವ ಬಾಲಕನು ನೀಲ

ಸ ತದಾ ಬಂಧುಭಿಃ ಸಾರ್ಧಂ ಹಿಂಸಾನ್ವ್ಯಾಘ್ರಾನಮೂಮುಚತ್ ।
ವಿಶಸಂಶ್ಚ ತದಾನ್ಮಂಕುಪಲಲಾಶೋಭಿತೋತ್ಸವಃ ॥೨೪॥

ಚಕ್ರೇ ತಂ ವಕ್ರಿತಸುತಿಃ ನೀಲಂ ನಾಮ್ನಾ ತದಾ ಮುದಾ ।
ವ್ಯಾಘ್ರಸಿಂಹನಖೈಸ್ತಸ್ಯ ಭೂಷಣೈರ್ದಂತಿನಾಂ ರದೈಃ ॥೨೫॥

ಆಕಲ್ಪಂತ ತದಾ ಸರ್ವೇ ಬಾಂಧವಾ ಭೋಜನೋತ್ಸವಾಃ ।
ಗುಂಜಾಮಣಿಮಯಂ ಹಾರಂ ಸ್ವಕಂಠಾದವಮುಚ್ಯ ಸಃ ॥೨೬॥

ತತ್ಕಂಠೇ ಕಲಕಂಠೀನಾಂ ಗಾನೈರಾಧತ್ತ್ರವಾಂಛಿಶೋಃ ।
ತತ್ರೋತ್ಸವೇ ವ್ಯಾಧಪತಿಃ ಪ್ರಸಾದ್ಯ ಕುಲದೇವತಾಃ ॥೨೭॥

---

ಪರ್ವತದ ಶಿಖರದಂತೆ ಶೋಭಿಸಿದನು. ಆಗ ಆ ಬೇಡರ ರಾಜನು ಪುತ್ರಜನನದಿಂದ ಸಂತುಷ್ಟನಾಗಿ ಕ್ರೂರವಾದ ಹುಲಿ, ಸಿಂಹ ಮುಂತಾದ ಪ್ರಾಣಿಗಳನ್ನೆಲ್ಲಾ ಬಿಟ್ಟು ಬಿಟ್ಟನು. ॥೨೨-೨೩॥

ಆ ಕಾಲದಲ್ಲಿ ಕೇವಲ ಜಿಂಕೆಗಳನ್ನೇ ಕೊಂದು ಅದರ ಮಾಂಸದಿಂದಲೇ ಉತ್ಸವವನ್ನು (ಹಬ್ಬವನ್ನು) ಮಾಡಿಸುತ್ತಾ ವಕ್ರಬುದ್ಧಿಯುಳ್ಳ ಆ ವ್ಯಾಧರಾಜನು ಮಗನಿಗೆ ಸಂತೋಷದಿಂದ 'ನೀಲ' ನೆಂಬ ಹೆಸರನ್ನು ಇಟ್ಟನು. ಹುಲಿ, ಸಿಂಹಗಳ ಉಗುರುಗಳಿಂದಲೂ ಆನೆಗಳ ದಂತಗಳಿಂದಲೂ ಮಗನಿಗೆ ಒಡವೆಗಳನ್ನು ಮಾಡಿಸಿದನು. ಆ ಸಮಯದಲ್ಲಿ ಬಂಧುಗಳೆಲ್ಲರೂ (ನೆಂಟರೆಲ್ಲರೂ) ಭೋಜನಾಪೇಕ್ಷೆಯಿಂದ ತಮ್ಮ ರಾಜನ ಮನೆಗೆ ಬಂದರು. ॥೨೪-೨೫॥

ಆ ವ್ಯಾಧರಾಜನು ಗುಲಗಂಜಿ ಮತ್ತು ರತ್ನಗಳಿಂದ ಯುಕ್ತವಾದ ಹಾರವನ್ನು ತನ್ನ ಕೊರಳಿನಿಂದ ತೆಗೆದು ಮಗನ ಕತ್ತಿಗೆ ಹಾಕಿದನು. ಆ ಕಾಲದಲ್ಲಿ ಮಧುರವಾದ ಧ್ವನಿಯುಳ್ಳ ಹೆಂಗಸರಿಂದ ಸಂಗೀತ ಹಾಡಿಸಿದನು. ಮಗುವಿನ ಆ ಉತ್ಸವದಲ್ಲಿ ವ್ಯಾಧರಾಜನು ತನ್ನ ಕುಲದೇವತೆಗಳನ್ನೆಲ್ಲಾ ಸಂತೋಷದಿಂದ ಪೂಜಿಸಿ, ತನ್ನ ಬಂಧುಬಾಂಧವರನ್ನೂ ಇತರ ತನ್ನ ಭಿಲ್ಲಪರಿವಾರವನ್ನೂ ಊಟಉಪಚಾರಾದಿಗಳಿಂದ ಹರ್ಷಗೊಳಿಸಿದನು. ॥೨೬-೨೭॥

ಭಿಲ್ಲಾನುಲ್ಲಾಪಯೊಮಾಸ ಸಲ್ಲಾಪೈರ್ಭೋಜನಾದಿಭಿಃ ।
ಸ ಬಾಲೋ ವವೃಧೇ ತತ್ರ ಪ್ರಾವೃಟ್ಕಾಲಘನೋ ಯಥಾ ॥೨೮॥

ಜಾನುಭ್ಯಾಂ ಸಂಚರದ್ಧಾತ್ರ್ಯಾ ಧರಿತ್ರ್ಯಾಂ ಸಂಚರನ್ ತದಾ ।
ಲಲಾಟೇ ಕಾಲದಂಷ್ಟ್ರಾಭಗಜದಂತೋರುಭೂಷಣಂ ॥೨೯॥

ಶೂಲಾಲಿ ಖಂಡಿತಪ್ರೋತ ಕಾಕಪಕ್ಷಧರಾಂಕಿತಃ ।
ದಂತೀ ದಂತಾಂಘ್ರಿಕಟಕೋ ಮುಂಜಗುಂಜಾಮಣೀಸರಃ ॥೩೦॥

ಪಾಂಥಾಹರಣಲಬ್ಧೈಶ್ಚ ಲುಬ್ಧಕೋ ಭೂಷಣೈಃ ಶಿಶುಂ ।
ಸಕುಮಾರಃ ಕಿರಾತಾನಾಂ ಕುಮಾರೈಃ ಸ್ವವಯಃ ಸಮೈಃ ॥೩೧॥

ಚಿಕ್ರೀಡ ಕ್ರೋಡಬಾಲೈಶ್ಚ ಶ್ವಭಿಃ ಕುಕ್ಕುಟಮರ್ಕಟೈಃ ।
ಬಾಲ್ಯಕೇಲೀವಿಶೇಷೇಣ ಧೂಲೀಪಾಲೀಷು ಬಾಲಕಃ ॥೩೨॥

ದೃಷ್ಟ್ವಾ ಕುಮಾರಂ ಮಾರಾಭಂ ಘನಪತ್ಪೀವರಾಕೃತಿಃ ।
ಉಥ್ಘೋಷಯಂತ್ಸತ್ಪಟಿಹೈಃ ಕುಮಾರೋ ಗೃಹ್ಯತೇ ಧನುಃ ॥೩೩॥

---

ಆ ಬಾಲಕನು ಮಳೆಗಾಲದ ಮೋಡದಂತೆ ಕ್ರಮವಾಗಿ ಅಭಿವೃದ್ಧಿಹೊಂದಿದನು. ಮೊಳಕಾಲಿಂದ ನೆಲದಮೇಲೆ ಅಂಬೆಗಾಲಿಡುತ್ತಾ ಅನಂತರ ದಾದಿಯು ಕೈಹಿಡಿದು ನೆಲದಲ್ಲಿ ಮೆಲ್ಲಮೆಲ್ಲಗೆ ನಡೆದನು. ಅವನ ಹಣೆಯಲ್ಲಿ ಕಾಲಪುರುಷನ ಕೋರದಾಡೆಯಂತಿರುವ ಆನೆಯ ದಂತದಿಂದ ಮಾಡಿದ ದೊಡ್ಡ ಆಭರಣವಿದ್ದಿತು. ಶೂಲದ ತುದಿಯಿಂದ ಕತ್ತರಿಸಿ ಅಡ್ಡಡ್ಡಲಾಗಿ ಸೇರಿಸಿರುವ ಮುಂಜುಟ್ಟುಗಳಿಂದ ಅಲಂಕೃತನಾಗಿ ಶೋಭಿಸುತ್ತಿದ್ದನು. ಆನೆದಂತದಿಂದ ಮಾಡಿದ ಕಾಲ್ಗಡಗವನ್ನು ಮನೋಹರವಾದ ಗುಳಗಂಜೀಮಾಲೆಯನ್ನು ಧರಿಸಿದ್ದನು. ॥೨೮-೨೯-೩೦॥

ದಾರಿಗರ ಲೂಟಿಯಿಂದ ದೊರೆತ ಆಭರಣಗಳಿಂದಲೂ ಸಹ ಆ ವ್ಯಾಧನು ತನ್ನ ಮಗುವನ್ನು ಅಲಂಕರಿಸುತ್ತಿದ್ದನು. ಆ ಕುಮಾರನು ಕ್ರಮವಾಗಿ ತನ್ನ ವಯಸ್ಸಿನ ಇತರ ಹುಡುಗರೊಡನೆಯೂ ಹಂದಿ, ನಾಯಿ, ಕೋಳಿ ಮತ್ತು ಕೋತಿಗಳ ಮರಿಗಳೊಡನೆಯೂ ಆಟವಾಡುತ್ತಿದ್ದನು. ಅಲ್ಲದೇ ಮಣ್ಣಿನಾಟದಲ್ಲಿ ವಿಶೇಷವಾಗಿ ಮಕ್ಕಳೊಡನೆ ಆಡುತ್ತಾ ಕಾಲಕಳೆಯುತ್ತಿದ್ದನು. ಮನ್ಮಥನಂತೆ ಸುಂದರವಾದ ಕಾಂತಿಯಿಂದ ಶೋಭಿಸುತ್ತಿರುವ ಮಗನನ್ನು ಕಂಡು ಮೋಡದಂತೆ ದಪ್ಪ ಆಕೃತಿ

ಶ್ರುತ್ವೋದಂತಂ ವ್ಯಾಧಸೂನೋರ್ಧನುರ್ಗ್ರಹಣಮಂಗಲಂ ।
ವ್ಯಾಧಾಃ ಸಮಾಯಯುರ್ಹೃಷ್ಟಾಃ ಪುಷ್ಟಾಂಗಾ ವಿವೃತಾನನಾಃ॥೩೪॥

ಚಾಪಾನಿ ಮಧುಮೂಲಾನಿ ಶರಾನ್ಪಕ್ಷವಿಭೂಷಿತಾನ್ ।
ಸಿರಾಸಮುದ್ಭವಾಜ್ಯಾಶ್ಚ ಮಧುಮೂಲಫಲಾನಿ ಚ ॥೩೫॥

ಖೇಟಕಾಂಶ್ಚ ತಥಾ ಪಾಶಾನಾಖೇಟಕಬಲಾನಿ ಚ ।
ಶುನಶ್ಚೋಪಾಯನಂ ತಸ್ಯ ಲಶುನಂ ಪಿಶುನಾಯಿತೇ ॥೩೬॥

ಸಮಾಜಹ್ರುಶ್ಚ ತೇ ತಸ್ಯ ಭಿಲ್ಲಾಸ್ತೇ ಭಿಲ್ಲಪಾಣಯಃ ।
ಪ್ರಿಯಂಗುಚೂರ್ಣಂ ಪೂರ್ಣಂ ತು ಸಕಪಿತ್ಥಂ ಮಧುಪ್ಲುತಂ ॥೩೭॥

ವಿಶಾಲೈಃ ಕದಲೀಪತ್ರೈರಾಬಧ್ಯೈವ ವಿನಿರ್ಯಯುಃ ।
ವ್ಯಾಧಾಧಿಪಂ ಪ್ರಣಮ್ಯೈನಂ ಕುಮಾರಮಭಿನಂದ್ಯ ಚ ॥೩೮॥

---

ಯಿಂದ ಯುಕ್ತನಾಗಿರುವ ಈ ಬಾಲಕನ ಧನುರ್ಗ್ರಹಣಮಹೋತ್ಸವವನ್ನು ಬೇಡರ ರಾಜನು ತಮಟೆಶಬ್ದಗಳೊಡನೆ ಎಲ್ಲೆಡೆಯಲ್ಲಿಯೂ ಸಾರಿಸಿದನು. ॥೩೧-೩೨-೩೩॥

ಬೇಡರ ರಾಜಕುಮಾರನು ಬಿಲ್ಲು ಹಿಡಿಯುವ ಮಂಗಳಸಮಾರಂಭವನ್ನು ತಿಳಿದು ಎಲ್ಲಾ ಬೇಡರೂ ಸಂತೋಷದಿಂದ ಉಬ್ಬಿದವರಾಗಿ, ಅರಳಿದ ಮುಖವುಳ್ಳವರಾಗಿ ಅಲ್ಲಿಗೆ ಬಂದು ಸೇರಿದರು. ಮಧುವೇ ಬುಡದಲ್ಲುಳ್ಳ ಬಿಲ್ಲುಗಳನ್ನೂ, ಗರಿಗಳಿಂದಲಂಕೃತವಾದ ಬಾಣಗಳನ್ನೂ, ತೊಗಲಿನ ಹೆದೆಗಳನ್ನೂ, (ಜೇನುತುಪ್ಪವೇ ಮೂಲವಾಗುಳ್ಳ) ಸಿಹಿಯಾದ ಹಣ್ಣುಗಳನ್ನೂ ತಂದರು. ॥೩೪-೩೫॥

ಹಗ್ಗದ ಬಲೆಗಳು, ಸಣ್ಣಹುರಿಗಳ ಬಲೆ, ಇತರ ಬೇಟೆಯ ಸಾಮಾನುಗಳು ಮತ್ತು ನಾಯಿಗಳು, ಅಲ್ಲದೇ ಬೆಳ್ಳುಳ್ಳಿ ಇವುಗಳನ್ನು ಆ ಬೇಡರು ವ್ಯಾಧರಾಜನೆನಿಸಿದ ಆ ಬೇಡನಿಗೆ ಮರ್ಯಾದೆಯಾಗಿ ತಂದುಕೊಟ್ಟರು ಬಿಲ್ಲನ್ನು ಹಿಡಿದ ಆ ಬೇಡರು ನವಣೆಯ ಪುಡಿ, ಜೇನಿನಿಂದ ತೊಯ್ದು ಪೂರ್ಣವಾದ ಬೇಲದ ಹಣ್ಣುಗಳು ಮುಂತಾದುವುಗಳನ್ನು ಅಗಲವಾದ ಬಾಳೆಲೆಗಳಲ್ಲಿ ಕಟ್ಟಿಕೊಂಡು ತಂದಿತ್ತರು. ॥೩೬-೩೭॥

ಬೇಡರೆಲ್ಲರೂ ತಮ್ಮ ರಾಜನಿಗೆ ನಮಸ್ಕಾರಮಾಡಿ, ಆ ಕುಮಾರನನ್ನು ಅಭಿನಂದಿಸಿ, ರಾಜನು ತಮಗಾಗಿ ಏರ್ಪಡಿಸಿದ್ದ ಜಿಂಕೆಯ ಮಾಂಸವನ್ನು ತಿಂದು ತೃಪ್ತರಾಗಿ, ಅಮೃತಪಾನಮಾಡಿದ ದೇವತೆಗಳನ್ನೂ ಸಹ ಹುಲ್ಲಿಗಿಂತಲು ಅಲ್ಪರನ್ನಾಗಿ ಭಾವಿಸಿದರು. ಆಚಾರ್ಯನು ಕೈಯಲ್ಲಿ ಬಿಲ್ಲನ್ನು ಹಿಡಿದಿರಲು ಎಲ್ಲರೂ ಅವನನ್ನು

ಸರ್ವೇ ತೇ ಶಬರಾ ಭುಕ್ತ್ವಾ ಶಾಂಬರಂ ಪಲಲಂ ತದಾ ।
ತೃಣಾಯ ಮೇನಿರೇ ತೃಪ್ತಾ ಸುರಾನಪಿ ಸುಧಾಶನಾನ್ ॥೩೯॥

ಪರಿವಾರ್ಯಾಚಾರ್ಯ ಧೃತಂ ಚಾಪಂ ಕ್ಷ್ವೇಲಿತನಿಸ್ವನೈಃ ।
ಶೃಂಗಕಾಹಲಶಂಖೋತ್ಥೈರ್ಭೇರೀಣಾಂ ಭೀಷಣಾರವೈಃ ॥೪೦॥

ವರಾಹಗಜಸಿಂಹಾನಾಂ ಮೃಗಾಣಾಂ ತ್ರಾಸದಾಯಕೈಃ ।
ಆಪೂರಿತ ದಿಗಂತಾಸ್ತೇ ವೇದೀಂ ಚಕ್ರುಃ ಪ್ರದಕ್ಷಿಣಾಂ ॥೪೧॥

ಪಾರ್ವತೀಯಾಃ ಪರ್ವತೇಂದ್ರೇ ಮೃಗೇಂದ್ರಸಮವಿಕ್ರಮಾಃ ।
ಕರತಾಲೋತ್ತರಂ ನೃತ್ತಂ ನಾರ್ಯೋ ಬಾಲಾಶ್ಚ ಚಕ್ರಿರೇ ॥೪೨॥

ದೇವತಾವೇಶವಿವಶಾ ನದತುಸ್ತತ್ರ ಕನ್ಯಕಾಃ ।
ಗತೇಷು ತೇಷ್ವಹಸ್ವೇವಂ ಹ್ಯಸ್ತಮೇ ದಿನಯೌವನೇ ॥೪೩॥

ನದತ್ಸು ತೂರ್ಯೇಷ್ವಾಚಾರ್ಯೋ ತಂ ಬಾಲೈರ್ಗ್ರಾಹಯದ್ಧನುಃ ।
ಅದ್ರೇಸ್ತಟೇ ತಂ ದೃಷ್ಟ್ವೈವ ವಿದ್ರವಂತಿ ಮೃಗಾಂಡಜಾಃ ॥೪೪॥

---

ಸುತ್ತುವರಿದು ಜಯಘೋಷಮಾಡುತ್ತಾ, ಕೊಂಬು, ತಮಟೆ, ಶಂಖಗಳಿಂದುಂಟಾದ ಮತ್ತು ದುಂದುಭಿವಾದ್ಯಗಳ ಭಯಂಕರ ಧ್ವನಿಗಳಿಂದ ಕಾಡುಹಂದಿ, ಆನೆ, ಸಿಂಹ ಮತ್ತು ಜಿಂಕೆಗಳಿಗೂ ಭಯವನ್ನುಂಟುಮಾಡುತ್ತಾ ದಿಕ್ಕುಗಳೆಲ್ಲಾ ಧ್ವನಿಗೈಯು ವಂತೆ ವೇದಿಕೆಯನ್ನು ಪ್ರದಕ್ಷಿಣೆಮಾಡಿದರು. ॥೩೮-೩೯-೪೦-೪೧॥

ಪರ್ವತದಲ್ಲಿರುವ ಸಿಂಹಗಳಿಗೆ ಸಮಾನವಾದ ಪರಾಕ್ರಮವುಳ್ಳ ಆ ಬೆಟ್ಟ ವಾಸಿಗಳು, ಹುಡುಗರು, ಹೆಂಗಸರೊಡನೆ ಕೈತಾಳ ಹಾಕಿಕೊಂಡು ನಾಟ್ಯವಾಡಿ ದರು. ಕನ್ಯೆಯರು ದೇವತೆಗಳ ಆವೇಶಹೊಂದಿದವರಾಗಿ ನಾದಮಾಡಿದರು. ಈರೀತಿ ಸಂತೋಷವ್ಯಾಪಾರಗಳಿಂದ ಹಗಲೆಲ್ಲಾ ಕಳೆಯಲು ಹಗಲಿನ ಯೌವನದ ಕೊನೆ ಯಲ್ಲಿ (ಅಸ್ತಮಯಕಾಲದಲ್ಲಿ) ತೂರ್ಯವಾದ್ಯಗಳು ಮೊಳಗುತ್ತಿರಲು, ಆಚಾರ್ಯನು ಜೊತೆಯ ಹುಡುಗರೊಡನೆ ಈ ವ್ಯಾಧರಾಜಕುಮಾರನಿಗೆ ಧನುರ್ಗ್ರಹಣ ಮಾಡಿಸಿ ದನು. ॥೪೨-೪೩॥

ಹೀಗೆ ಬಿಲ್ಲನ್ನು ಹಿಡಿದ ಕುಮಾರನನ್ನು ನೋಡಿಯೇ ಬೆಟ್ಟದ ತಪ್ಪಲಲ್ಲಿದ್ದ ಮೃಗಪಕ್ಷಿಗಳು ಓಡಿದವು. ಗುರುವಿನ ಅನುಗ್ರಹ ಪಡೆದು ಈ ಮೇಧಾವಿಯಾದ

ಗುರುಪ್ರಸಾದಿತೋ ಧೀಮಾಂಶ್ಚಾಪವಿದ್ಯಾಮಶಿಕ್ಷತ ।
ಲಕ್ಷ್ಯೇಽಪ್ಯಲಕ್ಷ್ಯಹೃದಯೋ ಸವ್ಯಾಸವ್ಯೇ ಬಭೂವಹ ॥೪೫॥

ಅನ್ಯೇಽಪ್ಯಸ್ತ್ರಾಯುಧೇಷ್ವೇವಂ ಪ್ರಾಗಲ್ಭ್ಯಂ ಪ್ರಾಪ್ತವಾನ್ಪರಂ ।
ವಿಶೇಷೇಣ ಸಮುಲ್ಲಾಸೀ ಸೌಂದರ್ಯಂ ಪ್ರಾಪ ಸೋ ತದಾ ॥೪೬॥

ನೀಲೋ ನೀಲಾಂಬುದಾಕಾರೋ ಮಾತಾಪಿತ್ರೋರ್ಮುದಂ ವ್ಯಧಾತ್ ।
ಸ ನಾಗೋ ಮೃಗಯೋದ್ಯೋಗೀ ಚರಂಛೈಲಾನ್ವಿತಾನಿ ಚ ॥೪೭॥

ಮಾಹೇಯಿಶಾ ದ್ವಿಷತಾಂ ಬಹ್ವೀರಾನೀಯಾಭ್ಯರ್ಚಯನ್ಸ್ವ ವೈ ।
ವಾರ್ಧಕಂ ಸ್ವತನೌ ದೃಷ್ಟ್ವಾ ಶಬರೇಶಃ ಸುತಂ ತದಾ ॥೪೮॥

ಪ್ರವೇಶ್ಯಂ ತದ್ವನಂ ಘೋರಮಾಖೇಟೇ ಖೇಟಧಾರಿಣಂ ।
ಶನೈರ್ನಿರತಮಾಹುಸ್ತೇ ಶಬರಾ ಶಬರೇಶ್ವರಂ ॥೪೯॥

---

ನೀಲನು ಧನುರ್ವಿದ್ಯೆಯನ್ನು ಜಾಗ್ರತೆ ಕಲಿತನು. ಎಡಬಲಗಳ ಗುರಿಯು ಹೊಡೆತದಲ್ಲಿ ಕೊಂಚವೂ ಲಕ್ಷ್ಯವೇ (ಗಣನೆಯೇ) ಇಲ್ಲದೆ ಅತಿನಿಪುಣನಾದನು. ಅಲ್ಲದೇ ಇತರ ಕತ್ತಿ, ಭಲ್ಲೆ ಮುಂತಾದ ಆಯುಧಪ್ರಯೋಗಗಳಲ್ಲಿಯೂ ಉತ್ತಮವಾದ ಪಾಂಡಿತ್ಯ ವನ್ನು ಪಡೆದನು. ವಿಶೇಷವಾಗಿ ಉಲ್ಲಾಸಜನಕವಾದ ದಿವ್ಯವಾದ ದೇಹಸೌಂದರ್ಯ ವನ್ನೂ ಸಂಪಾದಿಸಿದನು. ||೪೪-೪೫-೪೬||

ನೀಲಮೇಘದಂತೆ ಕಪ್ಪಾದ ಆಕೃತಿಯುಳ್ಳ ಈ ನೀಲನು ತಂದೆತಾಯಿಗಳಿಗೆ ಪ್ರೇಮಪಾತ್ರನಾಗಿ ಬೆಳೆದನು. ಒಂದುದಿನ ವ್ಯಾಧರಾಜನಾದ ನಾಗನು ಬೇಟೆ ಯಾಡಲು ಹೊರಟು ಬೆಟ್ಟಗುಡ್ಡಗಳಲ್ಲೆಲ್ಲಾ ಸಂಚರಿಸಿದನು. ಹಾಗೆ ಸಂಚರಿಸು ವಾಗ ಶತ್ರುಗಳಿಂದ ಗೆದ್ದು ತಂದ ಅವರ ವಸ್ತುಗಳನ್ನು ತಂದು ಪೂಜಿಸಿದನು. ಮತ್ತು ತನ್ನ ದೇಹದಲ್ಲಿ ಮುಪ್ಪು ಕಾಣಿಸಿಕೊಂಡುದನ್ನು ಕಂಡು ವ್ಯಾಧನಾಥನು, ಭಯಂಕರ ವಾದ ಆ ಕಾಡನ್ನು ಪ್ರವೇಶಿಸಿ ಬೇಟೆಯಾಡಲು ಬಲೆಗಳನ್ನು ಹಿಡಿದು ಆಯುಧ ಪಾಣಿಯಾಗಿರುವ ಇತರ ವ್ಯಾಧರನ್ನು ನೋಡುತ್ತಾ ತುಂಬಾ ದುಃಖಿಸಿದನು. ಅವನಿಗೆ, ಆಗ ಆ ವ್ಯಾಧರಿಂತೆಂದರು. ||೪೭-೪೮-೪೯||

॥ ಶಬರಾ ಊಚುಃ ॥

ವ್ಯಾಘ್ರಸಿಂಹವರಾಹೇಭೈಃ ಶರಭಾದ್ಯೈರ್ಮೃಗಾಂಡಜೈಃ ।
ಉದ್ರಿಕ್ತೈರ್ವನಮಾಕ್ರಾಂತಂ ತತ್ಪ್ರವೇಷ್ಟುಂ ನ ಶಕ್ಯತೇ ॥೫೦॥

ಇತ್ಯುಕ್ತಃ ಪ್ರಾಹ ತನ್ನಾಗೋ ವೃದ್ಧತ್ವಾನ್ನಾಲಮುಸ್ಮ್ಯಹಂ ।
ಆಖೇಟಿಕಾದ್ಯಾಧಿಪತ್ಯೇ ಯುಷ್ಮಾಭಿಃ ಸ್ಥಾಪ್ಯತಾಂ ಧನುಃ ॥೫೧॥

ಇತ್ಯುಕ್ತಾಸ್ತೇ ಪುನಃ ಪ್ರಾಹುರ್ಗಾಂಭೀರ್ಯೌದಾರ್ಯವೀರ್ಯವಾನ್ ।
ಸರ್ವಾಧಿಪತ್ಯೇ ಸ ಪುನಃ ತ್ವಯೈವ ಸ್ಥಾಪ್ಯತಾಮಿತಿ ॥೫೨॥

ಆದ್ಯೋಽಸ್ಯ ಮೃಗಯಾರಂಭಸ್ತಸ್ಮಾತ್ಪೂಜ್ಯಾ ಹಿ ದೇವತಾಃ ।
ಮಂತ್ರಾಣ್ಯಭ್ಯಸ್ಯತಾಂ ತ್ವತ್ತೋ ವ್ಯಾಘ್ರೇಭಮುಖಬಂಧನೇ ॥೫೩॥

---

ಹುಲಿ, ಸಿಂಹ, ಕಾಡುಹಂದಿ, ಆನೆ, ಶರಭವೇ ಮೊದಲಾದ ಕ್ರೂರಮೃಗಗಳಿಂದಲೂ. ಪಕ್ಷಿಗಳಿಂದಲೂ ವ್ಯಾಪ್ತವಾಗಿರುವ ಈ ಅರಣ್ಯವನ್ನು ಪ್ರವೇಶಿಸುವುದು ತಮಗೆ ಈಗ ಅಸಾಧ್ಯವಾಗಿರುವುದು ಎಂದು ಬೇಡರು ಬಿನ್ನವಿಸಲು, ಆಗ ಅವರೊಡೆಯನಾದ ನಾಗನು, ಮುಪ್ಪು ಬಂದಿರುವುದರಿಂದ ಈಗ ನಿಜವಾಗಿ ಆ ಕೆಲಸಮಾಡಲು ನಾನು ಸಾಮರ್ಥ್ಯವಿಲ್ಲದವನಾಗಿರುವೆನು. ಆದ್ದರಿಂದ ಈಗ ನೀವೆಲ್ಲರೂ ಸೇರಿ, ಬೇಟೆ ಮುಂತಾದ ಅಧಿಕಾರದಲ್ಲೆಲ್ಲಾ ನನ್ನ ಮಗನನ್ನು ಸ್ಥಾಪಿಸಿಕೊಳ್ಳಿರೆಂದು ಹೇಳಿದನು. ॥೫೦-೫೧॥

ಹೀಗೆ ತಮ್ಮ ರಾಜನಿಂದ ಆಜ್ಞಾಪಿಸಲ್ಪಟ್ಟ ಆ ಬೇಡರು ಪುನಃ ತಮ್ಮ ಒಡೆಯನಿಗೆ, " ಸ್ವಾಮಿ, ಗಾಂಭೀರ್ಯ, ಔದಾರ್ಯ ಮತ್ತು ಪರಾಕ್ರಮವುಳ್ಳ ಆ ನಿಮ್ಮ ಕುಮಾರನಾದ ನೀಲನನ್ನು ತಾವೇ ಎಲ್ಲಾ ಅಧಿಕಾರದಲ್ಲಿಯೂ ಸ್ಥಾಪಿಸಿರಿ. ಆದರೆ ಇದೇ ಮೊದಲು ಅವನು ಬೇಟೆಯಾಡುವುದರಿಂದ, ಇದರ ಶಾಂತಿಗಾಗಿ ದೇವತೆಗಳನ್ನು ಪೂಜಿಸಬೇಕು. ಅಲ್ಲದೇ ಹುಲಿ, ಸಿಂಹ, ಮುಂತಾದ ದುಷ್ಟಪ್ರಾಣಿಗಳ ಬಾಯಿ ಕಟ್ಟುವ ಮಂತ್ರಗಳು ತಮ್ಮಿಂದಲೇ ಕುಮಾರನಿಗೆ ಉಪದೇಶಿಸಲ್ಪಡಲಿ " ಎಂದು ಬೇಡರು ಹೇಳಿದರು. ॥೫೨-೫೩॥

ತದಾ ದೇವಾರ್ಚನಕರೀಮಾಹೂಯಂತಿ ವನೇಚರಾಃ ।
ಭದ್ರೇ ಚಾಗಮ್ಯತಾಮಸ್ಮ ಸ್ವಸ್ತಯೇ ದೇವಪೂಜನೇ ॥೫೪॥

ಇತ್ಯುಕ್ತಾ ಸಾಭ್ಯಗಾತ್ತತ್ರ ಆಗೋಮೂರ್ತಿರಿವಾಪರಾ ।
ಸದ್ಧಪ್ರೋದ್ಯತಕೇಶೀ ಸಾ ಕೋಲದಂಷ್ಟ್ರೋರುಕುಂಡಲಾ ॥೫೫॥

ಕರಾಲಧವಲೋದಂಚದ್ದಂತಾವಲಿವಿರಾಜಿತಾ ।
ವೈಯಾಘ್ರಚರ್ಮವಸನಾ ಕುಕ್ಷಿಮುತ್ಕ್ಷಿಪಯೋಧರಾ ॥೫೬॥

ಪಿಂಛಾಸಕ್ತಕರೋದಂಚನ್ನಿಂಬಪಲ್ಲವಧಾರಿಣೀ ।
ಪ್ರಸಾದಂ ಧಾರಿಕಾ ದತ್ವಾ ದದೌ ನಾಗಾಯ ತಸ್ಥುಷೀ ॥೫೭॥

ಆಶೀರ್ಭಿರ್ವರ್ಧಯಿತ್ವಾ ತಂ ಜರಟಾ ನಾಗಮಬ್ರವೀತ್ ॥೫೮॥

॥ ಜರತೀ ಉವಾಚ ॥

ಜೀವಾಮಿ ಮಧುಮಾಂಸಾದಿಲಬ್ಧದೇವಾರ್ಚನೋಚಿತಂ ।
ತತ್ಪ್ರಸಾದೋऽಸ್ತು ತೇ ಸ್ವಾಮಿನ್ಕಿಂ ಮದಾಹ್ವಾನಕಾರಣಂ ॥೫೯॥

---

ಆಗ ಅರಣ್ಯಸಂಚಾರಿಗಳಾದ ಆ ಬೇಡರು ಬೇಟೆದೇವರಪೂಜೆಮಾಡುವವಳನ್ನು "ಎಲೌ ಮಂಗಳಕರಳೇ, ದೇವರ ಪೂಜೆಮಾಡಿ ನಮಗೆ ಶುಭವನ್ನುಂಟುಮಾಡಲು ದಯಮಾಡಿಸು" ಎಂದು ಕರೆಯಲು ಅವಳು ಹಾಗೆಯೇ ಕೇವಲ ಎರಡನೆಯದೋಷಮೂರ್ತಿಯೋ ಎಂಬಂತೆ ಬಂದಳು. ಆಕೆಯು ಒರಟಾದ ತುಂಡುಗೂದಲುಳ್ಳವಳೂ, ಕಾಡುಹಂದಿಯ ಕೋರೆದಾಡೆಗಳಿಂದ ಮಾಡಲ್ಪಟ್ಟ ದೊಡ್ಡ ಕುಂಡಲಗಳನ್ನು ಧರಿಸಿದವಳೂ, ಕಪ್ಪು ಮತ್ತು ಬಿಳುಪು ವರ್ಣಗಳಿಂದ ಹೊಳೆಯುತ್ತಿರುವ ದಂತಪಂಕ್ತಿಗಳಿಂದ ವಿರಾಜಿಸುತ್ತಿರುವಳೂ, ಹುಲಿಯ ಚರ್ಮವನ್ನು ಹೊದ್ದಿರುವವಳೂ, ಹೊಟ್ಟೆಯನ್ನು ಮುಟ್ಟುತ್ತಿರುವ ಕುಚಗಳುಳ್ಳವಳೂ ಆಗಿದ್ದಳು. ॥೫೪-೫೫-೫೬॥

ನವಿಲುಗರಿಯನ್ನು ಕೈಯಲ್ಲಿ ಹಿಡಿದು, ಬೇವಿನ ಚಿಗುರನ್ನು ಧರಿಸಿದ್ದ ಆ ಪೂಜಾರಿಣಿಯು ಪ್ರಸಾದವನ್ನು ಆ ನಾಗಸಿಗೆ ಕೊಟ್ಟು ಕೊಂಚಹೊತ್ತು ನಿಂತುಕೊಂಡು, ನಾಗನಿಗೆ ಆಶೀರ್ವಾದಮಾಡಿ ಆ ಜರತಿಯು ( ಮುದುಕಿಯು ) ಅವನಿಗಿಂತೆಂದಳು. ॥೫೭-೫೮॥

ಎಲೈ ಸ್ವಾಮಿಯೇ, ದೇವರ ಪೂಜೆಗೆ ಯೋಗ್ಯವಾಗಿರುವ ಮದ್ಯಮಾಂಸ

ಇತ್ಯುಕ್ತಃ ಪ್ರಾಹ ತಾಂ ನಾಥೋ ಜರಾಮೂರ್ತಿಮಿವ ಸ್ಥಿತಾಂ ॥೬೦॥

॥ ನಾಗನಾಥ ಉವಾಚ ॥

ನಿಧಾಸ್ಯಾಮಿ ನಿಷಾದಾನಾಮಾಧಿಪತ್ಯೇ ಸುತಂ ಘನಂ ।
ಮತ್ತೋಽಪಿ ಮೃಗಯಾಸಿದ್ಧಿಃ ಸ್ಯಾದೇವಂ ವಿಜಯೇದರೀನ್ ॥೬೧॥

ಗಚ್ಛತೋ ಖೇಟಕೇ ನಿತ್ಯಮಸ್ಯ ದುಷ್ಟಮೃಗಾದ್ಭಯಂ ।
ಯಥಾ ನ ಸ್ಯಾತ್ತಥಾ ಭದ್ರೇ ಮುಖಬಂಧನಮಾಚರ ॥೬೨॥

ಮಧುಮಾಂಸಾದಿಬಲಿಭಿಸ್ತರ್ಪಯಾರಣ್ಯದೇವತಾಃ ।
ಇತ್ಯುಕ್ತಾ ಸಾ ನಿಮಿತ್ತಾನಿ ಶುಭಾನಿ ಜರತೀ ತದಾ ॥೬೩॥

ತ್ವತ್ತೋಽಪ್ಯಧಿಕ ಏವಾಯಂ ಭವೇದಿತ್ಯವದೀಚ್ಛ ಸಾ ।
ಮಧುಮಾಂಸಫಲಾದೀನಿ ಕುಕ್ಕುಟಾಜಾವಿಕಂ ಬಹು ॥೬೪॥

---

ಗಳನ್ನು ನಾನು ನಿನ್ನಿಂದ ಹೊಂದಿ ಬದುಕುತ್ತಿರುವೆನು. ಸ್ವಾಮಿಯೇ, ಇದಕ್ಕೆಲ್ಲಾ ನಿನ್ನ ಅನುಗ್ರಹವು ಇರಬೇಕು. ಪ್ರಕೃತ ನನ್ನನ್ನು ಆಹ್ವಾನಿಸಲು ಕಾರಣವೇನು ಅಪ್ಪಣೆಯಾಗಲಿ" ಎಂದು ಆ ಮುದುಕಿಯು ಕೇಳಲು ಮುಪ್ಪಿನ ಮೂರ್ತಿಯಂತಿರುವ ಆವಳನ್ನು ಕುರಿತು ವ್ಯಾಧರಾಜನಾದ ನಾಗನಾಥನಿಂತೆಂದನು. ॥೫೯-೬೦॥

ಎಲೌ ಮಂಗಳಪ್ರದಳೇ, ಈ ಬೇಡರ ಅಧಿಪತಿಯ ಸ್ಥಾನದಲ್ಲಿ ನನ್ನ ಮಗನಾದ ಈ ನೀಲನನ್ನಿರಿಸಬೇಕೆಂದಿರುವೆನು. ಇವನಿಗೆ ನನಗಿಂತಲೂ ಬೇಟೆಯ ಕಾರ್ಯವು ಸಿದ್ಧಿಯಾಗಿ ಶತ್ರುಗಳನ್ನು ಹೀಗೆಯೇ ಅವನು ಜಯಿಸಲಿ. ನಿತ್ಯವೂ ಬೇಟೆಗೆ ಹೋಗುವ ಇವನಿಗೆ ದುಷ್ಟಮೃಗಗಳ ದೆಸೆಯಿಂದ ಹೆದರಿಕೆಯುಂಟಾಗದಂತೆ ಮುಖಬಂಧನಸಿದ್ಧಿಯನ್ನು (ಬಾಯಿತಡೆಯನ್ನು) ಕೊಡುವಳಾಗು ಎಂದು ವ್ಯಾಧರಾಜನಾದ ನಾಗನು ಕೇಳಿಕೊಳ್ಳುತ್ತಾ, ॥೬೧-೬೨॥

ಮದ್ಯಮಾಂಸಾದಿಗಳನ್ನು ಬಲಿಕೊಟ್ಟು ಅರಣ್ಯದೇವತೆಗಳನ್ನು ಸಂತೋಷಪಡಿಸು ಎಂದನು. ಹೀಗೆ ವ್ಯಾಧರಾಜನಿಂದ ಹೇಳಲ್ಪಟ್ಟ ಆ ಜರತಿಯು ಶುಭನಿಮಿತ್ತಗಳನ್ನು ಸೂಚಿಸಿ, ನಿನಗಿಂತಲೂ ನಿನ್ನ ಕುಮಾರನು ಹೆಚ್ಚಿನವನೇ ಆಗುತ್ತಾನೆಂದು ನುಡಿದಳು. ಮಧು, ಮಾಂಸ, ಹಣ್ಣು, ಕೋಳಿ, ಆಡು, ಕುರಿ ಮುಂತಾದ ಅನೇಕ ಪ್ರಾಣಿಗಳನ್ನೂ, ॥೬೩-೬೪॥

ಹತ್ವಾ ವಿಶಸ್ಯ ಮಾಂಸಾನಿ ಪಕ್ತ್ವಾ ತಂಡುಲಪಾಯಸೈಃ ।
ವನ್ಯಪುಷ್ಪಫಲಸ್ರಗ್ಭೀ ರಕ್ತವಾಸೋಭಿರಾವ್ರಜತ್ ॥೬೫॥

ಆದಾಯ ತೈರ್ವನಂ ಪ್ರಾಪ ಅರ್ಚಿತುಂ ವನದೇವತಾಃ ।
ತತಃ ಸ್ವಪುತ್ರಮಾಹೂಯ ವಿನೀತಂ ವಿನತಂ ಘನಂ ॥೬೬॥

ಅಭಿಮುಖ್ಯೇನ ವ್ಯೆಯಾಘ್ರಚರ್ಮಣಿ ಸ್ಥಾಪ್ಯ ಚಾಬ್ರವೀತ್ ॥೬೭॥

॥ ನಾಗನಾಥ ಉವಾಚ ॥

ಪುತ್ರ ಮೇ ನಾಸ್ತಿ ಮೃಗಯಾಕೌಶಲಂ ವೃದ್ಧಭಾವತಃ ।
ತ್ವಂ ಮತ್ತೋಽಪ್ಯಧಿಕೋ ಭೂತ್ವಾ ಕಿರಾತಾಧಿಪತಿರ್ಭವ ॥೬೮॥

ಪಾಶಾನ್ಗೃಹಾಣ ಚರ್ಮಮಯಾನ್ಧೃತ್ವಾ ಚಾಪಂ ವೈ ಶಬರಾವರಂ ।
ಆಖೇಟಕೇ ಖೇಟಧರಃ ಖಡ್ಗಂ ಖಡ್ಗೇಷು ವಿನ್ಯಸನ್ ॥೬೯॥

ವ್ಯಾಘ್ರತುಲ್ಯಾನಿಮಾನ್ಪಾಹಿ ನಖದಂಷ್ಟ್ರಾಯುಧೋನ್ನತಾನ್ ।
ಲಲಜ್ಜಿಹ್ವೋರುಕರ್ಣಾಕ್ಷಾನ್ಪೃಷ್ಠಲಗ್ನೋರುಕುಕ್ಷಿಕಾನ್ ॥೭೦॥

ವಿಶೇಷವಾಗಿ ಕೊಂದು, ಅವುಗಳ ಮಾಂಸಗಳನ್ನು ಬೇಯಿಸಿ, ಅಕ್ಕಿಯ ಪಾಯಸವನ್ನು ಮಾಡಿ, ಕಾಡಿನ ಹೂವು, ಹಣ್ಣು ಮತ್ತು ಹಾರ, ರಕ್ತವಸ್ತ್ರ (ಕೆಂಪುಬಟ್ಟೆ) ಗಳಿಂದ ಯುಕ್ತನಾಗಿ ಪರಿವಾರದವರೊಡನೆ ವನದೇವತೆಗಳನ್ನು ಪೂಜೆಮಾಡಲು ಕಾಡಿಗೆ ಹೋದನು. ಅಲ್ಲಿ ಪೂಜೆಯಾದ ಮೇಲೆ ತನ್ನ ವಿನಯ ಸಂಪನ್ನನಾದ ನೀಲನೆಂಬ ಕುಮಾರನನ್ನು ಕರೆದು, ಎದುರಿಗೆ ಹುಲಿಯ ಚರ್ಮದಲ್ಲಿ ಕೂರಿಸಿ ಅವನಿಗಿಂತೆಂದನು. ॥೬೫-೬೬-೬೭॥

ಮಗನೇ, ನನಗೆ ಈಗ ಮುಪ್ಪು ಅಡಸಿರುವುದರಿಂದ ಬೇಟೆಯ ನೈಪುಣ್ಯವಿಲ್ಲ ವಾಗಿದೆ. ನೀನು ನನಗಿಂತಲೂ ಶ್ರೇಷ್ಠನೆನಿಸಿ ಕಿರಾತರ ರಾಜನಾಗಿ ಬಾಳು. ಚರ್ಮ ಮಯವಾದ ಹಗ್ಗಗಳನ್ನು ಹಿಡಿದು, ಬಿಲ್ಲುಗಾರರು ಹಿಡಿಯಲರ್ಹವಾದ ಧನುಸ್ಸನ್ನು ತೆಗೆದುಕೊಂಡು, ಬೇಟೆಯಲ್ಲಿ ಬಲೆಯನ್ನು ತೆಗೆದುಕೊಂಡು, ಖಡ್ಗಮೃಗಗಳಲ್ಲಿ ಕತ್ತಿಗಳನ್ನುಪಯೋಗಿಸಿ ಯುದ್ಧಮಾಡು. ॥೬೮-೬೯॥

ಹುಲಿಗೆ ಸಮನಾದ ಬಲವುಳ್ಳ ಉಗುರು ಮತ್ತು ಕೋರೆಗಳೆಂಬ ಆಯುಧ ಗಳಿಂದ ಉತ್ತಮವೆನಿಸಿರುವ ಈ ನಾಯಿಗಳನ್ನು ಕಾಪಾಡು. ಜೋಲುತ್ತಿರುವ

ಶುನಾಂ ಗಣಾನಿಮಾನ್ಪಶ್ಯ ವೃಕವ್ಯಾಘ್ರಮೃಗಾದನಾನ್ ।
ಚರ್ಮಪಾದತ್ರಮಾಬಧ್ಯ ಆಗುಲ್ಫಂ ಕಟಕೇ ವ್ರಜ ॥೨೦॥

ಬದ್ಧಗೋಧಾಂಗುಲಿತ್ರಾಣೇ ಗಲಾನ್ಮತ್ಸ್ಯೇಷು ಪಾತಯ ।
ಮೃಗಾನ್ವರಾಹಾನ್ವಿಧ್ಯಾಶು ಶರಾಸಾರೈಃ ಕರಚ್ಯುತೈಃ ॥೨೨॥

ಏಭಿಃ ಕಿರಾತವರ್ಯೈಸ್ತ್ವಮಾಖೇಟಕಧೃತಾಯುಧಃ ।
ಇತ್ಯುಕ್ತ್ವಾ ಛುರಿಕಾಂ ಚರ್ಮ ತದ್ಧಸ್ತೇ ದತ್ತವಾನ್ಪಿತಾ ॥೨೩॥

ತನ್ಮತ್ವಾ ಪಿತುರಾಜ್ಞೇತಿ ತೇ ಉಭೇ ಚಾಗ್ರಹೀಚ್ಛುನಃ ॥೨೪॥

॥ ನಾಗ ಉವಾಚ ॥

ತ್ವಂ ಮತ್ತೋಽಪ್ಯಧಿಕಂ ರಕ್ಷ ಭಿಲ್ಲಾನ್ಸಾಧುಕುಲೋಚಿತಾನ್ ।
ಮೃಗಯಾರ್ಥಂ ಸಮಂ ಭಿಲ್ಲೈರನುಗಚ್ಛತ್ಯಥೋ ಪಿತಾ ॥೨೫॥

---

ನಾಲಿಗೆ, ದೊಡ್ಡ ಕಣ್ಣು ಮತ್ತು ಕಿವಿಗಳುಳ್ಳವಾಗಿ, ಹಿಂಭಾಗದಲ್ಲಿಯೇ ಬರುತ್ತಾ ದೊಡ್ಡ ಹೊಟ್ಟೆಯುಳ್ಳ ತೋಳ, ಹುಲಿ ಮುಂತಾದ ದುಷ್ಟಮೃಗಗಳನ್ನೂ ಕೊಂದು ತಿನ್ನುವ ಈ ಬೇಟೆನಾಯಿಗಳನ್ನು ನೋಡು; ಇವುಗಳನ್ನು ಎಚ್ಚರಿಕೆಯಿಂದ ಕಾಪಾಡಬೇಕು. ಪಾದವನ್ನು ರಕ್ಷಿಸುವ ಚರ್ಮವನ್ನು ಹೆಜ್ಜೆಪೂರ್ತಿ ಕಟ್ಟಿಕೊಂಡು ಯುದ್ಧಾದಿಗಳಿಗೆ ಹೋಗು. ಕೈಚೀಲಗಳಿಂದ ಕೈಯನ್ನು ಕಾಪಾಡಿಕೊ. ॥೨೦-೨೧॥

ಮೀನುಗಳನ್ನು ಹಿಡಿಯುವಾಗ ಒಂದಂಗುಲ ಪರಿಮಾಣದ ಕಣ್ಣುಗಳುಳ್ಳ ಬಲೆಗಳನ್ನು ಪಯೋಗಿಸು. ಜಿಂಕೆಗಳನ್ನೂ ಕಾಡುಹಂದಿಯೇ ಮುಂತಾದವುಗಳನ್ನೂ ಗುರಿಯಿಟ್ಟು ಬಾಣಗಳನ್ನು ಪ್ರಯೋಗಿಸಿ ಕೊಲ್ಲುವನಾಗು. ಈ ಕಿರಾತಶ್ರೇಷ್ಠರೊಡನೆ ನೀನು ಬೇಟೆಯಲ್ಲಿ ಆಯುಧಪಾಣಿಯಾಗಿ ಸಂಚರಿಸೆಂದು ಹೇಳಿ, ಕತ್ತಿಯನ್ನೂ (ಚೂರಿಯನ್ನೂ) ಮತ್ತು ಚರ್ಮವನ್ನೂ ತಂದೆಯಾದ ನಾಗನಾಥನು ಮಗನ ಕೈಯಲ್ಲಿ ಕೊಟ್ಟನು. ಆಗ ಮಗನಾದ ನೀಲನೂ ಸಹ ತಂದೆಯಪ್ಪಣೆಯೆಂದು ಆ ಎರಡು ಪದಾರ್ಥಗಳನ್ನೂ ಮತ್ತು ಬೇಟೆಯ ನಾಯಿಗಳನ್ನು ಸ್ವೀಕರಿಸಿದನು. ॥೨೨-೨೩-೨೪॥

ಪುತ್ರನೇ, ನೀನು ನನಗಿಂತಲೂ ಈ ಭಿಲ್ಲರನ್ನು ಕುಲಾನುಗುಣವಾದ ಮರ್ಯಾದೆಯಿಂದ ಕಾಪಾಡು. ನಿಮ್ಮ ಪೂರ್ವಿಕರು ಇವರೊಡನೆ ಬೇಟೆಗೆ

ವನದೇವೀ ಯಯೌ ತತ್ರ ಪುತ್ರೇಣಾಥ ಕಿರಾತಕೈಃ ।
ಸದ್ಮಾಭ್ಯಗಾತ್ತದಾ ನಿತ್ಯಂ ಬುಭುಜೇ ಪಲಲಾಶನಂ ॥೨೬॥

ನಿವೇದಿತಂ ದೇವತಾಭ್ಯೋ ಶುನಾಂ ಚ ಪಲಲಂ ದದೌ ॥೨೭॥

ಆಜ್ಞಾಂ ಗುರೋಸ್ತಾಂ ಪ್ರತಿಗೃಹ್ಯ ಮೂರ್ಧ್ನಾ
ಪ್ರಣಮ್ಯ ತಂ ಸಿಂಹಸಮಾನವೀರ್ಯಃ ।
ಕೃತಾಭಿಷೇಕಃ ಸಧನಃ ಕಿರಾತೈಃ
ನಿಜಂ ಗೃಹಂ ಪ್ರಾಪ್ಯ ನಿಶಾಂ ನಿನಾಯ ॥೨೮॥

ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ
ಕಿರಾತಭಕ್ತಚರಿತ್ರವರ್ಣನೇ ತ್ರಯಸ್ತ್ರಿಂಶೋಽಧ್ಯಾಯಃ

---

ಹೋಗುತ್ತಿದ್ದಾಗ ಇವರಿಗೆ ಕೊಡುತ್ತಿದ್ದ ಮರ್ಯಾದೆಯಂತೆಯೇ ನೀನು ಅವರನ್ನು ಗೌರವಿಸು ಎಂದು ನುಡಿದು ತಂದೆಯು ತನ್ನ ಭಿಲ್ಲಪರಿವಾರದೊಡನೆ ಮನೆಗೆ ಹಿಂದಿರುಗಲು, ಇತ್ತ ವನದೇವಿಯು ಅವನ ಮಗನೊಡನೆಯೂ ಇತರ ಕಿರಾತರೊಡನೆಯೂ ತನ್ನ ಮನೆಗೆ ಹೋಗಿ ಅವರು ತನಗೆ ತಂದುಕೊಡುತ್ತಿದ್ದ ಮಾಂಸಗಳನ್ನು ದೇವತೆಗಳಿಗೆ ನಿವೇದನಮಾಡಿ, ತಾನೂ ಯಥೇಚ್ಛವಾಗಿ ತಿನ್ನುತ್ತಾ ನಾಯಿಗಳಿಗೂ ಹಾಕುತ್ತಿದ್ದಳು. ॥೨೫-೨೬-೨೭॥

ತನ್ನ ತಂದೆಯ ಅಪ್ಪಣೆಯನ್ನು ತಲೆಯಲ್ಲಿ ಹೊತ್ತು, ಅವರಿಗೆ ನಮಸ್ಕರಿಸಿ ಸಿಂಹಸಮಾನವಾದ ಬಲವುಳ್ಳ ಆ ಸೀಲನು ತಂದೆಯಿಂದ ಅಭಿಷೇಕಮಾಡಲ್ಪಟ್ಟವನಾಗಿ, ತನ್ನ ಮನೆಗೆ ಹಿಂತಿರುಗಿ ಆ ರಾತ್ರಿಯನ್ನು ಕಳೆದನು, ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೨೮॥

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ
ಕಿರಾತಭಕ್ತನ ಚರಿತ್ರೆಯ ವರ್ಣನೆಯೆಂಬ ಭಾಗದಲ್ಲಿ
ಮೂವತ್ತುಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಚತುಸ್ತ್ರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ತತಃ ಪ್ರಾತಃ ಸಮುತ್ಥಾಯ ಸವಯೋಭಿಃ ಸಬಂಧನಃ ।
ಮೃಗಯಾವೇಷಮಾದಾತುಂ ಧನುಃ ಶಾಲಾಮುಪಾಗಮತ್ ॥೧॥

ಕೇಶಾಂಸ್ತು ಪಲ್ಲವಸ್ನಿಗ್ಧಾನುತ್ತುಂಗಿತಸುಕುಂಚಿತಾನ್ ।
ವ್ಯಾಯತೋ ಗ್ರಥಿತಾಂಶ್ಚಕ್ರೇ ಗ್ರಂಥಿತೈಃ ಪಿಂಛಪಲ್ಲವೈಃ ॥೨॥

ಸೌರಭ್ಯಭ್ರಾಂತಭೃಂಗೌಘಬಾಣಕುಂದಾದಿಮಾಲ್ಯಭೃತ್ ।
ಮೂಲಾಂತಪಿಂಛಮಾಲೋಽದ್ಯ ಗುಂಜಾರಾಮಗುಣೋಜ್ಜ್ವಲಃ ॥೩॥

---

## ಮೂವತ್ತುನಾಲ್ಕನೆಯ ಅಧ್ಯಾಯ

ಓ ಜೈಗೀಷವ್ಯನೇ, ಒಂದು ದಿನ ಬೆಳಗ್ಗೆ ಎದ್ದು ತನ್ನ ಸಮಾನಸ್ಕಂಧರೊಡನೆ ಬೇಟೆಯ ವೇಷವನ್ನು ಧರಿಸಲು ಆ ನೀಲನು ಬಿಲ್ಲುಗಳನ್ನಿಟ್ಟಿದ್ದ ಆಯುಧಶಾಲೆಗೆ ಹೋದನು. ಚಿಗುರುಗಳಂತೆ ನುಣುಪಾಗಿಯೂ ಗುಂಗುರು ಗುಂಗುರಾಗಿ ಉದ್ದವಾಗಿ ಬೆಳದಿದ್ದ ತನ್ನ ತಲೆಯಕೂದಲುಗಳನ್ನು ದೊಡ್ಡದಾಗಿ ಗಂಟುಹಾಕಿಕೊಂಡು ನವಿಲುಗರಿಗಳಿಂದಲೂ, ಚಿಗುರುಗಳಿಂದಲೂ ಅಲಂಕರಿಸಿಕೊಂಡನು. ಸುವಾಸನೆಗೆ ಭ್ರಾಂತನಾಗಿ ದುಂಬಿಗಳ ಸಮೂಹವು ಮೊರೆಯುತ್ತಿರುವ ಬಾಣ, ಮಲ್ಲಿಗೆ ಮುಂತಾದ ಹೂಮಾಲೆಗಳನ್ನು ಧರಿಸಿಕೊಂಡನು. ಮೊದಲು ಮತ್ತು ಕೊನೆಗಳಲ್ಲಿ ನವಿಲುಗರಿಗಳಿಂದ ಶೋಭಿಸುವ ಗುಲಗಂಜಿಮಣಿಗಳ ಹಾರವನ್ನು ಹಾಕಿಕೊಂಡು ಪ್ರಜ್ವಲಿಸುತ್ತಿದ್ದನು. ॥೧-೨-೩॥

ಗಜದಂತಕೆರೌ ಟಂಕೋ ವರಾಟಾನನಕಂಧರಃ ।
ವರಾಹದಂಷ್ಟ್ರೇಭದ್ರಂ ತೇ ಮಣಿಸ್ರಗ್ಭಿರಲಂಕೃತಃ ॥೪॥

ಮಹಾಶಾರ್ದೂಲಲಾಂಗೂಲಹಸ್ತತಾಲವಿರಾಜಿತಃ ।
ವ್ಯಾಘಾತಸಹಗೋಧಾಂಕಕರಾತ್ತಮಣಿಕಂಕಣಃ ॥೫॥

ಸುತೈಲಧೌತಸಂಬದ್ಧಕ್ಷುರಿಕಾವಿಲಸತ್ಕಟಿಃ ।
ವ್ಯಾಧೈಕವೀರಕಟಕಃ ಶ್ಲಕ್ಷ್ಣೋಪಾನಪದದ್ವಯಃ ॥೬॥

ಚಾಪಂ ಪ್ರದಕ್ಷಿಣೀಕೃತ್ಯ ಪ್ರಣಮ್ಯಾದಾಯ ಪಾಣಿನಾ ।
ಜ್ಯಾಮಾರೋಪ್ಯ ಪರಾಮೃಶ್ಯ ಟಂಕಾರೇಣಾಪ್ಯಘೋಷಯತ್ ॥೭॥

ಬದ್ಧೇಷುಧಿಂ ಶರೈಃ ಪೂರ್ಣಂ ಚಾಪಮಾಯಮ್ಯ ಪಾಣಿನಾ ।
ಬಿಭ್ರದನ್ಯೇನ ಚ ಶರಮಂಗುಲೀರಂಧ್ರಚಾರಿಣಂ ॥೮॥

---

ಆನೆಯ ದಂತಗಳಿಂದ ಕೂಡಿದ ಕಿವಿಯ ಆಭರಣವುಳ್ಳವನೂ, ಕವಡೆಯ ಸರವನ್ನು ಕೊರಳಲ್ಲಿ ಧರಿಸಿದವನೂ, ಕಾಡುಹಂದಿಯ ಕೋರೆದಾಡೆ, ಆನೆಯ ದಂತಗಳಿಂದ ಕಡೆದ ಮಣಿಗಳ ಹಾರದಿಂದ ಅಲಂಕೃತನೂ, ದೊಡ್ಡ ದೊಡ್ಡ ಹುಲಿಗಳ ಬಾಲಗಳೆಂಬ ಕೈಬೀಸಣಿಗೆಗಳಿಂದ ವಿರಾಜಿತನೂ, ಬಿಲ್ಲಿನ ಹೆದೆಯ ಏಟನ್ನು ಸಹಿಸುವುಕ್ಕಾಗಿ ಕೈಗೆ ಚರ್ಮದ ಚೀಲವನ್ನು ಹಾಕಿಕೊಂಡು, ರತ್ನದಗೆಜ್ಜೆಗಳುಳ್ಳ ಕಂಕಣದಿಂದ ಅಲಂಕೃತನೂ ಆಗಿದ್ದನು. ॥೪-೫॥

ಹೊಳೆಯುವ ಎಣ್ಣೆಯಿಂದ ಬಳಿಯಲ್ಪಟ್ಟು ಶುಭ್ರವಾಗಿರುವ ಕತ್ತಿಯನ್ನು ಸೊಂಟಕ್ಕೆ ಕಟ್ಟಿಕೊಂಡು ಶೋಭಿಸುತ್ತಿರುವವನೂ, ಕೇವಲ ಬೇಡರ ವೀರರನ್ನೇ ಸೈನ್ಯವಾಗುಳ್ಳವನೂ, ಗಟ್ಟಿಯಾದ ಪಾದರಕ್ಷೆಗಳೆರಡನ್ನು ಮೆಟ್ಟಿರುವವನೂ, ಆದ ಆ ನಾಗಕುಮಾರನಾದ ನೀಲನು ಧನುಸ್ಸನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಿದ ನಂತರ ಕೈಗೆ ತೆಗೆದುಕೊಂಡು ಹೆದೆಯೇರಿಸಿ, ಸರಿಯಾಗಿದೆಯೇ ಎಂದು ನೋಡಿ, ಒಂದುಸಲ ಟಂಕಾರಧ್ವನಿಮಾಡಿದನು. ಬಾಣಗಳಿಂದ ತುಂಬಿದ ಬತ್ತಳಿಕೆಯನ್ನು ಬೆನ್ನಿಗೆ ಕಟ್ಟಿಕೊಂಡು, ಒಂದು ಕೈಯಿಂದ ಬಿಲ್ಲನ್ನು ಹಿಡಿದು, ಇನ್ನೊಂದು ಕೈಯ ಬೆರಳುಗಳ ಮಧ್ಯದಲ್ಲಿ ಬೇರೊಂದು ಬಾಣವನ್ನು ಹಿಡಿದುಕೊಂಡನು. ॥೬-೭-೮॥

ಗ್ರಹಾಂಕಣೇ ಡಿಂಡಿಮಾಸಿ ಸ್ಪ್ರವಾದ್ಯಸ್ಮೃಗಧಾರಣೇ ।
ತಸ್ಥೌ ಸುದೃಪ್ತತರುಣಪುಂಗವಪ್ರತಿನೋ ಘನಃ ॥೯॥

ತಾವದ್ದೇವಾರ್ಚನಕರೀ ಮಧುಮಾಂಸಫಲಾದಿಕಂ ।
ನಿವೇದ್ಯ ವನದೇವೀಭ್ಯಃ ತಂ ಪ್ರಾಪ ಮೃಗಯೋನ್ಮುಖಂ ॥೧೦॥

ಸುರಾಮಾಂಸಾದಿಕಂ ತಸ್ಮೈ ದದೌ ದೇವ ಪ್ರಸಾದಜಂ ।
ಉವಾಚ ತಮಸಂಭ್ರಾಂತಕುಮಾರಂ ಜರತೀ ತದಾ ॥೧೧॥

ಪಿತುಃ ಪಿತಾಮಹಸ್ಯಾಪಿ ನಾಸ್ತಿ ತ್ವದ್ವೈಭವಂ ಸುತ ।
ದಯಾ ತಾದೃಗ್ದೇವತಾನಾಂ ದೃಷ್ಟ್ವಾ ಯಾದೃಕ್ತ್ವಯಿ ಪ್ರಭೋ ॥೧೨॥

ತಾಂ ತದಾ ಜರತೀಂ ನತ್ವಾ ನತ್ವಾ ಸ ಪಿತರೌ ಘನಃ ।
ಸಂತೋಷ್ಯ ಬಾಂಧವಾಂಸ್ಸರ್ವಾನ್ನಿರ್ಯಯೌ ಮೃಗಯಾಂ ತದಾ ॥೧೩॥

ಪ್ರಸಕ್ತಪಾದುಕಪದಾಃ ಬಾಣಕಾರ್ಮುಕಪಾಣಯಃ ।
ಶಬರಾಶ್ಚರ್ಮವಸನಾ ವೀರವ್ಯಾಘ್ರಂ ತಮನ್ವಯುಃ ॥೧೪॥

---

ಪ್ರಾಣಿಗಳನ್ನು ಹಿಡಿಯುವುದಕ್ಕಾಗಿ ಮನೆಯ ಅಂಕಣದಲ್ಲಿ ಡಿಂಡಿಮವಾದ್ಯಗಳನ್ನು ಬಾರಿಸಿ, ಬೇಟೆಯಲ್ಲಿ ಕೊಬ್ಬಿದ ಯುವಕಶ್ರೇಷ್ಠನಂತೆ ಈ ನೀಲನು ಪ್ರಯಾಣಕ್ಕೆ ಸಿದ್ಧವಾಗಿ ನಿಂತುಕೊಂಡನು. ಅಷ್ಟುಹೊತ್ತಿಗೆ ಪೂಜಾರಿಣಿಯಾದ ಜರತಿಯು ವನದೇವತೆಗಳಿಗೆ ಮಧ್ಯ (ಜೇನು), ಮಾಂಸ ಮತ್ತು ಹಣ್ಣುಹಂಪಲುಗಳನ್ನು ನಿವೇದನಮಾಡಿ, ಬೇಟೆಗೆ ಸಿದ್ಧವಾಗಿರುವ ಆ ನೀಲನ ಬಳಿಗೆ ಬಂದಳು. ॥೯-೧೦॥

ದೇವತೆಗಳ ಪ್ರಸಾದರೂಪವಾದ ಮದ್ಯಮಾಂಸಾದಿಗಳನ್ನು ಆ ಕುಮಾರನಿಗೆ ಕೊಟ್ಟಳು. ಆ ಮೇಲೆ ಕೊಂಚವೂ ಭಯಗೊಳ್ಳದಿರುವ ಆ ವ್ಯಾಧಕುಮಾರನನ್ನು ನೋಡಿ ಆ ಜರತಿಯು ಮಗನೇ, ನಿಮ್ಮ ತಂದೆ, ಅಜ್ಜಂದಿರಿಗೂ ನಿನ್ನಂತಹ ವೈಭವವಿರಲಿಲ್ಲ. ಪ್ರಭೋ, ದೇವತೆಗಳಿಗೆ ನಿನ್ನಲ್ಲಿ ಉಂಟಾಗಿರುವಷ್ಟು ದಯೆಯು ಆ ನಿನ್ನ ತಂದೆ ತಾತಂದಿರಿಗಿರಲಿಲ್ಲವೆಂದು ಹೇಳಿದಳು. ॥೧೧-೧೨॥

ಆಗ ಆ ಜರತಿಯನ್ನೂ ತನ್ನ ತಂದೆತಾಯಿಗಳನ್ನೂ ನಮಸ್ಕರಿಸಿ, ನೆಂಟರಿಷ್ಟರನ್ನೆಲ್ಲಾ ಸಂತೋಷಪಡಿಸಿ, ಅನಂತರ ಬೇಟೆಗೆ ಹೊರಟನು. ಕಾಲ್ಗಳಿಗೆ ಪಾದುಕೆಗಳನ್ನು ಹಾಕಿಕೊಂಡು, ಬಾಣಬಿಲ್ಲುಗಳನ್ನು ಕೈಯಲ್ಲಿ ಹಿಡಿದು, ಚರ್ಮದ ಬಟ್ಟೆಯನ್ನು

ಪಟಹೈಃ ಪಟಯಂತಸ್ತೇ ಧ್ವನಿಭಿರ್ದಿಗ್ವಧೂಮುಖಂ ।
ಶುಭಾನ್ಯಗ್ರೇ ನಿಮಿತ್ತಾನಿ ದೃಷ್ಟ್ವಾ ತೈರ್ಮುದಿತೋ ಘನಃ ॥೧೫॥

ವೃತೋವ್ಯಾಧೈಶ್ಚ ಭಿಶ್ಚೈವ ಸ ಯಯೌ ಮೃಗಯಾವನಂ ।
ಗೃಹೀತಶೃಂಖಲಾ ಪಾಶಾ ಧಾವದ್ಭಿಃ ಶಬರಾರ್ಭಕೈಃ ॥೧೬॥

ಲಂಬಾನನಲಲಜ್ಜಿಹ್ವಾ ಯಯುಃ ಶ್ವಾನಾಃ ಸಮಂತತಃ ।
ಕೇಚಿದ್ಯಯುಃ ಪುರೋರೋಧಿಗುಲ್ಮಾದಿಛೇದಕಾರಿಣಃ ॥೧೭॥

ಯಯುರನ್ಯೇ ಮೃಗಾನ್ರೋದ್ಧುಂ ವಾಗುರಾಭಾರವಾಹಕಾಃ ।
ಕೇಚಿತ್ಕಿರಾತಾಃ ಸನ್ನದ್ಧಾ ಚರ್ಮವರ್ಮವಿಧಾರಿಣಃ ॥೧೮॥

ಆಲೋಕಯಿಷವೋ ವ್ಯಾಘ್ರಾನಿಷುಹಸ್ತಾಸ್ತಮನ್ವಯುಃ ।
ಪುರೋರವತ್ಸು ಶೃಂಗೇಷು ತೂರ್ಯಝಕ್ಕಾರವೈಃ ಸಮಂ ॥೧೯॥

ವ್ಯಾಯತಃ ಶ್ರೇಣಿಸಂಚಾರಾ ಯಯುಃ ಸರ್ವೇ ವನೇಚರಾಃ ।
ನಿಷಾದವಾಹಿನೀ ಸಾಂದ್ರಪ್ರುಮಶ್ಯಾಮೇ ವನಾಂತರೇ ॥೨೦॥

---

ಧರಿಸಿರುವ ಬೇಡರು ವೀರಶ್ರೇಷ್ಠನಾದ ಆ ನೀಲನನ್ನು ಅನುಸರಿಸಿ ಹೊರಟರು. ||೧೩-೧೪||

ಆ ಬೇಡರು ಹೋಗುತ್ತಾ ದಾರಿಯಲ್ಲಿ ಎಲ್ಲ ದಿಕ್ಕುಗಳೂ ಧ್ವನಿಗೈಯುವಂತೆ ತಮಟೆಗಳನ್ನು ಬಾರಿಸುತ್ತಿದ್ದರು. ಆಗ ಆ ನೀಲನು ಅವರೊಡನೆ ಹೋಗುವಾಗ ಮುಂದೆ ಶುಭಶಕುನಗಳನ್ನು ಕಂಡು ಸಂತೋಷಹೊಂದಿದನು. ಬೇಡರೂ ಮತ್ತು ಬೇಟೆನಾಯಿಗಳೊಡನೆ ಅವನು ಬೇಟೆಯಾಡುವ ಕಾಡಿಗೆ ಹೋದನು. ಸರಪಳಿಯ ಹಗ್ಗಗಳನ್ನು ಹಿಡಿದು ಬೇಡರ ಮಕ್ಕಳು ಓಡುತ್ತಿದ್ದರು. ಉದ್ದವಾದ ಮುಖ, ಜೋಲುಬಿದ್ದಿರುವ ನಾಲಿಗೆಗಳುಳ್ಳ ನಾಯಿಗಳು ಎಲ್ಲಾ ಕಡೆಯಲ್ಲಿಯೂ ಓಡುತ್ತಿದ್ದವು. ಅವರಲ್ಲಿ ಕೆಲವರು ಮುಂದೆ ಪ್ರಯಾಣಕ್ಕೆ ದಾರಿಯಲ್ಲಿ ಅಡ್ಡವಾಗಿರುವ ಸೊಪ್ಪುಸೊದೆಪೊದೆಗಳನ್ನು ಕಡಿಯುತ್ತಾ ಹೋದರು. ||೧೫-೧೬-೧೭||

ಇನ್ನು ಕೆಲವರು ಓಡಿಹೋಗುವ ಪ್ರಾಣಿಗಳನ್ನು ತಡೆಯಲು ದೊಡ್ಡ ದೊಡ್ಡ ಹಗ್ಗದ ಬಲೆಗಳನ್ನು ಹೊತ್ತುಕೊಂಡುಹೋದರು. ಮತ್ತೆಕೆಲವರು ಚರ್ಮದ ಕವಚವನ್ನು ಧರಿಸಿ ಬೇಟೆಯಾಡಲು ಸಿದ್ಧವಾಗಿದ್ದರು. ಹುಲಿಗಳನ್ನು ನೋಡ

ಯುಯೌ ನೀಲಾಂಬುಧಿವಹತ್ಕಲಿಂದತನಯೋಪಮಾ ।
ಪುಲಿಂದವಾಹಿನೀ ಭೀಮಾ ಮೃಗಾಣಾಮಂತಕೋಪಮಾ ॥೨೧॥

ಅದ್ಯ ದಕ್ಷಿಣದಿಗ್ಭಾಗೇ ಸ್ಥಿತಸ್ಯಾಸ್ಯ ಗಿರೇಸ್ತಟೇ ।
ಹರಿಣ್ಯಃ ಸಂಚರಂತೀತಿ ಶಂಸತ್ಸು ಪದವೇದಿಷು ॥೨೨॥

ಘನೇನ ವೇಷ್ಟಿತಂ ತತ್ರ ವನಸ್ಯ ಜಘನಂ ಮಹತ್ ।
ತಂತ್ರೀಯಂತ್ರಸುವಿನ್ಯಾಸವಾಗುರಾಮಂತ್ರಸಾಧನೈಃ ॥೨೩॥

ವಿಪಿನಾವನಿಸಂಚಾರವಿಚಾರನಿರತಾಸ್ತದಾ ।
ವನೇಚರಾಸ್ಸ್ರ ಧಾವಂತಿ ತಮುದ್ದಿಶ್ಯ ಮಹೀಧರಂ ॥೨೪॥

ಪ್ರಸಾರ್ಯವಾಗುರಾಸ್ಸರ್ವಾ ನಿರುಧ್ಯಾಥ ವನೇಚರೈಃ ।
ವ್ಯಾಘ್ರೇಭಶರಭೈಣೀನಾಂ ಸಮೂಹಂ ಕೋಲಸಂಭವಂ ॥೨೫॥

---

ಲಿಚ್ಚಿಸಿ ಬಾಣಬಿಲ್ಲುಗಳನ್ನು ಹಿಡಿದು ಆ ಕಿರಾತರು ನೀಲನನ್ನು ಹಿಂಬಾಲಿಸಿದರು. ಮುಂದೆ ಕೊಂಬು, ನಗಾರಿ, ಢಕ್ಕಾವಾದ್ಯಗಳು ಧ್ವನಿಗೈಯುತ್ತಿದ್ದವು. ದಟ್ಟವಾದ ಬೇಡರ ಸೈನ್ಯವು ದಟ್ಟವಾದ ಮರಗಳಿಂದ ಕಪ್ಪಾಗಿರುವ ಕಾಡಿನ ಮಧ್ಯದಲ್ಲಿ ಉದ್ದ ವಾಗಿ ಸಾಲುಸಾಲಾಗಿ ಹೊರಟಿತು. ॥೧೮-೧೯-೨೦॥

ಜಿಂಕೆಗಳಿಗೆ ಯಮಸದೃಶವಾಗಿರುವ ಭಯಂಕರವಾದ ಈ ಶಬರಸೈನ್ಯವು ಕಪ್ಪುಮೇಘದಿಂದ ಹರಿಯುವ ಕಾಲಿಂದೀ ನದಿಯಂತೆ ಹೋಗುತ್ತಿದ್ದಿತು. ಈ ದಿನ ದಕ್ಷಿಣದಿಕ್ಕಿನಲ್ಲಿರುವ ಈ ಪರ್ವತದ ತಪ್ಪಲಲ್ಲಿ ಸಾಮಾನ್ಯವಾಗಿ ಜಿಂಕೆಗಳು ಹೆಚ್ಚಾಗಿ ಸಂಚಾರಮಾಡುತ್ತಿರುವುವೆಂದು ಮೃಗಗಳ ಹೆಜ್ಜೆ ಗುರುತನ್ನರಿತ ಶಬರರು ತಿಳಿಸುತ್ತಿರಲು, ನೀಲನು ಆ ಕಾಡಿನ ದೊಡ್ಡ ಮಧ್ಯಭಾಗವನ್ನು ಆಕ್ರಮಿಸುತ್ತಾ ತಂತಿಗಳಿಂದ ಮಾಡಿದ ಬೋನುಗಳನ್ನಿಡುತ್ತಾ, ಬಲೆಗಳನ್ನು ಹರಡುತ್ತಾ ಮಂತ್ರ ಗಳನ್ನು ಪ್ರಾಣಿಗಳ ಮೇಲೆ ಪ್ರಯೋಗಿಸುತ್ತಾ ಹೊರಟನು. ॥೨೧-೨೨-೨೩॥

ಅರಣ್ಯಭೂಮಿಯ ಸಂಚಾರದಲ್ಲಿ ನಿಪುಣರಾದ ಆ ಬೇಡರು ಆ ಪರ್ವತ ಪ್ರದೇಶವನ್ನು ಕುರಿತು ಓಡುತ್ತಿದ್ದರು. ಬೇಡರು ತಮ್ಮಲ್ಲಿದ್ದ ಬಲೆಗಳನ್ನೆಲ್ಲಾ ಹರಡಿ, ಹುಲಿ, ಆನೆ, ಶರಭ, ಜಿಂಕೆ ಮತ್ತು ಹಂದಿ ಇವುಗಳ ಸಮೂಹವು ತಮ್ಮ

ನಿವೇದಿತೇ ಯಥಾವೃತ್ತಂ ಘನಸ್ತತ್ಪ್ರವಿಶದ್ವನಂ।
ಕಾಹಲಾದ್ಯಾರವತ್ರಾಸಾದುತ್ಪತತ್ಸು ಪತತ್ಸು ಚ ॥೨೬॥

ಮೃಗಗಾತ್ರೇಷು ಶಬರಾಃ ಕ್ರುದ್ಧಾ ಬಾಣಾನವಾಕಿರತ್।
ಕೃತ್ತಾಂಘ್ರಿಶೃಂಗಮೂರ್ಧಾನಃ ಪೇತುರುರ್ವ್ಯಾಂ ಮೃಗವ್ರಜಾಃ॥೨೭॥

ಸಿಂಹವ್ಯಾಘ್ರವರಾಹೈಣಭಲ್ಲೂಕಾಃ ಶರಭಾದಯಃ।
ಪಶ್ಚಾರ್ಧಭಾಗಮಗ್ನೇಷು ಫಲಾಗ್ರೇಷು ಘನಚ್ಯುತೈಃ ॥೨೮॥

ಘನೋ ಘನಾಘನ ಇವ ಶರಾಸಾರಮವಾಸೃಜತ್।
ಘಾಲನ್ಯಸ್ತಾಗ್ರಹಸ್ತಸ್ತಾ ಮಾಸ್ತಾಂ(?)ಬದ್ಧೋರಣಾ ಇವ ॥೨೯॥

ಅಂಜನಾದ್ರಿನಿಭೇಭಾನಾಂ ಸಮೂಹಾನಾಂ ರದೋದ್ಧೃತಾಃ।
ಕಿರಾತಾಃ ಕೇಚಿದಿಚ್ಛಂತೋ ನೋಚನಂ ತಾನಮೂಮುಚತ್ ॥೩೦॥

---

ಬಲೆಗೆ ಸಿಕ್ಕಿದೆಯೆಂದು ಉತ್ಸಾಹದಿಂದ ಬೇಡರು ಬಂದು ತಿಳಿಸಲು ಆಗ ಆ ನೀಲನು ತಾನೂ ಅಲ್ಲಿಗೆ ಪ್ರವೇಶಮಾಡಿದನು. ॥೨೪-೨೫॥

ತಮಟೆ ಮುಂತಾದ ವಾದ್ಯಧ್ವನಿಗಳನ್ನು ಕೇಳಿ ಭಯಗೊಂಡು ಮೇಲೆ ಮೇಲೆ ಬೀಳುತ್ತಿರಲು, ಬೇಡರು ಆ ಪ್ರಾಣಿಗಳ ಶರೀರಗಳಿಗೆ ಗುರಿಯಿಡುತ್ತಾ ಕೋಪಗೊಂಡು ಬಾಣವನ್ನು ಹೊಡೆದರು. ಈ ಶಬರರ ಬಾಣಪ್ರಯೋಗದಿಂದ ಕತ್ತರಿಸಲ್ಪಟ್ಟ ಕೊಂಬು, ತಲೆ ಮುಂತಾದವುಗಳುಳ್ಳವಾಗಿ ಜಿಂಕೆಗಳ ಸಮೂಹವು ಮೃತವಾಗಿ ನೆಲದ ಮೇಲೆ ಬೀಳುತ್ತಿದ್ದಿತು. ನೀಲನು ಹೊಡೆದ ಬಾಣಗಳಿಂದ ಸಿಂಹ, ಹುಲಿ, ಕಾಡುಹಂದಿ, ಜಿಂಕೆ, ಕರಡಿ, ಶರಭ ಮುಂತಾದ ಪ್ರಾಣಿಗಳೂ ಹಿಂಭಾಗದಲ್ಲಿ ಘಾಯಗೊಂಡು ಬಿದ್ದುಬಿಟ್ಟವು. ॥೨೬-೨೭-೨೮॥

ಆ ನೀಲನು ಮಳೆಗಾಲದ ಮೋಡದಂತೆ ಬಾಣಪರಂಪರೆಗಳನ್ನು ಪ್ರಾಣಿಗಳ ಮೇಲೆ ಸುರಿಸಿದನು. ಅವನ ಬಾಣಗಳ ಪೆಟ್ಟಿಗೆ ಸಿಕ್ಕಿ ಕೆಳಗೆ ಬಿದ್ದ ಮೃಗಗಳು ಸಾಲಾಗಿ ಕಾಣುತ್ತಿದ್ದವು. ಕಾಡಿಗೆಯ ಪರ್ವತದಂತೆ ಕಪ್ಪಗಿರುವ ಕಾಡಾನೆಗಳ ದಂತವನ್ನು ಪಡೆಯಬೇಕೆಂದು ಕೆಲಮಂದಿ ಬೇಡರು ಬಯಸಿ ಆ ಆನೆಗಳ ಮೇಲೆ ಬಾಣಪ್ರಯೋಗಮಾಡತೊಡಗಿದರು. ॥೨೯-೩೦॥

ಉತ್ಪತನ್ನಿಷುಣಾ ಬದ್ಧೋ ಕಶ್ಚಿದ್ಭೂತ್ವೋತ್ಪತನ್ಮೃಗಃ ।
ಅದೃಶ್ಯತ ತದಾ ರಾಹುಗೃಹೀತೇಂದುಸಮಪ್ರಭಃ ॥೩೧॥

ಭಿಲ್ಲಭಲ್ಲಾನಲಜ್ವಾಲಾ ಭೀತಭಲ್ಲಕರಾಜಿಷು ।
ಮಾತಂಗವೃಕಸಾರಂಗಮಹಿಷಾಶ್ಚ ಯಯುರ್ವನಂ ॥೩೨॥

ಪ್ರಾಪ್ತಾ ಬಹುಪಯಃ ಪಾತುಂ ಘನಾ ಇವ ಪಯೋನಿಧಿಂ ।
ಜಾಲಚ್ಯುತಾಂಶ್ಚ ಶ್ವಗಣಾ ರುರುಧುಶ್ಚ ಮೃಗಾನ್ಬಹೂನ್ ॥೩೩॥

ವಿಧೂನ್ವತ ಇಷೂಂಶ್ಚಾಪಾನಿಂದ್ರಿಯೌಘಾ ಇವಾತ್ಮನಃ ।
ಕಶ್ಚಿತ್ತತ್ರಾಪತನ್ಪೋತ್ರೀ ಪ್ರದುದ್ರಾವ ಘನಾರವಃ ॥೩೪॥

ತಮನ್ವಧಾವದ್ಧಾವಂತಂ ಶರಚಾಪಧರೋ ಘನಃ ।
ತಂ ಘನಂ ಚ ಮಹಾಸತ್ವೌ ದ್ವೌ ಕಿರಾತಾವನುದ್ರುತೌ ॥೩೫॥

ತೇನಾಪ್ಯವಿಜ್ಞಾತಗತೀ ನಿಷ್ಪ್ರತಿದ್ವಂದ್ವವಿಕ್ರಮೌ ।
ಘನಶ್ಚಾಪಕರೌ ತೌ ಚ ಶುನೋಮುಕ್ತ್ವಾಶರಾಂಸ್ತಥಾ ॥೩೬॥

---

ಮೇಲಕ್ಕೆ ಹಾರಿ ಬಾಣದ ಏಟಿಗೆ ಕಟ್ಟುಬಿದ್ದು ಒಂದು ಜಿಂಕೆಯು ಮತ್ತೆ ನೆಗೆದು ನೆಲದ ಮೇಲೆ ಬಿದ್ದಿರುವುದು, ರಾಹುವಿನಿಂದ ನುಂಗಲ್ಪಟ್ಟ ಚಂದ್ರನ ಸಮವಾದ ಕಾಂತಿಯುಳ್ಳದ್ದಾಗಿ ತೋರುತ್ತಿದ್ದಿತು. ಭಿಲ್ಲರ ಭಲ್ಲೆಗಳಿಂದುಂಟಾದ ಬೆಂಕಿಯ ಜ್ವಾಲೆಗಳಿಂದ ಬೆದರಿರುವ ಕರಡಿಗಳೂ, ಆನೆ, ತೋಳ, ಸಾರಗ, ಕಾಡುಕೋಣಗಳೂ ಹೆದರಿ ಬೇರೆ ಕಾಡಿಗೆ ಓಡಿದುವು. ||೩೧-೩೨||

ಹೆಚ್ಚಾದ ನೀರನ್ನು ಕುಡಿಯಲು ಸಮುದ್ರಕ್ಕೆ ಬಂದಿರುವ ಮೋಡಗಳಂತೆ ಬಲೆಗೆ ಸಿಕ್ಕದೇ ತಪ್ಪಿಸಿಕೊಂಡ ಅನೇಕ ಪ್ರಾಣಿಗಳನ್ನು ನಾಯಿಗಳ ಗುಂಪು ಹೋಗಿ ಮುತ್ತಿದವು. ತನ್ನ ಇಂದ್ರಿಯಗಳ ಸಮೂಹವೋ ಎಂಬಂತೆ ತನ್ನ ಮೇಲೆ ಪ್ರಯೋಗಿಸಿದ ಬಾಣಬಿಲ್ಲುಗಳೆಲ್ಲವನ್ನು ಒಂದು ಕಾಡುಹಂದಿಯು ಕೊಡವಿ ಗಂಭೀರವಾಗಿ ಧ್ವನಿಮಾಡುತ್ತಾ ಓಡಿತು. ||೩೩-೩೪||

ಹೀಗೆ ಓಡುತ್ತಿರುವ ಆ ಹಂದಿಯನ್ನು ನೀಲನು ಬಿಲ್ಲುಬಾಣಗಳನ್ನು ಹಿಡಿದು ಅನುಸರಿಸಿದನು. ನೀಲನನ್ನು ಹಿಂಬಾಲಿಸಿ ಮಹಾಬಲಶಾಲಿಗಳಾದ ಇಬ್ಬರು ಬೇಡರು ಓಡಿದರು. ಆ ನೀಲನಿಗೂ ತಿಳಿಯದಷ್ಟು ವೇಗವುಳ್ಳ ಅಪ್ರತಿಮ

ವರಾಹೇ ವವೃಷೇ ಸೋಽಪಿ ವಂಚಯಂಸ್ತಾನ್ವನಂ ಯಯೌ ।
ಸ ವರಾಹೋ ಮಹಾದರ್ಪೋ ಗುಂಜಾನಲಸಮೇಕ್ಷಣಃ ॥೩೭॥

ಗಿರ್ಯಂತಗರ್ತವೃಕ್ಷಾಗ್ರಾದತಿಷ್ಠದ್ಭೈರವಾರವಃ ।
ತಂ ಗುಲ್ಮಾಂತಸ್ಥಿತಂ ಜ್ಞಾತ್ವಾ ಯಾವನ್ನಾಸಕ್ತಿಭಾವತಃ ॥೩೮॥

ಅಶಕ್ಯಬಾಣೋತ್ಕಲನೋ ಘನಕ್ಷುರಿಕಯಾಽವಧೀತ್ ।
ಚಾಪಖಿನ್ನಜವಾಸನ್ನಂ ಕೋಲನಾಥಂ ದ್ವಿಧಾ ಕೃತಂ ॥೩೯॥

ಅಹೋ ಪಶ್ಯಂತಿ ತದ್ಯುಕ್ತ್ವಾ ಕ್ರೋಶಾತ್ತಂ ಘನಮಾನಯತ್ ।
ಪ್ರಾಹತುಸ್ತೌ ಘನಂ ಸ್ವಾಮಿನ್ ಖಿನ್ನಾಶ್ಚ ಕ್ಷುಧಿತಾ ವಯಂ ॥೪೦॥

ಕೋಲಮಾಂಸಂ ಪ್ರತಾಪ್ಯಾಗ್ನೌ ಪಾಸಾದ್ಯಾಹೃತ್ಯ ಚೋದಕಂ ।
ಪೀತ್ವಾ ತೃಪ್ತಾಸ್ತತಃ ಸರ್ವೇ ವ್ರಜಾಮೋ ಮೃಗಯಾವನಂ ॥೪೧॥

---

ವೀರರಾದ ಆ ಇಬ್ಬರೂ ಮತ್ತು ನೀಲನೂ ಬಿಲ್ಲುಬಾಣಗಳನ್ನು ಹಿಡಿದು ನಾಯಿಗಳನ್ನು ಬಿಟ್ಟುಕೊಂಡು ಬಾಣಗಳನ್ನು ಆ ಹಂದಿಯ ಮೇಲೆ ಸುರಿಸಿದನು. ||೩೫-೩೭||

ಆದರೂ ಆ ತುಂಬಾ ಕೊಬ್ಬಿದ ಕಾಡುಹಂದಿಯು ಉರಿಯುವ ಕೆಂಡದಂತೆ ಕಣ್ಣುಗಳುಳ್ಳದ್ದಾಗಿ ಇವರನ್ನು ವಂಚಿಸುತ್ತಾ ಕಾಡಿನ ಮಧ್ಯಭಾಗವನ್ನು ಹೊಕ್ಕಿತು. ಅಲ್ಲಿಂದ ಹೊರಟು ಬೆಟ್ಟದ ಮಧ್ಯದಲ್ಲಿರುವ ಒಂದು ಮರದ ಬುಡದಲ್ಲಿ ನಿಂತುಕೊಂಡು ಭಯಂಕರವಾಗಿ ಧ್ವನಿಮಾಡಿತು. ಆಗ ಆ ನೀಲನು ಅದು ಗುಹೆಯ ಮಧ್ಯದಲ್ಲಿರುವುದನ್ನು ಧ್ವನಿಯಿಂದ ತಿಳಿದು, ಬಾಣಪ್ರಯೋಗದಿಂದ ಹೊಡೆಯಲಸಾಧ್ಯವೆಂದು ಭಾವಿಸಿ, ತನ್ನ ಹರಿತವಾದ ಚೂರಿಯಿಂದ ಹೊಡೆದನು. ಮೊದಲೇ ಬಾಣದಿಂದ ಖಿನ್ನವಾಗಿ ಆಯಾಸಪಟ್ಟಿದ್ದ ಆ ಕಾಡುಹಂದಿಯು ಚೂರಿಯಿಂದ ಕತ್ತರಿಸಲ್ಪಟ್ಟಿತು. ||೩೮-೩೯||

ಅದನ್ನು ನೋಡಿ ಆಶ್ಚರ್ಯ ಎಂದು ಹೇಳುತ್ತಾ ಆ ಇಬ್ಬರು ಬೇಡರೂ ಒಂದು ಮೈಲಿ ದೂರದಲ್ಲಿ ನಿಂತಿದ್ದ ನೀಲನನ್ನು ಅಲ್ಲಿಗೆ ಕರೆತಂದರು. ಆಮೇಲೆ ಸ್ವಾಮಿ, ನಾವು ತುಂಬಾ ಬಳಲಿ ಹಸಿವಿನಿಂದ ಕೂಡಿರುವೆವು. ಆದ್ದರಿಂದ ಈಗ ಈ ಹಂದಿಯ ಮಾಂಸವನ್ನು ಬೇಯಿಸಿ ತಿಂದು ನೀರನ್ನು ಕುಡಿದು ತೃಪ್ತರಾಗಿ ಅನಂತರ ಮುಂದೆ ಬೇಟೆಯ ಕಾಡಿಗೆ ಹೋಗೋಣವೆಂದು ಹೇಳಿದರು. ||೪೦-೪೧||

ತಚ್ಛ್ರುತ್ವಾ ತತ್ರ ಪಾನೀಯಮಸ್ತೀತ್ಯಾಹ ಚ ತೌ ಪುನಃ ।
ತಾವಾಹತುರ್ಮಹಾನಗ್ರೇ ಗಿರಿರಸ್ತಿ ತದಂತಿಕೇ ॥೪೨॥

ಸುವರ್ಣಮುಖರೀತ್ಯಸ್ತಿ ಸರಿತ್ತುಂಗತರಂಗಿಣೀ ।
ಇತ್ಯುಕ್ತೋಽಸೌ ತತ್ರ ಯಾಮಃ ಕೋಲ ಆನೀಯತಾಮಯಂ ॥೪೩॥

ಇತ್ಯುಕ್ತ್ವಾ ಯೋಜನಂ ಗತ್ವಾ ದದರ್ಶೇಶಾಲಯಂ ಗಿರಿಂ ।
ಅತ್ರ ಶ್ರೀಕಾಲಹಸ್ತ್ಯದ್ರೌ ಶಿಖಾದೇವೋ ವಿರಾಜತೇ ॥೪೪॥

ದ್ರಷ್ಟವ್ಯ ಇತಿ ತೇನೋಕ್ತಃ ಪ್ರೀತಃ ಪ್ರಾಹ ಪುನಸ್ತದಾ ।
ದೃಷ್ಟ್ವಾದ್ರಿಮೇನಂ ಕೋಽಭಾರಃ ಕೋಽಪಿ ಯಾತೀವ ಮೇ ಮನಃ ॥೪೫॥

ಅಯಥಾಪೂರ್ವಮಾಪ್ನೋತಿ ದ್ರಷ್ಟವ್ಯಾಂತರಕೌತುಕಃ ।
ಸ ದೇವಸ್ತತ್ರ ಕುತ್ರಾಸ್ತೇ ಇತಿ ತಾಭ್ಯಾಂ ತ್ವರಾನ್ವಿತಃ ॥೪೬॥

---

ಆಗ ಆ ನೀಲನು ಹತ್ತಿರದಲ್ಲಿ ಎಲ್ಲಿಯಾದರೂ ನೀರಿದೆಯೇ ಎಂದು ಅವರನ್ನು ಕೇಳಲು, ಅವರಿಬ್ಬರೂ ಸ್ವಾಮಿ, ಮುಂದೆ ಒಂದು ದೊಡ್ಡ ಬೆಟ್ಟವಿರುವುದು. ಅದರ ಹತ್ತಿರ ಸುವರ್ಣನದಿಯೆಂಬ ಒಂದು ದೊಡ್ಡ ಹೊಳೆಯಿದೆ ಎಂದು ಹೇಳಿದರು. ಆಗ ಆ ಮಾತನ್ನು ಕೇಳಿ ನೀಲನು ಹಾಗಾದರೆ ಅಲ್ಲಿಗೆ ಹೋಗೋಣ, ಈ ಹಂದಿಯನ್ನು ಅಲ್ಲಿಗೇ ತನ್ನಿರಿ ಎಂದು ಅಪ್ಪಣೆ ಮಾಡಿದನು. ||೪೨-೪೩||

ಹೀಗೆ ನುಡಿದ ಅವರ ಮಾತಿನಂತೆಯೇ ಒಂದು ಯೋಜನ ಮುಂದೆ ನಡೆದು, ಅಲ್ಲಿ ಶಿವಾಲಯವುಳ್ಳ ಒಂದು ಬೆಟ್ಟವನ್ನು ಕಂಡನು. ಅದೇ ಕಾಲಹಸ್ತ್ಯಚಲದಲ್ಲಿ 'ಶಿಖಾದೇವ'ನೆಂಬ ಹೆಸರಿನಿಂದ ಮಹಾದೇವನು ವಿರಾಜಿಸುತ್ತಿರುವನು, ಎಂಬುದನ್ನು ತಿಳಿದು ಅವನ ಸಂದರ್ಶನ ಮಾಡಬೇಕೆಂದು ಯೋಚಿಸಿ ಪ್ರೀತಿಯಿಂದ ಆ ಘನನು (ನೀಲನು) ಅವರಿಬ್ಬರಿಗೂ, ಎಲೈ ಭಿಲ್ಲರಿರಾ, ಈ ಬೆಟ್ಟವನ್ನು ನೋಡಿ ನನ್ನ ಮನಸ್ಸಿನಲ್ಲಿ ಏನೋ ಒಂದುವಿಧವಾದ ಭಕ್ತಿಯುಂಟಾಗುತ್ತಿರುವುದು. ಯಾರೋ ಬಲಾತ್ಕಾರವಾಗಿ ನನ್ನ ಮನಸ್ಸನ್ನು ಎಳೆದುಕೊಂಡು ಹೋಗುತ್ತಿರುವಂತೆ ಕಾಣುತ್ತಿರುವುದು. ಹಿಂದೆ ಯಾವಾಗಲೂ ಇಲ್ಲದೇ ಇದ್ದ ಹೊಸ ಕುತೂಹಲವು ಇದನ್ನು ನೋಡಬೇಕೆಂದು ಹೇಳುತ್ತಿದೆ. ಈ ಬೆಟ್ಟದಲ್ಲಿ ಆ ಮಹಾದೇವನೆಲ್ಲಿರುವನು ಎಂದು ಕೇಳಿ ಅವರಿಬ್ಬರೊಡನೆ ಮುಂದುವರಿದನು. ||೪೪-೪೫-೪೬||

ಗತ್ವಾ ದದರ್ಶ ಸರಿತಂ ಸುವರ್ಣಮುಖರೀಂ ಘನಃ ।
ತಟಾಂತವೇಣುನಿರ್ಮುಕ್ತಮುಕ್ತಾಪುಲಿನಶೋಭಿನೀಂ ॥೪೭॥

ಕಾಲಾಗರುಮಣಿದ್ಯೋತಿತರಂಗಾಂ ಪುಣ್ಯದರ್ಶನಾಂ ।
ಛಾಯಾಲವೃಕ್ಷಷಂಡೇಽಸ್ಯಾಸ್ತಟೇ ಸ್ಥಿತ್ವಾ ಧನುರ್ಧರಃ ॥೪೮॥

ಚಾಪಾಚ್ಛಮುಕ್ಷತಂ ವಹ್ನಿಂ ದೃಷ್ಟ್ವೈನಮುಚಲಂ ಪುನಃ ।
ಆಗಮಿಷ್ಯಾಮ ಇತ್ಯುಕ್ತ್ವಾ ಘನಃ ಕೋಶಸಮನ್ವಿತಃ ॥೪೯॥

ಅವಾತರನ್ನದೀತೀರಂ ದ್ರುಮಪುಷ್ಪರಸೋತ್ತರಂ ।
ವೀತಶ್ರಮೋ ನಿರ್ಮಲಾತ್ಮಾ ಶೈಲಂ ಶ್ರೀಕಾಲಹಸ್ತಿನಂ ॥೫೦॥

ದೃಷ್ಟ್ವಾ ಸಹರ್ಷಃ ಸ ಘನಸ್ತತ್ತೀರ್ತ್ವಾ ತತ್ತಟಾಧ್ವನಾ ।
ಗಿರೇರುಪತ್ಯಕಾಂ ಪ್ರಾಪ್ಯ ಮಧ್ಯಾಹ್ನೇ ತಸ್ಯ ಮೂರ್ಧನಿ ॥೫೧॥

---

ಹಾಗೆ ಹೊರಟು ದಡದ ತುದಿಯಲ್ಲಿ (ಅಂಚಿನಲ್ಲಿ) ಬಿದಿರುಗಳಿಂದ ಸಿಡಿದು ಬಿದ್ದಿರುವ ಮುತ್ತುಗಳಿಂದ ಯುಕ್ತವಾದ ಮರಳಿನಿಂದ ಶೋಭಿಸುತ್ತಿರುವ ಸುವರ್ಣಮುಖರೀ ನದಿಯನ್ನು ಆ ನೀಲನು ಕಂಡನು. ಕೃಷ್ಣಾಗರು ಮತ್ತು ರತ್ನಗಳಿಂದ ಶೋಭಿಸುತ್ತಿರುವ ಪ್ರವಾಹವುಳ್ಳದ್ದಾಗಿ ಪುಣ್ಯಕರವಾದ ನೋಟವುಳ್ಳ ಆ ನದಿಯನ್ನು ನೋಡಿ, ದಟ್ಟವಾಗಿ ನೆರಳುಕೊಡುವ ಆ ನದಿಯ ದಡದಲ್ಲಿ ಧನುಷ್ಪಾಣಿಯಾದ ನೀಲನು ನಿಂತುಕೊಂಡು, ಬಿಲ್ಲಿನಂತೆ ಸ್ವಚ್ಛವೂ ನೀಳವೂ ಆಗಿ ಕಾಡುಬೆಂಕಿಯಿಂದ ಪ್ರಜ್ವಲಿಸುತ್ತಿರುವ ಈ ಬೆಟ್ಟವನ್ನು ಸುತ್ತಲೂ ಹಾಗೆಯೇ ದೃಷ್ಟಿಸಿದನು. ಅಲ್ಲಿಗೆ ಹೋಗಿ ಬರೋಣವೆಂದು ಹೇಳಿ, ಮೊಗ್ಗಿನಿಂದಲೂ ಮರಗಳ ಹೂಗಳ ರಸದಿಂದಲೂ ಯುಕ್ತವಾಗಿರುವ ನೀರುಳ್ಳ ಆ ಸುವರ್ಣಮುಖರೀ ನದಿಯ ದಡದಿಂದ ನದಿಗೆ ಇಳಿದನು. ॥೪೭-೪೮-೪೯॥

ಹೀಗೆ ನೀಲನು ಸುವರ್ಣಮುಖರೀನದಿಯಲ್ಲಿ ಸ್ನಾನಪಾನಾದಿಗಳಿಂದ ಆಯಾಸವನ್ನು ಪರಿಹರಿಸಿಕೊಂಡು, ಪರಿಶುದ್ಧಾಂತಃಕರಣನಾಗಿ, ಆ ಕಾಲಹಸ್ತಿಪರ್ವತವನ್ನು ನೋಡಿ ತುಂಬಾ ಸಂತೋಷಪಟ್ಟು, ಆ ನದಿಯ ದಡದ ಮೇಲಿನ ದಾರಿಯಿಂದ ಆ ನದಿಯನ್ನು ದಾಟಿ ಬೆಟ್ಟದ ತಪ್ಪಲನ್ನು ಸೇರಿ, ಅದರ ಶಿಖರದಲ್ಲಿ ಕುಳಿತಿರಲು ಅವನಿಗೆ ಧೀರವೂ ನಾಲ್ಕುವಾದ್ಯಗಳಿಂದ ಮಿಳಿತವೂ ಆದ ಒಂದು ಧ್ವನಿಯು

ಶುಶ್ರಾವ ನಿಸ್ವನಂ ಧೀರಂ ಚತುರ್ವಾದ್ಯಸಮನ್ವಿತಂ ।
ಶಬ್ದಃ ಕೋಽಯಮಿತಿ ಪ್ರಾಹ ಸ ಕಿರಾತಸ್ತಮಬ್ರವೀತ್ ॥೫೨॥

॥ ಕಿರಾತ ಉವಾಚ ॥

ಸರಘಾಣಾಂ ಮೇಘಘೋಷೋ ಮಹಾಮಧುಜುಷಾಮಿತಿ ।
ತಪೋಭಿಃ ಪ್ರಾಗ್ಜನ್ಮಕೃತೈಃ ಪರಾಂ ಭಕ್ತಿಂ ಶಿವೇ ವಹನ್ ॥೫೩॥

ಅಸ್ತಿ ನ್ಯಂತದ್ರಸಾನೀವ ಭಾವಯನ್ಹರ್ಷನಿರ್ಭರಃ ।
ಶ್ರೀಕಾಲಹಸ್ತಿಶೈಲೇಂದ್ರಶೃಂಗಸೋಪಾನಪಂಕ್ತಿಭಿಃ ॥೫೪॥

ಆರುರೋಹ ಕಿರಾತಾಭ್ಯಾಂ ದದರ್ಶ ಸತ್ವರಂ ವಿಭುಂ ।
ಪ್ರಾಗ್ದೇವದರ್ಶನಾದೇವ ಸ ಹೃತಾತ್ಮಾ ವಿಬಂಧನಃ ॥೫೫॥

ಅಭೂತ್ತೇಜೋಲ್ಲಸನ್ಮೂರ್ತಿರ್ಘನೋ ಕೃತ್ರಿಮಭಕ್ತಿಮಾನ್ ।
ಶ್ರೀಕಾಲಹಸ್ತಿಶೃಂಗೋದ್ಯಜ್ಜಗದ್ಬೀಜೋದ್ಯತಾಂಕುರಂ ॥೫೬॥

---

ಕೇಳಿಸಿತು. ಆಗ ಅವನು ಈ ಶಬ್ದವಾವುದೆಂದು ಪಕ್ಕದವರನ್ನು ಕೇಳಲು ಆ ಬೇಡನು ಇಂತೆಂದನು. ॥೫೦-೫೧-೫೨॥

ಆಗ ಒಬ್ಬ ಬೇಡನು ಸ್ವಾಮಿ, ಇದು ದೊಡ್ಡ ಜೇನುಹುಳುಗಳ ಮೇಘಗರ್ಜನೆಯು ಎಂದು ಹೇಳಲು ಹಿಂದಿನ ಜನ್ಮದಲ್ಲಿ ಮಾಡಿದ ತಪಸ್ಸಂಸ್ಕಾರದಿಂದ ಶಿವನಲ್ಲಿ ಭಕ್ತಿಯನ್ನು ಹೊಂದಿ, ಭಕ್ತಿಭಾವವಿಶಿಷ್ಟನೋ ಎಂಬಂತೆ ಸಂತೋಷಭರಿತನಾಗಿ ಆ ನೀಲನು ಶ್ರೀಕಾಲಹಸ್ತಿಪರ್ವತದ ಶಿಖರಕ್ಕೆ ಹೋಗುವ ಸೋಪಾನಶ್ರೇಣಿಗಳ ಮೇಲೆ ಆ ಇಬ್ಬರು ಕಿರಾತರೊಡನೆ ಹತ್ತಿ, ಮೇಲೆ ಹೋಗಿ ಅಲ್ಲಿ ಕೂಡಲೇ ಸರ್ವವ್ಯಾಪಕನಾದ ಶಿವನನ್ನು ದರ್ಶನಮಾಡಿದನು. ॥೫೩-೫೪॥

ಆ ಮಹಾದೇವನ ದರ್ಶನಕ್ಕಿಂತ ಮೊದಲೇ ಅಪಹೃತವಾದ ಮನಸ್ಸುಳ್ಳವನಾಗಿ ಬಂಧನರಹಿತನಾಗಿದ್ದ ಈ ನೀಲನು ಈಗ ಶಿವನ ದಿವ್ಯದರ್ಶನದಿಂದ ತೇಜೋಮೂರ್ತಿಯೆನಿಸಿ ಪರಶಿವನಲ್ಲಿ ನಿಷ್ಕಪಟವಾದ ಭಕ್ತಿಯುಳ್ಳವನಾದನು. ಶ್ರೀಕಾಲಹಸ್ತಿಪರ್ವತದಲ್ಲಿ ಪ್ರಪಂಚದ ಬೀಜಕ್ಕೆ ಮೊಳಕೆಯಂತಿರುವ ಮಹಾದೇವನನ್ನು ನೋಡಿ, ಸಂತೋಷದಿಂದ ಶಂಕರನನ್ನು ತಬ್ಬಿಕೊಂಡು ಆನಂದಸಮುದ್ರದಲ್ಲಿ ನೀಲನು ಮಗ್ನನಾದನು. ॥೫೫-೫೬॥

ದೃಷ್ಟ್ವಾನಂದಾಂಬುಧೌ ಮಗ್ನಃ ಹರ್ಷಾದಾಲಿಂಗ್ಯ ಶಂಕರಂ ।
ಸ ನತ್ವಾ ವಿವಶೋ ಹರ್ಷಾಚ್ಚುಂಚದ್ರೋಮಾಂಚಕಂಚುಕಃ ॥೫೭॥

ಸಾದ್ರಾನಂದಾಂಬುನಯನಃ ಕಿಂ ಕುರ್ಯಾಮಿತಿ ಮೂಢಧೀಃ ।
ಕರಾಂತರಾಗತಃ ಸೋಽಯಂ ಭೃತ್ಯಸ್ನೇಹೋ ಮಹಾನಹೋ ॥೫೮॥

ಇತ್ಯುಕ್ತ್ವಾತ್ಮಂ(?) ಬಹುಪ್ರೇಮಸ್ತದಂಶೇ ಪ್ರೇಮಭಾಗಭೂತ್ ॥೫೯॥

॥ ಘನ ಉವಾಚ ॥

ವರಾಹವಾರಣವ್ಯಾಘ್ರಭಲ್ಲಕಂ ಭುವನೇ ವನೇ ।
ಏವಂ ತ್ವಮಸಹಾಯೋಽಸಿ ಹತೋಽಸ್ಮೀತಿ ಶುಶೋಚ ಹ ॥೬೦॥

ಹರ್ಷಾದ್ವಿಜ್ಞಾತಸ್ರಸ್ತಚಾಪೋ ದೇವಮಂಬುದಲಾದಿಭಿಃ ।
ಕಃ ಪೂಜಯೇದಿತಿ ಪ್ರಾಹ ಘನಸ್ತೌ ಚ ನಿಷಾದಕೌ ॥೬೧॥

ತಾವಬ್ರೂತಾಂ ನಿಷಾದೇಶ ಘನಂ ಭಕ್ತಿಘನಾಘನಂ ॥೬೨॥

---

ಅನಂತರ ಅವನು ಶಿವನಿಗೆ ನಮಸ್ಕಾರಮಾಡಿ, ಸಂತೋಷದಿಂದ ಮೂರ್ಛಿತನಾಗಿ ರೋಮಾಂಚಪಡೆದು ಆನಂದಬಾಷ್ಪಗಳಿಂದ ತೊಯ್ದುಕಣ್ಣುಳ್ಳವನಾಗಿ ಮುಂದೆ ಏನುಮಾಡಬೇಕೆಂಬುದನ್ನರಿಯಲಾರದೇ, ದೇವ, ನಿನ್ನ ದಿವ್ಯಸನ್ನಿಧಿಗೆ ಈ ನಾನು ಬಂದಿರುವೆನು. ಸೇವಕನ ಸ್ನೇಹವು ನಿನ್ನಲ್ಲಿ ಬಹಳವಾಗಿರುವುದು ಆಶ್ಚರ್ಯವು ಎಂದು ಹೇಳಿ ತನ್ನ ಅತಿಯಾದ ಪ್ರೇಮವನ್ನು ಆ ಪರಶಿವನಲ್ಲಿ ತೋರಿಸುತ್ತಾ ಪರಮೇಶ್ವರನ ಸಂಪೂರ್ಣ ಪ್ರೇಮಕ್ಕೆ ಪಾತ್ರನಾದನು. ॥೫೭-೫೮-೫೯॥

ಹಂದಿ, ಆನೆ, ಹುಲಿ, ಕರಡಿ, ಮುಂತಾದ ದುಷ್ಟಪ್ರಾಣಿಗಳಿಂದ ಪೂರ್ಣವಾದ ಈ ಘೋರಾರಣ್ಯದಲ್ಲಿ, ಸ್ವಾಮಿಯೇ! ನೀನೊಬ್ಬನೇ ಯಾರ ಸಹಾಯವೂ ಇಲ್ಲದೆ ಒಬ್ಬಂಟಿಗನಾಗಿರುವೆಯಲ್ಲಾ ಎಂದು ಆ ನೀಲನು ತುಂಬಾ ದುಃಖಪಟ್ಟನು. ಆಮೇಲೆ ಪರದೇವನ ಭಕ್ತಿಯಿಂದುಂಟಾದ ಸಂತೋಷದಿಂದ ತನ್ನ ಬಿಲ್ಲು ಜಾರಿಬಿದ್ದು ಹೋದುದನ್ನರಿಯದೆ, ಓ ಕಿರಾತರಿರಾ! ಈ ಮಹಾದೇವನನ್ನು ನೀರು, ಬಿಲ್ವದಳ ಮುಂತಾದವುಗಳಿಂದ ಯಾರು ಪೂಜಿಸುವರೆಂದು ಕೇಳಲು, ಆಗ ಆ ಬೇಡರಿಬ್ಬರೂ ಭಕ್ತಿರಸಪೂರ್ಣರಾಗಿ ವ್ಯಾಧಾಧಿಪತಿಯಾದ ಆ ನೀಲನಿಗಿಂತೆಂದರು. ॥೬೦-೬೧-೬೨॥

|| ನಿಷಾದಾವೂಚತುಃ ||

ಮೃಗಯಾರ್ಥಂ ಪುರಾ ಸಾರ್ಧಂ ತ್ವತ್ಪಿತ್ರಾ ವಾಮಿಹಾಗತೌ ।
ಕಶ್ಚಿತ್ತದಾನೀಂ ದೃಷ್ಟೋಽತ್ರ ದ್ವಿಜಃ ಶಿವಪದಾರ್ಚಕಃ ||೬೩||

ಸ ದೇವಮರ್ಚಯನ್ನೂನಂ ತೇನಾದ್ಯಪ್ಯರ್ಚಿತೋಽಹ್ಯಯಂ ।
ತಚ್ಛ್ರುತ್ವಾಭೂದ್ಘನೋ ಹೃಷ್ಟಃ ಕಾಲಹಸ್ತೀಶಲಗ್ನಧೀಃ ||೬೪||

|| ಘನ ಉವಾಚ ||

ತೋಷಯಿಷ್ಯೇಽಪ್ಯಹಂ ದ್ರವ್ಯೈರ್ದೇವಂ ಕ್ಷೌದ್ರರಸಾದಿಭಿಃ ।
ಇತಿ ಧ್ಯಾತ್ವಾ ಶಿವಂ ಹಿತ್ವಾ ಘನೋ ಗಂತುಂ ನ ಚಕ್ಷಮೇ ||೬೫||

ನಾಪ್ಯಸ್ಯ ಪಾರ್ಶ್ವಗಃ ಕೋಽಪಿ ಮಾಂಸಂ ನೋಽಸ್ಮೈ ದದಾತಿ ಚ ।
ಕ್ಷುಧಾರ್ತೋಽಯಮಿಮಂ ಹಾತುಂ ನ ಶಕ್ನೋಮಿ ಕರೋಮಿ ಕಿಂ ||೬೬||

ಕಿಂ ನಾಮ ಮಾಂಸಮಾದಾಯ ಪ್ರಾಪ್ತಸ್ಸ್ಯಾಮಿತಿ ಚಿಂತಯನ್ ।
ಸ ಗಚ್ಛನ್ಪುನರಾಗಚ್ಛನ್ಹೃಷ್ಯನ್ನಿಘ್ನನ್ಮುಹುರ್ಮುದಾ ||೬೭||

---

ಎಲೈ ಸ್ವಾಮಿಯೇ! ಹಿಂದೆ ಒಂದುದಿನ ನಾವಿಬ್ಬರೂ ನಿಮ್ಮ ತಂದೆಯೊಡನೆ ಇಲ್ಲಿಗೆ ಬೇಟೆಗೋಸ್ಕರ ಬಂದಿದ್ದೆವು. ಆಗ ಇಲ್ಲಿ ಶಿವಪಾದಪೂಜಕನಾದ ಒಬ್ಬ ಬ್ರಾಹ್ಮಣನು ಕಾಣಿಸಿಕೊಂಡನು. ಅವನೇ ಈ ದೇವನನ್ನು ಪೂಜಿಸುತ್ತಿದ್ದನು. ಇಂದೂ ಪ್ರಾಯಶಃ ಈ ಶಿವನು ಅವನಿಂದಲೇ ಪೂಜಿಸಲ್ಪಟ್ಟಿರಬಹುದು, ಎಂದು ಹೇಳಲು, ಅದನ್ನು ಕೇಳಿ ಆ ನೀಲನು ಸಂತುಷ್ಟನಾಗಿ, ಆ ಕಾಲಹಸ್ತೀಶ್ವರನಲ್ಲಿಯೇ ನೆಲಸಿದ ಮನವುಳ್ಳವನಾದನು. ||೬೩-೬೪||

ನಾನೂ ಮಹಾದೇವನನ್ನು ಜೇನುತುಪ್ಪ ಮುಂತಾದ ಪೂಜಾದ್ರವ್ಯಗಳಿಂದ ಸಂತೋಷಪಡಿಸುವೆನು, ಎಂದು ಯೋಚಿಸಿ, ಶಿವನನ್ನು ಧ್ಯಾನಮಾಡುತ್ತಾ ಆ ನೀಲನು, ದೇವನನ್ನು ಬಿಟ್ಟುಹೋಗಲು ಅಸಮರ್ಥನಾದನು. ಈ ಶಿವನ ಪಕ್ಕದಲ್ಲಿ ಬೇರೆಯಾರೂ ಇಲ್ಲ, ಇವನಿಗೆ ಮಾಂಸವನ್ನು ಕೊಡುವರೊಬ್ಬರೂ ಇಲ್ಲ, ಈ ದೇವನಾದರೋ ಹಸಿವಿನಿಂದ ಬಳಲಿರುವನು, ಇವನನ್ನು ಬಿಟ್ಟು ಹೊರಗೆಹೋಗಲು ಸಾಧ್ಯವಿಲ್ಲ, ಈಗ ಪೂಜಾಸಾಮಗ್ರಿಗಳನ್ನು ತರಲು ಏನುಮಾಡಲಿ? ||೬೫-೬೬||

ದೇವ, ಯಾವ ಮಾಂಸವನ್ನು ನಿನಗಾಗಿ ತಂದುಕೊಡಲಿ? ಎಂದು

ಗಚ್ಛನ್ನಭ್ಯಯೋಽಸ್ಯತಿಸ್ನೇಹಾತ್ಪಶ್ಯಂಸ್ತಂ ಪರಿವೃತ್ಯ ಚ ।
ಗೋವತ್ಸಲಾ ವತ್ಸಮಿವ ದೇವಂ ಹಾತುಂ ನ ಚಕ್ಷಮೇ ॥೬೮॥

ನವಂ ಮಾಂಸಮಹಂ ನಾಥ ನಯೇಯಮಿತಿ ಚಿಂತಯನ್ ।
ಕೋ ಬಂಧುಸ್ತೇ ಸ್ಥಿತೋ ಹ್ಯೇಕಃ ಕಥಂ ವಾ ತ್ವಾಂ ಜಹಾಮ್ಯಹಂ ॥೬೯॥

ಕ್ಷುಧಾರ್ತೇ ತ್ವಯಿ ತಿಷ್ಠಾಮಿ ಕಥಂ ವೇತ್ಯಾಕುಲಾಶಯಃ ।
ಅಶ್ರುಧಾರಾಲನಯನೋ ಭೂತ್ವಾ ಗಂತುಮುದೀರ್ಣಧೀಃ ॥೭೦॥

ಚಾಪಮಾದಾಯ ಹಸ್ತೇ ನತ್ವೇಶಂ ಕೋಶಸಂಯುತಃ ।
ಸ ಘನೋ ನಿರ್ಗತೋ ಯತ್ನಾದ್ಗಿರಿಶೃಂಗಾದವಾತರತ್ ॥೭೧॥

ತೀರ್ತ್ವಾ ಸುವರ್ಣಮುಖರೀಂ ಗತ್ವಾ ದೂರತರಂ ವನಂ ।
ನತ್ವಾ ಚೋಪೋಷಿತಂ ಪ್ರಾಹ ಮಥಿತಾಗ್ನಿಂ ನಿರೀಕ್ಷ್ಯ ಸಃ ॥೭೨॥

---

ಯೋಚಿಸುತ್ತಾ, ಸ್ವಲ್ಪ ದೂರ ಹೋಗುತ್ತಾ ಪುನಃ ಬರುತ್ತಾ, ಭಾವಾವೇಶಗೊಳ್ಳುತ್ತಾ ಪದೇಪದೇ ಪ್ರೀತಿಯಿಂದ ಶಿವನನ್ನು ಆಘ್ರಾಣಿಸುತ್ತಾ, ಮತ್ತೆಮತ್ತೆ ತುಂಬಾ ಸ್ನೇಹದಿಂದ ದೇವನನ್ನು ನೋಡುತ್ತಾ ಹಿಂದಿರುಗುತ್ತಾ ಕರುವಿನಲ್ಲಿ ಬಹಳ ಪ್ರೀತಿಯಿಟ್ಟ ಹಸುವು ತನ್ನ ಪ್ರೀತಿಯ ಕರುವನ್ನು ಸ್ವಲ್ಪವೂ ಎಡಬಿಡದಂತೆ ಮಹಾದೇವನನ್ನು ಬಿಟ್ಟು ಹೋಗಲು ಅವನು ಹಿಂಜರಿಯುತ್ತಿದ್ದನು. ॥೬೭-೬೮॥

ಸ್ವಾಮಿಯೇ, ನಿನಗಾಗಿ ಹೊಸ ಮಾಂಸವನ್ನು ತಂದುಕೊಡುವೆನು, ಆದರೆ ಅಲ್ಲಿಯವರೆಗೆ ನಿನ್ನ ಬಳಿ ಇರಬಲ್ಲ ಬಂಧುವಾರಿರುವನು? ಹೇಗೆ ನಿನ್ನೊಬ್ಬನನ್ನೇ ಈ ಘೋರಾರಣ್ಯ ಮಧ್ಯದಲ್ಲಿ ಬಿಟ್ಟುಹೋಗಲಿ? ಎಂದು ಚಿಂತಿಸುತ್ತಾ, ಎಲೈ ಪ್ರಭುವೇ, ನೀನು ಹಸಿವಿನಿಂದ ಬಳಲಿರುವಾಗ ನಾನು ಹೇಗೆ ತಾನೇ ಸುಮ್ಮನಿರಲಿ? ಎಂದು ಚಿಂತಾಕ್ರಾಂತನಾಗಿ ಏನು ಮಾಡಲೂ ತಿಳಿಯದೆ ಕಣ್ಣಿನಲ್ಲಿ ಧಾರಾಕಾರವಾಗಿ ನೀರು ಸುರಿಸುತ್ತಾ ಕೊನೆಗೆ ಹೋಗಿ ಮಾಂಸವನ್ನು ತರುವುದೇ ಒಳ್ಳೆಯದೆಂದು ದೃಢಮನಸ್ಸುಮಾಡಿಕೊಂಡನು. ॥೬೯-೭೦॥

ಕೈಯ್ಯಲ್ಲಿ ಬಿಲ್ಲು ಹಿಡಿದು ಶಿವನಿಗೆ ನಮಸ್ಕಾರಮಾಡಿ, ಆ ಕೋಶನೊಡನೆ ಹೊರಟು ನೀಲನು ಬಲಾತ್ಕಾರವಾಗಿ ಬೆಟ್ಟದ ಶಿಖರದಿಂದ ಕೆಳಕ್ಕೆ ಇಳಿದನು. ಮುಂದೆ ಸುವರ್ಣಮುಖರೀ ನದಿಯನ್ನು ದಾಟಿ ಬಹು ದೂರದಲ್ಲಿರುವ ಕಾಡಿಗೆ

ಸರ್ವೈರಂಗೇ ವರಾಹೋಽಪಿ ನಿಷ್ಕೃತ್ಯೋಚ್ಛಿದ್ಯತಾಂ ತ್ವಚಂ ।
ಇತಿ ಬ್ರುವಾಣಂ ತಂ ಕೋಶೋ ಭಾವವಿತ್ಪ್ರತ್ಯಭಾಷತ ॥೭೩॥

॥ ಕೋಶ ಉವಾಚ ॥

ಅಯಂ ತತ್ರ ಗಿರೇಃ ಶೃಂಗೇ ದೇವಮಾಲಿಂಗ್ಯ ಕಂಚನ ।
ಬಲಾಭಿರಕ್ತಗೋಥೇನ ನಿರಗಾನ್ನ ವಿಸೃಜ್ಯ ತಂ ॥೭೪॥

ತಸ್ಮೈ ದೇವಾಯ ಮಾಂಸಾನಿ ದಾತುಮತ್ರಾಪ್ಯುಪಾಯಯೌ ।
ಅಸ್ಮತ್ಕುಲೇಶಂ ತಂತ್ಯಕ್ತ್ವಾ ತಸ್ಮಿನ್ನಾಸಕ್ತಧೀರಭೂತ್ ॥೭೫॥

ತಚ್ಛ್ರುತ್ವಾ ಪ್ರಾಹ ಚಾಪೋಽಪಿ ಘನ ಕಿಂ ನ ತ್ವಯಾಶ್ರುತಂ ॥೭೬॥

॥ ಚಾಪ ಉವಾಚ ॥

ಇಯಂ ಕಾ ನಾಮ ತೇ ಭ್ರಾಂತಿಃ ಕಿಂ ಜಹಾಸ್ಯಸ್ಮದೀಶ್ವರಂ ।
ಇತೀರಿತೋ ಘನಶ್ಚಾಪಮುಖಮೈಕ್ಷತ ಕೇವಲಂ ॥೭೭॥

---

ಹೋಗಿ ಅಲ್ಲಿ ಉಪವಾಸದಿಂದ ಕುಳಿತು ಬೆಂಕಿಯನ್ನು ಕಡೆದು ಉರಿಸುತ್ತಿರುವ ಚಾಪನಿಗೆ ನಮಸ್ಕಾರಮಾಡಿ ವಿನಯದಿಂದ ಇಂತೆಂದನು. ಈ ಹಂದಿಯ ಮೇಲಿನ ಚರ್ಮವನ್ನೆಲ್ಲಾ ತೆಗೆದು ಎಲ್ಲಾ ಅವಯವಗಳನ್ನೂ ಚೆನ್ನಾಗಿ ತುಂಡು ತುಂಡು ಮಾಡೆಂದು ಪ್ರಾರ್ಥಿಸಿದನು. ಈ ಮಾತನ್ನು ಕೇಳಿ ಇವನ ಅಭಿಪ್ರಾಯವ ನ್ನರಿತ ಕೋಶನು ಚಾಪನೊಡನೆ ಮತ್ತೆ ಹೀಗೆಂದನು. ॥೭೧-೭೨-೭೩॥

ಎಲೈ ಚಾಪನೇ, ಈ ನೀಲನು ಬೆಟ್ಟದ ಶಿಖರದಲ್ಲಿ ಯಾವುದೋ ಒಂದು ದೇವತೆಯನ್ನು ತಬ್ಬಿಕೊಂಡು ಆ ದೇವನಲ್ಲಿಯೇ ಆಸಕ್ತಿಹೊಂದಿ ಬಿಡಲಾರದೆ ಅವನನ್ನು ಬಿಟ್ಟು ಇಲ್ಲಿಗೆ ಬಂದಿದ್ದಾನೆ. ಆ ದೇವನಿಗೆ ಮಾಂಸವನ್ನು ಕೊಡುವುದ ಕ್ಕಾಗಿ ಇಲ್ಲಿಂದ ಇದನ್ನು ತೆಗೆದುಕೊಂಡುಹೋಗಲು ಬಂದಿರುವನು. ನಮ್ಮ ಕುಲ ಸ್ವಾಮಿಯಾದ ದೇವತೆಯನ್ನು ಬಿಟ್ಟು ಈ ದೇವತೆಯಲ್ಲಿ ಇವನ ಬುದ್ಧಿಯು ಆಸಕ್ತವಾಗಿದೆ, ಎಂದು ಕೋಶನು ಹೇಳಲು ಚಾಪನೂ ಅದನ್ನು ಕೇಳಿ, ನೀಲನನ್ನು ಕುರಿತು, ಎಲೈ ನೀಲನೇ! ನಿನಗೆ ಯಾವುದು ತಾನೇ ತಿಳಿಯದು! ಆದರೂ ಕೊಂಚ ಹೇಳುವೆನು ಕೇಳು. ॥೭೪-೭೫-೭೬॥

ಅಯ್ಯಾ ನೀಲನೇ! ಇದೇನು ನಿನ್ನ ಭ್ರಾಂತಿಯು, ನಮ್ಮ ಕುಲದೇವತೆ ಯನ್ನೇ ಬಿಟ್ಟು ಯಾವುದೋ ದೇವರನ್ನು ಪೂಜಿಸುತ್ತಿರುವೆಯಲ್ಲಾ! ಎಂದು

ವಿದಗ್ಧಾಂಗಾನಿ ಬಾಣೇನ ದಗ್ಧರೋಮಸ್ಯ ಪೋತ್ರಿಣಃ ।
ಮಾಂಸಂ ತದ್ದಾರುಸಂಪ್ರೋತಂ ಪ್ರತಪ್ತಂ ಜ್ವಲತೋನಲೇ ॥೭೮॥

ವಹ್ನಿಸ್ನಿಗ್ಧಂ ತಥಾಪಾಕಂ ಸ್ವಾದು ಚಾಸ್ತೀತಿ ವೇದಿತುಂ ।
ತಸ್ಮಿಂಛತೇನ ನಯತ್ಸ್ವಾದುಮೃದುಸುಸ್ನಿಗ್ಧಮೇದುರಂ ॥೭೯॥

ತಂ ಶ್ಲಕ್ಷ್ಣಪರ್ಣಪಾತ್ರಾಂತೇ ನಿಚಿಕ್ಷೇಪ ಪೃಥಕ್ಪೃಥಕ್ ।
ಚಾಪಕೋಶೌ ಚ ತತ್ಕರ್ಮ ದೃಷ್ಟ್ವಾ ತೌ ಪ್ರೋಚತುರ್ಮಿಥಃ ॥೮೦॥

॥ ಭಿಲ್ಲಾವೂಚತುಃ ॥

ಅಹೋ ಮೋಹೋ ಘನಸ್ಯಾಯಮುಪರ್ಯುಪರಿ ವರ್ಧತೇ ।
ಮಾಂಸಂ ಪ್ರತಪ್ತಂ ವಕ್ತ್ರೇಣ ನಿದಧಾತಿ ಪರೀಕ್ಷ್ಯ ಚ ॥೮೧॥

ನ ವೇತ್ತಿ ಸ್ವಾಂ ಕ್ಷುಧಾಂ ಮಾಂಸಮಾವಾಭ್ಯಾಂ ನ ದದಾತ್ಯಯಂ ।
ಮಾಂಸಾನಿ ಬಿಭ್ರನ್ಸ್ವಸ್ಯಾನಿ ನಾರಾಹಾಣಿ ಘನಸ್ತದಾ ॥೮೨॥

---

ಚಾಪನು ಬುದ್ಧಿ ಹೇಳಲು, ಆಗ ಘನನು(ನೀಲನು)ಪ್ರತ್ಯುತ್ತರಕೊಡದೆ ಚಾಪನ ಮೊಗವನ್ನು ನೋಡುತ್ತಾ ನಿಂತನು. ಬಾಣದಿಂದ ಚುಚ್ಚಲ್ಪಟ್ಟ ಅವಯವದಲ್ಲಿ ಸುಟ್ಟರೋಮವುಳ್ಳದ್ದಾಗಿರುವ ಆ ಹಂದಿಯ ಮಾಂಸವನ್ನು ಕಡ್ಡಿಗೆ ಪೋಣಿಸಿ ಚೆನ್ನಾಗಿ ಪ್ರಜ್ವಲಿಸುತ್ತಿರುವ ಬೆಂಕಿಯಲ್ಲಿ ಬೇಯುತ್ತಿರುವುದನ್ನು ನೋಡಿ ; ॥೭೭-೭೮॥

ಬೆಂಕಿಯಲ್ಲಿ ಅದು ಬೆಂದು ಚೆನ್ನಾಗಿ ಜಿಡ್ಡಿನಿಂದ ಯುಕ್ತವಾಗಿದೆಯೇ ಇಲ್ಲವೇ ಎಂಬುದನ್ನು ತಿಳಿಯುವುದಕ್ಕೋಸ್ಕರ, ಅದರಲ್ಲಿ ಮಧ್ಯದ ಒಂದುಭಾಗದಷ್ಟನ್ನು ತೆಗೆದುಕೊಂಡು ರುಚಿನೋಡಿ, ರುಚಿಕರವೂ ಮೃದುವೂ ಚೆನ್ನಾಗಿ ಜಿಡ್ಡಿನಿಂದ ಕೂಡಿರುವುದೂ ಆದ ಮಾಂಸವನ್ನು ಒತ್ತಾಗಿ ಜೋಡಿಸಿರುವ ಎಲೆಗಳ ಪಾತ್ರೆಯಲ್ಲಿ ಪ್ರತ್ಯೇಕಪ್ರತ್ಯೇಕವಾಗಿ ಇರಿಸಿದನು. ಆಗ ಚಾಪ ಮತ್ತು ಕೋಶ ಇವರಿಬ್ಬರೂ ಆ ಕೆಲಸವನ್ನು ನೋಡಿ ಪರಸ್ಪರವಾಗಿ ಹೀಗೆ ಹೇಳಿಕೊಂಡರು. ॥೭೯-೮೦॥

ಅಯ್ಯೋ! ಈ ನೀಲನಿಗೆ ಮೇಲೆಮೇಲೆ ಅಜ್ಞಾನವು ಹೆಚ್ಚುತ್ತಿದೆ. ಕಾದ ಮಾಂಸವನ್ನು ಬಾಯಲ್ಲಿಟ್ಟುಕೊಂಡು ಪರೀಕ್ಷಿಸಿ, ನಮ್ಮ ಮತ್ತು ತನ್ನ ಹಸಿವನ್ನೂ ಲಕ್ಷಿಸುತ್ತಿಲ್ಲ. ಪ್ರಾಯಶಃ ಇವನು ನಮ್ಮಿಬ್ಬರಿಗೂ ಮಾಂಸವನ್ನು ಕೊಡುವುದಿಲ್ಲವೆಂದೇ ತೋರುವುದು, ಎಂದು ಚಾಪ ಕೋಶರಿಬ್ಬರೂ ಮಾತಾಡಿಕೊಂಡರು. ಮತ್ತು

ದೇವಾವಿಷ್ಟಘನಸ್ಯಾದ್ಯ ನ ಜಾನೀಮಃ ಪ್ರತಿಕ್ರಿಯಾಂ ।
ದೇವಾರ್ಚನಕರಂ ವಕ್ತಿ ನಾಗೇನಾತ್ರ ವಧೇ ಧೃತಃ ॥೮೩॥

ಏವಂ ವಿಚಿಂತ್ಯ ದೀನೌ ತೌ ಗೋಥಾಂ ಪುರಮಗಚ್ಛತಾಂ ।
ಘನೋಽಪ್ಯಜ್ಞಾತತದ್ಯಾನೋ ಮಾಂಸಂ ನಿಕ್ಷಿಪ್ಯ ಪಾತ್ರತಃ ॥೮೪॥

ಜಲಂ ದೇವಾಭಿಷೇಕಾರ್ಥಮಾಸ್ಯೇ ಸಂಪೂರ್ಯ ಸೋಽಚಿರಾತ್ ।
ಬಿಭ್ರನ್ಪೂಜಾರ್ಹಪುಷ್ಪಾಣಿ ಗೃಹೀತ್ವಾ ಸಶರಂ ಧನುಃ ॥೮೫॥

ಹಸ್ತೇನೈಕೇನ ಚಾನ್ಯೇನ ವಹನ್ಪಲಲಭಾಜನಂ ।
ಕ್ಷುಧಾರ್ತೋ ವರ್ತತೇ ದೇವ ಇಯಂತಂ ಕಾಲಮಿತ್ಯಸೌ ॥೮೬॥

ಮಹಾದಯಾಲುಸ್ತ್ವರಿತಸ್ಖಲನ್ನಾರುಹ್ಯ ತಂ ಗಿರಿಂ ।
ಸೋಪಾನಹತ್ಪದೇನೇಶಮೂರ್ಧ್ನಿ ಪುಷ್ಪಾಣ್ಯಪೋಹ್ಯ ಸಃ ॥೮೭॥

ಮೂರ್ತೈರಿವ ಪ್ರೇಮರಸೈರಭಿಷಿಚ್ಯ ಮುಖಾಂಬುಭಿಃ ।
ದೇವಂ ಕರೋದ್ಧೃತೈಃ ಪುಷ್ಪೈರಭ್ಯರ್ಚ್ಯ ಪ್ರಣಮದ್ಘನಃ ॥೮೮॥

---

ಈ ನೀಲನು ಈ ಹಂದಿಯಮಾಂಸವನ್ನು ಎತ್ತಿಕೊಂಡು ಆ ದೇವರಿರುವ ಗುಡಿಗೆ ಹೋಗುತ್ತಾನೆ. ಇದಕ್ಕೆ ನಾವೇನು ಪ್ರತಿಯಾಗಿಮಾಡಬೇಕೋ ಒಂದೂ ತಿಳಿಯದು. ಈಗಲೇ ನಾವು ಊರಿಗೆಹೋಗಿ ಇವರತಂದೆಗೆ ಈ ವಿಷಯವನ್ನು ಹೇಳೋಣ, ಆಗ ಅವನೇ ಬಂದು, ಪ್ರಾಣಿಗಳನ್ನು ಕೊಂದು ಮಾಂಸವನ್ನು ದೇವರಿಗೆ ನಿವೇದನ ಮಾಡುತ್ತಾ ಪೂಜಿಸುತ್ತಿರುವ ಇವನಿಗೆ ಬುದ್ಧಿಹೇಳುತ್ತಾನೆಂದು ಯೋಚಿಸಿ, ಖಿನ್ನರಾದ ಅವರಿಬ್ಬರೂ ಗೋಥಾಪಟ್ಟಣಕ್ಕೆ ಓಡಿಹೋದರು. ||೮೧-೮೨-೮೩||

ಆ ನೀಲನು ಅವರು ಹೋದುದನ್ನೂ ತಿಳಿಯದೇ ಪಾತ್ರೆಯಲ್ಲಿ ಮಾಂಸವನ್ನಿಟ್ಟುಕೊಂಡು, ದೇವನ ಅಭಿಷೇಕಕ್ಕೋಸ್ಕರ ಬಾಯಲ್ಲಿ ನೀರನ್ನು ತುಂಬಿಕೊಂಡವನಾಗಿ ಜಾಗ್ರತೆ ಒಂದುಕೈಯಲ್ಲಿ ಪೂಜೆಗೆ ಯೋಗ್ಯವಾದ ಹೂಗಳನ್ನೂ ಬಿಲ್ಲುಬಾಣಗಳನ್ನೂ ಹಿಡಿದುಕೊಂಡು, ಮತ್ತೊಂದರಲ್ಲಿ ಮಾಂಸದಪಾತ್ರೆಗಳನ್ನೆತ್ತಿಕೊಂಡವನಾಗಿ, ಮಹಾದೇವನು ಇಷ್ಟುಹೊತ್ತು ಹಸಿವಿನಿಂದ ಬಳಲಿರುವನಲ್ಲಾ ಎಂದು ಇವನು ತುಂಬಾ ದಯೆತೋರಿಸುತ್ತಾ, ವೇಗದಿಂದ ಬರುವಾಗದಾರಿಯಲ್ಲಿ ಎಡವುತ್ತಾ ಬೆಟ್ಟವನ್ನೇರಿ ಬಂದು, ಎಕ್ಕಡದ ಕಾಲಿನಿಂದಲೇ ಈಶ್ವರನ ತಲೆಯಲ್ಲಿದ್ದ ಹೂಗಳನ್ನು ತೆಗೆದುಹಾಕಿ

ನಿವಧೇ ಚ ಪುರಃ ಶಂಭೋರ್ಮಾಂಸಂ ಪತ್ರಾಂತರಾರ್ಪಿತಃ ।
ಸ್ನಿಗ್ಧದಾರುಶಿಖಾಪ್ರೋತಂ ಪ್ರದತ್ತಂ ಪಲಲಂ ಪೃಥಕ್ ॥೮೯॥

ದಂತನಿಷ್ಪೀಡಿತಂ ಜಿಹ್ವಾಜ್ಞಾತಪೂರ್ವರಸೋದಯಂ ।
ಮಯಾರ್ಪಿತಮಿದಂ ಭೋಜ್ಯಮಂಗೀಕುರು ಜಗತ್ಪ್ರಭೋ ॥೯೦॥

ಇತ್ಯುಕ್ತ್ವಾ ತರ್ಪಯಿತ್ವೇಶಂ ಮಾಂಸಂ ದದ್ಯಾತ್ಪುನರ್ವಿಭೋಃ ।
ಇತಿ ಸ್ಥಿತವತಸ್ತಸ್ಯ ಪುರೋ ಭಕ್ತಿಂ ನಿರೀಕ್ಷ್ಯ ತಂ ॥೯೧॥

ದೃಷ್ಟ್ವಾ ಸ ಮಾನೀನಕರಃ ಪ್ರಾಣಮತ್ಪಶ್ಚಿಮಾಜಲೇ ।
ಪ್ರವೃತ್ತಾಯಾಂ ತ್ರಿಯಾಮಾಯಾಂ ತಮೋರುದ್ಧಾಸು ದಿಕ್ಷು ಚ॥೯೨॥

ಹಿಂಸ್ರಾಸ್ಸಂತ್ಯತ್ರ ತೇ ನೂನಮನಾರ್ಯಂ ಕುರ್ಯುರೀಶ್ವರೇ ।
ಇತಿ ಚಿಂತಾಕುಲೋಭೂತ್ವಾ ಪುನಃ ಶೂರಧನುರ್ಧರಃ ॥೯೩॥

---

ಪ್ರೇಮರಸದ ಮೂರ್ತಿಯೋ ಎಂಬಂತಿರುವ ತನ್ನ ಬಾಯಿನ ನೀರಿನಿಂದ ಶಿವನಿಗೆ ಅಭಿಷೇಕಮಾಡಿ ತನ್ನ ಕೈಯ್ಯಲ್ಲಿ ಹಿಡಿದಿದ್ದ ಹೂಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಿ ಆ ನೀಲನು ನಮಸ್ಕಾರಮಾಡಿದನು. ॥೮೪-೮೫-೮೬-೮೭-೮೮॥

ಆಮೇಲೆ ಆ ಶಂಭುವಿನ ಮುಂದೆ ಎಲೆಗಳ ಪಾತ್ರೆಗಳಲ್ಲಿದ್ದ ಮಾಂಸವನ್ನಿರಿಸಿದನು. ಎಲೈ ಜಗದೊಡೆಯನೇ, ಮೃದುವಾದ ಕಡ್ಡಿಯ ತುದಿಯಿಂದ ಪೋಣಿಸಿ ಪ್ರತ್ಯೇಕಪ್ರತ್ಯೇಕವಾಗಿಬೇಯಿಸಿರುವ ಈ ಮಾಂಸವನ್ನು, ಮೊದಲು ಹಲ್ಲಿನಿಂದ ಅಗಿದು ನಾಲಿಗೆಯಿಂದ ರುಚಿನೋಡಿ ಚೆನ್ನಾಗಿರುವುದೆಂದು ತಂದಿದ್ದೇನೆ. ಪ್ರಭೋ, ಈ ಮಾಂಸವನ್ನು ಅಂಗೀಕರಿಸಿ ಊಟಮಾಡೆಂದು ಬೇಡಿಕೊಂಡನು. ॥೮೯-೯೦॥

ಹೀಗೆ ಹೇಳಿ ಪುನಃ ಆ ವಿಭುವಿಗೆ ಮಾಂಸವನ್ನು ನಿವೇದನಮಾಡಿ ಸಂತೋಷಪಡುತ್ತಾ, ಮಹಾದೇವನ ಮುಂದೆ ನಿಂತಿರುವ ಈ ನೀಲನ ಭಕ್ತಿಯನ್ನು ನೋಡಿ ಸಂತೋಷದಿಂದ ಸೂರ್ಯದೇವನು ಪಶ್ಚಿಮಸಮುದ್ರದಲ್ಲಿ ಮುಳುಗಿದನು. ಕತ್ತಲೆಯು ಎಲ್ಲಾ ದಿಕ್ಕುಗಳಲ್ಲಿಯೂ ದಟ್ಟವಾಗಿ ಕವಿದಿರಲು, ಆ ನೀಲನು, ಈ ಕಾಡಿನಲ್ಲಿ ನಿಶ್ಚಯವಾಗಿಯೂ ದುಷ್ಟಪ್ರಾಣಿಗಳಿರುವುವು. ಇವು ನಿರ್ದುಷ್ಟನಾದ ಪರಮೇಶ್ವರನಿಗೆ ತೊಂದರೆಮಾಡಿಯಾವು, ಎಂದು ಚಿಂತಾಕ್ರಾಂತನಾಗಿ ಶೂರನಾದ ಇವನು ಕೈಯಲ್ಲಿ ಬಿಲ್ಲು ಹಿಡಿದು ಎಚ್ಚರಿಕೆಯಿಂದ ನೀಲಪರ್ವತದಂತೆ ರಾಜಿಸುತ್ತಾ ಶಿವನ ಪಾರ್ಶ್ವವನ್ನು ಬಿಡದೇ ಕಾದುಕೊಂಡಿದ್ದನು. ॥೯೧-೯೨-೯೩॥

ಜಾಗ್ರದಂಜನಶೈಲಾಭೋ ನ ಜಹೌ ಪಾರ್ಶ್ವಮೀಶಿತುಃ ।
ಪುನಃ ಸ್ವಾತ್ಮತನೋಃಘೋರೇ ಜೇತ್ರಯಂತ್ರತನೋರ್ಭರ್ಯೈಃ ॥೯೪॥

ಅಶಕ್ಯದರ್ಶನಂ ದೇವಂ ತಸ್ಥೌ ಪಶ್ಯನ್ನಿವ ಸ್ವಯಂ ।
ಕ್ವಾಪಿ ಸ್ವದ್ರೌ ವೇಣುಮುಕ್ತೌಘಃ ಕ್ವಚಿನ್ನಾಗಮಣಿವ್ರಜಃ ॥೯೫॥

ತೌ ಪುಷ್ಪವಂತಾವಿವ ತೌ ದೇವಂ ಸೇವಿತುಮಾಗತೌ ।
ಜ್ವಲಿತೌಷಧಿದೀಪೈಶ್ಚ ಗುಹಾರತ್ನೋಪಲಾಂಶುಭಿಃ ॥೯೬॥

ಮುನೀಂದ್ರದ್ಯುತಿಭಿಸ್ತತ್ರ ಶೈಲೇ ರಾತ್ರಿಮುಸಿದ್ಯುತಿಂ ।
ನಿಶಾಂತವೇದಿನಾಂ ರಾವಂ ನಿಶಮ್ಯ ಪಠತಾಂ ಪುನಃ ॥೯೭॥

ಅತ್ಯಂತವೀರಸ್ಸ್ವಾತ್ಮೇಶಭೋಜ್ಯಾಹರಣಧೀರಭೂತ್ ॥೯೮॥

ಸ ಯೂಥವಾಸಜುಷಾಂ ಮೃಗಾಣಾಂ
ಪೃಥಙ್ನಹಂತುಂ ಮೃಗಯೋರಭಿಜ್ಞಃ ।

---

ಆ ನೀಲನು ಭಯಂಕರವಾಗಿರುವ ಕತ್ತಲೆಯಲ್ಲಿ ಎಚ್ಚರಿಕೆಯಿಂದಿದ್ದು, ಯೋಗಿಗಳು, ಜಿತೇಂದ್ರಿಯರೂ ಮುಂತಾದವರಿಂದ ನೋಡಲು ಅಸಾಧ್ಯನಾದ ಮಹಾದೇವನನ್ನು ನೋಡುತ್ತಿರುವನೋ ಎಂಬಂತೆ ನಿಂತಿದ್ದನು. ಆ ಬೆಟ್ಟದಲ್ಲಿ ಕೆಲವೆಡೆ ಬಿದಿರಿನ ಮುತ್ತಿನ ಸರವೂ, ಕೆಲವೆಡೆ ಆನೆಯ ದಂತಗಳ ಮಣಿಗಳ ಸಮೂಹವೂ ಬೆಳಗುತ್ತಿರುವುದನ್ನು ನೋಡಿದರೆ ಸೂರ್ಯಚಂದ್ರರಿಬ್ಬರು ಮಹಾದೇವನನ್ನು ಸೇವಿಸಲು ಬಂದಿರುವಂತೆ ಕಾಣುತ್ತಿದ್ದಿತು. ॥೯೪-೯೫॥

ಪ್ರಜ್ವಲಿಸುವ ಜ್ಯೋತಿರ್ಲತೆಗಳ ದೀಪಗಳಿಂದಲೂ, ಗುಹೆಗಳಿಗೆ ಹಾಕಿರುವ ರತ್ನ ಶಿಲೆಗಳ ಕಾಂತಿಗಳಿಂದಲೂ, ಮುನಿಪುಂಗವರ ತೇಜಸ್ಸುಗಳಿಂದಲೂ ರಾತ್ರಿಯಲ್ಲಿ ಅಲ್ಲಲ್ಲಿ ಬೆಳಕಾಗುತ್ತಿದ್ದಿತು. ರಾತ್ರಿಯ ಕೊನೆಯಲ್ಲಿ ಎಚ್ಚರಗೊಳ್ಳುವ ಪ್ರಾಣಿಗಳ ಮತ್ತು ವೇದಾದಿಮಂತ್ರಪಠನಮಾಡುವ ಋಷಿಗಳ ಪಾಠಗಳನ್ನು ಕೇಳಿ ಆ ನೀಲನು ಬೆಳಗಾಯಿತೆಂದು ತಿಳಿದು, ತನ್ನ ಪರಶಿವನಿಗೆ ಮತ್ತೆ ಆಹಾರಸಾಮಗ್ರಿಗಳನ್ನು ತರಬೇಕೆಂದು ಮನಸ್ಸುಮಾಡಿದನು. ॥೯೬-೯೭-೯೮॥

ತಾನು ವಾಸಮಾಡುವ ಜಾಗದಲ್ಲಿಯೇ ಗುಂಪುಗುಂಪಾಗಿ ಜಿಂಕೆಗಳನ್ನು ಬೇರೆ ಬೇರೆ ಕೊಲ್ಲುವೆನೆಂದು ಬೇಟೆಯ ರಹಸ್ಯವನ್ನರಿತ ಆ ನೀಲನು ಆ ಪರಶಿವನಿಗೆ

ಗಿರೀಶಮಾನಮ್ಯ ಗೃಹೀತಚಾಪೋ
ಪ್ರಭಾತಶೇಷೇ ತಮಸಿ ಪ್ರತಸ್ಥೇ ॥೯೯॥

ಇತಿ ಶ್ರೀಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಭಿಲ್ಲಕೈಂಕರ್ಯವರ್ಣನಂ ನಾಮ ಚತುಸ್ತ್ರಿಂಶೋಽಧ್ಯಾಯಃ

---

ನಮಸ್ಕರಿಸಿ ಬಿಲ್ಲು ಹಿಡಿದು ರಾತ್ರಿಯ ಕೊನೆ ಅಂದರೆ ಬೆಳಗಿನ ಜಾವದಲ್ಲಿಯೇ ಸ್ವಲ್ಪ ಕತ್ತಲಾಗಿದ್ದಂತೆಯೇ ಬೇಟೆಗೆ ಹೊರಟನು. ॥೯೯॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ಭಿಲ್ಲನಾದ ನೀಲನ ಶಿವಸೇವಾವರ್ಣನೆಯೆಂಬ ಮೂವತ್ತುನಾಲ್ಕನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಸದಾಶಿವಾಖ್ಯೇ

## ನವಮಾಂಶೇ

## ಪಂಚತ್ರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಉದಿತೇ ತಪನೇ ವಿಪ್ರಃ ಪೂರ್ವವದ್ದೇವಪೂಜಕಃ ।
ಪೂಜಾದ್ರವ್ಯಾಣಿ ಸಂಭೃತ್ಯ ಶಿವಮರ್ಚಿತುಮಾಗತಃ ॥೧॥

ತಪಃಶಮದಮೋಪೇತಃ ಭಸ್ಮರುದ್ರಾಕ್ಷಭೂಷಣಃ ।
ಶಿವಾಗಮವಿಧಾನಜ್ಞಃ ಸ್ವಾತ್ಮೇಶಮಚಲಸ್ಥಿತಂ ॥೨॥

ನಿರಂಜನಂ ನೀಲಕಂಠಮವಾಪ್ಯಾಗ್ರೇಸ್ಥಿತೋ ದ್ವಿಜಃ ।
ದದರ್ಶ ಮಾಂಸಾನ್ಯಸ್ಥೀನಿ ವಿಕೀರ್ಣಾನಿ ತತಸ್ತತಃ ॥೩॥

---

## ಮೂವತ್ತೈದನೆಯ ಅಧ್ಯಾಯ

ಸೂರ್ಯನು ಉದಯವಾಗಲು ಎಂದಿನಂತೆ ಆ ಕಾಲಹಸ್ತೀಶ್ವರನನ್ನು ಪೂಜೆ ಮಾಡಲು ಬ್ರಾಹ್ಮಣಪೂಜಕನು ಪೂಜಾಸಾಮಗ್ರಿಗಳನ್ನೆಲ್ಲಾ ಶೇಖರಿಸಿಕೊಂಡು ಶಿವನನ್ನು ಪೂಜಿಸಲು ಬಂದನು. ತಪಸ್ಸು, ಶಾಂತಿ, ಮತ್ತು ಇಂದ್ರಿಯನಿಗ್ರಹಗಳಿಂದ ಯುಕ್ತನಾಗಿ ಭಸ್ಮರುದ್ರಾಕ್ಷಗಳನ್ನು ಅಲಂಕರಿಸಿಕೊಂಡು ಶಿವಾಗಮವನ್ನರಿತ ಆ ಬ್ರಾಹ್ಮಣನು ಬೆಟ್ಟದಲ್ಲಿರುವ ನಿರ್ಲಿಪ್ತನೂ, ವಿಷಕಂಠನೂ ಆದ ಸ್ವಾತ್ಮೇಶ್ವರನನ್ನು ಸಮೀಪಿಸಿ ಮುಂದೆ ಬಂದು ಅಲ್ಲಲ್ಲಿ ಚೆಲ್ಲಾಡಿರುವ ಮಾಂಸ ಮೂಳೆ ಮುಂತಾದವುಗಳನ್ನು ನೋಡಿದನು. ॥೧-೨-೩॥

ದೂರಂ ತತೋಽಪಸೃತ್ಯಾಸೌ ಹಾ ಕೇನಾನುಚಿತಂ ಕೃತಂ ।
ನಿಷಾದೈರ್ನಿರ್ಭಯೈರೇತತ್ಕೃತಮಂಹೋ ಹಿ ನಾಪರೈಃ ॥೪॥

ಏವಂ ಸ ದುಃಖಿತೋ ಭೂತ್ವಾ ದೇವಮಾಹಾತಿಖಿನ್ನಧೀಃ ॥೫॥

॥ ಶಿವಾರ್ಚಕ ಉವಾಚ ॥

ಕ್ಷಾಂತಂ ತ್ವಯೈತದಿತ್ಯಾರ್ತೋ ನಿಪತ್ಯೋರ್ವ್ಯಾಂ ರುರೋದ ಸಃ ।
ಸಹಮಾನಃ ಶ್ರುತೌ ಪ್ರೋಕ್ತೋ ಮಹಾಕಾರುಣಿಕೋ ಹರಃ ॥೬॥

ಈದೃಶೇನ ಕ್ಷಮಾ ಕಾರ್ಯಾ ತ್ರ್ಯಕ್ಷಸ್ಸಾಕ್ಷಾಚ್ಛಿವದ್ರುಹಿ ।
ಇಮಂ ವಿಭುಂ ಪರ್ವತಾಗ್ರೇ ಸ್ಥಿತಂ ಜ್ಯೋತಿರ್ಮಯಾಕೃತಿಂ ॥೭॥

ಅಪೂಜಯನ್ವಿಲಂಬೇನ ಕಿಂ ತಿಷ್ಠಾಮೀತಿ ಚಿಂತಯನ್ ।
ಪಲಲಂ ಪತ್ರಮಸ್ಥೀನಿ ಪಾದುಕಾಪದ್ರುಮಾಸ್ಯಸೌ ॥೮॥

ಸಂಮಾರ್ಜನ್ಯಾ ಸಮುತ್ಸಾರ್ಯ ಸ್ನಾತ್ವಾ ನದ್ಯಾಂ ಸಮಾಗಮತ್ ।
ಸಂಪ್ರೋಕ್ಷಣವಿಧಿಂ ಕೃತ್ವಾ ದೋಷಶಾಂತ್ಯೈ ವಿಧಾನತಃ ॥೯॥

---

ಇದನ್ನು ನೋಡಿ ಅವನು ಅಲ್ಲಿಂದ ದೂರಹೋಗಿ, ಅಯ್ಯೋ! ಈ ನೀಚ ಕಾರ್ಯವನ್ನೆಸಗಿದವರಾರು? ಭಯವಿಲ್ಲದ ಬೇಡರಿಂದಲೇ ಈ ಅಪರಾಧವೇರ್ಪಟ್ಟಿರಬೇಕೇ ಹೊರತು ಬೇರೆಯವರಿಂದಲ್ಲವೆಂದು ತೋರುವುದೆಂದು ಆ ಬ್ರಾಹ್ಮಣನು ಖಿನ್ನನಾಗಿ ದುಃಖಪಟ್ಟು ಮಹಾದೇವನನ್ನು ಕುರಿತು ಹೀಗೆ ಪ್ರಾರ್ಥಿಸಿದನು. ||೪-೫||

ಸ್ವಾಮಿಯೇ! ಇಂತಹ ಅಪರಾಧವೂ ನಿನ್ನಿಂದ ಕ್ಷಮಿಸಲ್ಪಟ್ಟಿತೇ ಎಂದು ನೆಲದಮೇಲೆ ಬಿದ್ದು ಅವನು ಗೋಳಾಡಿದನು. ವೇದದಲ್ಲಿ ಸಹಮಾನನೆಂದು ಹೇಳಲ್ಪಟ್ಟಿರುವ ಶಿವನೆನಿಸಿದ ನೀನು ತುಂಬಾದಯಾಳುವು, ಆದರೂ ನೀನು ಶಿವದ್ರೋಹಿಗೆ ಏಕೆ ದಯೆತೋರಿಸಿದೆ, ಎಂದು ಚಿಂತಿಸಿ, ಕೊನೆಗೆ ಅಯ್ಯೋ! ಇದೇನು ಜ್ಯೋತಿಸ್ಸ್ವರೂಪಾಕೃತಿಯುಳ್ಳ ಈ ಶಿವನು ಬೆಟ್ಟದ ತುದಿಯಲ್ಲಿರುವುದನ್ನು ತಿಳಿದು ಪೂಜೆಮಾಡದೇ ಇದೇನು ಹೀಗೆ ತಡಮಾಡುತ್ತಾ ನಿಂತಿರುವೆನೆಂದು ಮತ್ತೆ ಯೋಚಿಸುತ್ತಾ ; ||೬-೭||

ಮಾಂಸ, ಎಲೆ, ಮೂಳೆಗಳು, ಜೋಡು ಮುಂತಾದವುಗಳನೆಲ್ಲಾ ಈ ಬ್ರಾಹ್ಮಣನು ತಳ್ಳಿ, ಚೆನ್ನಾಗಿ ಗುಡಿಸಿ, ಸಾರಿಸಿ, ತಾನು ನದಿಯಲ್ಲಿ ಸ್ನಾನಮಾಡಿ

ಪೂಜಯಿತ್ವೋಪಚಾರೈಸ್ತಂ ದೇವದೇವಂ ನನಾಮ ಸಃ ।
ಸ್ತುತ್ವಾ ವಿಜ್ಞಾಪ್ಯ ದೇವೇಶಂ ಪ್ರಯಾತೇ ಶಿವಪೂಜಕೇ ॥೧೦॥

ತತೋ ಘನೋ ವ್ಯಾಧನಾಥೋ ಯಜ್ಞಕ್ರೇ ತದ್ವದಾಮ್ಯಹಂ ।
ಧನುರ್ಧರೋ ಯತಸ್ತತ್ರ ಗತ್ವಾ ಶೈಲೈಕಪಾರ್ಶ್ವತಃ ॥೧೧॥

ಸ್ಥಿತ್ವಾ ನಿಬಿಡಕೂಟಾಶ್ಮಗುಹಾದ್ಯಂತರಸಂಧಿಷು ।
ಚರತೋ ಧಾವತೋ ಹತ್ವಾ ವರಾಹೈಣವೃಕಾನ್ಘನಃ ॥೧೨॥

ಪದಾನ್ಯನ್ವಿಷ್ಯ ಗವಯಖಡ್ಗಾನ್ ಖಡ್ಗೇನ ಸೋಽವಧೀತ್ ।
ವನಮಧ್ಯೇ ನಿಚಿಕ್ಷೇಪ ಕ್ವಾಪಿ ಮೇಧ್ಯಾನ್ಮೃಗಾನ್ಹತಾನ್ ॥೧೩॥

ವಿಚ್ಛಿದ್ಯ ವಹ್ನಿಮಥನದಾರುಂ ಕ್ಷುರಿಕಯಾ ಘನಃ ।
ಉತ್ಪಾರ್ಯ ಸರಘಾಪ್ರಾಂತಂ ಸ್ಥಿತ್ವಾ ಶಾಖಾಮಧೂಕರಂ ॥೧೪॥

---

ಆ ದೋಷಶಾಂತಿಗೋಸ್ಕರ ವಿಧಿಪೂರ್ವಕವಾಗಿ ಸಂಪ್ರೋಕ್ಷಣೆಮಾಡಿ, ದೇವ ದೇವನನ್ನು ಉಪಚಾರಗಳಿಂದ ಪೂಜಿಸಿ ಅನಂತರ ಆವನು ಪರಮೇಶ್ವರನಿಗೆ ಸ್ತುತಿಪೂರ್ವಕವಾಗಿ ನಮಸ್ಕಾರಮಾಡಿದನು. ॥೮-೯॥

ಹೀಗೆ ಶಿವಪೂಜಕನು ಸ್ತೋತ್ರಮಾಡಿ ಆದೇವೇಶ್ವರನಿಗೆ ವಿಜ್ಞಾಪಿಸಿಕೊಂಡು ಹೊರಟುಹೋದಮೇಲೆ ಬೇಡರೊಡೆಯನಾದ ಆ ನೀಲನು ಮುಂದೆ ಏನು ಮಾಡಿದನೆಂಬುದನ್ನು ನಿನಗೆ ಹೇಳುತ್ತೇನೆ ಕೇಳೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗಿಂತೆಂದನು. ಬಿಲ್ಲುಹಿಡಿದು ಬೆಟ್ಟದ ಒಂದುಪಕ್ಕದಿಂದ ಹೊರಟು, ದಟ್ಟವಾದ ಕಲ್ಲುಬಂಡೆಗಳು, ಬೆಟ್ಟಗಳ ಗುಹೆಗಳು, ಸಂದಿಗಳು ಇಲ್ಲೆಲ್ಲಾ ನಿಂತು, ಸಂಚರಿಸುತ್ತಾ, ಓಡುತ್ತಾ ಇರುವ ಹಂದಿ, ಜಿಂಕೆ, ತೋಳಗಳನ್ನು ಈ ನೀಲನು ಕೊಂದು ಹೆಜ್ಜೆಗಳಗುರುತನ್ನು ಹಿಡಿದು, ಹೋಗಿ ಕಾಡುಹಸು (ಗವಯ) ಖಡ್ಗಮೃಗ ಇವುಗಳನ್ನು ಕತ್ತಿಯಿಂದ ಕೊಂದನು. ।೧೦-೧೧-೧೨॥

ಆಮೇಲೆ ತಾನುಕೊಂದ ಪರಿಶುದ್ಧವಾದ ಜಿಂಕೆಗಳನ್ನೆಲ್ಲಾ ಕಾಡಿನ ಮಧ್ಯದಲ್ಲಿ ಒಂದುಕಡೆ ಇರಿಸಿ, ತನ್ನ ಕತ್ತಿಯಿಂದ (ಚೂರಿಯಿಂದ) ಬೆಂಕಿಯನ್ನು ಕಡೆಯುವ ಮರದತುಂಡನ್ನು ಕತ್ತರಿಸಿ, ಆ ನೀಲನು ಜೇನುಗಳಿರುವ ಜಾಗಕ್ಕೆ ಹೋಗಿ, ಅಲ್ಲಿ

ಕದಲೀಪತ್ರಪುಟಿಕಂ ಕೃತ್ವಾ ನಿಷ್ಪೀಡ್ಯ ತನ್ಮಧು ।
ಶುಷ್ಕಕಾಷ್ಠಚಯೇ ವಹ್ನಿಂ ಪ್ರಜ್ವಾಲ್ಯ ಸ ಘನಸ್ತೃಣೈಃ ॥೧೫॥

ನಿರ್ಮಥ್ಯಂ ಚ ವಿಶಸ್ಯೈವ ವರಾಹೇಣಾನ್ ವೃಕಾನ್ಘನಃ ।
ಉತ್ಕೃತ್ಯ ಮಾಂಸಂ ಸ್ಥಾನೇಭ್ಯೋ ಮೃದುಪಕ್ವಂ ಪ್ರತಾಪ್ಯ ತತ್ ॥೧೬॥

ವಿದಾರ್ಯ ತಾಂ ಕ್ಷುರಾಗ್ರೇಣ ಮಾಂಸಂ ಪತ್ರಪುಟೇ ನ್ಯಧಾತ್ ।
ದಾರುಣೀಂ ನ್ಯಾಯುತಪ್ರೋತಂ ಕೃತ್ವಾ ಭಲ್ಲಾಗ್ರತೋ ಘನಃ ॥೧೭॥

ನೈವೇದ್ಯಾರ್ಥಂ ಮಹೇಶಸ್ಯ ತದ್ರಸಸ್ಯ ಪರೀಕ್ಷಣಂ ।
ಹವ್ಯಮಗ್ನಿಮುಖೇ ನ್ಯಸ್ತಂ ತ್ರಿದಶಾನಾಂ ಯಥಾತಥಾ ॥೧೮॥

ಕಾಲಹಸ್ತಿಪತೇರದ್ಯ ಮಾಂಸಂ ಸ್ಯಾತ್ತನ್ಮುಖಾರ್ಪಿತಂ ।
ಯತ್ಸ್ವಾದುಮಾಂಸಂ ತತ್ಪತ್ರಪುಟೇ ನ್ಯಸ್ಯ ಮಧುಪ್ಲುತಂ ॥೧೯॥

---

ಆ ಜೇನುಗೂಡನ್ನೆ ಕಿತ್ತು ಆ ಜೇನುಹುಳುಗಳನ್ನೆಲ್ಲಾ ಓಡಿಸಿ, ಬಾಳೆಲೆಯ ದೊನ್ನೆಯನ್ನು ಮಾಡಿ ಅದರಲ್ಲಿ ಆ ಜೇನುತುಪ್ಪವನ್ನು ಹಿಂಡಿ ತಂದನು. ||೧೩-೧೪||

ಒಣಗಿದ ಕಟ್ಟಿಗೆಗಳನ್ನು ಸೇರಿಸಿ ಅದರಲ್ಲಿ ಹುಲ್ಲುಕಡ್ಡಿಗಳಿಂದ ಆ ನೀಲನು ಬೆಂಕಿಯನ್ನು ಕಡೆದು ಹೊತ್ತಿಸಿ, ಹಂದಿ, ಜಿಂಕೆ, ತೋಳಗಳನ್ನು ತುಂಡುಮಾಡಿ ಕತ್ತರಿಸಿ, ಅವುಗಳ ಮಾಂಸಗಳನ್ನು ಉಚಿತಸ್ಥಾನಗಳಿಂದ ತೆಗೆದುಕೊಂಡು ಅವನ್ನು ಮೃದುವಾಗಿ ಚೆನ್ನಾಗಿ ಬೇಯಿಸಿದನು. ||೧೫-೧೬||

ಅದನ್ನು ಚೂರಿಯತುದಿಯಿಂದ ಒಡೆದು ಎಲೆಗಳ ದೊನ್ನೆಯಲ್ಲಿ ಪ್ರತ್ಯೇಕವಾಗಿ ಇರಿಸಿಕೊಂಡನು. ಆಮೇಲೆ ಒಂದು ಭರ್ಜಿಯತುದಿಯಿಂದ ಅಡ್ಡಡ್ಡಲಾಗಿ ಆ ಮಾಂಸದ ತುಂಡುಗಳನ್ನೆಲ್ಲಾ ಪೋಣಿಸಿಕೊಂಡು ಮಹೇಶ್ವರನಿಗೆ ನಿವೇದನ ಮಾಡುವುದಕ್ಕೋಸ್ಕರ, ಅದನ್ನು ದೇವತೆಗಳಿಗೆ ಕೊಡುವ ಹವಿಸ್ಸಿನಂತೆ ಅಗ್ನಿಮುಖದಲ್ಲಿ ಹಾಕಿ ಅಗ್ನಿಯು ರುಚಿನೋಡುವಂತೆ ತಾನೂ ರುಚಿನೋಡಿ ಪರೀಕ್ಷಿಸಿ ತನ್ನ ಬಾಯಿಗೆ ರುಚಿಯಾದ ಮೃದುಮಾಂಸವು ಮಾತ್ರ ಆ ಕಾಲಹಸ್ತೀಶ್ವರನಿಗೆ ಯೋಗ್ಯವೆಂದು ರುಚಿನೋಡಿ ಚೆನ್ನಾಗಿರುವ ಮಾಂಸದ ತುಂಡುಗಳನ್ನೆಲ್ಲಾ ಜೇನಿನಲ್ಲಿ ನೆನೆಸಿ ಆ ಎಲೆಗಳ ದೊನ್ನೆಯಲ್ಲಿ ಇರಿಸಿಕೊಂಡನು. ||೧೭-೧೮-೧೯||

ಮುಖೇನಾಪೂರ್ಯ ನದ್ಯಂಭೋ ಸ್ನಾತ್ವಾ ಭಿಲ್ಲೋ ಘನಸ್ತಥಾ ।
ದಾವಭಸ್ಮಸಮುದ್ವಾಹ್ಯ ಪುಷ್ಪಾಣ್ಯಾಹೃತ್ಯ ಗಂಧಿಲಾತ್ ॥೨೦॥

ಧನುಃ ಶರಕರೋ ಭಿಲ್ಲೋ ನಿಷಂಗಾಲಂಬಿಪೃಷ್ಠಭೂಃ ।
ಪಲ್ಲವೋಚ್ಛ್ರಿತತನ್ಮೌಲಿರುಪಾನದ್ಗೂಢಪಾದುಕಃ ॥೨೧॥

ಪೂರ್ವವದ್ಧೃತತೋಯಾದಿರಾರುರುಕ್ಷುರ್ಗಿರಿಂ ಘನಃ ।
ವ್ಯಾಧನಾಥೋ ಜಗನ್ನಾಥಮುತ್ಸ್ಯಾ ವಿಪ್ರೇಣ ಯತ್ಕೃತಂ ॥೨೨॥

ಪುಷ್ಪಾದಿಸರ್ವಮುತ್ಸಾರ್ಯ ಸ್ವಾತ್ಮೇಶಂ ಸಮಪೂಜಯತ್ ।
ತನ್ಮಾಂಸಂ ನ್ಯಸ್ಯ ದೇವಾಗ್ರೇ ಪ್ರಾಹ ಹರ್ಷತರೋ ಘನಃ ॥೨೩॥

ಮುಖಾಂಬುಭಿರ್ಲಿಂಗಮೌಳಿಮಾಪ್ಲುತ್ಯಾಕ್ಷಿಪ್ಯ ತತ್ಸುಮಂ ।
ಪೂರ್ವಮಾಂಸಾದಿದಂ ಸ್ವಾದು ಮಯಾಂಗ ಸುಪರೀಕ್ಷಿತಂ ॥೨೪॥

ಕ್ರೋಡೈಣನ್ಯಂಕುಗವಯಖಡ್ಗಕಾಯಸಮುದ್ಭವಂ ।
ಮಿಶ್ರಿತಂ ಮಧುಸಾರೇಣ ನವಾಭಿಷ್ಯಂದಚಾರುಣಾ ॥೨೫॥

---

ಆ ನೀಲನು ನದಿಯಲ್ಲಿ ಸ್ನಾನಮಾಡಿ, ಕಾಡುಕಿಚ್ಚಿನ ಬೂದಿಯನ್ನು ಅಂಗಾಂಗಗಳಿಗೆಲ್ಲಾ ಲೇಪಿಸಿಕೊಂಡು ಭಸ್ಮತ್ರಿಪುಂಡ್ರವನ್ನು ಧರಿಸಿ, ಬಾಯಲ್ಲಿ ನದಿಯ ನೀರನ್ನು ತುಂಬಿಕೊಂಡು, ಸುವಾಸನೆಯಾದ ಹೂಗಳನ್ನು ಲತೆಗಳಿಂದ ಬಿಡಿಸಿಕೊಂಡು, ಬಿಲ್ಲುಬಾಣಗಳನ್ನು ಕೈಯಲ್ಲಿ ಹಿಡಿದು, ಹಿಂದೆ ಬೆನ್ನಿನಲ್ಲಿ ಜೋಲು ಬಿದ್ದಿರುವ ಬಾಣವುಳ್ಳವನಾಗಿ ತನ್ನ ತಲೆಯ ಮೇಲೆ ಚಿಗುರುಗಳನ್ನು ಹೊತ್ತುಕೊಂಡು, ಜೋಡನ್ನು ಕಾಲಲ್ಲಿ ಮೆಟ್ಟುತ್ತಾ ಹಿಂದಿನಂತೆ ನೀರು ಹೂ, ಮುಂತಾದವುಗಳನ್ನು ತೆಗೆದುಕೊಂಡು ಬೆಟ್ಟವನ್ನು ಹತ್ತಿ, ಅಲ್ಲಿ ಜಗದೊಡೆಯನೆಂಬ ಭಾವನೆಯಿಂದ ಆ ಶಿವಪೂಜಕನಾದ ಬ್ರಾಹ್ಮಣನು ಮಾಡಿದ್ದ ಪುಷ್ಪಪೂಜಾದಿಗಳನ್ನು ತಳ್ಳಿ ತಾನು ಹಿಂದಿನಂತೆ ಆ ಪರಮೇಶ್ವರನನ್ನು ಪೂಜಿಸಿದನು. ॥೨೦-೨೧-೨೨॥

ಹಾಗೆ ನೀಲನು ದೇವರ ಮುಂದೆ ಆ ಮಾಂಸವನ್ನಿರಿಸಿ ತುಂಬಾ ಸಂತೋಷದಿಂದ ತನ್ನ ಬಾಯಲ್ಲಿರುವ ನೀರಿನಿಂದ ಲಿಂಗದ ಮೇಲೆ ಅಭಿಷೇಕಮಾಡಿ ಹೂಗಳನ್ನು ಮೇಲಿರಿಸಿ, ಸ್ವಾಮಿ, ಹಿಂದಿನ ಮಾಂಸಕ್ಕಿಂತಲೂ ಈ ಮಾಂಸವು ತುಂಬಾ ರುಚಿಯಾಗಿದೆ. ನಾನು ಇದನ್ನು ಚೆನ್ನಾಗಿ ನನ್ನ ಮುಖದಿಂದಲೇ

ಮಧುರಂ ಮಧುರಂ ಭುಂಕ್ಷ್ವ ಮಮ ನಾಥ ಉಮಾಪತೇ ।
ಏವಂ ನಿವೇದ್ಯ ನೈವೇದ್ಯಂ ತಸ್ಥೌ ಸ್ಥಾಣೋರಥಾಗ್ರತಃ ॥೨೬॥

ಏವಂ ದಿವಾ ಸಮ್ಮೃಗಯುಃ ರಾತ್ರೌ ವೈ ಜಾಗ್ರದನ್ವಹಂ ।
ಹಿಂಸ್ರೇಭ್ಯೋ ರಕ್ಷಿತುಂ ದೇವಂ ಪ್ರಾತರ್ಯಾತಿ ಗಿರೇರ್ವನಂ ॥೨೭॥

ಘನಃ ಶ್ರೀಕಾಲಹಸ್ತ್ಯಂದ್ರಾವೇವಂ ದೇವಮಸೇವತ ।
ಶಿವದ್ವಿಜೋಽಪ್ಯನುದಿನಂ ವಿಮನಾಭಿಲ್ಲಪೂಜಯಾ ॥೨೮॥

ಯಥಾಶಾಸ್ತ್ರಂ ಸಮರ್ಚ್ಯೇಶಂ ನಿನಾಯ ದಿವಸಾನ್ಬಹೂನ್ ।
ಚಾಪಕೋಶೇರಿತೋ ನಾಗೋ ಭಾರ್ಯಯಾ ತತ್ರ ಚಾಗತಃ ॥೨೯॥

ದೃಷ್ಟ್ವಾ ಘನಂ ಘನಾಭಂ ತಂ ಹಸ್ತ್ಯದ್ರೌ ಹಸ್ತಿವತ್ಸ್ಥಿತಂ ।
ಉವಾಚ ಪ್ರಣತಂ ಪುತ್ರಂ ನಾಗಃ ಸಾಸ್ರವಿಲೋಚನಃ ॥೩೦॥

---

ಪರೀಕ್ಷಿಸಿ ತಂದಿದ್ದೇನೆ. ಹಂದಿ, ಸಾರಗ, ಜಿಂಕೆ, ಕಾಡುಹಸು (ಗವಯ) ಮತ್ತು ಖಡ್ಗಮೃಗಗಳ ದೇಹದ ಮಾಂಸವನ್ನು ಹೊಸದಾಗಿ ರಸವನ್ನು ಸುರಿಸುವ ಜೇನಿನಿಂದ ಬೆರೆಸಿ ತಂದಿದ್ದೇನೆ. ಉಮಾರಮಣನಾದ ನನ್ನ ಸ್ವಾಮಿಯೇ, ಈ ಮಧುರವಾದ ಮಾಂಸವನ್ನು ಮೆಲ್ಲಮೆಲ್ಲನೆ ಸ್ವೀಕರಿಸಿ ಊಟಮಾಡು, ಎಂದು ಭಿಲ್ಲನು ಶಿವನಲ್ಲಿ ಬೇಡಿಕೊಂಡನು. ||೨೩-೨೪-೨೫-೨೬||

ಹೀಗೆ ಬೇಡನಾದ ನೀಲನು ಹಗಲೆಲ್ಲಾ ಮಹೇಶನ ಪೂಜಾದಿಗಳನ್ನು ಮಾಡಿಕೊಂಡು ರಾತ್ರಿಯವೇಳೆ ಪ್ರತಿದಿನವೂ ದುಷ್ಟಪ್ರಾಣಿಗಳಿಂದ ಒದಗುವ ಹಿಂಸೆಯನ್ನು ತಪ್ಪಿಸಲು ಎಚ್ಚರದಿಂದ ಕಾದುಕೊಂಡಿದ್ದು, ಪುನಃ ಬೆಳಗಾಗುತ್ತಲೇ ಆ ಬೆಟ್ಟಗುಡ್ಡಗಳ ಪಕ್ಕದಲ್ಲಿರುವ ಕಾಡಿಗೆ ಮಾಂಸವನ್ನು ತರಲು ಹೋಗುತ್ತಿದ್ದನು. ಈ ರೀತಿಯಲ್ಲಿ ಆ ಘನನು ಕಾಲಹಸ್ತಿಪರ್ವತದಲ್ಲಿ ಮಹಾದೇವನನ್ನು ಸೇವಿಸಿದನು. ಇತ್ತ ಶಿವದ್ವಿಜನೂ ಸಹ ಪ್ರತಿದಿನವೂ ಈ ಭಿಲ್ಲನ ಪೂಜೆಯಿಂದ ಖಿನ್ನಮನಸ್ಕನಾಗಿ ಶಾಸ್ತ್ರಾನುಗುಣವಾಗಿ ಈಶ್ವರನನ್ನು ಪೂಜಿಸಿ, ಅನೇಕ ದಿವಸಗಳನ್ನು ಕಳೆದನು. ||೨೭-೨೮||

ಇತ್ತ ಚಾಪ ಮತ್ತು ಕೋಶ ಇವರಿಬ್ಬರಿಂದ ಹೇಳಲ್ಪಟ್ಟ ಆ ಬೇಡರ ದೊರೆಯಾದ ನಾಗನು ತನ್ನ ಹೆಂಡತಿಯೊಡನೆ ಅಲ್ಲಿಗೆ ಬಂದು ಮೇಘಸಮಾನವಾದ ಕಾಂತಿ

॥ ನಾಗ ಉವಾಚ ॥

ಪುತ್ರ ಮಾ ಸಾಹಸಂ ಕಾರ್ಷೀರ್ಗಿರಾವಸ್ಮಿನ್ಮೃಗಾನ್ಪ್ರತಿ ।
ಕೋಽಯಂ ದೇವಃ ಕೋಽತ್ರ ವಾಸಸ್ತವಾನುಚಿತ ಏವ ಹಿ ॥೩೧॥

ಸಮಾಯಾಹಿ ಪುರಂ ಮೇದ್ಯ ಭಿಲ್ಲಭಿಲ್ಲೇನ ಪಾಲಿತಂ ।
ತ್ವಯಾ ಹೀನೋಽಸ್ಮಿ ವಾರ್ಧಕ್ಯೇ ಧೈರ್ಯಂ ಧರ್ತುಂ ನ ಹಿಕ್ಷಮೇ ॥೩೨॥

ಇತ್ಥಂ ಪಿತುರ್ವಚಃ ಶ್ರುತ್ವಾ ಘನಘೋಷೋ ಘನೋಽಬ್ರವೀತ್ ॥೩೩॥

॥ ಘನ ಉವಾಚ ॥

ದೇವೋ ದೃಷ್ಟೋ ಗಿರಾವಸ್ಮಿನ್ನಸಹಾಯೇನ ಸಂಸ್ಥಿತಃ ।
ಅಸಹಾಯಃ ಕ್ಷುಧಾರ್ತೋಽಯಂ ತತ್ಸಹಾಯೋ ಹ್ಯಹಂ ಧೃತಃ ॥೩೪॥

ಮೃಗೇಭ್ಯೋಽಸ್ಯಥ ಹಿಂಸ್ರೇಭ್ಯೋ ತಂ ರಕ್ಷಾಮಿ ವನೇ ಸ್ಥಿತಃ ।
ಪುರೇಣ ಮೇ ನ ತೇ ಕಾರ್ಯಂ ಮಾತಾ ಬಂಧುರಯಂ ಪಿತಾ ॥೩೫॥

---

ಯುಳ್ಳ ನೀಲನನ್ನು ಕಂಡು ಈ ಕಾಲಹಸ್ತ್ಯದ್ರಿಯಲ್ಲಿ ಆನೆಯಂತೆಯೇ ಗಂಭೀರಾಕೃತಿಯಿಂದಿರುವ ಮಗನಿಗೆ ಅವನು ನಮಸ್ಕರಿಸಿ ನಿಂತಿರುವುದನ್ನು ನೋಡಿ ಕಣ್ಣಿನಲ್ಲಿ ನೀರುತುಂಬಿದವನಾಗಿ, ॥೨೯-೩೦॥

ಮಗನೇ, ಈ ಬೆಟ್ಟದಲ್ಲಿರುವ ಪ್ರಾಣಿಗಳಿಗಾಗಿ ಸುಮ್ಮನೆ ಸಾಹಸಪಡಬೇಡ; ಇವನಾವ ದೇವರು? ನೀನು ಇಲ್ಲಿ ವಾಸಮಾಡುವುದು ನಿನಗೆ ಯೋಗ್ಯವೇ ಅಲ್ಲ. ಎಲೈ ಶಬರಕುಮಾರನೇ, ವ್ಯಾಧರಿಂದ ಕಾಪಾಡಲ್ಪಟ್ಟಿರುವ ನಮ್ಮ ಪಟ್ಟಣಕ್ಕೆ ಈಗಲೇ ಹೊರಡು. ನಿನ್ನನ್ನು ಬಿಟ್ಟು ಈ ಮುಪ್ಪಿನಲ್ಲಿ ಧೈರ್ಯದಿಂದಿರಲು ನನಗೆ ಶಕ್ತಿಸಾಲದು, ಎಂದು ತಂದೆಯು ನುಡಿದ ಮಾತುಗಳನ್ನು ಕೇಳಿ ಮೋಡದಂತೆ ಧ್ವನಿಯುಳ್ಳ ಆ ನೀಲನು ತಂದೆಗಿಂತೆಂದನು. ॥೩೧-೩೨-೩೩॥

ತಂದೆಯೇ, ಈ ಬೆಟ್ಟದಲ್ಲಿ ಮಹಾದೇವನನ್ನು ಕಂಡೆನು. ಇವನು ಯಾರ ಸಹಾಯವೂ ಇಲ್ಲದೇ ಒಬ್ಬಂಟಿಗನಾಗಿದ್ದನು. ಹೀಗೆ ಬೇರೆಯವರ ಸಹಾಯವಿಲ್ಲದೆ ಹಸಿವಿನಿಂದ ಬಳಲಿದ ಈ ದೇವನಿಗೆ ಸಹಾಯಕನಾಗಿ ನಾನು ನಿಂತೆನು. ಇಲ್ಲಿಯೇ ರಾತ್ರಿಯ ವೇಳೆಯಲ್ಲಿ ಕಾದಿದ್ದ ಕ್ರೂರಪ್ರಾಣಿಗಳಿಂದ ಸ್ವಾಮಿಗೆ ತೊಂದರೆಯುಂಟಾಗದಂತೆ ನಾನು ಈ ಕಾಡಿನಲ್ಲಿ ರಕ್ಷಣೆಮಾಡುತ್ತಿರುವೆನು ನನಗೆ ಪಟ್ಟಣದಿಂದಾಗಬೇ

ಕದಾಚಿದ್ಗಮಿತೇ ಗೇಹಂ ವ್ರಜ ಮಾ ಶುಚ ಭೋ ಪಿತಃ ।
ಇತಿ ತೇನಾಶು ಪುತ್ರೇಣ ಸಾಂತ್ವಿತೋ ಗೃಹಮಾಗತಃ ॥೩೬॥

ಉವಾಸ ಸ ಘನಸ್ತತ್ರ ದೇವದೇವದಯಾರಸೈಃ ।
ಮುಕ್ತಜನ್ಮಾಮಲಾಂಗೋಽಭೂತ್ತತ್ಕೃತ್ಯಂ ಕೇನ ವರ್ಣ್ಯತೇ ॥೩೭॥

ದೇವಂ ಘನೇಽರ್ಚಯತ್ಯೇವಂ ದ್ವಿಜೋಽಪ್ಯರ್ಚಯದನ್ವಹಂ ।
ಸ ಚೇಕ್ಷ್ಣೇ ಪಾಪಕರ್ತಾರಂ ವಾರಯೇಶೇತಿ ಚಾಬ್ರವೀತ್ ॥೩೮॥

॥ ಶ್ರೀ ಶಿವ ಉವಾಚ ॥

ದೇವಃ ಸರಿಜ್ಜಟಾಜೂಟಃ ಸ್ವಪ್ನೇ ಪ್ರಾಹ ತಮರ್ಚಕಂ ॥೩೯॥

ವ್ಯಾಧತೋ ವೈ ಹಿತಂ ಸಾಧು ಕರ್ಮವಕ್ಷ್ಯಾಮಿ ತತ್ಕೃತಂ ।
ಸ ಭಕ್ತಿಸಾರಹೃದಯೋ ಶರಾಸಕ್ತಕರೋಽಪ್ಯಸೌ ॥೪೦॥

---

ಕಾದುದೇನು ? ತಾಯಿ, ತಂದೆ, ಬಂಧು ಬಳಗಗಳೆಲ್ಲವೂ ನನಗೆ ಈ ದೇವನೇ ಆಗಿರುವನು. ನೀವು ಊರಿಗೆ ಹೋಗಿರಿ. ತಂದೆಯೇ, ಆಗಾಗ ನಾನು ಬಂದು ನಿಮ್ಮನ್ನು ಕಾಣುವೆನು. ಶೋಕಪಡಬೇಡಿರೆಂದು ತಂದೆಗೆ ಆ ನೀಲನು ನುಡಿದನು. ಹೀಗೆ ಮಗನಿಂದ ಸಮಾಧಾನಮಾಡಲ್ಪಟ್ಟ ತಂದೆಯಾದ ನಾಗನು ವಿಧಿಯಿಲ್ಲದೆ ತನ್ನ ಊರಿಗೆ ಹಿಂದಿರುಗಿದನು. ॥೩೪-೩೫-೩೬॥

ತಂದೆಯು ಬಂದು ಹೊರಟುಹೋದಮೇಲೆ ಆ ನೀಲನು ಮಹಾದೇವನ ದಯಾರಸಗಳಿಂದ ಜನ್ಮರಹಿತನಾಗಿ ಪರಿಶುದ್ಧ ದೇಹನಾದನು. ಅಯ್ಯ ಜೈಗೀಷವ್ಯನೇ, ಅವನ ಕೆಲಸವನ್ನೇನು ತಾನೆ ವರ್ಣಿಸಲು ಸಾಧ್ಯ ! ಹೀಗೆ ಆ ಘನನು ಮಹಾದೇವನನ್ನು ಪೂಜಿಸುತ್ತಿರಲು ಆ ಬ್ರಾಹ್ಮಣನೂ ಪ್ರತಿನಿತ್ಯವೂ ಬಂದು ಬೆಳಗ್ಗೆ ಪೂಜೆಮಾಡಿಕೊಂಡು ಹೋಗುತ್ತಿದ್ದನು. ಅವನು ಸ್ವಾಮಿ, ನಾನು ಪ್ರತಿನಿತ್ಯವೂ ಪೂಜೆಗೆ ಬರುತ್ತೇನೆ. ನಿನಗೆ ಪಾಪವನ್ನೆಸಗುವ ಈ ಪಾಪಿಯು ಮಾತ್ರ ನನಗೆ ಕಾಣುವುದಿಲ್ಲ, ಮಹೇಶ್ವರ, ಈ ಪಾಪಿಯನ್ನು ಇನ್ನು ಮುಂದೆ ಹೀಗೆ ಮಾಡದಂತೆ ತಡೆಯುವನಾಗೆಂದು ಮಹಾದೇವನಲ್ಲಿ ಮೊರೆಯಿಟ್ಟನು. ॥೩೭-೩೮॥

ಆ ಶಿವದ್ವಿಜನ ಮೊರೆಯನ್ನು ಕೇಳಿ ಮಹಾದೇವನು ಗಂಗಾಯುಕ್ತ ಜಟಾಧಾರಿಯಾಗಿ ಅವನ ಕನಸಿನಲ್ಲಿ ಕಾಣಿಸಿಕೊಂಡು, ಅಯ್ಯ ಬ್ರಾಹ್ಮಣೋತ್ತಮನೇ,

ಮತ್ಕರ್ಮ ಮತ್ಪ್ರಿಯಂ ತಸ್ಯ ಸ್ಥಿತಿರೇವಂ ವಿಭಾವ್ಯತಾಂ ।
ಪ್ರಾಪ್ತಸ್ಯಾದ್ರಿಮಿತಂ ಸ್ಥಾನಂ ಮದ್ಭಕ್ತಿಪ್ರೇಮವಾರಿಧೇಃ ॥೪೧॥

ಮನ್ಮೂರ್ಧ್ನಿ ಪೂರ್ವವಿಧೃತಪುಷ್ಪೋತ್ಸಾರಣಕಾರಿಣಃ ।
ವನೇಚರಸ್ಯ ಭಕ್ತಾನಾಂ ಪ್ರಥಮಸ್ಯ ಮಹಾತ್ಮನಃ ॥೪೨॥

ಸೋಪಾನತ್ಪ್ರಪದಂ ನ್ಯಸ್ತಮಿಂದುವತ್ತಂ ದಧಾಮ್ಯಹಂ ।
ಅಂತರ್ಹೃದಪ್ರೇಮರಸಭರಿತಂ ತನ್ಮುಖಾಂಬುಜಂ ॥೪೩॥

ಜಹ್ನೋಃ ಕರ್ಣಪಥೋದೀರ್ಣಗಂಗಾಂಭಃ ಪಾವನಂ ಮಮ ।
ಸ್ವಯಂ ಪ್ರತಿದಿನಪ್ರೇಮಪುಷ್ಪಜಾಲಂ ತದುತ್ಕೃತಂ ॥೪೪॥

ತನ್ಮೂರ್ಧ್ನಾ ಕುಸುಮಂ ಹೃದ್ಯಂ ಬ್ರಹ್ಮಾದ್ಯದೃಷ್ಟೇನ ಮೌಳಿನಾ ।
ಗೃಹ್ಣಾಮಿ ತತ್ಪ್ರೀತಿಯುಕ್ತೋ ವಸಾಮ್ಯಾಸ್ವಾದ್ಯ ತತ್ಕೃತಂ ॥೪೫॥

---

ಆ ವ್ಯಾಧನಿಂದ ಮಾಡಲ್ಪಡುವ ಹಿತವೂ ಸಾಧುವೂ ಆದ ಆತನ ಕೆಲಸಗಳನ್ನು ಹೇಳುತ್ತೇನೆ ಕೇಳು; ಅವನು ಭಕ್ತಿಸಾರಭರಿತವಾದ ಮನಸ್ಸುಳ್ಳವನಾಗಿ ಸದಾ ಬಿಲ್ಲನ್ನು ಹಿಡಿದು ನಿಂತಿರುವನು. ನನ್ನ ರಕ್ಷಣೆ ನನಗೆ ಹಿತವನ್ನುಂಟುಮಾಡುವುದೇ ಅವನ ಸ್ಥಿತಿಯಾಗಿರುವುದು. ನನ್ನ ಭಕ್ತಿ ಮತ್ತು ಪ್ರೇಮಗಳೆಂಬ ಸಮುದ್ರದ ದೆಸೆಯಿಂದ ಈ ಬೆಟ್ಟದ ಪ್ರಮಾಣದಷ್ಟು ಅವಕಾಶವನ್ನು ಪಡೆದಿರುವ ಈತನ ಮಹಿಮೆಯನ್ನು ಹೇಳುತ್ತೇನೆ ಲಾಲಿಸು; ನನ್ನ ತಲೆಯ ಮೇಲೆ ನಿನ್ನಿಂದ ಮೊದಲು ಪೂಜೆಮಾಡಲ್ಪಟ್ಟ ಹೂಗಳನ್ನು ತಳ್ಳಿಬಿಡುವ ಆ ಬೇಡನೇ ನನ್ನ ಭಕ್ತರಲ್ಲಿ ಮೊದಲನೆಯವನು ಮತ್ತು ಮಹಾತ್ಮನು. ॥೩೯-೪೦-೪೧-೪೨॥

ಜೋಡುಗಳನ್ನು ಹಾಕಿಕೊಂಡು ಅವನಿಟ್ಟ ಕಾಲುಗಳನ್ನು ನಾನು ಚಂದ್ರನಂತೆ ತಲೆಯಲ್ಲಿ ಧರಿಸುವೆನು. ಹೃದಯಾಂತರಾಳದಲ್ಲಿ ಅಡಗಿರುವ ಪ್ರೇಮರಸದಿಂದ ಭರಿತವಾದ ಅವನ ಮುಖಕಮಲದಿಂದ ಬೀಳುವ ನೀರನ್ನು ಆ ಜಹ್ನುಮಹರ್ಷಿಯ ಕಿವಿಯ ಮಾರ್ಗದಿಂದ ಹರಿದು ಬಂದ ಗಂಗಾನದಿಯ ನೀರಿಗಿಂತಲೂ ಪಾವನವೆಂದು ನಾನು ತಿಳಿಯುವೆನು. ತಾನಾಗಿಯೇ ಪ್ರತಿದಿನವೂ ಕೊಯ್ದು ಪ್ರೇಮದಿಂದ ತನ್ನ ತಲೆಯಮೇಲೆ ಹೊತ್ತು ತರುವ ಪ್ರೇಮಪೂರ್ವಕವಾದ ಮನೋಹರವಾದ ಹೂರಾಶಿಯನ್ನು ಬ್ರಹ್ಮಾದಿದೇವತೆಗಳಿಂದಲೂ ಗೋಚರವಾಗದಿರುವ ತಲೆಯಿಂದ ನಾನು

ಗಾಢಾಂಗಾರಪ್ರತಪ್ತಂ ತನ್ಮಧುನಿಷ್ಯಂದಿತಂ ದ್ವಿಜ ।
ಮುಖಾಬ್ಜನಿಃಸೃತರಸಸರಸನಾಲೇಢಿತಂ ಮಮ ॥೪೬॥

ಪಲಲಂ ತೇನ ಯದ್ದತ್ತಂ ಸಫಲೇನ ವಿಶೇಷತಃ ।
ಭವೇನ್ನ ಸದೃಶಂ ತಸ್ಯ ಹವ್ಯಂ ಶಿಖಿಮುಖೇ ಹುತಂ ॥೪೭॥

ಸ್ವಭಾವಭುಕ್ತಾ ತಸ್ಯೋಕ್ತಿಃ ಸ್ಮಿತಫುಲ್ಲಾನನಸ್ಯ ಸಾ ।
ರೋಚತೇ ಮೇ ಮುನಿಮುಖೇ ವೇದವಾಚಾಂ ದ್ವಿಜಾಧಿಕ ॥೪೮॥

ದ್ರಷ್ಟಾಸಿ ತ್ವಂ ತಸ್ಯ ಭಕ್ತಿಂ ಮೋಹಂ ಸಂತ್ಯಜ ಮಾ ಶುಚ ।
ದೇವೋಕ್ತ್ಯಾ ಸ ದ್ವಿಜೋ ರಾತ್ರೌ ಪರೇಽಹ್ನಿ ಪ್ರಾಪ್ಯ ಪೂರ್ವವತ್ ॥೪೯॥

ದೇವಂ ಸಂಪೂಜ್ಯ ತಂ ಗೂಢಃ ಕ್ವಾಪ್ಯತಿಷ್ಠತ್ಕುತೂಹಲೀ ।
ದಿನಮಧ್ಯೇ ತದಾ ಪ್ರಾಪ ಚಿತ್ರಮೇಘನಿಭೋ ಘನಃ ॥೫೦॥

---

ಸ್ವೀಕರಿಸುತ್ತೇನೆ. ಅವನು ಪ್ರೀತಿಯಿಂದ ಕತ್ತರಿಸಿ ಬೇಯಿಸಿ ತಂದುಕೊಡುವ ಮಾಂಸವನ್ನು ತಿಂದು ಸುಖವಾಗಿ ವಾಸಮಾಡುತ್ತಿರುವೆನು. ॥೪೩-೪೪-೪೫॥

ವಿಪ್ರನೇ, ಹೆಚ್ಚಾದ ಕೆಂಡದಲ್ಲಿ ಬೇಯಿಸಿ, ಜೇನಿನಲ್ಲಿ ಚೆನ್ನಾಗಿ ಅದ್ದಿ ತನ್ನ ಮುಖಕಮಲದಿಂದ ಹೊರಟ ಜೊಲ್ಲುರಸದಿಂದ ಯುಕ್ತವಾಗಿ ನಾಲಿಗೆಯಿಂದ ರುಚಿ ನೋಡಲ್ಪಟ್ಟು ಅವನು ನನಗೆ ಸಮರ್ಪಿಸುವ ಮಾಂಸಕ್ಕೆ ವಿಶೇಷವಾಗಿ ಉತ್ತಮ ಫಲಗಳೊಡನೆ ಅಗ್ನಿಯಲ್ಲಿ ಹೋಮಮಾಡುವ ಹವಿಸ್ಸು ಸಮಾನವಾಗಲಾರದು. ಆ ಭಿಲ್ಲನು ಮಂದಹಾಸಯುಕ್ತವಾದ ಅರಳಿದ ಮುಖದಿಂದ ಸ್ವಭಾವವಾಗಿ ಆಡುವ ಮಾತುಗಳು ಮಹರ್ಷಿಗಳು ತಮ್ಮ ಬಾಯಲ್ಲಿ ಉಚ್ಚರಿಸುವ ವೇದವಾಕ್ಯಗಳಿಗಿಂತಲೂ ಉತ್ತಮವಾಗಿ ನನಗೆ ರುಚಿಸುವುದು. ॥೪೬-೪೭-೪೮॥

ಅಯ್ಯ ಬ್ರಾಹ್ಮಣನೇ, ಆ ವ್ಯಾಧನ ಭಕ್ತಿಯನ್ನು ನೀನೇ ಪ್ರತ್ಯಕ್ಷವಾಗಿ ನೋಡುವೆಯಂತೆ. ಈ ಅಜ್ಞಾನವನ್ನು ಬಿಡು; ದುಃಖಪಡಬೇಡವೆಂದು ಮಹಾ ದೇವನು ಆ ಶಿವದ್ವಿಜನಿಗೆ ಕನಸಿನಲ್ಲಿ ಹೇಳಿದನು. ಆ ದೇವನ ಮಾತಿನಂತೆ ಆ ಬ್ರಾಹ್ಮಣನು ರಾತ್ರಿಯ ಕೊನೆಯ ಜಾವದಲ್ಲಿ ಹಿಂದಿನಂತೆಯೇ ಬಂದು ಮಹೇಶ್ವರ ನನ್ನು ಪೂಜಿಸಿ, ಕುತೂಹಲದಿಂದ ಮುಂದೆ ಏನಾಗುವುದೆಂಬುದನ್ನು ನೋಡ ಬೇಕೆಂದು ಅಲ್ಲಿಯೇ ಒಂದುಕಡೆ ಗುಟ್ಟಾಗಿ ನಿಂತುಕೊಂಡನು. ಅದೇ ಮಧ್ಯಾಹ್ನದಲ್ಲಿ

ಪ್ರಾಗ್ದ್ವಿಜನ್ಮಾಗಮಾತ್ಕಲ್ಪೇ ಮೃಗಯಾರ್ಥಂ ಯಯೌ ವನಂ ।
ಸ ಪೂರ್ವವತ್ಸ್ವಾದುಮಾಂಸಂ ಬಿಭ್ರನ್ಪುಷ್ಪಾಣ್ ತಥೋದಕಂ ॥೫೧॥

ಭಿಲ್ಲಾನಲ್ಪಪ್ರಮಾಣೋಽಯಮಾಯಯೌ ಸದ್ಮ ಶಾಂಕರಂ ।
ಆರುಹ್ಯ ತಂ ಗಿರಿವರಂ ಗಿರೀಶಂ ಪ್ರತ್ಯಭಾಷತ ॥೫೨॥

॥ ಘನ ಉವಾಚ ॥

ವಿಲಂಬಿತೋಽಸ್ಮಿ ಕಿಂ ಶಂಭೋ ಕ್ಷುಧಾರ್ತೋಽಸಿ ನ ಸಂಶಯಃ ।
ಭುಂಕ್ಷ್ವೇದಂ ತ್ವತ್ಕೃತೇ ಮಾಂಸಮುತ್ಕೃತ್ಯಾನೀತಮಂಜಸಾ ॥೫೩॥

ಮೃಗಾಂಗೇಭ್ಯೋ ಮಹಾದೇವ ಸುಸ್ನಾಹೀತಿ ಮುಖೋದಕಂ ।
ಸಂಸೇವ್ಯ ಪುಷ್ಪಾಣ್ಯುತ್ಕೀರ್ಯ ಪಲಲಂ ಪುರತೋ ನ್ಯಧಾತ್ ॥೫೪॥

ದೇವೋ ದರ್ಶಯಿತುಂ ಭಕ್ತಿಂ ದ್ವಿಜಾಯಾಸೌ ಘನಸ್ಯ ತಾಂ ।
ಸ್ರುತಾಸೃಗ್ದಕ್ಷನೇತ್ರೋಽಭೂತ್ತದ್ದೃಷ್ಟ್ವಾಽಭೂಚ್ಚ ವಿಸ್ಮಿತಃ ॥೫೫॥

---

ಸರಿಯಾಗಿ ಚಿತ್ರಬಣ್ಣದ ಮೇಘದಂತೆ ಕಾಂತಿಯುಳ್ಳ ಆ ನೀಲನು ಅಲ್ಲಿಗೆ ಬಂದನು. ॥೪೯-೫೦॥

ಆ ಶಿವದ್ವಿಜನು ಬರುವುದಕ್ಕೆ ಮೊದಲೇ ಬೇಟೆಗಾಗಿ ಅವನು ಕಾಡಿಗೆ ಹೋಗಿದ್ದನು. ಹಿಂದಿನಂತೆಯೇ ನೀಲನು ರುಚಿಯಾದ ಮಾಂಸವನ್ನು ತೆಗೆದುಕೊಂಡು ಬಾಯಲ್ಲಿ ನೀರನ್ನು ತುಂಬಿಕೊಂಡು ಈ ಕಾಲಹಸ್ತ್ಯಾದ್ರಿಯನ್ನು ಹತ್ತಿ ದೊಡ್ಡ ಆಕಾರವುಳ್ಳ ಇವನು ಶಿವನ ದೇವಾಲಯವನ್ನು ಸೇರಿ ಶಂಕರನಿಗಿಂತೆಂದನು ॥೫೧-೫೨॥

ಶಂಭುವೇ, ತುಂಬಾ ತಡವಾಯಿತೇ? ಈಗ ನೀನು ಹಸಿವಿನಿಂದ ಬಳಲಿರುವೆಯೆಂಬುದರಲ್ಲಿ ಸಂದೇಹವಿಲ್ಲ. ಸ್ವಾಮಿ, ನಿನಗೋಸ್ಕರ ಜಿಂಕೆಯೇ ಮುಂತಾದ ಪ್ರಾಣಿಗಳ ಅವಯವಗಳಿಂದ ಕತ್ತರಿಸಿ ಜಾಗ್ರತೆಯಾಗಿ ಪಾಕಮಾಡಿಕೊಂಡು ತಂದಿರುವ ಈ ಮಾಂಸವನ್ನು ತಿನ್ನುವನಾಗು. ಮಹಾದೇವ, ಇಗೋ ಮೊದಲು ಈ ನೀರಿನಿಂದ ಚೆನ್ನಾಗಿ ಸ್ನಾನಮಾಡು, ಎಂದು ತನ್ನ ಬಾಯಲ್ಲಿದ್ದ ನೀರನ್ನು ದೇವನ ಮೇಲೆ ಉಗುಳಿ, ಹೂವುಗಳನ್ನು ಎರಚಿ, ಆ ಮಹಾದೇವನ ಮುಂದೆ ಮಾಂಸಗಳನ್ನಿರಿಸಿದನು. ಮಹಾದೇವನು ಇವನ ನಿಜವಾದ ಭಕ್ತಿಯನ್ನು ಆ ಶಿವದ್ವಿಜನಿಗೆ ತೋರಿಸುವುದಕ್ಕಾಗಿ ತನ್ನ ಬಲಗಣ್ಣಿನಲ್ಲಿ ರಕ್ತಧಾರೆಯು ಸುರಿಯುವಂತೆ ಮಾಡಿ

ಶೀರ್ಣವಕ್ತ್ರಾಬ್ಜಹೃದಯೋ ವಿಹ್ವಲಾಂಗೋ ಬಭೂವ ಹ ।
ವೇಗಾದುತ್ಪ್ಲುತ್ಯ ಗತ್ವಾಸೌ ಮಮಾರ್ಜ ಕ್ಷತಜಂ ತದಾ ॥೫೬॥

ತದ್ದೃಷ್ಟ್ವಾನಾರತಸ್ರಾವಂ ನಾಜ್ಞಾಸೀತ್ಕೃತ್ಯಮಾಕುಲಃ ।
ನಿಪತನ್ನುತ್ಪತನ್ತತ್ರ ದೀರ್ಘಮುಷ್ಣಂಚ ನಿಶ್ವಸನ್ ॥೫೭॥

ಕೇನೇದಂ ಹಿ ಕೃತಂ ದೇವ ನಿರ್ಗತೇ ಮಯಿ ಹಿಂಸ್ರಕೈಃ ।
ಮಾರೋದೀರಕ್ಷಿ ತೇ ದದ್ಯಾಮದ್ಯ ಹೃದ್ಯತಮಂ ಮಮ ॥೫೮॥

ಇತಿ ಸಜ್ಯಂ ಧನುಃ ಕೃತ್ವಾ ದಿಕ್ಷು ವ್ಯಪರತೇಕ್ಷಣಃ ।
ಶೈಲಮೌಲೌ ಮೃಗಾನ್ಕಾಂಶ್ಚಿದದೃಷ್ಟ್ವಾ ಪುನರಾಗತಃ ॥೫೯॥

ಸ ದೇವಪಾದಮಾಶ್ಲಿಷ್ಯ ಪ್ರರುರೋದ ಪುನಃ ಪುನಃ ।
ಮಯಿ ತಿಷ್ಠತಿ ದೇವೇಶ ಸಾಹಾಯ್ಯೇ ತೇಽತ್ರ ವೈ ಜನೇ ॥೬೦॥

---

ದನು. ಅದನ್ನು ಕಂಡು ಕೂಡಲೇ ಆ ನೀಲನು ತುಂಬಾ ಆಶ್ಚರ್ಯಚಕಿತನಾದನು. ||೫೩-೫೪-೫೫||

ಇದನ್ನು ನೋಡಿ ಆ ನೀಲನು ಬಾಡಿದ ಮುಖಕಮಲ ಮತ್ತು ಮನವುಳ್ಳವನಾಗಿ ಕೇವಲ ಕಾತರನಾದನು. ಪದೇ ಪದೇ ನೋಡುತ್ತಾ ಹಾರಿಹೋಗಿ ಅವನು ಆ ರಕ್ತವನ್ನು ಒರಸಿದನು. ಆದರೂ ಎಡಬಿಡದೇ ಸುರಿಯುತ್ತಿರುವ ರಕ್ತಪ್ರವಾಹವನ್ನು ನೋಡಿ ಏನು ಮಾಡಬೇಕೆಂಬುದನ್ನು ತಿಳಿಯದೆ ಬೀಳುತ್ತಲೂ, ಏಳುತ್ತಲೂ ಅಲ್ಲಿಯೇ ಗಟ್ಟಿಯಾಗಿ ನಿಟ್ಟುಸಿರು ಬಿಡುತ್ತಲೂ ಮಹಾದೇವ, ನಾನು ಇಲ್ಲಿಂದ ಹೋದಮೇಲೆ ಯಾವ ಕ್ರೂರ ಪ್ರಾಣಿಯಿಂದ ಈ ಕೆಲಸವು ಮಾಡಲ್ಪಟ್ಟಿತು? ಸ್ವಾಮಿಯೇ, ಅಳಬೇಡ, ನಿನ್ನ ಕಣ್ಣಿಗೆ ಬದಲಾಗಿ ಮನೋಹರವಾದ ನನ್ನ ಕಣ್ಣನ್ನು ಕೊಡುತ್ತೇನೆಂದು ಹೇಳಿ, ||೫೬-೫೭-೫೮||

ಜಾಗ್ರತೆ ತನ್ನ ಬಿಲ್ಲನ್ನು ಸಿದ್ಧಮಾಡಿ ಹಿಡಿದುಕೊಂಡು ಎಲ್ಲಾ ದಿಕ್ಕುಗಳಲ್ಲಿಯೂ ತನ್ನ ದೃಷ್ಟಿಯನ್ನು ಬೀರಿದನು. ಬೆಟ್ಟದ ಶಿಖರದಲ್ಲಿ ಹಿಂಸೆಕೊಟ್ಟ ಯಾವ ಪ್ರಾಣಿಗಳನ್ನೂ ಕಾಣದೇ ಹಿಂತಿರುಗಿ ಬಂದು, ಅವನು ಮಹಾದೇವನ ಕಾಲಡಿಯಲ್ಲಿ ಬಿದ್ದು ಪದೇಪದೇ ಗೋಳಾಡಿದನು. ಅಲ್ಲದೇ ಸ್ವಾಮಿ, ಈ ನಿರ್ಜನವಾದ ಕಾಡಿನಲ್ಲಿ ನಾನು ನಿನಗೆ ಸಹಾಯಕನಾಗಿ ನಿಂತಿರಲು ಇಲ್ಲಿ ಹಿಂಸಿಸಿದ ಪ್ರಾಣಿಗಳನ್ನು

ಯದಿ ಪಶ್ಯಾಮಿ ತಂ ಹನ್ಮಿ ಶರೇಣೈಕೇನ ಲೀಲಯಾ ।
ಅಸ್ಯೇದಮನುರೂಪಂ ಕಿಂ ಪ್ರಮಾಣೇಭ್ಯೋ ದವೀಯಸಃ ॥೬೧॥

ಕೇನಾಯಮಶಕ್ಯನ್ನೇತ್ರಸಮಭೂಯಾನ್ಮಹೇಶ್ವರ ।
ಪರೀಕ್ಷಿತುಮಿದಂ ತಸ್ಮಾದಾನಯಾಮ್ಯೌಷಧಂ ವನಾತ್ ॥೬೨॥

ಇತ್ಯುಕ್ತ್ವಾ ನಿರ್ಗತಃ ಶೈಲೇ ವಿಚಚಾರ ವನಾದ್ವನಂ ।
ಔಷಧಂ ತತ್ತದಾನೀಯ ನಿರ್ಮಥ್ಯ ಸ್ವಕರೇಣ ಸಃ ॥೬೩॥

ತದಕ್ಷ್ಣಿ ಸೇಚಯಾಮಾಸ ತದ್ರಕ್ತಂ ನ ಶಶಾಕ ಸಃ ।
ರೋದ್ಧುಂ ನಿರ್ಭಿನ್ನಹೃದಯೋ ಭಿಲ್ಲೋ ಭಲ್ಲಕರಸ್ತದಾ ॥೬೪॥

ಪುನಃ ಪ್ರವೃತ್ತೇ ಸೋಽಪ್ಯನ್ಯಮುಪಾಯಂ ಸಮಚಿಂತಯತ್ ।
ಮಾಂಸೇನ ವರ್ಧತೇ ಮಾಂಸಮತೋಽಹಮಿಷುಣಾಕ್ಷಿ ಮೇ ॥೬೫॥

ಉತ್ಕೃತ್ಯಾಸ್ಯ ವಿಭೋರ್ನೇತ್ರೇ ನ್ಯಸ್ಯಾಮೀತಿ ಪ್ರಹೃಷ್ಟಧೀಃ ।
ಉತ್ಕೃತ್ಯ ನೇತ್ರಂ ತನ್ನೇತ್ರೇ ನಿರ್ಯದ್ರಕ್ತಂ ಸಮರ್ಪಯತ್ ॥೬೬॥

---

ಕಂಡರೆ ಒಂದೇ ಬಾಣದಿಂದ ಸುಲಭವಾಗಿ ಅವರನ್ನು ಕೊಂದುಬಿಡುವೆನು. ಮಹಾ ಪ್ರಮಾಣಗಳುಳ್ಳವರಿಗೆ ಇದೊಂದು ಕಷ್ಟವೇ ಪ್ರಭು! ॥೫೯-೬೦-೬೧॥

ಮಹೇಶ್ವರ, ಯಾವುದರಿಂದ ನಿನ್ನ ಈ ಕಣ್ಣು ಸರಿಹೋಗುವುದೋ ಎಂಬುದನ್ನು ಪರೀಕ್ಷೆಮಾಡಲು ಕಾಡಿನಿಂದ ಔಷಧಿಯನ್ನು ತಂದು ಬಿಡುವೆನು ಎಂದು ಹೇಳಿ, ಅವನು ಅಲ್ಲಿಂದ ಹೊರಟು ಬೆಟ್ಟದ ಕಾಡಿಂದ ಕಾಡಿಗೆ ಅಲೆದು ಔಷಧಿಯನ್ನು ತಂದು ತನ್ನ ಕೈಯಿಂದಲೇ ಅದನ್ನು ಅರೆದು ಆ ಮಹಾದೇವನ ಕಣ್ಣಿಗೆ ಅವನು ಲೇಪನ ಮಾಡಿದನು. ಆದರೂ ಆ ರಕ್ತವು ಸುರಿಯುವುದು ನಿಲ್ಲಲಿಲ್ಲ. ॥೬೨-೬೩॥

ಆಗ ಆ ವ್ಯಾಧನು ಬಿಲ್ಲನ್ನು ಕೈಯಲ್ಲಿ ಹಿಡಿದು, ಆ ರಕ್ತವನ್ನು ನಿಲ್ಲಿಸಲು ಸಾಧ್ಯವಿಲ್ಲದೇ ದುಃಖಪಡುತ್ತಿರಲು, ಪುನಃ ರಕ್ತವು ಬರುವುದನ್ನು ನೋಡಿ, ಅವನು ಒಂದು ಉಪಾಯವನ್ನು ಹೀಗೆ ಚಿಂತಿಸಿದನು. ಮಾಂಸವು ಮಾಂಸದಿಂದಲೇ ಹೆಚ್ಚುತ್ತದೆಯಾದ್ದರಿಂದ ನಾನು ಬಾಣದಿಂದ ನನ್ನ ಕಣ್ಣನ್ನು ಕಿತ್ತು ಈ ಪ್ರಭುವಿನ

ಶಾಂತೇ ರಕ್ತೇ ಸ ಚೋತ್ಪ್ಲುತ್ಯ ಕರೇಣಾಸ್ಫಾಲಯದ್ಭುಜಂ ।
ಮಯಾ ಕೃತೇಯಂ ಸದ್ಬುದ್ಧಿರಿತ್ಯಸ್ತೃತ್ಯತ್ಸದರ್ಪಿತಃ ॥೬೭॥

ತದೈವಾನಂದಚೇಷ್ಟಾಭಿಃ ಸ ಚೋನ್ಮತ್ತ ಇವಾಭವತ್ ।
ನಿಜಭಕ್ತೇಕ್ಷಣನ್ಯಾಸಾತ್ತ್ರ್ಯಕ್ಷೋಽಪ್ಯಕ್ಷಿಯುತೋಽಭವತ್ ॥೬೮॥

ವಿಪ್ರಾಯ ತತ್ಪ್ರೇಮ ಪುನರಿತ್ಥಂ ದರ್ಶಯಿತುಂ ಶಿವಃ ।
ವಾಮೇಽಪಿ ನೇತ್ರಕ್ಷತಜಂ ವಿಭುರೇಷ ವ್ಯಭಾಷಯತ್ ॥೬೯॥

ಸ ದೃಷ್ಟ್ವಾ ಪುನರನ್ಯಾಕ್ಷಿಕ್ಷರದ್ರಕ್ತಮವೇಕ್ಷ್ಯ ಸಃ ।
ದೃಶಿತಸ್ಯಾನ್ಯಥಾತ್ಪಾದಂ ಜ್ಞಾಪನಾರ್ಥಂ ಶರೋದ್ಧೃತಂ ॥೭೦॥

ನಿಜಾಕ್ಷ್ಯುತ್ಕೃತ್ಯ ತಸ್ಯಾಕ್ಷ್ಣ್ಯನ್ಯಥಾಬ್ಧ್ಯಾಧೋಽತಿಹರ್ಷಿತಃ ।
ತದಂತರೇ ಮಹಾದೇವಃ ಪ್ರಾದುರ್ಭೂತಃ ಸಹೋಮಯಾ ॥೭೧॥

---

ಕಣ್ಣಿನಲ್ಲಿಡುತ್ತೇನೆಂದು ಸಂತುಷ್ಟಾಂತರಂಗನಾಗಿ ತನ್ನ ಕಣ್ಣನ್ನು ಆದರಂತೆಯೇ ಕಿತ್ತು ಆ ಶಿವನ ಬಲಗಣ್ಣಿನಲ್ಲಿರಿಸಿ ರಕ್ತವು ನಿಲ್ಲುವಂತೆ ಮಾಡಿದನು. ||೬೪-೬೫-೬೬||

ಇದರಿಂದ ರಕ್ತವು ಸುರಿಯುವುದು ನಿಲ್ಲಲು, ಅವನು ನೆಗೆದು ಬಂದು ಕೈಯಿಂದ ಭುಜವನ್ನು ತಟ್ಟಿಕೊಳ್ಳುತ್ತಾ ನಾನು ಒಳ್ಳೆಯ ಸಮಯದಲ್ಲಿ ಚೆನ್ನಾಗಿ ಬುದ್ಧಿಯನ್ನು ಪಯೋಗಿಸಿದೆನು ಎಂದು ದರ್ಪಯುಕ್ತನಾಗಿ ಅವನು ಶಿವನ ಮುಂದೆ ಆನಂದಪರವಶನಾಗಿ ಆ ಚೇಷ್ಟೆಗಳಿಂದ ಹುಚ್ಚನಂತೆ ಆಡಲು ಪ್ರಾರಂಭಿಸಿದನು. ||೬೭||

ತನ್ನ ನಿಜಭಕ್ತನ ಕಣ್ಣಿನ ಇಡುವಿಕೆಯಿಂದ ಆ ಮುಕ್ಕಣ್ಣನೂ ನಿಜವಾಗಿ ಕಣ್ಣುಳ್ಳವನಾದನು. ಪುನಃ ಆ ಶಿವದ್ವಿಜನಿಗೆ ತನ್ನ ಭಕ್ತನ ಪ್ರೀತಿಯನ್ನು ಹೀಗೆ ತೋರಿಸಬೇಕೆಂದು ಮಹಾದೇವನು ತನ್ನ ಎಡಗಣ್ಣಿನಲ್ಲಿಯೂ ಏಟುಬಿದ್ದು ರಕ್ತ ಸುರಿಯುವಂತೆ ಮಾಡಿದನು. ||೬೮-೬೯||

ಆಗ ಆ ನೀಲನು ಶಿವನು ಮತ್ತೊಂದು ಕಣ್ಣಿನಲ್ಲಿ ರಕ್ತವು ಸುರಿಯುತ್ತಿರುವುದನ್ನು ನೋಡಿ, ಆ ಕಣ್ಣಿನಿಂದ ರಕ್ತವು ಸುರಿಯದಂತೆ ಕಾಲಿನಿಂದ ಮೆಟ್ಟಿಕೊಂಡು, ಮುಂದೆ ಎರಡು ಕಣ್ಣೂ ಇಲ್ಲದಿರುವಾಗ ಸರಿಯಾಗಿ ಅದನ್ನು ಸೇರಿಸುವುದಕ್ಕಾಗುವುದಿಲ್ಲವೆಂಬ ಗುರುತಿಗೋಸ್ಕರ ಕಾಲನ್ನು ಇಟ್ಟಿರುವನೋ ಎಂಬಂತೆ, ಬಾಣದಿಂದ

ತತೋಽಶ್ರುಮುಕ್ತಮುತ್ಪ್ರೇಕ್ಷ್ಯ ತಸ್ಮೈ ದತ್ವಾಕ್ಷಿಣೀ ಹರಃ ।
ವೀಕ್ಷ್ಯಾಽಭೂದ್ವಿಸ್ಮಿತೋ ವಿಪ್ರಃ ಪುಷ್ಪಾಣಿ ವವೃಷುಃ ಸುರಾಃ ॥೭೨॥

ದೃಷ್ಟ್ವಾ ದೇವಂ ದೃಶಃ ಶರೇಣ ನಿಜಧೃತ್ವಾಪ್ಯೈಕಧೀರಂ ಕರಂ
ಸಂರುಧ್ಯಾತ್ಮಕರೇಣ ಕಿಂಕರವರಂ ತಂ ಶಂಕರಃ ಪ್ರಾಹ ಹಿ ।
ಕೈಲಾಸೇ ಪಸವಾಸವಾದಿವಿಸುತೋ ಮಾತ್ರಾ ಚ ಪಿತ್ರಾ ಸ್ವಯಂ
ಮದ್ಭಕ್ತೈರ್ಗಣಪೈರ್ವಿಹೃತ್ಯ ಸುಚಿರಂ ಮತ್ಪ್ರೇಮಭಾಕ್ತ್ವಂ ಭವ ॥೭೩॥

ನೇತ್ರಾರ್ಪಕಸ್ಯೇದಮುದಾರಕೀರ್ತೇ
ಶ್ಚರಿತ್ರಮೇತಚ್ಚ ಪವಿತ್ರಮಿಷ್ಟಂ ।
ಪಠಂತಿ ಯೇ ಭಕ್ತಿಪರಾಯಣಾಸ್ತೇ
ಪ್ರಯಾಂತಿ ಸಾಮೀಪ್ಯಪದಂ ಹರಸ್ಯ ॥೭೪॥

---

ಪುನಃ ತನ್ನ ಇನ್ನೊಂದು ಕಣ್ಣನ್ನೂ ಕಿತ್ತು ತುಂಬಾ ಸಂತೋಷದಿಂದ ಆ ಎಡಗಣ್ಣಿದ್ದ ಜಾಗದಲ್ಲಿರಿಸಿದನು. ಕೂಡಲೇ ಭಕ್ತಿಪರವಶನಾದ ಆ ಮಹಾದೇವನು ಪಾರ್ವತಿಯೊಡನೆ ಅಲ್ಲಿ ಪ್ರತ್ಯಕ್ಷವಾದನು. ॥೭೦-೭೧॥

ಆ ಭಕ್ತನ ನಿಜವಾದ ಪ್ರೇಮವನ್ನು ನೋಡಿ ಸಂತುಷ್ಟನಾದ ಆ ಶಂಕರನು ಅವನಿಗೆ ಕಣ್ಣುಗಳನ್ನು ಪುನಃ ಕೊಟ್ಟುಬಿಟ್ಟನು. ಇದನ್ನು ನೋಡಿ ಆ ಬ್ರಾಹ್ಮಣನು ತುಂಬಾ ಆಶ್ಚರ್ಯಪಟ್ಟನು. ಇತ್ತ ದೇವತೆಗಳೂ ಸಂತೋಷದಿಂದ ಹೂಮಳೆಗರೆದರು. ॥೭೨॥

ಆಗ ನೀಲನು ತನ್ನ ದೃಷ್ಟಿಯೆಂಬ ಬಾಣದಿಂದ ಮಹಾದೇವನನ್ನು ನೋಡಿ ತನ್ನ ಕಣ್ಣುಗಳನ್ನು ಕೀಳಿಸುವುದರಲ್ಲಿ ಮುಂದುವರಿದು ಧೈರ್ಯವನ್ನು ಹೊಂದಿದ ತನ್ನ ಕೈಗಳನ್ನು ಜೋಡಿಸಿ ಶಿವನಿಗೆ ನಮಸ್ಕರಿಸಲು, ಆಗ ಆ ಶಂಕರನು ತನ್ನ ಭಕ್ತವರ್ಯನಾದ ನೀಲನಿಗೆ, ಅಯ್ಯಾ ಭಕ್ತನೇ, ನೀನು ನಿನ್ನ ತಂದೆತಾಯಿಗಳೊಡನೆ ಬಹಳಕಾಲ ನನ್ನ ಕೈಲಾಸದಲ್ಲಿ ವಾಸಮಾಡುತ್ತಾ, ನನ್ನ ಗಣನಾಯಕರೊಡನೆ ಸಂತೋಷದಿಂದ ವಿಹರಿಸುವನಾಗಿ ತನ್ನ ಪ್ರೀತಿಗೆ ಪಾತ್ರನಾಗು ಎಂದು ಮಹೇಶ್ವರನು ನೀಲನಿಗೆ ಅನುಗ್ರಹಮಾಡಿದನು. ॥೭೩॥

ಪರಶಿವನಿಗೆ ಭಕ್ತಿಯಿಂದ ತನ್ನ ಕಣ್ಣುಗಳನ್ನೇ ಸಮರ್ಪಿಸಿ ಉದಾರವಾದ ಕೀರ್ತಿಯನ್ನು ಸಂಪಾದಿಸಿದ ಈ ನೀಲನೆಂಬ ವ್ಯಾಧನ ಪವಿತ್ರವೂ ಇಷ್ಟವೂ ಆದ

**ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಭಿಲ್ಲಚರಿತ್ರೇ ಶಿವಪ್ರಸಾದೋ ನಾಮ ಪಂಚತ್ರಿಂಶೋಽಧ್ಯಾಯಃ**

---

ಕಥೆಯನ್ನು ಓದುವ ಭಕ್ತವರ್ಯರು ಪರಮೇಶ್ವರನ ಸಾಮೀಪ್ಯಸ್ಥಾನವನ್ನು ಹೊಂದು ವರೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ||೭೪||

ಇಲ್ಲಿಗೆ ಶ್ರೀಶಿವರಹಸ್ಯದ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ಭಿಲ್ಲಚರಿತ್ರೆಯ ವರ್ಣನೆಯಲ್ಲಿ ಶಿವನು ಬೇಡನಾದ ನೀಲನಿಗೆ ಮಾಡಿದ ಅನುಗ್ರಹವರ್ಣನೆಯೆಂಬ ಮೂವತ್ತೈದನೆಯ ಅಧ್ಯಾಯವು ಮುಗಿದುದು.

**॥ ಶಿವಂಭೂಯಾತ್ ॥**



